# ಕ್ಷತ್ರಿಯರ ಸಾಮಾಜಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧನ ವಿದ್ಯಾರ್ಥಿ
**ಗುರುನಾಥ ಬಿ**

ಮಾರ್ಗದರ್ಶಕರು
**ಪ್ರೊ ಕೆ ಎಂ ಮೇತ್ರಿ**
ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಕ್ಷತ್ರಿಯರ ಸಾಮಾಜಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ)



ಸಂಶೋಧನ ವಿದ್ಯಾರ್ಥಿ
ಗುರುನಾಥ ಬಿ

ಮಾರ್ಗದರ್ಶಕರು
ಪ್ರೊ ಕೆ ಎಂ ಮೇತ್ರಿ
ಪ್ರಾಧ್ಯಾಪಕರು




ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

೨೦೧೮

## ಸಂಶೋಧಕರ ಪ್ರಮಾಣ ಪತ್ರ

**"ಕ್ಷತ್ರಿಯರ ಸಾಮಾಜಿಕ ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಪ್ರೊ ಕೆ ಎಂ ಮೇತ್ರಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ **ಪಿಎಚ್ ಡಿ (ಸಮಾಜಶಾಸ್ತ್ರ)**ಪದವಿಗಾಗಿ **ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ** ಸಲ್ಲಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

ದಿನಾಂಕ: 31.10.2018

ಸ್ಥಳ : ವಿದ್ಯಾರಣ್ಯ

ಗುರುನಾಥ ಬಿ

**ಗುರುನಾಥ ಬಿ**
ಪಿಎಚ್ ಡಿ ಸಂಶೋಧನಾರ್ಥಿ
ಸೊರಟೂರು ಅಂಚೆ
ಹೊನ್ನಾಳಿ ತಾಲೂಕು
ದಾವಣಗೆರೆ ಜಿಲ್ಲೆ – ೫೭೭ ೨೧೭
ಮೊ. ೯೮೮೬೧೩೦೨೩೩; gurusoratur@gmail.com

## ಮಾರ್ಗದರ್ಶಕರ ದೃಢೀಕರಣ ಪತ್ರ

**ಗುರುನಾಥ ಬಿ** ಇವರು **"ಕ್ಷತ್ರಿಯರ ಸಾಮಾಜಿಕ ಅಧ್ಯಯನ"** ಎಂಬ ಶೀರ್ಷಿಕೆ ಪಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ **ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ** ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧ ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ದಿನಾಂಕ: 31.10.2018
ಸ್ಥಳ : ವಿದ್ಯಾರಣ್ಯ

**ಪ್ರೊ ಕೆ ಎಂ ಮೇತ್ರಿ**
ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಪರಿವಿಡಿ

**ಅಧ್ಯಾಯ: ಮೂರು**



**ಅಧ್ಯಾಯ: ನಾಲ್ಕು**

ಅಧ್ಯಾಯ: ಐದು

## ಕೊಷ್ಟಕಗಳು

## ಅಧ್ಯಾಯ: ಒಂದು

# ಪ್ರವೇಶ

೧.೧. ಪ್ರಸ್ತಾವನೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ಪ್ರಾಕಲ್ಪನೆಗಳು

೧.೪. ಅಧ್ಯಯನದ ವ್ಯಾಪ್ತಿ

೧.೫. ಅಧ್ಯಯನದ ಮಹತ್ವ

೧.೬. ಅಧ್ಯಯನದ ವಿಧಾನ

೧.೭. ಇಲ್ಲಿಯವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

೧.೮. ಅಧ್ಯಯನದ ವಿನ್ಯಾಸ

# ಅಧ್ಯಾಯ: ಒಂದು
# ಪ್ರವೇಶ

## ೧.೧. ಪ್ರಸ್ತಾವನೆ

ಭಾರತೀಯ ಸಮಾಜವು ವಿವಿಧ ಧರ್ಮ, ಭಾಷೆ, ಜನಾಂಗ, ಮತ್ತು ಬುಡಕಟ್ಟು, ಸಮುದಾಯಗಳಿಂದ ಕೂಡಿದ ಸಮಾಜವಾಗಿದ್ದು, ಸಂಕೀರ್ಣ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದೆ. ಸಂಕೀರ್ಣ ಸಾಮಾಜಿಕ ವ್ಯವಸ್ಥೆಯಲ್ಲಿ ಏಕತೆಗಿಂತಲೂ ಹೆಚ್ಚಿಗೆ ಭೀನ್ನತೆಯ ವಿವಿಧ ಅಂಶಗಳನ್ನು ಕಾಣಬಹುದು. ಹೋಲಿಕೆಯ ಮತ್ತು ವಿವಿಧತೆಯ ಅಂಶಗಳು ಒಂದೇ ವಿಸ್ತೃತ ಸಮಾಜವಾದ ಭಾರತದಲ್ಲಿ ಬೇರೆ ಬೇರೆ ಸಾಮಾಜಿಕ ಗುಂಪುಗಳಲ್ಲಿ ಕಂಡುಬರುತ್ತವೆ. ಸಾಮಾಜಿಕ ಗುಂಪುಗಳು ಒಂದೇ ಸಮಾಜದಲ್ಲಿ ವಿವಿಧ ಸಂಸ್ಕೃತಿಗಳನ್ನು ಪ್ರತಿನಿಧಿಸುತ್ತವೆ. ಸಂಸ್ಕೃತಿಗಳು ಮುಖ್ಯ ಸಮಾಜದ ಭಾಗವಾಗಿದ್ದಾಗ್ಯೂ ತಮ್ಮ ಪ್ರತ್ಯೇಕತೆ ಮತ್ತು ಆಸ್ಮಿತತೆಯನ್ನು ಉಳಿಸಿಕೊಂಡಿವೆ. ಭಾರತೀಯ ಸಮಾಜವನ್ನು ಒಂದು ಸಮಷ್ಠಿ ದೃಷ್ಟಿಯಿಂದ ನೋಡಿದಾಗ್ಯೂ, ಇದರೊಳಗಡೆ ಇರುವ ಇತರೆ ಸಂಸ್ಕೃತಿಗಳ ಅನನ್ಯತೆಯನ್ನು ಮರೆಯುಂವತಿಲ್ಲ. ಸಮಾಜದಲ್ಲಿ ನಗರ ಸಮಾಜ, ಗ್ರಾಮೀಣ ಸಮಾಜ ಎಂಬ ಬೇಧಗಳನ್ನು ಮಾಡುವುದರೊಂದಿಗೆ ಕ್ಷತ್ರಿಯ ಸಮಾಜ ಅಥವಾ ಸಂಸ್ಕೃತಿ ಎಂಬ ಮತ್ತೊಂದು ಸಮಾಜವನ್ನು ಗುರುತಿಸುತ್ತವೆ.

ಕ್ಷತ್ರಿಯ ಸಮಾಜವು ಅಥವಾ ಸಮುದಾಯವು ಬೇರೆ ಸಮಾಜಕ್ಕಿಂತ ಸರ್ವ ವಿಧದಲ್ಲಿಯೂ ಭಿನ್ನವಾಗಿರುತ್ತದೆ. ಬುಡಕಟ್ಟುಗಳ ಇತಿಹಾಸವನ್ನು ಹುಡುಕ ಹೊರಟರೆ ಪ್ರಪಂಚದ ವಿವಿಧ ಪ್ರದೇಶಗಳಲ್ಲಿ ವಿವಿಧ ಮಾನವ ಸಮುದಾಯಗಳಿಗೆ ಸೇರಿದ ಬುಡಕಟ್ಟುಗಳು ಕಂಡುಬರುತ್ತವೆ. ಬುಡಕಟ್ಟುಗಳೆಂದು ಕರೆಯಲ್ಪಡುವ ಆದಿವಾಸಿಗಳು ಪ್ರಪಂಚಾದ್ಯಂತ ಹಂಚಿಹೋಗಿದ್ದಾರೆ. ಭಾರತದಲ್ಲಿ ಬುಡಕಟ್ಟು ಜನರು ಸಾಮಾನ್ಯವಾಗಿ ಎಲ್ಲಾ ವಲಯಗಳಲ್ಲಿ ಕಂಡುಬರುತ್ತಾರೆ. ಮುಖ್ಯವಾಗಿ ಬೆಟ್ಟ-ಗುಡ್ಡ, ಕಾಡು-ಮೇಡು, ಗಿರಿ-ಶಿಖರ, ಕಣಿವೆ, ಕಾನನ ಹಾಗೂ ಕರಾವಳಿ ತಪ್ಪಲಿನ ಪಶ್ಚಿಮ ಘಟ್ಟಗಳಲ್ಲಿ ವಾಸಿಸುವ ಬುಡಕಟ್ಟು ಜನರನ್ನು ಕಾಣಬಹುದು. ಇಂದು ಸಹ ಅಲೆಮಾರಿ ಬದುಕಿನಿಂದ ಸ್ಥಿರ ಬದುಕನ್ನು ಆಯ್ದುಕೊಂಡಂದಿನಿಂದಲೇ ಮಾನವ ಬದುಕಿಗೊಂದು ನೆಲೆ ದೊರಕಿ, ಸಮಾಜ ರೂಪುಗೊಳ್ಳತೊಡಗಿತು.

ಆದಿಮಾನವ ನಾಗರಿಕನಾಗುವ ಹಂತದಲ್ಲಿ ಮಾನವನಿಗೆ ಕಟ್ಟುಪಾಡುಗಳು ಅವಶ್ಯಕ. ಪ್ರತಿಯೊಂದು ಜನಸಮುದಾಯ ನಾಗರಿಕತೆಯ ವಿಕಾಸನದ ಹಂತದಲ್ಲಿ ಜನಸಮೂಹವೊಂದನ್ನು ನಿಯಂತ್ರಿಸಲು ತನ್ನದೇ ಆದ ನೀತಿ-ನಿಯಮಗಳನ್ನು ರೂಢಿಸಿಕೊಂಡು ಬಂದು ಅದನ್ನು ತಲೆಮಾರಿನಿಂದ ತಲೆಮಾರಿಗೆ ವರ್ಗಾಯಿಸುತ್ತ ಬಂದಿದೆ. ಈ ಕಟ್ಟುಪಾಡುಗಳು ಕಾಲಕ್ರಮೇಣ ಸಂಸ್ಕೃತಿ, ಪರಂಪರೆ, ಧರ್ಮಗಳಾಗಿ ಸಮಾಜವೊಂದನ್ನು ನಿಯಂತ್ರಿಸಲಾರಂಭಿಸಿದವು. ನಾಗರಿಕ ಮನುಷ್ಯನಿಗೆ ಸಮಾಜ ಅವಿಭಾಜ್ಯ ಅಂಗ. ಹಾಗಾಗಿಯೇ ಸಮಾಜ ಬಲಿಷ್ಟಗೊಂಡು, ವ್ಯಕ್ತಿ ಗೌಣವಾಗಿ ಇವೇ ಮನುಷ್ಯನನ್ನು ನಿಯಂತ್ರಿಸಲಾರಂಭಿಸಿದವು.

ವರ್ಣ, ಜಾತಿ, ವರ್ಗ, ಮುಂತಾದವುಗಳ ಮೂಲಕವಾಗಿ ಕಾಲದಿಂದ ಕಾಲಕ್ಕೆ ಮನುಷ್ಯನನ್ನು ಏಣಿ-ಶ್ರೇಣಿಗೊಳಿಸುತ್ತಲೇ ಬಂದುದು ಇತಿಹಾಸ. ನಾಗರಿಕ ಸಮಾಜ ಚರಿತ್ರೆಯುದ್ದಕ್ಕೂ ಒಂದಲ್ಲ ಒಂದು ರೀತಿಯಿಂದ ಮನುಷ್ಯನನ್ನು ವಿಘಟಿಸುತ್ತ ನಡೆಯಿತೇ ಹೊರತಾಗಿ ಒಂದಾಗಿ ಸಂಘಟಿಸುವ ಪ್ರಯತ್ನ ಬಹುವಾಗಿ ನಡೆಯಲಿಲ್ಲ. ವೈವಿಧ್ಯತೆಯು ನಿಸರ್ಗ ನಿಯಮ ಮಾನವ ಸಮಾಜದ ಬಗೆಗೂ ಈ ಮಾತು ನಿಜ. ಮಾನವ ಸಮಾಜವು ಏಕರೂಪತೆಯನ್ನು ಹೊಂದಿರುವುದಕ್ಕಿಂತಲೂ ವೈವಿಧ್ಯಮಯವಾಗಿರುವುದೇ ಹೆಚ್ಚು. ಜನರು ಗುಣದಲ್ಲಾಗಲೀ, ರೂಪದಲ್ಲಾಗಲೀ, ಒಂದೇ ರೀತಿಯಾಗಿಲ್ಲ, ಅವರಲ್ಲಿ ಭಿನ್ನತೆಯಿದೆ. ಜನರ ದೈಹಿಕ ಶಕ್ತಿಯಲ್ಲಿ ವ್ಯತ್ಯಾಸವಿರುವಂತೆ ಅವರ ಆರ್ಥಿಕ, ಬೌದ್ಧಿಕ, ನೈತಿಕ, ತಾತ್ವಿಕ, ಮಾನಸಿಕ, ಶಕ್ತಿ-ಪ್ರವೃತ್ತಿಗಳಲ್ಲಿ ಮಹದಂತರವಿದೆ. ವೈವಿಧ್ಯತೆ ಮತ್ತು ಅಸಮಾನತೆ ಮಾನವ ಸಮಾಜದ ಆಂತರಿಕ ಗುಣಗಳಾಗಿವೆ.

ಮಾನವ ಸಮಾಜವು ಆದಿಯಿಂದಲೂ ಕೂಡ ಒಂದಲ್ಲ ಒಂದು ಬಗೆಯ ಸ್ತರ ವ್ಯವಸ್ಥೆಗೆ ಒಳಗಾಗಿದೆ. ಸಮಾಜದಲ್ಲಿರುವ ಜನರೆಲ್ಲರಿಗೂ ಒಂದೇ ಬಗೆಯ ಅವಕಾಶ ಸ್ಥಾನಮಾನಗಳನ್ನು ನೀಡಲಾಗದೇ ಇದ್ದುದರಿಂದ ಅವರನ್ನು ವಿಭಿನ್ನ ಸ್ತರಗಳಾಗಿ ವಿಂಗಡಿಸಲಾಗಿದೆ. ಎಲ್ಲಾ ಸಮಾಜಗಳಲ್ಲೂ ಅವುಗಳ ಸದಸ್ಯರುಗಳನ್ನು ಮೇಲು-ಕೀಲು, ಸರಿಸಮಾನ, ಶ್ರೇಷ್ಠ, ಕನಿಷ್ಠ, ಮಧ್ಯಮ, ಎಂದು ವರ್ಗೀಕರಿಸಿ ಅವರುಗಳಿಗೆ ಬೇರೆ ಬೇರೆ ಸಾಮಾಜಿಕ ಸ್ಥಾನಮಾನ ಮತ್ತು ಪಾತ್ರಗಳನ್ನು ನೀಡುವ ಕ್ರಮವಿದೆ. ಹೀಗೆ ಜನರನ್ನು ವಿಭಿನ್ನಸ್ತರಗಳಾಗಿ ವರ್ಗೀಕರಿಸುವ ವ್ಯವಸ್ಥೆಗೆ ಅಥವಾ ಅವರನ್ನು ಏಣಿ-ಶ್ರೇಣಿಗಳಿಂದ ಕೂಡಿರುವ ವಿಭಿನ್ನ ಸ್ಥಾನಮಾನಗಳಲ್ಲಿ ಹಂಚಿಹಾಕುವ ಏರ್ಪಾಡಿಗೆ ಸಾಮಾಜಿಕ ಸ್ತರ ವಿನ್ಯಾಸ ಎನ್ನಬಹುದು. ಭಾರತೀಯ ಸಮಾಜ ರೂಪುಗೊಂಡಿದ್ದು, ವರ್ಣವ್ಯವಸ್ಥೆಗನುಗುಣವಾಗಿ ಗುಣಕರ್ಮಗಳ ಆಧಾರದ ಮೇಲಿಂದ ಮಾನವನನ್ನು ಸ್ಥೂಲವಾಗಿ ವಿಭಜನೆ ಮಾಡುವುದೇ ವರ್ಣ ವ್ಯವಸ್ಥೆಯಾಗಿದೆ. ಮಾನವನ ಮೂಲಗುಣಗಳಾದ ಸತ್ವ, ರಜಸ್ಸು, ತಮಸ್ಸುಗಳನ್ನು ತಳಹದಿಯಾಗಿಟ್ಟುಕೊಂಡು ಅತ್ಯಂತ ವ್ಯವಸ್ಥಿತವಾಗಿ ಮತ್ತು ಸೈದ್ಧಾಂತಿಕವಾಗಿ ಚಾತುರ್ವರ್ಣ ವ್ಯವಸ್ಥೆಯು ಭಾರತೀಯ ಸಾಮಾಜಿಕ ವ್ಯವಸ್ಥೆಯಾಗಿ ರೂಪುಗೊಂಡಿತು.

ಕ್ಷತ್ರಿಯ ಸಮುದಾಯ ವಾಸ್ತವ ಮತ್ತು ವೈರುಧ್ಯಗಳನ್ನು ನಾವು ಇವತ್ತು ಈ ನಮ್ಮ ಭಾರತೀಯ ಏಕಾಕಾರೀ ಸಂಸ್ಕೃತಿಯ ಹಿನ್ನೆಲೆಯಲ್ಲಿ ಪರಿಭಾವಿಸುವ ಜರೂರು ಇದೆ. ಸಮುದಾಯ ಎಂಬುವುದು

ಒಂದು ಸಾಮಾಜಿಕ ಘಟಕ, ಸದಾ ಚಲನಶೀಲವಾದುದು. ಹೊರನೋಟಕ್ಕೆ ಗೋಚರಿಸಿದಿದ್ದರೂ ಅಂತರ್ ಚಲನಶೀಲತೆ ಎಂಬುದು ಇದ್ದೇ ಇರುತ್ತವೆ. ಈ ಚಲನದಲ್ಲಿ ನೇರವಾದ ಚಲನೆ ಸಮಮಟ್ಟದ ಚಲನೆಗಳು ನಡೆಯುತ್ತಲೇ ಇರುತ್ತವೆ. ಕೆಳ ಸಮುದಾಯಗಳು ಸಂಸ್ಕೃತೀಕರಣದ ಮೂಲಕ ಮೇಲೇಳುವುದು ನೇರ ಚಲನೆಯಾದರೆ, ಒಂದೇ ಸಮುದಾಯದೊಳಗಿನ ಬಳ್ಳಿ ಬೆಡಗುಗಳನ್ನು ಮರೆತು ಒಂದಾಗುವುದು, ಸಮಮಟ್ಟದ ಚಲನೆ. ಈ ಚಲನಶೀಲತೆಯಲ್ಲಿ ಸ್ಥಿರ, ಸಂಚಾರಿ ಎಂಬುವುದು ಇಲ್ಲವೇ ಇಲ್ಲ. ಸಮುದಾಯವು ವ್ಯವಸ್ಥೆಯನ್ನು ತನ್ನಲ್ಲಿ ತಾನೇ ನಿರ್ಮಿಸಿಕೊಳ್ಳುತ್ತಾ ಹೋಗುತ್ತದೆ. ಹಾಗೆಯೇ ವ್ಯವಸ್ಥೆಯನ್ನು ಒಡೆದು ಕಟ್ಟುವ ಕೆಲಸಗಳನ್ನು ಸಮುದಾಯಗಳೂ ನಿರಂತರವಾಗಿ ಮಾಡುತ್ತಲೇ ಇರುತ್ತವೆ. ಈ ಹಿನ್ನೆಲೆಯಲ್ಲಿ ಸ್ಥಿರ ಸಮುದಾಯ ಇದ್ದರೆ, ಅದು ಮೃತ ಸಮುದಾಯ ಎಂಬ ಅರ್ಥ. ಆದರೆ ಆಯಾ ಕಾಲಕ್ಕೆ ಸ್ಥಿರವಾದ ಮೌಲ್ಯಗಳೂ ಇದ್ದೆ ಇರುತ್ತವೆ.

ಒಂದು ವಿಶಿಷ್ಟ ಸಮಾಜ ಅಥವಾ ಸಮುದಾಯ ಯಾವ ವೈಚಿತ್ರ್ಯ ಅಥವಾ ವಿಶೇಷತೆಯನ್ನು ತನ್ನದೆಂದೂ ಇತರರಿಂದ ಭಿನ್ನವಾದುದೆಂದೂ ಹೇಳಿಕೊಳ್ಳುತ್ತದೆಯೋ ಅದು ಬಹುಶಃ ಅದರದ್ದಾಗಿರದೆ ಬೇರೆಯವರದ್ದೇ ಆಗಿರುತ್ತದೆ. ಭಾರತದ ಸಾಮಾಜಿಕ ಲಕ್ಷಣಗಳಲ್ಲಿ ಅತ್ಯಂತ ವ್ಯಾಪಕವಾದ ವ್ಯಾಪ್ತಿಯನ್ನು ಹೊಂದಿರುವುದು, 'ವೈವಿಧ್ಯತೆ' ಇದು ಭಾರತೀಯ ಸಮಾಜದ ಒಂದು ಅತಿಮುಖ್ಯವಾದ ಲಕ್ಷಣ. ಈ ಸಮಾಜದಲ್ಲಿ ಭಿನ್ನವಾದ ವ್ಯವಸ್ಥೆಗಳು, ಆಚರಣೆಗಳು, ಪದ್ಧತಿಗಳು, ಮೌಲ್ಯಗಳು, ಅಭಿಪ್ರಾಯಗಳು, ಭಾವನೆಗಳು, ಒಂದರ ಪಕ್ಕ ಒಂದು ಏಕಕಾಲದಲ್ಲಿ ಇರುತ್ತವೆ. ಈ ಭಿನ್ನತೆಗಳನ್ನು ಸಂವಿಧಾನನ ರಾಜಕೀಯ, ಆಡಳಿತ, ಧಾರ್ಮಿಕ, ಜಾತಿ ಇತರೆ ಸಾಮಾಜಿಕ ಸಂಬಂಧವಾದ ವಿವಿಧ ವ್ಯವಸ್ಥೆಗಳಲ್ಲಿ ಕಾಣಿಸುತ್ತದೆ. ವಿವಿಧ ಜಾತಿಗಳು, ಧರ್ಮಗಳು, ಪಂಗಡಗಳು, ಪ್ರದೇಶಗಳ ನಡುವೆ ಜೀವನದ ನಡುವೆ ವ್ಯತ್ಯಾಸ, ವೈವಿದ್ಯತೆಗಳು ಸಮಾಂತರವಾಗಿ ಏಕಕಾಲದಲ್ಲಿ ಕಾಣಿಸುತ್ತದೆ.

ಉಳ್ಳವರು ಮುಖ್ಯವಾಗಿ ಮೇಲ್ಜಾತಿಗಳು ಆಯಾ ಸಂಸ್ಥೆಗಳನ್ನು ಆಯ್ದುಕೊಳ್ಳುವುದಕ್ಕೆ, ತಮ್ಮ ಹಕ್ಕುಗಳನ್ನು ಮತ್ತಷ್ಟು ದಕ್ಷತೆಯಿಂದ ಬೆಳೆಸಿಕೊಳ್ಳುವುದಕ್ಕೆ ತಮ್ಮ ಪ್ರಯೋಜನಗಳನ್ನು ರಕ್ಷಿಸಿಕೊಳ್ಳುವುದಕ್ಕೆ ಅವನ್ನು ಮತ್ತಷ್ಟೇ ಅನುಕೂಲಕರವಾಗಿ ತೀಡಿ ತಿದ್ದಿಕೊಂಡು ಅನುಭವಿಸುವುದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ. ಇಲ್ಲದವರು ಮುಖ್ಯವಾಗಿ ದುರ್ಬಲವರ್ಗಗಳು ಮತ್ತು ಕೆಳಜಾತಿಗಳವರು ತಮಗಿರುವ ಹಕ್ಕುಗಳನ್ನು ಅನುಭವಿಸಲಾರದ ಸ್ಥಿತಿಯಲ್ಲಿರುತ್ತಾ ತಮ್ಮ ಅಸ್ತಿತ್ವಕ್ಕಾಗಿ, ಕನಿಷ್ಠ ಅಗತ್ಯಗಳನ್ನು ತೀರಿಸಿಕೊಳ್ಳುವುದಕ್ಕೂ ಕಷ್ಟಪಡಬೇಕಾದ ಸ್ಥಿತಿ ಏರ್ಪಟ್ಟಿದೆ. ಸಾಮಾಜಿಕ, ರಾಜಕೀಯ, ಆರ್ಥಿಕ, ವ್ಯವಸ್ಥೆಗಳಲ್ಲಿ ಸೂಚಿಸುವವರ ಮತ್ತು ನಿರ್ವಹಿಸುವವರ ನಡುವೆ ಹೇಳಲಾದ ಅಧಿಕಾರಕ್ಕೂ ಮತ್ತು ವಾಸ್ತವವಾಗಿ ಚಲಾಯಿಸುವ ಅಧಿಕಾರಕ್ಕೂ ನಡುವೆ ವ್ಯತ್ಯಾಸಗಳು ಕಂಡುಬರುತ್ತವೆ. ಹಾಗೆಯೇ ಸಂವಿಧಾನ, ಶಾಸನ, ನಿಯಮ-ನಿಬಂಧನೆ, ಸೂಚ್ಯಂಕ, ಅಂಕಿ-ಅಂಶ, ಸರ್ಕಾರಿ ವ್ಯವಸ್ಥೆಗಳ ಬಗ್ಗೆ ಹಾಗೂ ಸಾಮಾಜಿಕ ವ್ಯವಸ್ಥೆಗಳ ಬಗ್ಗೆ ಅಭಿಪ್ರಾಯ ಮತ್ತು ವಾಸ್ತವಗಳ ನಡುವೆ ಹೇಳುವುದಕ್ಕೂ, ಮಾಡುವುದಕ್ಕೂ ಸಿದ್ಧಾಂತಕ್ಕೂ, ಆಚರಣೆಯಲ್ಲಿ ಕಾಣಿಸುವುದಕ್ಕೂ ಮತ್ತು ಕಾಣಿಸದ ವರ್ತನೆಗೂ

ನಡುವೆ ಅನೇಕ ವ್ಯತ್ಯಾಸಗಳು ಕಂಡುಬರುತ್ತವೆ. ಹೀಗೆ ಹೊಂದಾಣಿಕೆಯಿಲ್ಲದ ಭಿನ್ನತೆ, ಅವಾಸ್ತವಿಕತೆ, ಮತ್ತು ಔಪಚಾರಿಕತೆ ಸಾರ್ವತ್ರಿಕವಾಗಿ ಕಾಣಿಸುತ್ತವೆ. ಕೆಳಸ್ತರದ ಅಥವಾ ಅಲಕ್ಷಿತವರ್ಗದ ಜನರ ಚರಿತ್ರೆಯನ್ನು ರಚಿಸಲು ದೊರಕುವ ಚರಿತ್ರೆಕಾರನಿಗೆ ಚರಿತ್ರೆಗೆ ಸಂಬಂಧಿಸಿದ ಯಾವುದೇ ಸಾಮಗ್ರಿಗಳು ದೊರೆತರೂ ಅವುಗಳು ಅಲಕ್ಷಿತ ವರ್ಗಗಳ ಹಿನ್ನಲೆಯಿಂದಲೇ ವ್ಯಾಖ್ಯಾನಿಸಲ್ಪಡುತ್ತವೆ. ಖಚಿತವಾದ ಸೈದ್ಧಾಂತಿಕ ನಿಲುವುಗಳಿದ್ದಾಗ ಮಾತ್ರ ಸ್ಪಷ್ಟವಾದ ತೀರ್ಮಾನಗಳು ಹೊರ ಬರಲು ಸಾಧ್ಯ. ಉದಾರವಾದ ಚಿಂತನೆಗಳಲ್ಲಿ ಸ್ಪಷ್ಟವಾದ ತೀರ್ಮಾನಗಳು ಕಂಡುಬರುವುದಿಲ್ಲ. ಅವು ಹೆಚ್ಚಾಗಿ ಮೇಲ್ವರ್ಗದ ಧೋರಣೆಗಳ ಪರವಾಗಿಯೇ ಇರುತ್ತವೆ. ವಿವಿಧ ರಾಜ್ಯ ಹಾಗೂ ಭಾಷೆಗಳಿಗೆ ಸಂಬಂಧಿಸಿದ ಅರಸು ಮನೆತನಗಳು ಪರಸ್ಪರ ನಡೆಸುವ ಹೋರಾಟಗಳು, ಒಪ್ಪಂದಗಳು, ವೈವಾಹಿಕ ಸಂಬಂಧಗಳು, ಚರಿತ್ರೆಕಾರರರಿಗೆ ಕುತೂಲಹಕ್ಕಾಗಿ ಘಟನೆಗಳಾಗಿ ಕಂಡುಬರುತ್ತವೆ. ಅದೇ ರೀತಿ ತಾವು ಪ್ರತಿನಿಧಿಸುತ್ತಿರುವ ರಾಜ್ಯ, ದೇಶ, ಮತ್ತು ಭಾಷೆಗಳ, ಪರವಾಗಿಯೇ ಈ ಚರಿತ್ರೆಕಾರರು ವಕಾಲತು ನಡೆಸುತ್ತಿರುತ್ತಾರೆ. ಇವರಲ್ಲಿ ಮುಕ್ತ ಮನಸ್ಸಾಗಲೀ ಚರಿತ್ರೆಯನ್ನು ನೋಡುವ ವಿಶಾಲ ದೃಷ್ಟಿಕೋನವಾಗಲಿ ಇರುವುದಿಲ್ಲ. ಇಂಥ ಸಂದರ್ಭಗಳಲ್ಲಿ ಚರಿತ್ರೆ ಪೂರ್ವಗ್ರಹಿಕ ಕಲ್ಪನೆಗಳ ಪ್ರತಿಪಾದನೆಗೆ ವೇದಿಕೆಯಾಗಿ ಮಾರ್ಪಡುತ್ತದೆ.

ದೇಸಿ ಸಮುದಾಯಗಳ ಅವೈದಿಕ ಪರಂಪರೆಗಳ ಜ್ಞಾನಧಾರೆಗೆ ಶತಶತಮಾನಗಳ ಅನುಭವ ಇತ್ತು, ವೃತ್ತಿ ಕೌಶಲ್ಯವಿತ್ತು, ಜ್ಞಾನದ ಹೊಳೆ ಇತ್ತು. ಇದನ್ನು ಕಂಡ ಸ್ಥಿರಸಮುದಾಯ ಇವುಗಳಲ್ಲಿ ಅನುಕೂಲವಾದವುಗಳನ್ನು ತನ್ನ ಪರಂಪರೆಗೆ ಸೇರಿಸಿಕೊಂಡು ಪ್ರಯೋಜನ ಪಡೆದಿರುವ ಹುನ್ನಾರಗಳನ್ನು ಇತಿಹಾಸದುದ್ದಕ್ಕೂ ನಡೆಸಿರುವುದನ್ನು ಕಾಣುತ್ತೇವೆ. ಸಮುದಾಯದ ರಾಜಕೀಯ, ಸಾಮಾಜಿಕ, ಆರ್ಥಿಕ, ವೈದಿಕಶಾಹಿಯ ವಿಚಾರಗಳನ್ನು ವೈದಿಕಶಾಹಿ ಸೂತ್ರಗಳಿಗೆ ಅನುಗುಣವಾಗಿಯೇ ಹೆಣೆಯಲಾಗಿದೆ. ವ್ಯಾತ್ಸಾಯನ, ಮನು, ಕೌಟಿಲ್ಯನಂತಹವರು ಇದಕ್ಕೆ ತಮ್ಮ ಶಕ್ತಿಯನ್ನೆಲ್ಲ ಧಾರೆ ಎರೆಯಲು ಸಿದ್ಧರಾಗಿದ್ದರು. ಮನುಷ್ಯ, ಮನುಷ್ಯರ ನಡುವೆ ಅಂತರವನ್ನು ಸೃಷ್ಟಿಸಿ ಬಹುಜನರನ್ನು ಬಹು ಜನ ಸಂಸ್ಕೃತಿಯನ್ನು ತುಳಿದು ಸುಲಿಗೆ ಮಾಡುವ ಸಲುವಾಗಿ ಮೇಲ್ವರ್ಗ ವೇದಾಂತವನ್ನು ಸೃಷ್ಟಿಸಿತು ಪುರೋಹಿತಶಾಹಿಯನ್ನು ಓಲೈಸುವ ಪ್ರಭುತ್ವದ ನೀತಿಗೆ ಆಧಾರವನ್ನು ಕಲ್ಪಿಸುವ ಸಲುವಾಗಿ ಕೌಟಿಲ್ಯನ ಅರ್ಥಶಾಸ್ತ್ರ ಹುಟ್ಟಿಕೊಂಡಿತು. ಸ್ತ್ರೀಯರಿಗಿದ್ದ, ಪ್ರಾಧ್ಯಾನ್ಯತೆಯನ್ನು ಮಸುಕುಗೊಳಿಸುವ ಸಲುವಾಗಿ ಮನುಸ್ಮೃತಿ ಹುಟ್ಟಿಕೊಂಡಿತು. ಸಂಸ್ಕೃತಿಕಾರರು ಕಸುಬುಗಳನ್ನು ಜಾತಿಗಳನ್ನಾಗಿ ವಿಂಗಡಿಸಿ, ಒಂದಕ್ಕಿಂತ ಇನ್ನೊಂದು ಕಡೆಯೆಂದು ಶ್ರೇಣೀಕೃತ ಸಮಾಜವನ್ನು ಹುಟ್ಟುಹಾಕಿದರು.

ನಮ್ಮ ಸಂವಿಧಾನ ದೇಶದ ಪ್ರತಿಯೊಬ್ಬ ಪ್ರಜೆಗೂ ಸಮಾನ ಅವಕಾಶಗಳನ್ನು ನೀಡಿದೆ. ಅಲ್ಲದೆ ಸ್ವಾಭಿಮಾನ ಮತ್ತು ಗೌರವದಿಂದ ಬಾಳುವ ಅವಕಾಶವನ್ನು ಕಲ್ಪಿಸಿದೆ. ಜಾತ್ಯಾತೀತ ರಾಷ್ಟ್ರ ಎಂಬ ಘೋಷ ವಾಕ್ಯವನ್ನು ಸಂವಿಧಾನದಲ್ಲೂ ಅಳವಡಿಸಲಾಗಿದೆ. ಹೀಗಿದ್ದೂ, ನಿರ್ಲಕ್ಷ್ಯಕ್ಕೆ ಒಳಗಾಗಿ, ಸಂವಿಧಾನ ಅಸ್ತಿತ್ವಕ್ಕೆ ಬರುವ ಮೊದಲಿನಿಂದಲೂ ಅಸ್ಪೃಶ್ಯರೆನಿಸಿಕೊಂಡು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅವಕಾಶಗಳಿಂದ ವಂಚಿತರಾದ ಪರಿಶಿಷ್ಟ ಜಾತಿಯ ಜನರಿಗೆ ಸಮಾಜದ ಎಲ್ಲ ಸ್ತರಗಳಲ್ಲಿ ಮುಕ್ತ ಅವಕಾಶ ಕಲ್ಪಿಸುವುದಕ್ಕಾಗಿ ಜಾತಿ ಆಧಾರಿತ ಮೀಸಲಾತಿಯನ್ನು ಒದಗಿಸುವುದೂ ಅನಿವಾರ್ಯವಾದದ್ದು ಈಗ ಇತಿಹಾಸ.

ಈ ಮೀಸಲಾತಿಯ ದೂರದೃಷ್ಟಿಯ ಗುರಿ ಸಹಸ್ರಾರು ವರ್ಷಗಳಿಂದ ಹುಟ್ಟಿನಿಂದ ನಿರ್ಲಕ್ಷ್ಯಕ್ಕೆ ಒಳಗಾದ ಪರಿಶಿಷ್ಟ ಜಾತಿಯ ಜನರು ಇತರರಂತೆಯೇ ಮುಕ್ತ ಅವಕಾಶಗಳನ್ನು ಪಡೆದು ಮುಂದೆ ಬರಬೇಕೆನ್ನುವುದಾಗಿದೆ. ಆದರೆ ಸಂವಿಧಾನದ ಈ ಮೂಲ ಆಶಯ ಜಾತಿ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ಅಥವಾ ಅದನ್ನು ಪೋಷಿಸುವ ಉದ್ದೇಶವನ್ನು ಖಂಡಿತ ಹೊಂದಿಲ್ಲ. ದುರದೃಷ್ಟಕರ ಸಂಗತಿ ಎಂದರೆ ನಮ್ಮ ಜಾತಿಯ ಶ್ರೇಣೀಕೃತ ವ್ಯವಸ್ಥೆಯಲ್ಲಿನ ಕೆಲವೇ ಜನರು ಸಮಾಜ ಮತ್ತು ಸರ್ಕಾರದಲ್ಲಿ ಎಲ್ಲ ಅವಕಾಶಗಳನ್ನು ಮತ್ತು ಸೌಲಭ್ಯಗಳನ್ನು ಪಡೆಯುತ್ತಾ ಬಂದದ್ದು ಬೆಳಕಿನಷ್ಟೇ ಸತ್ಯ. ಹೀಗಾಗಿ ನಿರ್ಲಕ್ಷ್ಯಕ್ಕೆ ಒಳಗಾದ ಉಳಿದ ಜಾತಿಗಳ ಜನರನ್ನು ಸಮಾಜದ ಮುಖ್ಯವಾಹಿನಿಗೆ ತರುವುದಕ್ಕಾಗಿ ಸೃಷ್ಟಿಸಲಾದ ಸಾಮಾಜಿಕ ನ್ಯಾಯದ ಪರಿಕಲ್ಪನೆಗೆ ಈಗ ಸಾಂವಿಧಾನಿಕ ಮನ್ನಣೆ ದೊರೆಯುತ್ತಿದೆ. ಇದರ ಪರಿಣಾಮವಾಗಿ ಪ್ರತಿಯೊಂದು ಜಾತಿಯ ಜನರ ಸಂಖ್ಯೆಯ ಆಧಾರದ ಮೇಲೆ ಅವಕಾಶ ಮತ್ತು ಸರ್ಕಾರದ ಸೌಲಭ್ಯ ನೀಡುವ ದಿಕ್ಕಿನಲ್ಲಿ ಮೀಸಲಾತಿಯ ವಿಸ್ತರಣೆ ಬೆಳೆಯುತ್ತಾ ಹೋಗಿದೆ. ಇದರಿಂದ ಸರ್ಕಾರದ ಮಟ್ಟದಲ್ಲಿಯೇ ಜಾತಿ ವ್ಯವಸ್ಥೆ ಅಕ್ಷರಶಃ ವಾಸ್ತವ ಎನ್ನುವ ಸತ್ಯವನ್ನು ಒಪ್ಪಿಕೊಳ್ಳಲಾಗಿದೆ. ಹೀಗಾಗಿ ಪ್ರತಿಯೊಂದು ಜಾತಿ ತಮ್ಮ ಜನಸಂಖ್ಯೆಗೆ ಅನುಗುಣವಾಗಿ ಆಡಳಿತದಲ್ಲಿ ಮತ್ತು ಅವಕಾಶಗಳಲ್ಲಿ ಪಾಲು ಕೇಳುತ್ತದೆ. ಈ ಹಕ್ಕೊತ್ತಾಯವನ್ನು ಸುಲಭವಾಗಿ ವಿವೇಚನಾ ರಹಿತವಾಗಿ ತಳ್ಳಿ ಹಾಕಲಾಗದು. ಜನತಂತ್ರ ವ್ಯವಸ್ಥೆಯಲ್ಲಿ ಈ ಪಾಲುಗಾರಿಕೆ ನ್ಯಾಯಸಮ್ಮತ ಎನ್ನುವ ಸಾಮಾಜಿಕ ಸಮಾನತೆಯ ಈ ದಿನದಲ್ಲಿ ಹೊಸ ಆಯಾಮವನ್ನು ನಶಿಸಿದೆ. ಅದರಲ್ಲಿ ಕ್ಷತ್ರಿಯ ಸಮುದಾಯಗಳು ತನ್ನದೇ ಪಾಲುಗಾರಿಕೆಯಲ್ಲಿ ಕನಸು ಕಾಣಲಿವೆ.

## ೧.೨. ಅಧ್ಯಯನದ ಉದ್ದೇಶಗಳು

ಪ್ರಸ್ತುತ ಅಧ್ಯಯನವು ಕ್ಷತ್ರಿಯರ ಸಾಮಾಜಿಕ ಅಧ್ಯಯನವಾಗಿದ್ದು, ಅತ್ಯಂತ ವಿಸ್ತಾರವಾದ ಉದ್ದೇಶಗಳನ್ನು ಒಳಗೊಂಡಿದೆ. ಯಾವುದೇ ಸಂಶೋಧನೆಯನ್ನು ಕೈಗೊಳ್ಳುವ ಮುನ್ನ ಒಂದು ಸಂಶೋಧನಾ ಚೌಕಟ್ಟಿನ ಅಡಿಯಲ್ಲಿ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಉದ್ದೇಶಗಳನ್ನು ಇಟ್ಟುಕೊಳ್ಳುವುದು ಮುಖ್ಯವೆನ್ನಿಸುತ್ತದೆ. ಈ ಉದ್ದೇಶಗಳು ಸಂಶೋಧನೆಯ ಗುರಿಯನ್ನು ಮಹತ್ವನ್ನು ತಿಳಿಸಿಕೊಡುವಲ್ಲಿ ಪ್ರಮುಖ ಪಾತ್ರನಿರ್ವಹಿಸುತ್ತವೆ. ಆದ ಕಾರಣ ಈ ಉದ್ದೇಶಗಳು ಕೇವಲ ಸಂಶೋಧನೆಯ ಚೌಕಟ್ಟಿನಲ್ಲಿ ಬರುವಂತೆ ನೋಡಿಕೊಳ್ಳಬೇಕಾಗುತ್ತದೆ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನವು ಈ ಕೆಳಕಂಡಂತೆ ಸ್ಪಷ್ಟವಾದ ಉದ್ದೇಶಗಳನ್ನು ಹೊಂದಿದೆ.

೧. ಕ್ಷತ್ರಿಯರ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ನೆಲೆಯನ್ನು ಕುರಿತು ಅಧ್ಯಯನ ಮಾಡುವುದು.

೨. ಕ್ಷತ್ರಿಯರ ಪರ್ಯಾಯ ಸಮುದಾಯಗಳನ್ನು ಗುರುತಿಸುವುದು.

೩. ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ, (ಹಿಂದೂ ಕ್ಷತ್ರಿಯ) ಜೀನವಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳನ್ನು ತಿಳಿಯುವುದು.

೪. ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ, (ಹಿಂದೂ ಕ್ಷತ್ರಿಯ) ಸಮುದಾಯಗಳ ಸಾಮಾಜಿಕ, ಆರ್ಥಿಕ, ಮತ್ತು ರಾಜಕೀಯ, ಅಂಶಗಳ ಅಧ್ಯಯನ ಮಾಡುವುದು.

## ೧.೩. ಅಧ್ಯಯನದ ಪ್ರಾಕಲ್ಪನೆಗಳು

ವಿಷಯಕ್ಕೆ ಸಂಬಂಧಿಸಿದ ಸಂಶೋಧನಾ ಉದ್ದೇಶಗಳನ್ನು ಸಾಧಿಸಲು ಸಂಶೋಧನಾ ಕ್ಷೇತ್ರದಲ್ಲಿ ಪೂರ್ವಭಾವಿ ಪರೀಕ್ಷೆ ನಡೆಸಿ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಸಾಹಿತ್ಯಾವಲೋಕನ ಮಾಡಿ ವಿಷಯ ಪರಿಣಿತರೊಂದಿಗೆ ಚರ್ಚಿಸಿ ಕೆಲವು ಅಧ್ಯಯನ ಪ್ರಾಕ್‌ಕಲ್ಪನೆಗಳನ್ನು ರೂಪಿಸಲಾಗಿದೆ.

೧. ಮನುವಿನ ವರ್ಣಾಶ್ರಮ ಧರ್ಮವು ಪ್ರಕೃತಿ ಸಹಜವಾದುದಲ್ಲ.

೨. ಪ್ರಸ್ತುತ ರಾಜಕೀಯ ವ್ಯವಸ್ಥೆಯಲ್ಲಿ ಮನು ಕ್ಷತ್ರಿಯರನ್ನು ಕಾಣಲಾಗುವುದಿಲ್ಲ.

೩. ಕ್ಷತ್ರಿಯರು ಪ್ರಾದೇಶಿಕವಾಗಿ ಪರ್ಯಾಯ ಹೆಸರುಗಳಿಂದ ಹಂಚಿಹೋಗಿರುವುದರಿಂದ ಸಮುದಾಯದ ಗುರುತಿನ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ.

## ೧.೪. ಅಧ್ಯಯನದ ಮಹತ್ವ

ರಾಜ್ಯ ಎನ್ನುವುದು ಒಂದು ನಿರ್ಧಿಷ್ಟ ಭೌಗೋಳಿಕ ಸೀಮೆಗೆ ಸಂಬಂಧಿಸಿದ್ದಾಗಿದೆ. ಅದೊಂದು ಆಳ್ವಿಕೆಯ ವ್ಯವಸ್ಥೆಯೂ ಹೌದು. ಅದರಲ್ಲಿ ಅರಸ, ಮಂತ್ರಿ, ಅಧಿಕಾರಿಗಳು, ಪ್ರಜೆಗಳು, ಎಲ್ಲರೂ ಇರುತ್ತಾರೆ. ಅವರ ಸಂಬಂಧಗಳು ಪರಸ್ಪರ ಪೂರಕವಾದದ್ದೇ ಆಗಿದೆ. ಅವರೆಲ್ಲರಿಗೂ ಜವಾಬ್ದಾರಿಗಳಿರುತ್ತವೆ. ಅರಸ ಅಥವಾ ಅರಸು ಮನೆತನಗಳು ಚರಿತ್ರೆ ಚರಿತ್ರೆಯ ಒಂದು ಭಾಗಮಾತ್ರ ಅದೇ ಚರಿತ್ರೆಯಾಗಲು ಸಾಧ್ಯವಿಲ್ಲ. ಆದರೆ ಸಾಮಾನ್ಯವಾಗಿ ಚರಿತ್ರೆ ಎಂದಾಗ ರಾಜನೆಂಬ ವ್ಯಕ್ತಿ ಕೇಂದ್ರಿತ ಹಾಗೂ ಅವನ ಯುದ್ಧ ದಿಗ್ವಿಜಯ, ವಂಶಾವಳಿ ಮುಂತಾದ ಬರವಣಿಗೆಗಳು ಪ್ರಧಾನವಾಗಿರುವ ಚಿತ್ರಣವೇ ಕಂಡುಬರುತ್ತದೆ. ಸಬಾಲ್ಟರ್ನ್ ಪಂಥವು ಇದುವರೆಗಿನ ಚರಿತ್ರೆಯ ಅಧ್ಯಯನವನ್ನು ನಿಜವಾದ ಚರಿತ್ರೆಯ ಕೇವಲ ಒಂದು ಭಾಗವಾಗಿದೆಯೆಂದು ಪರಿಗಣಿಸುತ್ತದೆ. ಸಮಾಜದ ಕೆಳವರ್ಗದ ಬಹುಸಂಖ್ಯಾತ ಜನರ ಚರಿತ್ರೆಯ ನಿಜವಾದ ಚರಿತ್ರೆಯಾಗಿದ್ದು, ಅದು ಶೋಷಣೆಗೊಳಗಾಗಿದೆ ಎನ್ನುವುದು ಈ ಪಂಥಕ್ಕೆ ಸೈದ್ಧಾಂತಿಕ ಚೌಕಟ್ಟೊಂದನ್ನು ಹಾಕಿಕೊಟ್ಟಿದೆ ಎಂದು ಆಂಟೋನಿಯೋ ಗ್ರಾಮ್‌ಶೀ ಅವರ ಅಭಿಪ್ರಾಯ.

ಪ್ರಸ್ತುತ ಕ್ಷತ್ರಿಯರ ಸಾಮಾಜಿಕ ಅಧ್ಯಯನವು ಚಾರಿತ್ರಿಕ ಹಿನ್ನಲೆಯ ಚಹರೆಯಿಂದ ಗುರುತಿಸಲಾಗಿದೆ. ಕ್ಷತ್ರಿಯರು ವೇದ ಮತ್ತು ಪುರಾಣಗಳ ಕಾಲದಲ್ಲಿ ಉತ್ತಮ ಸ್ಥಾನಕಂಡುಕೊಂಡವರು, ಭಾರತವು ಪರಕೀಯರ ದಾಳಿಗೆ ಒಳಗಾದ ಮೇಲೆ ಇವರು, ಚರಿತ್ರೆಯಿಂದ ಹೊರಬರಲು ತೊಡಗಿದರು. ಕ್ಷತ್ರಿಯರ ಪರಿಸ್ಥಿತಿಯು ಇಂದು ಸಮಾಜದ ವ್ಯವಸ್ಥೆಯಲ್ಲಿ ಅಧೋಗತಿಯನ್ನು ಅನುಭವಿಸತೊಡಗಿದೆ. ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯವಾಗಿ ಹಿನ್ನಡೆ ಸಾಧಿಸುತ್ತಿದ್ದಾರೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಚಾರಿತ್ರಿಕ ನೆಲೆಯನ್ನು ತಿಳಿದುಕೊಂಡು ಅವರ ಸಮಗ್ರ ಅಧ್ಯಯನ ಮಾಡುವ ಸಲುವಾಗಿ ಈ ಸಂಶೋಧನೆಯು ಮಹತ್ವವನ್ನು ಪಡೆದುಕೊಳ್ಳುತ್ತದೆ. ಕ್ಷತ್ರಿಯರ ಪರ್ಯಾಯ ಪದಗಳನ್ನೂ ಇಟ್ಟುಕೊಂಡಿರುವುದರಿಂದ ಸಮಾಜದಲ್ಲಿ ಇವರ ಗುರುತಿಸುವಿಕೆ

ಕಷ್ಟಕರವೆನ್ನಿಸಿದೆ. ಆದರೆ ಆಯಾಯ ಪರ್ಯಾಯ ಪದಗಳನ್ನು ಹೊಂದಿರುವ ಕ್ಷತ್ರಿಯ ಸಮುದಾಯಗಳ ಸಂಶೋಧನೆ ಕೈಗೊಳ್ಳಲು ಈ ಅಧ್ಯಯನವು ಮಹತ್ವವೆನ್ನಿಸಿದೆ. ಇವರ ವೃತ್ತಿಯಲ್ಲಿ ಯಾದ ಸ್ಥಿತ್ಯಂತರವನ್ನು ಅಧ್ಯಯನ ಮಹತ್ವದಿಂದ ತಿಳಿಯಬಹುದಾಗಿದೆ. ಇವರ ಮೂಲ, ಬೆಡಗು, ಆಚರಣೆ, ಸಂಪ್ರದಾಯ, ಚಹರೆಯನ್ನು ಗುರುತಿಸುವಲ್ಲಿ ಸಹಕಾರಿಯಾಗಿದೆ. ಅಲ್ಲದೆ ಕರ್ನಾಟಕದಲ್ಲಿ ಎಲ್ಲಿ ಹೆಚ್ಚಾಗಿದ್ದಾರೆ ಎಂಬುದನ್ನು ತಿಳಿಯುಲು ಸಹಕಾರಿಯಾಗಿದೆ. ಹಾಗೆಯೇ ಸರ್ಕಾರರಿಂದ ಸೌಲಭ್ಯ ವಂಚಿತರಾಗಿರುವುದನ್ನು ಈ ಅಧ್ಯಯನದ ಮಹತ್ವದಿಂದ ತಿಳಿಯಬಹುದಾಗಿದೆ. ಈ ಒಂದು ಸಮುದಾಯವನ್ನು ಸರ್ಕಾರದ ಅಧಿನದಲ್ಲಿ ತಂದು ಅಧ್ಯಯನ ಮಾಡಲು ಸಂಶೋಧನೆಯ ಅಧ್ಯಯನವು ಮಹತ್ವನ್ನೆಸಿದೆ.

### ೧.೫. ಅಧ್ಯಯನದ ವ್ಯಾಪ್ತಿ

ಸಂಶೋಧಕನು ಒಂದು ಅಧ್ಯಯನವನ್ನು ಪರಿಪೂರ್ಣವಾಗಿ ಅಥವಾ ಸ್ಪಷ್ಟವಾದ ಮತ್ತು ವಸ್ತುನಿಷ್ಟವಾದ ಅಂಶಗಳನ್ನು ಒಳಗೊಂಡಂತೆ ಸಂಶೋಧನಾ ಕಾರ್ಯನಿರ್ವಹಿಸಬೇಕಾದರೆ, ಅಧ್ಯಯನಕ್ಕೊಂದು ನಿರ್ದಿಷ್ಟವಾದ ವ್ಯಾಪ್ತಿಯು ಮುಖ್ಯವಾಗಿದೆ. ಆಗ ಮಾತ್ರ ಆ ಕ್ಷೇತ್ರದಲ್ಲಿ ಯಶಸ್ಸುನ್ನು ಸಾಧಿಸಬಹುದು. ಅದಕ್ಕಾಗಿ ಅಧ್ಯಯನದ ಪರಿಪೂರ್ಣತೆಗಾಗಿ ನಿರ್ದಿಷ್ಟ ವ್ಯಾಪ್ತಿಯನ್ನು ಹಾಕಿಕೊಳ್ಳಲಾಗಿದ್ದು, 'ಕ್ಷತ್ರಿಯರ ಸಾಮಾಜಿಕ ಅಧ್ಯಯನ' ಎಂಬ ಶೀರ್ಷಿಕೆಯ ಅಡಿಯಲ್ಲಿ ಕರ್ನಾಟಕದಲ್ಲಿರುವ ಕ್ಷತ್ರಿಯ ಸಮುದಾಯವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿ ಹಲವಾರು ಕ್ಷತ್ರಿಯ ಸಮುದಾಯಗಳು ಕಂಡುಬರುತ್ತವೆ. ಅವುಗಳನ್ನು ಸಹ ಅಧ್ಯಯನ ವಿಷಯವಾಗಿ ವಿಶ್ಲೇಷಣೆ ಮಾಡಲಾಗಿದೆ. ಕರ್ನಾಟಕದಲ್ಲಿ ಒಟ್ಟು ೩೦ ಜಿಲ್ಲೆಗಳಲ್ಲಿ ಕ್ಷತ್ರಿಯ ಸಮುದಾಯಗಳಿವೆ. ಸಂಶೋಧನೆಯು ಕ್ಷತ್ರಿಯ ಅಥವಾ ಹಿಂದೂ ಕ್ಷತ್ರಿಯರ ಕುರಿತಾಗಿ ಅಧ್ಯಯನ ನಡೆಸುವ ಉದ್ದೇಶ ಹೊಂದಿದ್ದು, ಜಾತಿ ವ್ಯವಸ್ಥೆಯ ಚೌಕಟ್ಟಿನಲ್ಲಿ ಕ್ಷತ್ರಿಯರ ಸ್ಥಾನಮಾನ, ಸಮಾಜದಲ್ಲಿ ಅವರು ತಮ್ಮನ್ನು ಗುರುತಿಸಿಕೊಳ್ಳುವುದರ ಸ್ವಗ್ರಹಿಕೆಯ ಸ್ವರೂಪವನ್ನು ಗುರುತಿಸುವ ಉದ್ದೇಶದಿಂದ ಕರ್ನಾಟಕದ ಒಂಭತ್ತು ಜಿಲ್ಲೆಗಳಲ್ಲಿ ಹದಿಮೂರು ತಾಲೂಕಗಳನ್ನು ಹಾಗೂ ಈ ಸಮುದಾಯದವರು ವಾಸಿಸುತ್ತಿರುವ ಗ್ರಾಮಗಳಲ್ಲಿ ಕ್ಷೇತ್ರಾಧ್ಯಯನ ಕೈಗೊಂಡು ಕುಟುಂಬಗಳನ್ನು ಅಥವಾ ಕುಟಂಬಸಂದರ್ಶಿತರ ಸದಸ್ಯರಿಂದ ಮಾಹಿತಿಗಳನ್ನು ಸಂಗ್ರಹಿಸಿ ವಿವರಿಸಲಾಗುವುದು. ಸಮಾಜ ಕಲ್ಯಾಣ ಸಚಿವಾಲಯ ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಚೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಚೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಗಳಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಸದಸ್ಯ ಕಾರ್ಯದರ್ಶಿ ಇವರ ಪತ್ರ ಸಂಖ್ಯೆ: ಕೆಎಸ್‌ಸಿಬಿಸಿ:ಎಂಎಸ್: ರಿಪೋರ್ಟ್ ೨೦೦೦-೦೧, ದಿನಾಂಕ ೧೪/೧೨/ ೨೦೦೦. ಪ್ರವರ್ಗ-೨(ಎ) ಕ್ರಮಸಂಖ್ಯೆ ೯೪ರ ಪ್ರಕಾರ ಕ್ಷತ್ರಿಯ:ಕ್ಷತ್ರಿ (ಭಾಗ-೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ಪುಟ-೧೦೧೬, ೨೦೦೨). ಸಂಶೋಧನೆಯ ಉದ್ದೇಶಕ್ಕೆ ಅನುಗುಣವಾಗಿ

ಕರ್ನಾಟಕದಲ್ಲಿನ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಸಮುದಾಯದವನ್ನು ಗುರುತಿಸುವ ಮತ್ತು ಸಂದರ್ಶಿಸುವ ಸಲುವಾಗಿ ಕರ್ನಾಟಕದಲ್ಲಿ ಬರುವ ಒಟ್ಟು ೩೦ ಜಿಲ್ಲೆಗಳಲ್ಲಿ ೯ ಜಿಲ್ಲೆಗಳನ್ನು ಅಧ್ಯಯನ ವ್ಯಾಪ್ತಿಯನ್ನಾಗಿ ಇಟ್ಟುಕೊಂಡು ಒಟ್ಟು ೩೯೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಹಾಗೆಯೇ ಇಡೀ ಭಾರತದ ವ್ಯವಸ್ಥೆಯಲ್ಲಿಯು ಇವರ ಚಹರೆಯ ಗುರುತು ಇದೆ. ಆದ ಕಾರಣ ನಾವು ಇಲ್ಲಿ ಕರ್ನಾಟಕವನ್ನು ಅಧ್ಯಯನದ ವ್ಯಾಪ್ತಿಯನ್ನಾಗಿ ಮಾಡಿಕೊಂಡು ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

### ೧.೬. ಅಧ್ಯಯನದ ವಿಧಾನಗಳು

ಅಧ್ಯಯನದ ಸಮಸ್ಯೆ ಉದ್ದೇಶವನ್ನು ನಿರ್ಧರಿಸದರೆ, ಉದ್ದೇಶಗಳನ್ನು ಅಧ್ಯಯನದ ವಿಧಾನಗಳು ನಿರ್ಧರಿಸುತ್ತವೆ ಅಥವಾ ಪ್ರಭಾವಿಸುತ್ತವೆ. ಸಂಶೋಧನಾ ಉದ್ದೇಶಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಯಾವ ಮೂಲದಿಂದ ಮತ್ತು ಯಾವ ವಿಧಾನಗಳಿಂದ ಸಂಗ್ರಹಿಸಲಾಗುವುದು ಎನ್ನುವ ವಿವರಗಳನ್ನು ಸಂಶೋಧನಾ ವಿಧಾನದಲ್ಲಿ ನೀಡಲಾಗುವುದು. ಪ್ರಸ್ತುತ ಅಧ್ಯಯನಕ್ಕಾಗಿ ಕ್ಷೇತ್ರ ಕಾರ್ಯವನ್ನು ಕೈಗೊಂಡು ಅವಶ್ಯಕವಿದ್ದಲ್ಲಿ ಗ್ರಂಥಗಳನ್ನು ಪುಸ್ತಕಗಳನ್ನು ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಮಾಹಿತಿಯನ್ನು ಸಂಗ್ರಹಿಸುವಾಗ ಹಲವು ರೀತಿಯ ಪದ್ಧತಿಗಳನ್ನು ಅನುಸರಿಸಲಾಗಿದೆ. ಇಲ್ಲಿ ಸಂಶೋಧನೆಗೆ ಮಾಹಿತಿಯನ್ನು ಪಡೆಯುವಲ್ಲಿ ಮುಖ್ಯವಾಗಿ ಎರಡು ರೀತಿಯ ಮೂಲಗಳನ್ನು ಬಳಿಸಿಕೊಳ್ಳಲಾಗಿದೆ.

**ಪ್ರಾಥಮಿಕ ಆಕರಗಳು:** ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಸಮುದಾಯದ ಬಗ್ಗೆ ಸಂಶೋಧನೆಯನ್ನು ಮಾಡುವಾಗ ವಾಸ್ತವಿಕ ಕ್ಷೇತ್ರದಿಂದ ತಾನೇ ನೇರವಾಗಿ ತನ್ನ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಸಂಗ್ರಹಿಸುವ ಮಾಹಿತಿಗಳು ಪ್ರಾಥಮಿಕ ಮೂಲಗಳು, ಸಂಶೋಧನೆ ಕಾರ್ಯಕ್ಕಾಗಿ ಹೊಚ್ಚ ಹೊಸದಾಗಿ ಸಂಗ್ರಹಿಸುವ ಮೂಲಕ ಸ್ವರೂಪದ ಮಾಹಿತಿಗೆ ಸೇರಿಕೊಳ್ಳುತ್ತವೆ ಮೂಲಗಳಿಂದ ಲಭ್ಯವಾಗುವ ಮಾಹಿತಿಗಳನ್ನು ಪ್ರಾಥಮಿಕ ಮಾಹಿತಿಗಳು ಎಂದು ಕರೆಯಬಹುದು. ಈ ಕ್ಷತ್ರಿಯರ ಸಂಶೋಧನೆ ಕಾರ್ಯಕ್ಕಾಗಿ ಆಯ್ಕೆ ಮಾಡಿರುವ ನಮೂನೆಗಳು, ಪ್ರಶ್ನಾವಳಿ, ಅವಲೋಕನ, ಸಂದರ್ಶನ, ವ್ಯಕ್ತಿ ಅಧ್ಯಯನ, ಅಂಕಿ–ಸಂಖ್ಯಾಶಾಸ್ತ್ರೀಯ, ವಿಧಾನಗಳನ್ನು ಮುಂತಾದ ಸಂಶೋಧನಾ ತಂತ್ರಗಳನ್ನು ಬಳಸಿ ಆ ನಮೂನೆಯ ಮೂಲಕ ಪ್ರಾಥಮಿಕ ಮಾಹಿತಿಯನ್ನು ಪಡೆಯಲಾಗಿದೆ.

**ಮಾಧ್ಯಮಿಕ ಆಕರಗಳು:** ಪ್ರಕಾಶಿತವಾದ ಅಥವಾ ಪ್ರಕಾಶಿಸದೇ ಇರುವ ಖಾಸಗಿಯಾದ ಇಲ್ಲವೇ ಸಾರ್ವಜನಿಕ ಸ್ವರೂಪದ ದಾಖಲೆಗಳಿಂದ ಅಥವಾ ಅಂತಹ ಇತರೆ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಗಳು ಈ ವರ್ಗಕ್ಕೆ ಸೇರಿಕೊಳ್ಳುತ್ತವೆ. ಅಂದರೆ ಮಾಧ್ಯಮಿಕ ಮೂಲಗಳಿಗೆ ಸೇರಿರುವ ಮಾಹಿತಿಗಳು ಯಾರಿಂದಲೂ ಈಗಾಗಲೇ ಸಂಗ್ರಹಿತವಾಗಿದ್ದು, ಸಂಖ್ಯಾಶಾಸ್ತ್ರೀಯರ ಪ್ರಕ್ರಿಯೆಗೆ ಆಗಲೇ ಒಳಪಟ್ಟಿರುವುದೂ ಇದೆ. ಇಂತಹ ಮೂಲಗಳಿಂದ ಲಭ್ಯವಾಗುವ ಮಾಹಿತಿಗಳನ್ನು ಮಾಧ್ಯಮಿಕ ಮಾಹಿತಿಗಳು ಎಂದು ಕರೆಯಲಾಗಿದೆ. ಇಲ್ಲಿ ಮುಖ್ಯವಾಗಿ ಕ್ಷತ್ರಿಯರ ಸಮುದಾಯಗಳ ಸಂಶೋಧನೆಗೆ

ಸಂಬಂಧಿಸಿದಂತೆ ಅನುಷಂಗಿಕ ಮೂಲಗಳನ್ನು ಐತಿಹಾಸಿಕ ವಿಧಾನ, ತೌಲನಿಕ ಅಧ್ಯಯನದ ಮೂಲಕ ಮಾಹಿತಿ ಸಂಗ್ರಹಿಸಿ ಬಳಸಿಕೊಳ್ಳವುದಾಗಿದೆ. ಒಟ್ಟಾರೆಯಾಗಿ ಕ್ಷತ್ರಿಯರ ಸಾಮಾಜಿಕ ಅಧ್ಯಯನವನ್ನು ಸಂಶೋಧನೆಯ ಎರಡು ಪ್ರಕಾರಗಳನ್ನು ಬಳಸಿಕೊಂಡು ಮಾಹಿತಿ ಸಂಗ್ರಹಣೆಯನ್ನು ಮಾಡಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ೧.೭. ಇಲ್ಲಿಯವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಕ್ಷತ್ರಿಯರ ಸಾಮಾಜಿಕ ಅಧ್ಯಯನ ಎಂಬ ಶೀರ್ಷಿಕೆ ಅಡಿಯಲ್ಲಿ ಅಧ್ಯಯನ ಆರಂಭಿಸಿದಾಗ ಸಮುದಾಯದ ಕುರಿತಾಗಿ ಹಿಂದಿನ ಅಧ್ಯಯನಕಾರರ ತಿಳುವಳಿಕೆ ಮತ್ತು ಇತಿಮಿತಿಗಳನ್ನು ಗ್ರಹಿಸುವುದು ಅಗತ್ಯವಾಗಿದೆ. ಕ್ಷತ್ರಿಯ ಸಮುದಾಯಗಳ ಕುರಿತಾಗಿ ಅಧ್ಯಯನ ಮಾಡಿರುವುದು ತುಂಬ ವಿರಳವೆನ್ನಿಸಿದೆ. ಸಮುದಾಯವನ್ನು ಕುರಿತು ಕರ್ನಾಟಕದಲ್ಲಿ ಯಾವುದೇ ಸಂಶೋಧನಾ ಅಧ್ಯಯನಗಳು ನಡೆದಿಲ್ಲವೆಂದು ಹೇಳಬಹುದು. ಲಿಖಿತವಾಗಿ ಯಾವುದೇ ಪ್ರಕಟಣೆಗಳು ಲಭ್ಯವಿಲ್ಲವಾದರೂ ಕೆಲವೊಂದು ಇತಿಹಾಸಕಾರರು ಮತ್ತು ಜಾನಪದ ಕವಿಗಳು, ಚರಿತ್ರಕಾರರು ಮತ್ತು ಉಪನ್ಯಾಸಕರು ಕೆಲವೊಂದು ಲೇಖನಗಳನ್ನು ಪ್ರಕಟಿಸಿದ್ದಾರೆ. ಇತರೆ ಕ್ಷತ್ರಿಯ ಸಮುದಾಯಗಳ ಬಗ್ಗೆ ಅಧ್ಯಯನ ನಡೆಸಿರುವುದು ಬೆಳಕಿಗೆ ಬಂದಿದೆ. ಕ್ಷತ್ರಿಯ ಸಮುದಾಯಗಳು ಹಲವಾರು ಉಪಪಂಗಡಗಳಾಗಿ ಕರ್ನಾಟಕದ ಭೂ ಪ್ರದೇಶಗಳಲ್ಲಿ ನೆಲೆ ನಿಂತಿವೆ. ಆದರೆ ಪ್ರತಿಯೊಂದು ಸಮುದಾಯವು ವಿಭಿನ್ನ ರೀತಿಯ ಸಂಸ್ಕೃತಿಯನ್ನು ಹೊಂದಿವೆ.

ಕ್ಷತ್ರಿಯ ಸಮುದಾಯದ ಬಗೆಗೆ ಐತಿಹಾಸಿಕವಾಗಿ ಸಾಹಿತ್ಯಕವಾಗಿ ಮತ್ತು ಇತರೆ ಮೂಲಗಳಿಂದ ಲಭ್ಯವಾಗಿರುವ ಆಧಾರಗಳನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಕ್ಷತ್ರಿಯ ಸಮುದಾಯವು ಹಲವಾರು ಪರ್ಯಾಯ ಪದಗಳಿಂದ ಗುರುತಿಸಲಾಗಿದೆ. ಆದರೆ ಅವರ ಆಚಾರ-ವಿಚಾರಗಳು ಸಂಸ್ಕೃತಿಗಳು ಭಿನ್ನವಾಗಿರುವುದು ಕಂಡುಬಂದಿದೆ. ಆದರೂ ಸಹ ಕ್ಷತ್ರಿಯರು ಭಾರತದ ಇಡೀ ವ್ಯವಸ್ಥೆಯಲ್ಲಿ ತಮ್ಮ ಪಾತ್ರನಿರ್ವಹಿಸಿರುವ ಅನೇಕ ಕುರುವುಗಳಿವೆ. ಅವುಗಳನ್ನು ಆಧಾರಿಸಿ ಸಾಹಿತ್ಯ ಅವಲೋಕನ ಮಾಡಲಾಗಿದೆ.

***ಶೇಷ ನವರತ್ನ, (ಅನು), ಋಗ್ವೇದ ಒಂದು ಅಧ್ಯಯನ, ಸಮಾಜ ಪುಸ್ತಕಾಲಯ, ಧಾರವಾಡ, ೨೦೦೩.***

ಪ್ರಸ್ತುತ ವಿಚಾರಸರಣಿಗೆ ವ್ಯತಿರಿಕ್ತವೆನಿಸಬಹುದಾದ ಚಾತುರ್ವರ್ಣ್ಯದ ಪ್ರಸ್ತಾಪವು ಪ್ರಥಮಭಾರಿಗೆ ಋಗ್ವೇದದಲ್ಲಿ ಬರುತ್ತದೆ. ಮನುಷ್ಯನ ಹೃದಯದ ಅಂತರ್ಲೋಕವನ್ನ ಆವರಿಸಿರುವ ಇಂದಿನ ಭೀಕರ ನಿರಾಶೆ, ಹತಾಶೆ ಹಾಗೂ ಔದಾಸೀನ್ಯಗಳನ್ನು ತಳೆದು ಬೆಳಕಿನ ಬೀಜ ಬಿತ್ತಬೇಕಾದರೆ ಸಂಹಿತೆಗಳ ಅಧ್ಯಯನ ಅವಶ್ಯಕವಾಗಿದೆ. ಸಂಪೂರ್ಣ ಋಗ್ವೇದದಲ್ಲಿ ಕೇವಲ ಪುರುಷಸೂಕ್ತದ ೧೨ನೇ ಮಂತ್ರದಲ್ಲಿ ಮಾತ್ರ ಬ್ರಾಹ್ಮಣ, ಕ್ಷತ್ರಿಯ ವೈಶ್ಯ ಹಾಗೂ ಶೂದ್ರ ಎಂಬ ನಾಲ್ಕು ವರ್ಣಗಳ ಸ್ಪಷ್ಟ ಉಲ್ಲೇಖವಿದೆ. ಈ ನಾಲ್ಕು ವರ್ಣಗಳು ಸಮಾಜದ ನಾಲ್ಕು ವೃತ್ತಿಗಳನ್ನು ಅವಲಂಬಿಸಿದೆಯೇ ಹೊರತು ಜಾತಿವಾಚಕವೆಂದು ಪರಿಗಣಿಸಬಾರದು ಎಂದು ತಿಳಿಸಲಾಗಿದೆ. ಯಜನ-ಅಧ್ಯಾಪನಾದಿ ಪೌರೋಹಿತ್ಯ ತಮ್ಮ ನಿರತವರ್ಗಕ್ಕೆ

ಬ್ರಾಹ್ಮಣರೆಂದು, ಕ್ಷಾತ್ರ ಕರ್ಮನಿರತರಿಗೆ ಕ್ಷತ್ರಿಯರೆಂದು, ವ್ಯಾಪಾರ ವ್ಯವಸಾಯಾದಿ ವಣಿಕ ವರ್ಗಕ್ಕೆ ವೈಶ್ಯರೆಂದೂ, ಪರಿಚರ್ಯಾವೃತ್ತಿ ನಿರತರಿಗೆ ಶೂದ್ರರೆಂದು, ಸಂಭೋಧಿಸಲಾಗಿದೆ. ಋಗ್ವೇದವು ಕೇವಲ ವರ್ಣಗಳ ಬಗ್ಗೆ ತಿಳಿಹೇಳಲಿಲ್ಲ ಇಲ್ಲಿ ಸಮಾಜದ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ತಿಳಿಸಲಾಗಿದೆ. ಹಾಗಾಗಿ ಈ ಗ್ರಂಥವು ಪ್ರತಿಯೊಬ್ಬ ಸಂಶೋಧಕನಿಗೆ ಸಂಶೋಧನೆ ಮಾಡಲು ತುಂಬಾ ಉಪಯುಕ್ತವಾಗಿದೆ.

***ಸೋಮನಾಥಾನಂದ, ಉಪನಿಷತ್ ಭಾವಧಾರೆ, ಶ್ರೀರಾಮಕೃಷ್ಣ ಆಶ್ರಮ, ಮೈಸೂರು, ೨೦೧೧.***

ನಾಲ್ಕು ವೇದಗಳಲ್ಲಿ ಪ್ರತಿಯೊಂದನ್ನು ಮೂರು ಭಾಗ ಮಾಡಬಹುದು ಅದೇ ಮಂತ್ರ, ಬ್ರಾಹ್ಮಣ, ಉಪನಿಷತ್ತು ಇದು ಹಲವು ಸಿದ್ಧಾಂತಗಳಿಗೆ ತೌರುಮನೆ ಇದ್ದಂತೆ, ಇದನ್ನು ವೇದಾಂತ ಎಂದು ಕರೆಯುತ್ತಾರೆ. ಉಪನಿಷತ್ತಿನಲ್ಲಿರುವ ಮತ್ತೊಂದು ವೈಶಿಷ್ಟ್ಯವೇ ಸ್ತ್ರೀಯರಿಗೆ ಇರುವ ಸ್ಥಾನ. ಇಲ್ಲಿ ಮುಖ್ಯವಾಗಿ ಉಪನಿಷತ್‌ನಿಂದ ತಿಳಿದುಬರುವುದೇನೆಂದರೆ ಸಮಾಜದಲ್ಲಿರುವ ಪ್ರತಿಯೊಬ್ಬರೂ ಒಳ್ಳೆ ರೀತಿಯ ರೀತಿ ನೀತಿ ತಿಳಿದುಕೊಳ್ಳುವುದಾಗಿದೆ. ಉಪನಿಷತ್ತಿನ ಗಹನಸತ್ಯಗಳು ಅನುಷ್ಠಾನ ಪ್ರಧಾನವಾದವು. ಅವು ಮೊದಲು ಅನುಷ್ಠಾನವಾಗಿ ಅನಂತರ ಒಂದು ಸಿದ್ಧಾಂತವಾದವು. ಉಪನಿಷತ್ತು ಹುಟ್ಟಿದ್ದೇ ಜಗದ ಚಟುವಟಿಕೆಯ ಸುಳಿಯಲ್ಲಿ ಹಿಂದೆ ಎಲ್ಲಾ ಲೋಕಗಳಲ್ಲಿಯೂ ಈ ವಿದ್ಯೆಯ ಅನುಶಾಸನವು ಕ್ಷತ್ರಿಯರಿಗೆ ಸೇರಿತ್ತು. ಆಗಿನ ಕಾಲದಲ್ಲಿ ರಾಜ ನಿರಂಕುಶಪ್ರಭು, ರಾಜ್ಯವನ್ನು ಆಳಬೇಕಾಗಿತ್ತು, ನ್ಯಾಯಾನ್ಯಾಯಗಳನ್ನು ವಿಚಾರಿಸಬೇಕಾಗಿತ್ತು. ಇಂತಹ ರಾಜರಿಗೆ ಉಪನಿಷತ್ತಿನಲ್ಲಿ ಬರುವ ವಿಷಯಗಳನ್ನು ಚಿಂತಿಸುವುದಕ್ಕೆ ಸಮಯ ಇರುತ್ತಿತ್ತು. ಅದನ್ನು ಅನುದಿನ ಜೀವನದಲ್ಲಿ ಬಳಕೆಗೆ ತರಲು ಸಾಧ್ಯವಿತ್ತು. ಒಂದು ತತ್ತ್ವ ಪ್ರಯೋಜನಕಾರಿಯಾಗಬೇಕಾದರೆ ನಿತ್ಯಜೀವನದಲ್ಲಿ ಎಲ್ಲರಿಗೂ ಸಹಾಯಕ್ಕೆ ಬರಬೇಕು. ಇಂತಹ ಸಾಧ್ಯತೆ ಮತ್ತು ಪ್ರಯೋಜನವನ್ನು ಉಪನಿಷತ್ತಿನಲ್ಲಿ ನೋಡುತ್ತೇವೆ.

***ಶೇಷಗಿರಿರಾವ್ ಎಲ್ ಎಸ್, (ಕಅ), ಭಗವದ್ಗೀತಾ ಯಥಾರೂಪ, ಭಕ್ತಿವೇದಾಂತ ಬುಕ್ ಟ್ರಸ್ಟ್, ಬೆಂಗಳೂರು, ೧೯೮೯.***

ವೇದಜ್ಞಾನವು ಸಂಶೋಧನೆಗೆ ವಸ್ತುವಲ್ಲ, ನಾವು ಪರಿಪೂರ್ಣವಲ್ಲದ ಇಂದ್ರಿಯಗಳನ್ನು ಬಳಸಿ ಸಂಶೋಧನೆಯನ್ನು ಮಾಡುತ್ತೇವೆ. ಆದುದರಿಂದ ನಮ್ಮ ಸಂಶೋಧನೆಯು ಪರಿಪೂರ್ಣವಲ್ಲ ಭಗವದ್ಗೀತೆಯು ಹೇಳುವಂತೆ ಪರಂಪರೆಯಿಂದ ನಮಗೆ ಬರುವ ಪರಿಪೂರ್ಣ ಜ್ಞಾನವನ್ನು ನಾವು ಸ್ವೀಕರಿಸಬೇಕು ಎಂಬುದಾಗಿ ತಿಳಿಸಲಾಗಿದೆ. ಶ್ಲೋಕ ೩೧ ರಲ್ಲಿ ಕ್ಷತ್ರಿಯರ ಬಗ್ಗೆ ತಿಳಿಸಲಾಗಿದೆ. ಅಂದರೆ ಕ್ಷತ್ರಿಯನಾಗಿ ಸ್ವಧರ್ಮವನ್ನು ಪರಿಗಣಿಸಿದಾಗ ಧರ್ಮಕ್ಕಾಗಿ ಹೋರಾಡುವುದಕ್ಕಿಂತ ಶ್ರೇಯಸ್ಕರವಾದ ಕಾರ್ಯ ಇನ್ನೊಂದಿಲ್ಲ ಎನ್ನುವುದನ್ನು ನೀನು ತಿಳಿದುಕೊಳ್ಳಬೇಕು ಎಂದು ತಿಳಿಸಲಾಗಿದೆ. ಅಲ್ಲದೇ ಸಾಮಾಜಿಕ ಆಡಳಿತದ ನಾಲ್ಕು ವರ್ಗಗಳಲ್ಲಿ ಒಳ್ಳೆಯ ಆಡಳಿತಕ್ಕೆ ಅಗತ್ಯವಾದ ಎರಡನೆಯ ವರ್ಗವನ್ನು ಕ್ಷತ್ರಿಯ ಎಂದು ಕರೆಯುತ್ತಾರೆ ಎಂಬುದಾಗಿ ತಿಳಿಸಲಾಗಿದೆ. ಒಟ್ಟಾರೆಯಾಗಿ ಈ

ಮಹಾಕೃತಿಯು ಕ್ಷತ್ರಿಯರ ಬಗ್ಗೆ ಉಪಯುಕ್ತ ಮಾಹಿತಿ ನೀಡುವಲ್ಲಿ ಸಫಲತೆಯಿಂದ ಕೂಡಿದೆ ಎಂದು ಹೇಳಬಹುದು.

***ಶ್ರೀ ಕೂಡಲೀ ಶೃಂಗೇರಿ ಜಗದ್ಗುರು, ಶ್ರೀ ಸಚ್ಚಿದಾನಂದಶಂಕರ ಭಾರತೀ ಸ್ವಾಮಿಗಳು, (ಕಅ), ಕೌಟಿಲೀಯ ಅರ್ಥಶಾಸ್ತ್ರ, ಅಂಕಿತ ಪುಸ್ತಕ, ಬೆಂಗಳೂರು, ೧೯೬೩.***

ಒಂದುನೂರ ಎಂಬತ್ತು ಪ್ರಕರಣಗಳನ್ನು ಒಳಗೊಂಡ ಹದಿನೈದು ಅಧಿಕರಣಗಳಿದ್ದು ಅವುಗಳನ್ನು ತಂತ್ರ, ಆವಾಸ, ಶೇಷ, ಎಂದು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಕೌಟಲೀಯ ಅರ್ಥಶಾಸ್ತ್ರದಲ್ಲಿ ವರ್ಣಧರ್ಮಗಳ ಕೆಲಸ ಕಾರ್ಯವೇನು ಅವರು ಯಾವ ರೀತಿಯಾದ ಅಧಿಕಾರ ಮಾಡಬೇಕು ಮತ್ತು ಅವರಿಂದ ಅವರವರ ಧರ್ಮಗಳು ಸ್ವರ್ಗವನ್ನು ಮೋಕ್ಷವನ್ನು ಕೊಡುವು ಧರ್ಮವನ್ನು ಮೀರಿರುವುದರಿಂದ ಲೋಕದಲ್ಲಿ ವರ್ಣಸಂಕರವುಂಟಾಗಿ ವಿನಾಶವಾಗುವುದೆಂದು ತಿಳಿಸಲಾಗಿದೆ. ಕೌಟಲೀಯ ಅರ್ಥಶಾಸ್ತ್ರವು ರಾಜರು ಯಾವರೀತಿಯಾಗಿ ಆಡಳಿತ ನಡೆಸಬೇಕು ಮತ್ತು ರಾಜರ ಮುಖ್ಯವಾದ ಪಾತ್ರ ಕರ್ತವ್ಯ ಹೊಣೆ, ಸೇವೆ ಜವಾಬ್ದಾರಿ, ಇವೇ ಮುಂತಾದ ವಿಶೇಷ ಅಂಶಗಳನ್ನು ಕೌಟಲೀಯ ಅರ್ಥಶಾಸ್ತ್ರವು ತಿಳಿಸುತ್ತದೆ. ಇಲ್ಲಿ ಮುಖ್ಯವಾಗಿ ರಾಜನ ಕರ್ತವ್ಯ ಕಾರ್ಯಗಳನ್ನು ತಿಳಿಸಿಕೊಡಲಾಗಿದೆ. ಇದರಲ್ಲಿ ಕ್ಷತ್ರಿಯರೆಂದು ಕರೆಸಿಕೊಳ್ಳುವ ರಾಜರ ಬಗ್ಗೆ ಗಮನಹರಿಸಲಾಗಿದೆ.

***ಶೇಷ ನವರತ್ನ, (ಅನು), ಮನುಸ್ಮೃತಿ, ಸಮಾಜ ಪುಸ್ತಕಾಲಯ, ಧಾರವಾಡ, ೨೦೧೧.***

ಮನುಸ್ಮೃತಿ ಪ್ರಾಚೀನ ಕಾಲದಲ್ಲಿದ್ದ ಸಾಮಾಜಿಕ ವ್ಯವಸ್ಥೆಯನ್ನು ಕಟ್ಟಿಕೊಟ್ಟಿದೆ. ಇಲ್ಲಿ ನಾಲ್ಕು ವರ್ಣಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಬಗ್ಗೆ ತಿಳಿಸಿದಲ್ಲದೆ ವರ್ಣ ಸಂಕರಣ ಹೇಗೆ ಆಗುತ್ತದೆ ಎಂಬುದನ್ನು ತಿಳಿಸುವಲ್ಲಿ ಸಹಾಯಕವಾದ ಕೃತಿ ಎನ್ನಿಸಿದೆ. ಮನುಸ್ಮೃತಿ ಗ್ರಂಥದಲ್ಲಿ ಒಟ್ಟು ೨೬೮೪ ಶ್ಲೋಕಗಳಿವೆ. ಇಲ್ಲಿ ಮುಖ್ಯವಾಗಿ ವರ್ಣಧರ್ಮಕ್ಕೆ ಸಂಬಂಧಿಸಿದ ವಿಚಾರಗಳನ್ನು ನಾವು ನೋಡಬಹುದು, ಬ್ರಾಹ್ಮಣ ಕ್ಷತ್ರಿಯಾದಿ ಕರ್ಮಗಳು, ವರ್ಣಗಳ ಹುಟ್ಟು ಬ್ರಾಹ್ಮಣ ಕ್ಷತ್ರಿಯ ಶೂದ್ರ ಸ್ತ್ರೀ ನಿಷೇಧ, ಹೀನ ಜಾತಿ ವಿವಾಹ ನಿಷೇಧ, ಕ್ಷತ್ರಿಯರ ರಾಜಧರ್ಮ ಹಾಗೇ ವರ್ಣಸಂಕರ ಭೂಮಿ ಮೇಲಿನ ಸಮಸ್ತ ಜೀವರಾಶಿಗಳ ಬಗ್ಗೆ ಇದರಲ್ಲಿ ತಿಳಿಯಬಹುದು. ಮನುಸ್ಮೃತಿಯು ವರ್ಣದಲ್ಲಿ ಬರುವ ಪ್ರತಿಯೊಂದು ವರ್ಣವು ಒಂದೊಂದು ರೀತಿಯಾದ ಕಾರ್ಯಸೇವೆ ಮಾಡಲು ಜಾಗೃತವಾಗಿರಲು ತಿಳಿಸುತ್ತದೆ. ಈ ಮನುಸ್ಮೃತಿಯು ವ್ಯಕ್ತಿ ಆತ್ಮವನ್ನು ಶುದ್ದ ಮಾಡಲು ಹಳೆಯ ಜ್ಞಾನ ತಿಳಿಯಲು ಸಹಾಯಕವಾದ ಕೃತಿಯಾಗಿದೆ.

***ಶಿವರಾಮಯ್ಯ ಬಿ, ಸೋಮನಾಥ ಕೆ, ನಾರಾಯಣಪಿ ಕೆ, ರಾಮ ಕ್ಷತ್ರಿಯ ಕುಲೋತ್ಪತ್ತಿ, ಪ್ರಕಾಶಕರು, ಕಾಸರಗೋಡು, ೧೯೪೯.***

ಪ್ರಾಚೀನ ಮತ್ತು ಮಧ್ಯಕಾಲದಲ್ಲಿ ಬರುವ ಕ್ಷತ್ರಿಯರ ಚರಿತ್ರಾರ್ಹವಾದ ವಿಚಾರವನ್ನು ಒಳಗೊಂಡಂತೆ ಪ್ರಕಟಿಸಲಾಗಿದೆ. ಮುಖ್ಯವಾಗಿ ಕ್ಷತ್ರಿಯರಿಗೂ ಮತ್ತು ಕೊಂಕಣೀಕರಿಗೂ ವಿವಾದ ಉದ್ಭವವಾಗುತ್ತದೆ,

ಈ ವಿವಾದದ ಕೆಲವು ಅಂಶಗಳು ಕೆಲವೊಂದು ಬಿನ್ನವತ್ತಳೆಗಳಿಂದಲೂ ವ್ಯಕ್ತವಾಗುತ್ತದೆ. ತುಳುವ ಕೊಂಕಣ ರಾಜ್ಯದ ಒಳಗಿನ ಪಂಚದ್ರಾವಿಡ, ಪಂಚಗೌಡ ಬ್ರಾಹ್ಮಣ ರಾಜದ್ವಾರಕ್ಕೆ ಮಹಾನಾಡ ಕ್ಷತ್ರಿಯ, ಕೋಮಟಗ, ಬಣಜಿಗರ, ಸಭೆಯಲ್ಲಿ ಸಹ ನಮ್ಮ ಕೊಂಕಣಿಗರಿಗೆ ಆಶ್ರಯ ಉಂಟೋ ಇಲ್ಲವೋ...? ಎಂಬ ಪ್ರಶ್ನೆಯೇಯಾಗಿದೆ. ಶೃಂಗೇರಿ ಮಠ ಮಾನ್ಯ ಪಂಚದ್ರಾವಿಡ, ಪಂಚಗೌಡ ಸೋಮ ಸೂರ್ಯ ಕುಲೋದ್ಭರಾದ ರಾಜಪುತ್ರ ಕ್ಷತ್ರಿಯ ಮಹಾಜಾತಿಯವರಿಗೆ ಸರಿಸಮಾನಸ್ಕಂಧವಾಗಿ ಬರಹೆದಿಲ್ಲಾಯಂಬ ಬಗ್ಗೆ ಬಿನ್ನವತ್ತಳೆ ಭಾಷಾಪತ್ರ ಬರೆಯಲಾಯಿತು. ಇದರಿಂದ ಸ್ಪಷ್ಟವಾಗುವುದೇನೆಂದರೆ ಈ ಬಿನ್ನವತ್ತಳೆಯಲ್ಲಿ ಹೇಳಿದಂತೆ ಕ್ಷತ್ರಿಯರು ಮಹಾಕ್ಷತ್ರಿಯ ಜಾತಿಯವರೆನ್ನಿಸಿಕೊಂಡು ಮಾನಿತರಾಗಿದ್ದರೆ. ಈ ಪುಸ್ತಕವು ತುಂಬ ಅದ್ಭುತವಾಗಿದೆ ಇಲ್ಲಿಮುಖ್ಯವಾಗಿ ಕ್ಷತ್ರಿಯರ ಕುಲೋತ್ಪತ್ತಿ ಹೇಗೆ ಆಗಿದೆ ಎಂಬುದನ್ನು ತಿಳಿಸಿಕೊಡಲಾಗಿದೆ ಇದು ಕ್ಷತ್ರಿಯರ ಸಂಶೋಧನೆಗೆ ಮುಖ್ಯವಾದ ಆಕರವಾಗಿದೆ.

***ರಾಮಮನೋಹರ ಲೋಹಿಯಾ, (ಕಅ), ಹಸನ್ ನಯೀಂಸುರಕೋಡ, ಜಾತಿ ಪದ್ಧತಿ, ಲಂಕೇಶ್ ಪ್ರಕಾಶನ, ಬೆಂಗಳೂರು, ೧೯೮೬.***

ಕೃತಿಯು ರಾಮಮನೋಹರ ಲೋಹಿಯಾ ಜಾತಿ ವಿಚಾರ ಮಂಥನ ಮಾಡಿದ್ದಾರೆ, ಜಾತಿಯನ್ನು ಕಟ್ಟಿಕೊಂಡೇ ಹುಟ್ಟಿದ ಭಾರತೀಯನನ್ನು ಜಾತಿ ಯಾವ ಯಾವ ರೀತಿಯಲ್ಲಿ ಮುತ್ತಿಕೊಂಡಿರುತ್ತದೆ ಎಂಬುದನ್ನು ಯೋಚಿಸಿದರೆ ಮೇಲಿನ ಮಾತಿನ ಇಂಗಿತ ತಿಳಿಯುತ್ತದೆ. ಊಟ ಪದ್ಧತಿಯಿಂದ ದಿನನಿತ್ಯದ ಕ್ರಿಯೆಗಳನ್ನೊಳಗೊಂಡು ವಿವಾಹ ಪದ್ಧತಿಯವರೆಗೆ ಹಬ್ಬಿದ ಈ ಜಾತಿ ಪದ್ಧತಿ ಮನುಷ್ಯ ಜೀವನದ ಪ್ರತಿಯೊಂದು ಮುಖವನ್ನು ಆವರಿಸಿದೆ ಎಂದು ಕೃತಿಯಲ್ಲಿ ತೋರಿಸಲಾಗಿದೆ.

***ಕುಮಾರ ಕಕ್ಕಯ್ಯ ಪೋಳ, ಚಾತುರ್ವರ್ಣ ಧರ್ಮದರ್ಶನ, ಲೋಹಿಯಾ ಪ್ರಕಾಶನ, ಬಳ್ಳಾರಿ, ೧೯೯೭.***

ಪ್ರಾಚೀನಕಾಲದಲ್ಲಿ ಅಂದರೆ ಸುಮಾರು ನಾಲ್ಕು ಐದು ಸಾವಿರ ವರುಷಗಳ ಹಿಂದಿನ ಆದಿ ಕ್ಷತ್ರಿಯರು ಇಂದು ಅಸ್ಪೃಶ್ಯರಾಗಿದ್ದಾರೆ. ಭಾರತದಲ್ಲಿ ಸಂಸ್ಕೃತಿ ಮತ್ತು ಸಂರಕ್ಷಣೆ ತಮ್ಮ ಪ್ರತಿಷ್ಠೆ ತಮ್ಮ ಭದ್ರತೆಗಾಗಿ ದೇವರು ಮತ್ತು ಧರ್ಮದ ಹೆಸರಿನಲ್ಲಿ "ಲೋಕ ಕಲ್ಯಾಣಕ್ಕಾಗಿ ಬ್ರಹ್ಮನ ಮುಖದಿಂದ ಬ್ರಾಹ್ಮಣ, ತೋಳುಗಳಿಂದ ಕ್ಷತ್ರಿಯ, ಹೊಟ್ಟೆಯಿಂದ ವೈಶ್ಯ, ಪಾದಗಳಿಂದ ಶೂದ್ರ ಹುಟ್ಟಿದ್ದಾನೆ, ಎಂದು ವೇದಾದಿ ಧರ್ಮಗ್ರಂಥಗಳಲ್ಲಿಯೂ, ತಮ್ಮ ಪ್ರಭುತ್ವಕ್ಕಾಗಿಯೇ ಚಾತುರ್ವರ್ಣ ಜಾತಿ ಪದ್ಧತಿಯನ್ನು ಹುಟ್ಟು ಹಾಕಿದರು. ಈ ಕೃತಿಯಲ್ಲಿ ಜಾತಿಗೆ ಒರೆಗಲ್ಲು ಯಾವುದು ಎಂಬುದನ್ನು ಸ್ವಾರಸ್ಯಕರವಾಗಿ ಬರೆಯಲಾಗಿದೆ.

***ಶಂಬಾ ಕೃತಿ ಸಂಪುಟ: ಕಂನಾಡು – ಕರ್ನಾಟ, ಸಂಪುಟ–೧, (ಸಂ), ಮಲ್ಲೇಪುರಂ ಜಿ. ವೆಂಕಟೇಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯.***

ಋಗ್ವೇದ ಕಾಲದಿಂದ ಕನ್ನಡದ ಕಥೆಯಲ್ಲಿ ಕರ್ಣಾಟದ ವೀರಕ್ಷತ್ರಿಯರು ಎಂಬ ಕೃತಿಯನ್ನು ಬರೆದವರು ಶಂಬಾ ಜೋಶಿ ಯವರಾಗಿದ್ದಾರೆ. ಶಂಬಾ ಜೋಶಿ ಅವರು ನಡೆಸಿದ ಸುದೀರ್ಘ

ಸಂಸ್ಕೃತಿ ಚಿಂತನೆ ಬಹುಮುಖವಾದುದು ಮಾತ್ರವಲ್ಲ ಬಹುವ್ಯಾಪಕವೂ ಕೂಡಾ. 'ಬಹುಮುಖ' ಅನ್ನುವುದು ಹಲವು ಜ್ಞಾನಕ್ಷೇತ್ರಗಳ ನೆಲೆಗಳನ್ನು ಅವಲಂಬಿಸಿದ್ದರೆ, 'ವ್ಯಾಪಕತೆ' ಎನ್ನುವುದು ಗಡಿ, ಸೀಮೆ, ಅನುಮಾನಿತ ಸತ್ಯ ವಾಸ್ತವ ನೆಲೆಗಳ ಶೋಧನೆ ಮೊದಲಾದವುಗಳನ್ನು ಒಳಗೊಂಡಿದೆ. ಶಂಬಾ ರವರು ಕನ್ನಡ ಸಂಸ್ಕೃತಿ ಸಮಸ್ಯೆಗಳ ಬೇರನ್ನು ಭಾರತೀಯ ಸಂಸ್ಕೃತಿಯ ಅಂತರ್ ನೆಲೆಗಳ ಹಾಸು-ಹೊಕ್ಕುಗಳಲ್ಲಿ ಅವರು ಹುಡುಕಿಕೊಳ್ಳುವ ಪ್ರಯತ್ನದಲ್ಲಿದ್ದರು. ಕನ್ನಡ ಸಂಸ್ಕೃತಿಯನ್ನು ಅವರು ಗ್ರಹಿಸಿಕೊಂಡಿದ್ದು ಹೀಗೆ ಅದರ ಹಿನ್ನೆಲೆಯಲ್ಲಿ ನೆಲೆಗಳನ್ನು ನೋಡಬಹುದು. ಅವುಗಳೆಂದರೆ, ಭೌಗೋಳಿಕ ವ್ಯಾಪ್ತಿಯ ನೆಲೆಗಳು, ಜನಾಂಗೀಯ ಅಧ್ಯಯನದ ನೆಲೆಗಳು, ಭಾಷಿಕ ಅಂತಃ ಪ್ರಮಾಣದ ನೆಲೆಗಳು, ಆಚರಣಾ ಮೂಲದ ನೆಲೆಗಳು, ದೈವತ ಕಥೆಗಳ ಸಾಂಕೇತಿಕ ಆಕೃತಿಗಳ ನೆಲೆಗಳ. ಇಲ್ಲಿ ಮುಖ್ಯವಾಗಿ ಕರ್ನಾಟದ ವೀರ ಕ್ಷತ್ರಿಯರು ಯಾರೆಂದರೆ ಹಟ್ಟಿಕಾರರು ಎಂದು ತಿಳಿಸಿದ್ದಾರೆ.

***ಪ್ರಶಾಂತ್ ಹೆಚ್ ಡಿ, (ಸಂ) ಕರ್ನಾಟಕ ರಾಜ್ಯಕೋಶ: ೪ ಜನ ಸಮುದಾಯ ಸಂಪುಟ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬೆಂಗಳೂರು, ೨೦೦೦.***

ಕರ್ನಾಟಕದ ಭೂಪರಿಸರ ವೈವಿಧ್ಯಮಯವಾಗಿರುವುದರಿಂದ, ಇಲ್ಲಿಯ ಜನ ಸಮುದಾಯ ಸಹಜವಾಗಿಯೇ ವಿಭಿನ್ನ ಘಟಕಗಳಾಗಿ ಒಡೆದು ನಿಂತಿದೆ. ಕರ್ನಾಟಕವು ಉತ್ತರ-ದಕ್ಷಿಣ ಭಾರತಗಳ ಹೊಸ್ತಿಲಲ್ಲಿರುವುದರಿಂದ ಮತ್ತು ದಕ್ಷಿಣದಲ್ಲಿ ಅನ್ಯಪ್ರಾಂತಗಳಿಂದ ಆವೃತವಾಗಿರುವುದರಿಂದ ಕಾಲಕಾಲಕ್ಕೆ ಬೇರೆ ಬೇರೆ ಜನಸಮುದಾಯಗಳೂ ಈ ನಾಡಿನಲ್ಲಿ ತೂರಿಬಂದವು. ಅವುಗಳ ಸಂಗಮದಿಂದಾಗಿ ಮೂಲ ಸಮುದಾಯಗಳು ಮಿಶ್ರರೂಪಕ್ಕೆ ತಿರುಗಿದವು. ಹೀಗಾಗಿ ಕರ್ನಾಟಕ ಜನ ಸಮುದಾಯಗಳ ಬಗ್ಗೆ ಕನ್ನಡದಲ್ಲಿ ಸಮಗ್ರವಾದ ಮಾಹಿತಿಯನ್ನು ಈ ಒಂದು ಸಂಪುಟಗಳಲ್ಲಿ ಅಚ್ಚುಕಟ್ಟಾಗಿ ಮೂಡಿ ಬಂದಿದೆ. ಕರ್ನಾಟಕದಲ್ಲಿರುವ ಅನೇಕ ಕ್ಷತ್ರಿಯ ಸಮುದಾಯಗಳ ಮಾಹಿತಿಯು ಲಭ್ಯವಾಗಿವೆ, ಈ ಒಂದು ಸಂಪುಟವು ಸಂಶೋಧನ ವಿಷಯಕ್ಕೆ ಪೂರಕವಾದ ಮಾಹಿತಿ ನೀಡಿದೆ.

***ಮೋಹನ್ ಕೃಷ್ಣರೈ ಕೆ, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬೆಂಗಳೂರು, ೨೦೦೪.***

ಸಬಾಲ್ಟರ್ನ್ ಪಂಥವು ಇದುವರೆಗಿನ ಚರಿತ್ರೆಯ ಅಧ್ಯಯನವನ್ನು ನಿಜವಾದ ಚರಿತ್ರೆಯ ಕೇವಲ ಒಂದು ಭಾಗವಾಗಿದೆಯೆಂದು ಪರಿಗಣಿಸುತ್ತದೆ. ಚರಿತ್ರೆಯ ಯಾವುದೇ ಘಟ್ಟದಲ್ಲಿ, ಒಂದು ಸಂಸ್ಕೃತಿಯನ್ನು ಅದರ ವರ್ತಮಾನದ ವ್ಯಾಪಾರಗಳಲ್ಲಿ ಗಮನಿಸಿದಾಗ ಅದು ಜಾತಿ, ವರ್ಗ, ಸ್ಥಳಿಯ, ಭಾಷೆ ಮುಂತಾದ ಹಲವು ರಚನೆಗಳನ್ನು ಒಳಗೊಂಡಿರುತ್ತದೆ. ಆದರೆ ಇಂಥ ರಚನೆಗಳು ಸಮಾನ ರಚನೆಗಳಾಗಿರುವುದಿಲ್ಲ. ಯಾವುದಾದರೂ ಒಂದು ರಚನೆ ಪ್ರಮುಖ ಅಥವಾ ಪ್ರಬಲವಾಗಿ ಹೊರಹೊಮ್ಮುವುದಲ್ಲದೆ ಉಳಿದ ರಚನೆಗಳ ಮೇಲೆ ತನ್ನ ಯಜಮಾನಿಕೆಯನ್ನು ಸ್ಥಾಪಿಸುತ್ತದೆ. ಈ ಕೃತಿಯು ಕೃಷಿ ವ್ಯವಸ್ಥೆ, ಉತ್ಪಾದನಾ ವ್ಯವಸ್ಥೆ, ಸಮಾಜದ ರಚನೆ, ಜಾತಿ, ಕುಟುಂಬ, ಶಿಕ್ಷಣ, ಆಡಳಿತ, ನಗರ ವ್ಯವಸ್ಥೆ, ಅರ್ಪಣಾ ಮರಣ, ಮಾಸ್ತಿ ಮರಣ, ಬಲಿದಾನ ಮರಣ, ವೀರಮರಣ,

ಸಮಾಧಿ ಮರಣ, ಧಾರ್ಮಿಕ ಪ್ರಭುತ್ವ, ಧಾರ್ಮಿಕ ಸಾಮರಸ್ಯ, ದೇವಾಲಯಗಳು, ದೇವಸೇವಕಿಯರು, ಗ್ರಾಮದೇವತೆಗಳು, ಧಾಮಿಕ ಸಿದ್ಧಾಂತಗಳು, ಸ್ಮಾರಕಗಳು ಹೀಗೆ ಅನೇಕ ವಿಷಯಗಳ ಮೇಲೆ ಬೆಳಕು ಚಲ್ಲಿರುವುದರೊಂದಿಗೆ ಕ್ಷತ್ರಿಯರ ಚಾರಿತ್ಯದ ಸಂಶೋಧನೆಗೆ ಉಪಯುಕ್ತವಾಗಿದೆ.

***ಶಿವರಾಮ ಕೃಷ್ಣನ್ ಜಿ, ಜಾತಿ ಕೆಲವು ಟಿಪ್ಪಣಿಗಳು, ಪರಸ್ಪರ ಪ್ರಕಾಶನ, ಬೆಂಗಳೂರು, ೨೦೦೭.***

ಈ ಚಿಕ್ಕ ಕೃತಿಯಲ್ಲಿ ಜಾತಿಯ ಬಗ್ಗೆ ಕೆಲವಾರು ಮಾನವಶಾಸ್ತ್ರಜ್ಞಾರು ಮತ್ತು ಸಮಾಜ ಚಿಂತಕರು ಕಂಡುಕೊಂಡಿರುವ ಇತಿಹಾಸವನ್ನು ಇಲ್ಲಿ ಪ್ರಕಟಿಸಲಾಗಿದೆ ಹಾಗೂ ಜಾತಿಯ ಹುಟ್ಟು ಹೇಗೆ ಆಗಿದೆ ಅವು ಮುಂದೆ ಸಮಾಜದಲ್ಲಿ ತಮ್ಮದೇ ಆದ ಸಮುದಾಯವನ್ನು ಹೊಂದಿವೆ ಎಂಬುದನ್ನು ಈ ಕೃತಿಯು ತಿಳಿಸಿಕೊಡುವಲ್ಲಿ ಸಹಕಾರಿಯಾಗಿದೆ.

***ಸುರೇಶ ನಾರಾಯಣ ನಾಯ್ಕ, ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ, ಸುವರ್ಣ ಪ್ರಕಾಶನ ಹೊನ್ನಾವರ, ೨೦೧೧.***

ಕೃತಿಯ ಲೇಖಕರು ಕೇವಲ ಕ್ಷತ್ರಿಯ ಸಮುದಾಯದಲ್ಲಿರುವ ಪರ್ಯಾಯ ಹೆಸರಿನಿಂದ ಕರೆಯುವ ರಾಮಕ್ಷತ್ರಿಯರ ಬಗ್ಗೆ ಅಧ್ಯಯನ ಮಾಡಿ ಈ ಕೃತಿಯನ್ನು ಪ್ರಕಟಿಸಿದ್ದಾರೆ. ಇಲ್ಲಿ ಮುಖ್ಯವಾಗಿ ರಾಮ ಕ್ಷತ್ರಿಯರ ಚರಿತ್ರೆ ಸಾಮಾಜಿಕ ಅಧ್ಯಯನವನ್ನು ಕೈಗೊಂಡಿರುವುದು ಕಂಡುಬರುತ್ತದೆ. ಕೇವಲ ಇದು ರಾಮ ಕ್ಷತ್ರಿಯರ ಬಗ್ಗೆ ಬೆಳಕು ಚೆಲ್ಲುವ ಕೃತಿಯಾಗಿದೆ

***ಬೊಜ್ಜಾ ತಾರಕಂ, ಸುಜ್ಞಾನಮೂರ್ತಿ ಬಿ, (ಕಅ), ಜಾತಿವಿನಾಶ-ವರ್ಗವಿನಾಶ, ಪಲ್ಲವ ಪ್ರಕಾಶನ, ಚನ್ನಪಟ್ಟಣ, ೨೦೧೨.***

ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಯಾವುದೇ ಚಳವಳಿ ಮಾಡಬೇಕೆಂದರೂ ಯಾವ ರಾಜಕೀಯ ಪಕ್ಷವನ್ನು ಕಟ್ಟಬೇಕೆಂದರೂ ಜಾತಿ ಮತ್ತು ವರ್ಗಗಳು ಎದುರಾಗುತ್ತವೆ. ಜಾತಿ ಮತ್ತು ವರ್ಗದ ಹುಟ್ಟು ನಾಶದ ಬಗ್ಗೆ ಹಲವಾರು ಚಿಂತಕರ ಚಿಂತನೆಗಳನ್ನು ಇದರಲ್ಲಿ ವ್ಯಕ್ತಪಡಿಸಲಾಗಿದೆ. ಜಾತಿ-ವರ್ಗ, ಯಾವುದು ಮೊದಲು, ವೃತ್ತಿ-ವೃತ್ತಿಮರ್ಯಾದೆ, ಉಳ್ಳ ಜಾತಿಗಳು-ಇಲ್ಲದ ಜಾತಿಗಳು, ವರ್ಣ ಜಾತಿಯೇ, ವರ್ಣ ವ್ಯವಸ್ಥೆ, ವರ್ಣ ಜಾತಿಯಾಗಿ ಹೇಗೆ ಬದಲಾಯಿತು?, ಜಾತಿ ಹೇಗೆ ಉಂಟಾಯಿತು?, ಜಾತಿಗಳ ನಡುವೆ ಭೇದಗಳು, ಜಾತಿ ವ್ಯವಸ್ಥೆ, ಜಾತಿ ಮೇಲುರಚನೆಯೇ. ಸಂಶೋಧನೆಗೆ ಉಪಯುಕ್ತ ಆಕರವಾಗಿ ಕಂಡು ಬರುತ್ತದೆ.

***ಮೋಹನ ಕುಂಟಾರ್ಎ, ಸಮುದಾಯಗಳ ಕನ್ನಡ ಪರಂಪರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬೆಂಗಳೂರು, ೨೦೧೨.***

ಮೋಹನ್ ಕುಂಟಾರ್ ಅವರು ಭಾಷೆ ಮತ್ತು ಸಮುದಾಯಗಳ ಸಂಬಂಧವನ್ನು ಖಚಿತಪಡಿಸುವುದರ ಜೊತೆಗೆ ಅವು ಕನ್ನಡ ಪರಂಪರೆಯೊಡನೆ ಉಳಿಸಿಕೊಂಡಿರುವ ಸಂಬಂಧದ ಸಾತತ್ಯವನ್ನು ಅಧ್ಯಯನದ ಮುಖ್ಯ ನೆಲೆಗೆ ತಂದು ವಿಶ್ಲೇಷಿಸಿದ್ದಾರೆ. ಹಾಗೂ ಕ್ಷತ್ರಿಯ ಸಮುದಾಯಗಳನ್ನು

ಗುರುತಿಸಿಕೊಂಡು ಅವರ ಭಾಷಾ ಜ್ಞಾನವನ್ನು ಇವರು ಕಟ್ಟಿಕೊಡುವುದರಲ್ಲಿ ತಮ್ಮದೇ ಸಂಶೋಧನೆಯ, ಬೆಳಕು ಚೆಲ್ಲಿದ್ದಾರೆ. ಮುಖ್ಯವಾಗಿ ದಕ್ಷಿಣ ಕನ್ನಡದ ನೆಲೆಯಲ್ಲಿರುವ ಕ್ಷತ್ರಿಯರ ಸಮುದಾಯಗಳ ಬಗ್ಗೆ ತಿಳಿಸಿದ್ದಾರೆ. ಮುಖ್ಯವಾಗಿ ಕನ್ನಡ ಸಮುದಾಯಗಳಾದ ಕ್ಷತ್ರಿಯರನ್ನು ಅನುಲಕ್ಷಿಸಿ ಈ ಕೃತಿ ಪ್ರಕಟಿಸಿದ್ದಾರೆ.

***ದಾಮೋದರ ಧರ್ಮಾನಂದ ಕೊಸಾಂಬಿ, (ಅನು), ವೇಣುಗೋಪಾಲ್ ಟಿ ಎಸ್, ಶೈಲಜಾ, ಪುರಾಣ ಮತ್ತು ವಾಸ್ತವ ಪ್ರಕಾಶಕರು, ಚಿಂತನ ಪುಸ್ತಕ, ೨೦೧೩.***

ಭಾರತದ ಇತಿಹಾಸವು ಬಹಳ ಖಚಿತವಾಗಿಯೇ ಜ್ಞಾನದ ಶಿಸ್ತು ಆಗುವ ಬದಲು ಸ್ವತಃ ಅದೇ ಒಂದು ವಸಾಹತುಶಾಹಿ ಸಂಕಥನವಾಗಿತ್ತು. ಸಬಾಲ್ಟರ್ನ್ ಚರಿತ್ರೆಯೂ 'ಪೀಪಲ್ಸ್ ಹಿಸ್ಟರಿ' ಎನ್ನುವ ಚೌಕಟ್ಟಿನಲ್ಲಿ ದೈನಿಕ ಹಾಗೂ ಸಾಮಾನ್ಯವೆನ್ನಬಹುದಾದ ಸಂಗತಿಗಳ ಮೂಲಕವೇ ಚರಿತ್ರೆಯನ್ನು ಶೋಧಿಸುತ್ತದೆ. ಬೃಹತ್ ಕಥನಗಳ ಬದಲಾಗಿ ಸ್ಥಳೀಯ ವಾಸ್ತವಗಳನ್ನು ಮೂರ್ತವಾಗಿ ಅನ್ವೇಷಿಸುತ್ತದೆ. ಪ್ರಸ್ತುತ ಕೃತಿಯಲ್ಲಿ ಮಾತೃದೇವತೆಗಳ ಕುರಿತು ಕೊಸಾಂಬಿಯವರು ತಮ್ಮ ಲಿವಿಂಗ್ ಹಿಸ್ಟರಿಯಲ್ಲಿ ಪ್ರಾಚೀನ ಇತಿಹಾಸವನ್ನು ರಚಿಸಿದ್ದಾರೆ. ವಾಸ್ತವಗಳ ಬಗ್ಗೆ ಸ್ಥಿರಗೊಂಡಿರುವ ನಂಬಿಕೆಗಳು ಹಾಗೂ ಈಗ ಇರುವ ಸ್ಥಿತಿಯಲ್ಲಿ ಪುರಾಣಗಳೇ ಚರಿತ್ರೆಯ ಅಧಿಕೃತ ವಾಸ್ತವವನ್ನು ಹೇಳುತ್ತವೆ. ಆದರೆ ಪುರಾಣಗಳು ನಿರಂತರವಾದ ಪರಿವರ್ತನೆಯ ಮೂಲಕ ಅಮರತ್ವವನ್ನು ಪಡೆದಿರುತ್ತವೆ. ಹೀಗಾಗಿಯೇ ಪುರಾಣಗಳ ಮೂಲಕ ಭಾರತದ ಚರಿತ್ರೆಯ ಅತ್ಯಂತ ಮಹತ್ವಪೂರ್ಣ ವಾಸ್ತವಗಳನ್ನು ಅರಿಯುವ ಸಂಕೀರ್ಣವಾದ ಒಂದು ಮಾದರಿಯನ್ನು ಕೊಸಾಂಬಿ ಈ ಕೃತಿಯಲ್ಲಿ ಕೊಟ್ಟಿದ್ದಾರೆ

***ಭಗವತ್ ಶರಣ ಉಪಾಧ್ಯಾಯ, ಪ್ರಧಾನ್ ಗುರುದತ್ತ, (ಕಅ), ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ಪ್ರಕಾಶಕರು ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೪.***

ಭಗವತ್ ಶರಣ ಉಪಾಧ್ಯಾಯರವರು ಅದ್ಭತ್‌ವಾದ ಕೃತಿಯನ್ನು ಕನ್ನಡ ಜನತೆಗೆ ಒದಗಿಸಿಕೊಟ್ಟಿದ್ದಾರೆ. ಈ ಕೃತಿಯು ಕ್ಷತ್ರಿಯರ ಬಗ್ಗೆ ತುಂಬ ಉಪಯುಕ್ತ ಮಾಹಿತಿಯನ್ನು ನೀಡಿರುವುದರಲ್ಲಿ ಸಂದೇಹವಿಲ್ಲ ಎನ್ನಬಹುದು. ಇಲ್ಲಿ ಕ್ಷತ್ರಿಯರ ಉದಯ ಮತ್ತು ಅಂತಿಮ ಹೇಗೆ ಆಗಿದೆ. ಅವರನ್ನು ಸಮಾಜವು ಅಂದು ಹೇಗೆ ಗುರುತಿಸುತ್ತಿತ್ತು. ಇಂದು ಹೇಗೆ ಗುರುತಿಸುತ್ತಲಿದೆ ಎಂಬುದನ್ನು ತಿಳಿಸುವಲ್ಲಿ ಸಹಕಾರಿಯಾಗಿದೆ.

***ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೧೬.***

ಕ್ಷತ್ರಿಯರ ಕ್ಷಾತ್ರಬಲದ ಬಗ್ಗೆ ಅವರ ಪೂರ್ವ ಮತ್ತು ನಂತರ ಸ್ಥಿತಿಯನ್ನು ಚಾರಿತ್ರಿಕ ನೆಲೆಗಟ್ಟಿನಲ್ಲಿ ಕುರಿತು ವಿವರಿಸಿದ್ದಾರೆ. ಈ ಕೃತಿಯು ಭಾರತದಲ್ಲಿರುವ ಕ್ಷತ್ರಿಯರ ಕ್ಷಾತ್ರ ಬಲದ ಬಗ್ಗೆ ಇತಿಹಾಸದ ಪುರಾವೆಗಳನ್ನು ಪ್ರಕಟಿಸಿದೆ. ವೇದಗಳಲ್ಲಿ ಕ್ಷತ್ರಿಯರು ಭಾರತದಲ್ಲಿ ಕ್ಷತ್ರಿಯರು, ಮಹಾಕಾವ್ಯಗಳಲ್ಲಿ ಕ್ಷತ್ರಿಯರು ಪ್ರಾಂತ್ಯಗಳಲ್ಲಿ ಕ್ಷತ್ರಿಯರ ಬಗ್ಗೆ ಈ ಕೃತಿಯು ಬೆಳಕು ಚೆಲ್ಲಲ್ಲಿದೆ.

ಕ್ಷತ್ರಿಯರ ಸಮುದಾಯದ ಕುರಿತಾಗಿ ವಿರಳತೆಯಲ್ಲಿ ಅನುಷಂಗಿಕ ಆಕರಗಳು ಲಭಿಸಿವೆ. ಈ ಅನುಷಂಗಿಕ ಆಕರಗಳಿಗೆ ತಮ್ಮದೇ ಚೌಕಟ್ಟು ಇರುತ್ತದೆ. ಯಾವುದೊಂದು ಪ್ರಭಾವದಿಂದ ಆ

ಕೃತಿಗಳು ರಚಸಲ್ಪಿಟ್ಟಿರುತ್ತವೆ. ಇಲ್ಲಿ ಕೆಲವೊಂದು ಕೃತಿಗಳಿಗೆ ಮಿತಿ ಹಾಕಿಕೊಂಡು ರಚನೆಯಾಗಿರುತ್ತವೆ. ಆ ಕಾರಣದಿಂದಾಗಿ ಇಂತಹ ಅನುಷಂಗಿಕ ಆಕರಗಳು ಎಲ್ಲವನ್ನು ಕಟ್ಟಿಕೊಡಲು ಸಾಧ್ಯವಾಗುವುದಿಲ್ಲ. ಇಲ್ಲಿ ಕ್ಷತ್ರಿಯರ ಸಮುದಾಯಗಳನ್ನು ಪೂರಕವಾಗಿಟ್ಟುಕೊಂಡು ಒಂದು ಚೌಕಟ್ಟಿನಲ್ಲಿ ತರಲು ಸಂಶೋಧನೆಯು ತುಂಬ ಮಹತ್ವದಾಗಿದೆ.

**೧.೮. ಅಧ್ಯಾಯನದ ವಿನ್ಯಾಸ**

ಕ್ಷತ್ರಿಯ ಸಾಮಾಜಿಕ ಅಧ್ಯಯನ ಶೀರ್ಷಿಕೆ ಅಡಿಯಲ್ಲಿ ಸಂಶೋಧನೆಯನ್ನು ಕೈಗೊಳ್ಳಲಾಗಿದ್ದು, ಅಧ್ಯಯನದಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಅಥವಾ ಅನುಷಂಗಿಕ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.ಇಲ್ಲಿ ಕೆಲವೊಂದು ಸಂಶೋಧನೆಗೆ ತಂತ್ರಗಳನ್ನು ಬಳಸಲಾಗಿದೆ. ಅಂದರೆ, ಪ್ರಶ್ನಾವಳಿ ಸಂದರ್ಶನ ಅವಲೋಕನ ವ್ಯಕ್ತಿ ಅಧ್ಯಯನ,ಐತಿಹಾಸಿಕ ವಿಧಾನ, ತೌಲನಿಕ ಅಧ್ಯಯನದ ಮೂಲಕ ಮಾಹಿತಿ ಸಂಗ್ರಹಿಸಲಾಗಿದ್ದು, ಅದನ್ನು ಸಂಶೋಧನಾ ಚೌಕಟ್ಟಿನೊಳಗೆ ತರಲು ಸಂಶೋಧನಾ ವಿನ್ಯಾಶವನ್ನು ರಚಿಸಿಕೊಳ್ಳಲಾಗಿದೆ. ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಪರಿಸಮಾಪ್ತಿಯನ್ನು ಮತ್ತು ಫಲಿತವನ್ನು ಒಳಗೊಂಡು ಒಟ್ಟು ಏಳು ಅಧ್ಯಾಯಗಳಲ್ಲಿ ಕ್ರಮಾನುಗತವಾಗಿ ವಿಶ್ಲೇಷಣೆ ಮಾಡಿ ರಚಿಸಲಾಗಿದೆ.

**ಮಾದಲನೆ ಅಧ್ಯಾಯ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ,** ಈ ಅಧ್ಯಾಯದಲ್ಲಿಪ್ರಸ್ತಾವನೆ, ಅಧ್ಯಯನದ ಉದ್ದೇಶ, ಮತ್ತು ಪ್ರಾಕಲ್ಪನೆಗಳು, ಅಧ್ಯಯನದ ವ್ಯಾಪ್ತಿ, ಅಧ್ಯಯನದ ಮಹತ್ವ, ಅಧ್ಯಯನದ ವಿಧಾನ, ಸಂಶೋಧನಾ ವಿಧಾನಗಳು ಅಧ್ಯಯನದ ವಿನ್ಯಾಸ, ಕ್ಷತ್ರಿಯರನ್ನು ಕುರಿತು ಇಲ್ಲಿಯವರೆಗೆ ನಡೆದ ಅಧ್ಯಯನದ ಸಮೀಕ್ಷೆ ಮಾಡಲಾಗಿದೆ.

**ಎರಡನೆಯ ಅಧ್ಯಾಯ ಕ್ಷತ್ರಿಯರ ಪರಂಪರೆ ಮತ್ತು ಐತಿಹಾಸಿಕ ಹಿನ್ನೆಲೆ** ಈ ಅಧ್ಯಯದಲ್ಲಿ ಸಾಂಸ್ಕೃತಿಕ ಭೌಗೋಳಿಕ ಹಿನ್ನೆಲೆ ಕ್ಷತ್ರಿಯರ ಪದ ಉತ್ಪತ್ತಿ, ವೇದಗಳ ಕಾಲದಲ್ಲಿ ಕ್ಷತ್ರಿಯರು, ವೇದಗಳ ಕಾಲದಲ್ಲಿ ಕ್ಷಾತ್ರ ಪ್ರಜ್ಞೆ, ರಾಮಾಯಣ ಮಹಾಭಾರತ, ಕಾಲಗಳಲ್ಲಿ ಕ್ಷತ್ರಿಯರು, ಭಾರತದ ಇತಿಹಾಸದಲ್ಲಿ ಕ್ಷತ್ರಿಯರು, ಕದಂಬ ಗಂಗರಲ್ಲಿ ಕ್ಷತ್ರಿಯರು, ಘೂರ್ಜರ–ಪ್ರತಿಹಾರರಲ್ಲಿ ಕ್ಷತ್ರಿಯರ ಪರಂಪರೆ ಮತ್ತು ಐತಿಹಾಸಿಕ ಹಿನ್ನೆಲೆಯನ್ನು ತಿಳಿಯಲಾಗಿದೆ.

**ಮೂರನೆ ಅಧ್ಯಾಯ ಕ್ಷತ್ರಿಯ ಸಮುದಾಯಗಳು.** ಈ ಅಧ್ಯಾಯದಲ್ಲಿ ಸೂರ್ಯವಂಶ ಕ್ಷತ್ರಿಯ, ಕ್ಷತ್ರಿಯಲಾಡ್, ಸೋಮವಂಶ ಆರ್ಯ ಕ್ಷತ್ರಿಯ, ನಯನಜ ಕ್ಷತ್ರಿಯ, ವನ್ನಿಕುಲಕ್ಷತ್ರಿಯ, ಭಾವಸಾರ ಕ್ಷತ್ರಿಯ, ತೊಗಟವೀರಕ್ಷತ್ರಿಯ, ರಾಮರಾಜ ಕ್ಷತ್ರಿಯರು, ಕ್ಷತ್ರಿಯ(ಹಿಂದೂಕ್ಷತ್ರಿಯ), ಕ್ಷತ್ರಿಯ:ಕ್ಷತ್ರಿ, ರಾಜು ಕ್ಷತ್ರಿಯ, ಕ್ಷತ್ರಿಯ ಮರಾಠ, ಮುಖ್ಯವಾಗಿ ಜಾತಿ ಚೌಕಟ್ಟಿನಲ್ಲಿ ಈ ಸಮುದಾಗಳ ಬಗ್ಗೆ ಚರ್ಚಿಸಲಾಗಿದೆ.

**ನಾಲ್ಕು ಅಧ್ಯಾಯ ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನ**. ಈ ಅಧ್ಯಾಯದಲ್ಲಿ ಕ್ಷತ್ರಿಯರ ಸಾಮಾಜಿಕ ಬದುಕನ್ನು ತಿಳಿಯಲು ಈ ಅಧ್ಯಯನವು ಸಹಕಾರಿಯಾಗಿದೆ. ಬೇಟೆ, ಪಶುಸಂಗೋಪನೆ, ಕ್ಷತ್ರಿಯರ ಕುಟುಂಬ ವ್ಯವಸ್ಥೆ, ಕೃಷಿ, ವಸತಿ, ಉಡುಗೆ-ತೊಡುಗೆ, ಆಹಾರ ಕ್ರಮ, ಸಂಬಂಧಗಳು, ಕುಲ ಪಂಚಾಯ್ತಿಗಳು, ಆರಾಧನಾ ದೈವಗಳು, ಹಬ್ಬಗಳು, ಆಚರಣೆಗಳು, ನಿಷೇಧಗಳು, ಜಾತ್ರೆಗಳು, ಕುರಿತು ಸಮಗ್ರವಾಗಿ ವಿಶ್ಲೇಷಣೆ ಮಾಡಲಾಗಿದೆ.

**ಐದನೆಯ ಅಧ್ಯಾಯ ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ರ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳು**. ಈ ಅಧ್ಯಾಯದಲ್ಲಿ ಹಿಂದೂ ಕ್ಷತ್ರಿಯರ ಜೀವನಾರ್ವತನ ಆಚರಣೆಗಳು ಜನನ ಸಂಬಂಧ ಆಚರಣೆಗಳು, ನಾಮಕರಣ, ಜವಳಿ ತೆಗೆಸುವುದು, ಉಪನಯನ, ಋತುಮತಿ, ಕಾರ್ಯ, ವಿವಾಹ, ವಿಧವಾ ವಿವಾಹ, ಶವಸಂಸ್ಕಾರದ ಆಚರಣೆಗಳು ಮತ್ತು ಪ್ರಸ್ತುತ ಬದಲಾವಣೆಗಳನ್ನು ಕುರಿತು ವಿವರಿಸಲಾಗಿದೆ.

**ಆರನೆಯ ಅಧ್ಯಾಯ ಜಾತಿ ವ್ಯವಸ್ಥೆಯ ಚೌಕಟ್ಟಿನಲ್ಲಿ ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ರ ಸಮುದಾಯ**. ಈ ಅಧ್ಯಾಯದಲ್ಲಿ ಜಾತಿ ವ್ಯವಸ್ಥೆಯಲ್ಲಿ ಕ್ಷತ್ರಿಯರು, ಸಮಾಜಶಾಸ್ತ್ರಜ್ಞರ ಕಲ್ಪನೆಯಲ್ಲಿ ಜಾತಿ, ವರ್ತಮಾನದಲ್ಲಿ ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ರ ಸಮುದಾಯ, ಸಾಮಾಜಿಕ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಾಮಾಜಿಕ, ಆರ್ಥಿಕ, ಜನಸಂಖ್ಯೆ ಮತ್ತು ಸಾಕ್ಷರತೆ, ಕ್ಷತ್ರಿಯರ ವೈವಾಹಿಕ ಸ್ಥಾನಮಾನಗಳು, ಭೌಗೋಳಿಕ ಹಂಚಿಕೆ, ಸರ್ಕಾರಿ ಸೌಲಭ್ಯಗಳು, ಕ್ಷತ್ರಿಯರ ಸಂಘಟನೆ, ರಾಜಕೀಯ ಸ್ಪರ್ಧೆಯ, ಬಗ್ಗೆ ಕೋಷ್ಟಕಗಳ ಮೂಲಕ ವಿವರಿಸಿ ಮಾಹಿತಿಯನ್ನು ವಿಶ್ಲೇಷಣೆ ಮಾಡಲಾಗಿದೆ.

**ಏಳನೆಯ ಅಧ್ಯಾಯ ಪರಿಸಮಾಪ್ತಿ** ಅಧ್ಯಯನದ ಫಲಿತಗಳು, ಸಲಹೆಗಳು, ಅನುಬಂಧಗಳಲ್ಲಿ ಶ್ರೀ ಶೃಂಗೇರಿ ಮಠಕ್ಕೆ ಬರಕೊಟ್ಟ ಭಿನ್ನವತ್ತಳೆಯ ಪ್ರತಿ, ಹಿಂದೂ ಕ್ಷತ್ರಿಯ ಸಮಾಜದ ಸಂಘ ಸಂಸ್ಥೆಗಳು, ಮಾಹಿತಿದಾರರ ಪಟ್ಟಿ, ಮತ್ತು ಅಧ್ಯಯನಕ್ಕೆ ಪೂರಕವಾದ ಛಾಯಾಚಿತ್ರಗಳು, ಪರಾಮರ್ಶನ ಸಾಹಿತ್ಯಗಳನ್ನು ಸೇರಿಸಲಾಗಿದೆ.

**ಆಧಾರ ಗ್ರಂಥಗಳು**

ಕರ್ನಾಟಕ ರಾಜ್ಯಪತ್ರ, ಭಾಗ-೧, ಗುರುವಾರ ಏಪ್ರಿಲ್ ೧೧, ೨೦೦೨.

# ಅಧ್ಯಾಯ: ಎರಡು

# ಕ್ಷತ್ರಿಯರ ಪರಂಪರೆ ಮತ್ತು ಐತಿಹಾಸಿಕ ಹಿನ್ನೆಲೆ

# ಅಧ್ಯಾಯ: ಎರಡು
# ಕ್ಷತ್ರಿಯರ ಪರಂಪರೆ ಮತ್ತು ಐತಿಹಾಸಿಕ ಹಿನ್ನೆಲೆ

**ಪಿಠೀಕೆ**

ಭಾರತೀಯ ಸಂಸ್ಕೃತಿ, ಪರಂಪರೆ, ಇತಿಹಾಸ, ತತ್ವಜ್ಞಾನ, ಜೀವನಾದರ್ಶಗಳ ಹಿರಿಮೆ. ಈ ಲೋಕದಲ್ಲಿ ಸಾಟಿಯಿಲ್ಲದ್ದು, ನೂರಾರು ಶತಮಾನಗಳವರೆಗೆ ಈ ರಾಷ್ಟ್ರ ಜೀವನವನ್ನು ವೈಭವಶಾಲಿಯಾಗಿ ಮಾಡಿದ್ದಷ್ಟೆ ಅಲ್ಲ. ಜಗತ್ತಿಗೆಲ್ಲ ದಿವ್ಯಜೀವನದ ಸುಧೆ ಕಲಿಸಿದಂತಹ ಅದ್ಭುತ ಚೈತನ್ಯ ಅದರಲ್ಲಿದೆ. ಇಂದಿಗೂ ಸಹ ಆಧುನಿಕ ಜೀವನದ ಅನೇಕ ವಿಕಟ ಸಮಸ್ಯೆ, ಸವಾಲುಗಳಿಗೆ ಸಮರ್ಪಕವಾಗಿ ಸಮಾಧಾನ ನೀಡಬಲ್ಲಂತಹ ಸಮಗ್ರ ಜೀವನದೃಷ್ಟಿ. ವಿಚಾರ ಸಂಪತ್ತು ಅದರಲ್ಲಿದೆ. ಭಾರತ ಸರ್ವ ವಿಧದಲ್ಲಿಯೂ ಸಮೃದ್ಧ ದೇಶ. ಈ ಸಮೃದ್ಧಿಗೆ ನಿರಂತರ ಪೋಷಣೆಯನ್ನೂ ರಕ್ಷಣೆಯನ್ನು ಒದಗಿಸಿದ ಕ್ಷಾತ್ರ ಪೌರುಷವೂ ಅಸಾಧಾರಣವಾದುದು, ಅವಿಚ್ಛಿನ್ನವಾದುದು, ಸನಾತನ ಧರ್ಮದ ಭದ್ರಬುನಾದಿಯ ಮೇಲೆ ಮೈತಳೆದು ನಿಂತ ಈ ಅಪ್ರತಿಮ ಕ್ಷಾತ್ರ ಪೌರುಷಗಳಿಂದಾಗಿಯೇ ಸಾಂಸ್ಕೃತಿಕವಾಗಿ ನಾವಿನ್ನೂ ಭಾರತೀಯರಾಗಿಯೇ, ಉಳಿದಿದ್ದೇವೆ.

ಸಿಂಧೂ ನದಿಯ ದಡದಲ್ಲಿ ವಾಸವಾಗಿದ್ದ ಆರ್ಯ ಜನಾಂಗವನ್ನು ಮಹಮ್ಮದಿಯರು ಮತ್ತು ಪರ್ಶಿಯನ್ನರು ಸಿಂಧೂ ಜನಾಂಗ ಎಂದುಕರೆದರು. ಇದು ಸನಾತನ ಧರ್ಮದ ಮೂಲ ಬಳುವಳಿ ಎಂದೇ ಹೇಳಬಹುದು. ಮಾನವನ ನಾಗರೀಕತೆಯ ವಿಕಾಸಕ್ಕೆ ಸಂಬಂಧಿಸಿದಂತೆ ಕಸುಬುಗಳು ಹೊಸ ಆಯಾಮವನ್ನು ಪಡೆದವು. ಕ್ರಮೇಣ ಕುಲ–ಕಸುಬುಗಳಾದವು. ಪರ್ಯಾಯವಾಗಿ ಸಾಕಷ್ಟು ಜಾತಿ, ಕುಲ, ಮತ, ಪಂಥಗಳು ಬೆಳೆದಂತೆ ವಿಭಿನ್ನ ಸಂಸ್ಕೃತಿ ಪೂಜಾವಿಧಾನ, ಉಪಾಸನೆ, ಆಚಾರ–ವಿಚಾರಗಳು ರೂಢಿಯಲ್ಲಿ ಬಂದವು. ಇಂತಹ ವೈವಿಧ್ಯಮಯ ವಿಶಿಷ್ಟತೆಗಳಿಂದ ಹಿಂದೂ ಧರ್ಮವಾಗಿದೆ. ಇಲ್ಲಿ ಬರುವ ಚರಿತ್ರಾರ್ಹ ವ್ಯಕ್ತಿಗಳು ಮತ್ತು ಅವರ ಸಂದೇಶಗಳು ಅನಂತವಾಗಿರುವವು. ಪ್ರತಿಯೊಂದು ಧರ್ಮವು ತತ್ವ ಪುರಾಣ ಆಚಾರ ಎಂಬ ಮೂರು ವರ್ಗೀಕೃತವಾಗಿವೆ. ತತ್ವ ಸೂಕ್ಷ್ಮವಾದರೂ ಅದನ್ನು ಸರಳ ದೃಷ್ಟಿಯಿಂದ ನೋಡಬೇಕಾದರೆ ಶಾಸ್ತ್ರ ಪುರಾಣ ಇತಿಹಾಸವನ್ನು ನೋಡಬೇಕು. ಈ

ದೃಷ್ಟಿಯಿಂದ ಆದರ್ಶ ರಾಮನಂತೆಯೇ, ಸಾಧ್ವಿ ಸೀತೆಯಂತೆಯೇ ಕಾಣುತ್ತೇವೆ. ಆಚರಣೆ, ವಿಧಿ-ವಿಧಾನಗಳು ಸಂಪ್ರದಾಯಗಳು ವ್ರತ ನಿಯಮಗಳು ಎಷ್ಟರ ಮಟ್ಟಿಗೆ ಬೆಳೆದು ಬಂದಿವೆ ಎಂದರೆ ಗರ್ಭದಾನ ಮಂತ್ರದಿಂದ ದೇಹ ಭಸ್ಮಿಭೂತವಾಗಿರುವವರೆಗೂ ಆಚರಣೆಗಳು ನಡೆದೇ ಇರುತ್ತವೆ. ಅದಾಗ್ಯೂ ಸಹ ಸಮಾಜ ಎಷ್ಟು ಪರಿವರ್ತನಾಶೀಲವಾದರೂ ಹಿಂದೂ ಧರ್ಮದ ಸಂಸ್ಕೃತಿ, ಸಂಸ್ಕಾರ, ಆಚಾರ – ವಿಚಾರಗಳು, ಸಂಪ್ರದಾಯಗಳು, ವೇದಾಧ್ಯಯನ, ಯೋಗಪದ್ಧತಿ, ಖಗೋಳಶಾಸ್ತ್ರ, ಪಾಕಶಾಸ್ತ್ರ, ಆಯುರ್ವೇದ ಪದ್ಧತಿ, ಪುರಾತನವಾಗಿದ್ದರೂ ಇಂದಿಗೂ ಮಾನವ ಕುಲಕ್ಕೆ ಸರ್ವಕಾಲಿನವಾಗಿದೆ ಮತ್ತು ಆದರ್ಶನೀಯವಾಗಿದೆ. ಇಂತಹ ಭವ್ಯ ಪರಂಪರೆಯನ್ನು ಜೀವಂತವಾಗಿ ಪೋಷಿಸುತ್ತಾ ಬಂದಿರುವವರು ಕ್ಷಾತ್ರ ಧರ್ಮದ ಸಾಮ್ರಾಜ್ಯದವರು.

ಯುಗ ಯುಗಾಂತರಗಳಿಂದ ಕ್ಷತ್ರಿಯ ರಾಜಾರಸರುಗಳು, ಮಹಾರಾಜರು, ಚಕ್ರವರ್ತಿಗಳು, ಧರ್ಮಾಧಿಕಾರಿಗಳು, ರಾಜರ್ಷಿಗಳು, ಬ್ರಹ್ಮವಿಜ್ಞಾನಿಗಳು ಈ ಭರತ ಖಂಡವನ್ನು ಸತ್ಯ ನ್ಯಾಯ ಧರ್ಮದಿಂದ ಧರ್ಮಕ್ಷೇತ್ರವನ್ನಾಗಿ ನಾಲ್ಕು ಪುರುಷಾರ್ಥಗಳೊಂದಿಗೆ ಲೋಕ ಕಲ್ಯಾಣಾರ್ಥವಾಗಿ "ಸರ್ವೇ ಜನ ಸುಖಿನೋ ಭವಂತು" ಪರಿಗ್ರಹಿಸಿ ಸಾಮ್ರಾಜ್ಯವಾಹಿ ಚರಿತ್ರಾರ್ಹರಾಗಿರುವರು. ಇಂದು ವಿಶ್ವದಲ್ಲಿ ಪವಿತ್ರ ಗ್ರಂಥ ಮಹಾಕಾವ್ಯಗಳೆಂದು ಪರಿಗಣಿಸಲ್ಪಟ್ಟಿರುವ ರಾಮಾಯಣ, ಮಹಾಭಾರತ, ಭಗವದ್ಗೀತೆಯಲ್ಲಿ, ಬರುವ ಧರ್ಮ ಸ್ಥಾಪನೆ, ರಕ್ಷಣೆ, ಸಾಫಲ್ಯತೆಗಳೇ ಕ್ಷಾತ್ರ ಧರ್ಮದ ಸೌರಭಗಳು. ಅವು ಇಂದಿಗೂ ಅವಿಸ್ಮರಣೀಯವಾಗಿವೆ. ಕ್ಷಾತ್ರ ಧರ್ಮದಿಂದಲೇ ಸನಾತನ ಧರ್ಮದ ಸಂರಕ್ಷಣೆಯಾಗಿದೆ. ಮತ್ತು ಎಲ್ಲ ಧರ್ಮಗಳಿಗೂ ಆಧಾರ ಹಾಗೂ ಆದರ್ಶನೀಯವಾಗಿದೆ. ಅದು ಇಂದಿಗೂ ಪ್ರಸ್ತುತ ಮತ್ತು ಅನುಕರಣೀಯವಾಗಿದೆ. ತ್ರೇತ್ರಾಯುಗದ ಗತ ವೈಭವವನ್ನು ಜ್ಞಾಪಿಸಿಕೊಂಡಾಗ ರಘು ವಂಶದ ಮರ್ಯಾದಾ ಮಾನವ ಪುರುಷೋತ್ತಮರಾದ ಶ್ರೀರಾಮಚಂದ್ರರು ತಂದೆಗೆ ಸತ್ಪುರುಷರೆನಿಸಿ ವಚನ ಬದ್ಧರಾಗಿ ನಿರ್ವಹಿಸಿದ ಕರ್ತವ್ಯವೇ ಕ್ಷಾತ್ರ ಧರ್ಮವಾಗಿದೆ. ಕ್ಷತ್ರಿಯರು ನೀತಿಯುಕ್ತ ಮಾತುಗಳಿಗೆ ಮತ್ತು ಧರ್ಮವಾಣಿಗೆ ಮನ್ನಣೆ ನೀಡಿದ್ದಾರೆ. ಕೇವಲ ಅಸ್ತ್ರ-ಶಸ್ತ್ರ ಪಾರಂಗತವಾಗಿರದೇ ಅವುಗಳ ಸಮಯೋಚಿತ ಉಪಯೋಗ ಬಲ್ಲವರಾಗಿದ್ದು ರಾಜ್ಯದಲ್ಲಿ ಧರ್ಮೋಪದೇಶ ಮತ್ತು ಸುಭೀಕ್ಷೆಯಿಂದಿರಲು ಕುಲಗುರುಗಳು, ಧರ್ಮಗುರುಗಳು, ಋಷಿಮುನಿಗಳು, ಸಾಧುಸಂತರು ಪಂಡಿತ ವಿಪ್ರೋತ್ತಮರಿಗೆ ಆಶ್ರಯದಾತರಾಗಿದ್ದರು.

ಪ್ರಾಚೀನ ವೇದಗಳ ಪ್ರಾರಂಭದಲ್ಲಿ ಕ್ಷತ್ರಿಯರ ಸ್ಥಾನವನ್ನು ವ್ಯಕ್ತಿಯ ಯೋಗ್ಯತೆ (ಗುಣ) ಕರ್ಮ ಮತ್ತು ಸ್ವಭಾವಗಳ ಸಾಧನೆಯಿಂದ ಪರಿಗಣಿಸಲಾಗುತ್ತಿತ್ತು. ಆರಂಭದ ವೈದಿಕ ಸಾಹಿತ್ಯದಲ್ಲಿ ಕ್ಷತ್ರಿಯರನ್ನು ಸಮಾಜದಲ್ಲಿ ಮೊದಲಿನ ವರ್ಗವೆಂದು ಅಥವಾ ಪಟ್ಟವೆಂದು ಪರಿಗಣಿಸಲಾಗಿತು. ಅನಂತರ ಬ್ರಾಹ್ಮಣರನ್ನು ಅರ್ಚಕರು ಹಾಗೂ ನಿಯಮಗಳ ಭೋಧಕರೆಂದು ಹಾಗೂ ವೈಶ್ಯರನ್ನು ವ್ಯವಸಾಯ ವ್ಯಾಪಾರ ವರ್ತಕ ವರ್ಗವೆಂದು ಅಂತಿಮವಾಗಿ ಶೂದ್ರರನ್ನು ಕುಶಲಕರ್ಮಿಗಳು ಮತ್ತು ಕಾರ್ಮಿಕ ವರ್ಗದ ಜನರು ಎಂದು ಪರಿಗಣಿಸಲಾಗಿದೆ. ಈ ವರ್ಗದ ಜನರು ಮೇಲಿನ ಮೂರು ವರ್ಗದವರ ಸೇವಕರಾಗಿದ್ದರು. ಆ ಕಾಲದಲ್ಲಿ ಕ್ಷತ್ರಿಯರ ಅನುಪಮ ಸೇವೆಗೆ ಆಡಳಿತಗಾರರಿಂದ ಮಾನ್ಯತೆ ಮತ್ತು

ಪ್ರತಿಫಲಗಳನ್ನು ನೀಡಲಾಗುತ್ತಿತು. ಕ್ರಮೇಣ ಕಾಲಕಾಲಕ್ಕೆ ಅನುಸಾರವಾಗಿ ಅದು ಅವರ ವಿವಿಧ ಕೆಲಸ ಮತ್ತು ಯೋಗ್ಯತೆಗೆ ಅನುಗುಣವಾಗಿತು. ಯುದ್ಧದ ಅನ್ವೇಷಣೆ ಅಥವಾ ಪ್ರದೇಶಗಳ ಸ್ವಾಧೀನತೆಯಿಂದ ಅವರ ಒಟ್ಟನಲ್ಲಿ ಆಡಳಿತಗಾರರೆಂದು ಹಕ್ಕು ಪಡೆದರು.

**೨.೧. ಕ್ಷತ್ರಿಯ ಪದ/ಶಬ್ದದ ಉದ್ಭವ**

"ಕ್ಷತ್ರ: ನಾಲ್ಕು ವರ್ಣಗಳಲ್ಲಿ ಒಂದು ಮತ್ತು ಆ ವರ್ಣಕ್ಕೆ ಸೇರಿದವನು; ಕ್ಷತ್ರಿಯ: ಕಷ್ಟಗಳು ಬಾರದಂತೆ ಕಾಪಾಡುವಿಕೆ, ಕ್ಷತ್ರ ಚಕ್ರ: ಕ್ಷತ್ರಿಯರ ಸಮೂಹ, ಕ್ಷಾತ್ರ: ಕ್ಷತ್ರಿಯರ ಕುಲ, ಕ್ಷತ್ರಿಯನ ತೇಜಸ್ಸು, ರಾಜ್ಯಪಾಲನೆ, ಕ್ಷತ್ರಿಯನಿಗೆ ಸೇರಿದ. ಕ್ಷಯ ವೃಜಿನ: ಪಾಪಗಳನ್ನು ನಾಶಮಾಡುವವನು" *(ಸಂಕ್ಷಿಪ್ತ ಕನ್ನಡ ನಿಂಘಟು, ಕನ್ನಡ ಸಾಹಿತ್ಯ ಪರಿಷತ್ತು, ಪುಟ-೩೪೪, ೨೦೧೬).* ಕ್ಷತ್ರಿಯ ಪದದ ಅರ್ಥವನ್ನು ಈ ರೀತಿಯಾಗಿ ತಿಳಿವುದರ ಜೊತೆಯಲ್ಲಿ ಕ್ಷತ್ರಿಯ ಪದದ ಉತ್ಪತ್ತಿಯನ್ನು ವಿಸ್ತಾರವಾಗಿ ವಿವರಿಸುವುದು ಮುಖ್ಯವೆನಿಸಿದೆ.

ಕ್ಷತ್ರಿಯ ಶಬ್ದವು 'ಕ್ಷಿ' ಧಾತುವಿನಿಂದ ಬಂದದ್ದೆಂದು ಹೇಳುತ್ತಾರೆ. ಯಾಸ್ಕರ ನಿರುಕ್ತದಲ್ಲಿಯೂ ಪಾಣಿನಿಯ ಧಾತುಪಾಠದಲ್ಲಿಯೂ 'ಕ್ಷಿ' ಕ್ಷಯೈಶ್ವರ್ಯಯೋಃ ಎನ್ನುವಂಥ ಧಾತುವಿನಿಂದ 'ಕ್ಷಾತ್ರ' ಮತ್ತು ಕ್ಷತ್ರಿಯ' ಶಬ್ಧಗಳನ್ನು ತೋರ್ಪಡಿಸುತ್ತಾರೆ. 'ಕ್ಷತಾತ್' ತ್ರಾಯತೇ ಇತಿ ಕ್ಷತ್ರಿಯಃ ಎಂದು ನಿರುಕ್ತದ ನಿರ್ವಚನದಲ್ಲಿ ಹೇಳಿದಂತೆ, ಆ ರೀತಿಯಾಗಿ ಈ ಧಾತುಪಾಠದಿಂದ ನೋಡಿದಾಗ 'ಕ್ಷಿ' – ಕ್ಷಯೈಶ್ಚ್ರ್ಯಯೋಃ (ಕ್ಷಯ ಎಂದರೆ ಹಾಳಾಗುವಿಕೆ ಎಂದು ಭಾವಿಸಿಕೊಳ್ಳಬಾರದು, ಅಮರಕೋಶದಲ್ಲಿ ಕ್ಷಯ ಎನ್ನುವುದಕ್ಕೆ ನೆಲೆ, ವಾಸ, ಆಶ್ರಯ ಎನ್ನುವ ಅರ್ಥಗಳನ್ನು ಕೊಟ್ಟಿದೆ) ಎಂದು ತಿಳಿಯುತ್ತದೆ. ಇದರ ಪ್ರಕಾರ ಕ್ಷತ್ರಿಯನು ಮುಖ್ಯವಾಗಿ ಆಶ್ರಯವನ್ನು ಕೊಡಬೇಕು. ಐಶ್ವರ್ಯವನ್ನು ಅಭಿವೃದ್ಧಿಪಡಿಸಬೇಕು. ಇದಲ್ಲದೆ 'ಹಿಂಸಾಯಾಂ' ಎಂಬ ಮತ್ತೊಂದು ಅರ್ಥವೂ ಈ ಧಾತುವಿಗಿದೆ. ಇದು ಕ್ಷತ್ರಿಯನ ದುಷ್ಟದಮನಕ್ಕೆ ಸಂಬಂಧಿಸಿದೆ. ಇನ್ನು ಮನ್ವಾದಿ ಸ್ಮೃತಿಗಳಲ್ಲಿ ಉಪನಾಮಗಳನ್ನು ಹೇಳುವಾಗ ಕ್ಷತ್ರಿಯನಿಗೆ 'ವರ್ಮಾ' ಎನ್ನುವ ಉಪನಾಮವನ್ನು ನೀಡಿದ್ದಾರೆ. 'ವರ್ಮ' ಎಂದರೆ ಕವಚ ಎಂದರ್ಥ.ಯಾವುದು ನಮ್ಮನ್ನು ರಕ್ಷಣೆ ಮಾಡುತ್ತದೆಯೋ ನಮ್ಮನ್ನು ಕಾಪಾಡುತ್ತದೆಯೋ ಅದನ್ನು ವರ್ಮ ಎಂದು ಕರೆಯುತ್ತೇವೆ. "ಕವಚಭೂತವಾದದ್ದು, ರಕ್ಷಣೆಗಾಗಿ ಇರುವಂಥದ್ದು, 'ಕ್ಷಾತ್ರ', ಅದನ್ನೇ ನಾವು 'ಕ್ಷಯ (ಆವಾಸ) ಎನ್ನುವ ಅರ್ಥದಲ್ಲಿ ಕಾಣುತ್ತಿದ್ದೇವೆ" *(ಗಣೇಶ್ ಆರ್,ಭಾರತೀಯ ಕ್ಷಾತ್ರ ಪರಂಪರೆ, ಪುಟ-೧೪, ೨೦೧೬).*

ಕ್ಷಿ ಎಂಬ ಧಾತುವಿಗೆ ಇರುವ ಮತ್ತೊಂದು ಅರ್ಥ 'ಐಶ್ವರ್ಯ' ಎಂದು ಸಂಪತ್ತನ್ನು ತಂದುಕೊಡುವಂಥದ್ದು ಎಂಬ ನೆಲೆಯಲ್ಲಿ. ಲೋಕಕ್ಕೆ ಬೇಕಾದದ್ದು ಕ್ಷೇಮ, ಸ್ಥೈರ್ಯ, ಇವೆರಡೂ ಬರುವುದು ನೆಲೆ ಮತ್ತು ಸಂಪನ್ಮೂಲಗಳಿಂದ ಒಂದು ದೇಶ ಚೆನ್ನಾಗಿರಬೇಕಾದರೆ ಮೊದಲು ಬೇಕಾಗಿರುವುದು ಆಂತರಿಕ ಮತ್ತು ಬಾಹ್ಯಭದ್ರತೆ. ಅದಾದ ಬಳಿಕ ಸಂಪನ್ಮೂಲಗಳ ಅಭಿವೃದ್ಧಿಯಾಗಬೇಕು. ಕ್ಷತ್ರಿಯನ ಜೊತೆಗೆ ಅವಿನಾಭಾವವಾಗಿ ಬಂದಿರುವುದು, ಸಂಪತ್ತು ಹಾಗೂ ಅವರ ರಕ್ಷಣೆ ಎರಡೂ ಬೇರೆ ಬೇರೆ ರೀತಿಯಲ್ಲಿರುವುದಕ್ಕೆ ಸಾಧ್ಯವಿಲ್ಲ. ಭಗವದ್ಗೀತೆಯಲ್ಲಿ 'ಯೋಗಕ್ಷೇಮಂ

ವಹಾಮ್ಯಹಂ ಎಂದು ಕೃಷ್ಣ ಹೇಳುವಲ್ಲಿ 'ಯೋಗ' ಮತ್ತು ಕ್ಷೇಮ ಈ ಎರಡು ಪದಗಳು ದ್ವಂದ್ವಸಮಾಸವಾಗಿಲ್ಲ, ಅವರೆಡೂ ಸೇರಿ ಒಂದೇ ಶಭ್ಧವಾಗಿದೆ.

ಕ್ಷಾತ್ರ ಪರಂಪರೆಯ ಮುಖ್ಯ ಲಕ್ಷಣವೆಂದರೆ, ಸ್ಥಿತಿಯನ್ನು ಚೆನ್ನಾಗಿ ಉಳಿಸುವಂಥಾದ್ದು. ಕ್ಷತ್ರಿಯನ ಮುಖ್ಯಲಕ್ಷಣವು ರಜೋಗುಣದ್ದಾದರೂ ಅವನಲ್ಲಿ ಸ್ಥಾಯಿ ಭಾವವಾಗಿರುವುದು ಸತ್ತ್ವ ವಿಷ್ಣುವನ್ನು ಸ್ಥಿತಿಕರ್ತಾ ಎನ್ನುತ್ತೇವೆ. ದೇವತೆಗಳಿಗೂ ವರ್ಣಗಳಿವೆ ಎನ್ನುವಾಗ ವಿಷ್ಣುವನ್ನು ಕ್ಷಾತ್ರವರ್ಣಕ್ಕೆ ಸೇರಿಸುತ್ತೇವೆ. ಹಾಗೆಯೇ ವಿಷ್ಣುವಿನ ಸೋದರ ಇಂದ್ರನು ಸಹಕ್ಷತ್ರಿಯೋತ್ತಮ. ಬ್ರಹ್ಮನ ಮುಖ್ಯಗುಣ ರಜಸ್ಸು. ಇದು ಸೃಷ್ಟಿ ಕಾರ್ಯಕ್ಕೆ ಬೇಕೆ ಬೇಕಾಗಿರುವಂಥದ್ದು. "ವಿಷ್ಣುವಿನ ಮುಖ್ಯಗುಣ ಸತ್ತ್ವ. ಈ ಕ್ಷಾತ್ರದಲ್ಲಿ ಸತ್ತ್ವಗುಣವೂ ರಜೋಗುಣದೊಂದಿಗೆ ಕೂಡಿ, ರಜಸ್ಸು ಸತ್ತ್ವದ ಅಧೀನದಲ್ಲಿದ್ದು ಕೆಲಸಮಾಡಬೇಕು. ಕ್ಷಾತ್ರಗುಣ ಎಂದ ಕೂಡಲೇ ಇದುಹಿಂಸೆಯನ್ನು ತಂದೊಡ್ಡುತ್ತದೆ, ಲೋಕಕಂಟಕ, ಕ್ರೌರ್ಯ ಎನ್ನುವ ಅಹಿಂಸಾವಾದಿಗಳಿದ್ದಾರೆ" *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ–೪, ೨೦೧೬).*

ಪುರಾಣಗಳಲ್ಲಿ ಇಕ್ಷ್ವಾಕು ವಂಶದ ಕ್ಷತ್ರಿಯರನ್ನು ಹೊರತುಪಡಿಸಿ ಉಳಿದ ಕ್ಷತ್ರಿಯರು ವಿಷ್ಣುವಿನ ಆರನೆಯ ಅವತಾರವಾದ ಪರಶುರಾಮರಿಂದ ಶಿಕ್ಷೆಗೆ ಒಳಪಟ್ಟು ಧ್ವಂಸರಾದರು. ಈ ಕ್ರೂರ ಕೃತ್ಯದಿಂದ ಪ್ರತಿಭಾವಂತರಾದ ಅರ್ಚಕರು ಮತ್ತು ಆಡಳಿತದಾರರ ನಡುವೆ ತಾವು ಶ್ರೇಷ್ಟರೆಂದು ಹೋರಾಟ ನಡೆಯಿತು. ಕೊನೆಯಲ್ಲಿ ಮೂಲರಾದ ಕ್ಷತ್ರಿಯರಿಗೆ ವಿಜಯವಾಯಿತು. ವೈದೀಕ ಯುಗದ ಕೊನೆಯಲ್ಲಿ ಅರ್ಚಕ ವರ್ಗವಾದ ಬ್ರಾಹ್ಮಣರು ಸಮಾಜದಲ್ಲಿ ಮೊದಲನೆಯ ವರ್ಗವನ್ನು ಕ್ರಮಿಸಿದರು ಹಾಗೂ ಕ್ಷತ್ರಿಯರು ಎರಡನೇ ವರ್ಗಕ್ಕೆ ಇಳಿಯಬೇಕಾಯಿತು. ಮನುಸ್ಮೃತಿ (ಸನಾತನ ತತ್ವ ಒಳಗೊಂಡಂತಹ ಗ್ರಂಥ) ಮತ್ತು ಇಂತಹ ಧರ್ಮಶಾಸ್ತ್ರಗಳ ಸಾರ ಶಾಸ್ತ್ರಗಳ ಪ್ರಕಾರ ಬ್ರಾಹ್ಮಣರೇ ವಿಜಯಿಯಾಗಿದ್ದರು. ಆದರೆ ಮಹಾಕಾವ್ಯ ಗ್ರಂಥಗಳು ಸಾಮಾನ್ಯವಾಗಿ ಬೇರೆ ವರ್ಗಕ್ಕೆ ನೀಡುತ್ತವೆ. ವಾಸ್ತವವಾಗಿ ಆಡಳಿತಗಾರರು ಸಮಾಜದಲ್ಲಿ ಮೊದಲನೆ ಸ್ಥಾನ ಸಾಧ್ಯತೆ ಇರುತ್ತದೆ. ಆದರೆ ಇತಿಹಾಸದುದ್ದಕ್ಕೂ ಧಾರ್ಮಿಕ ಪಾತ್ರಗಳಲ್ಲಿ ಮೂಡಿಬರುವ ವಿಷ್ಣು ಕೃಷ್ಣ ಮತ್ತು ರಾಮ ಇವರೆಲ್ಲರ ಪ್ರಾತಿನಿಧ್ಯ ನಿರಂತರವಾಗಿ ಕ್ಷತ್ರಿಯರ ಸಾಮ್ರಾಜ್ಯದ ಚಿತ್ರಣವನ್ನು ಎತ್ತಿ ಹೇಳುತ್ತದೆ. ಬೌದ್ಧನ ಸಾಮ್ರಾಜ್ಯದಲ್ಲಿ ಕ್ಷತ್ರಿಯರು ಮತ್ತೆ ನಾಲ್ಕು ವರ್ಗಗಳಲ್ಲಿ ಮೊದಲನೆಯ ಸ್ಥಾನ ಪಡೆಯುತ್ತಾರೆ. ಮೌರ್ಯ ಚಕ್ರವರ್ತಿಯ ಕೊಲೆಯ ನಂತರ (ಬೃಹದ್ರತನ ಮಗ ಪುಷ್ಯಮಿತ್ರ ಸಂಗಮನ) ಆಡಳಿತವು ಬ್ರಾಹ್ಮಣ ಮುಂದೆ ಬೌದ್ಧ ಧರ್ಮವು ಅವನತಿಯಾಗುತ್ತದೆ. ಈ ಸಮಾಜದಲ್ಲಿ ಪೂರ್ವ ಭಾರತದಲ್ಲಿ ಬ್ರಾಹ್ಮಣರು ಉಚ್ಛರೆಂದು ಗುರುತಿಸಿಕೊಂಡರು. ಪೂರ್ವ ಭಾರತದಲ್ಲಿ ಕ್ಷತ್ರಿಯರು ರಜಪೂತರೆಂದು ಬಲಾಢ್ಯರಾದರು. ಇವರು ಉಜ್ಜಯನಿಯಲ್ಲಿ ಪ್ರಭಾವಶಾಲಿಯಾಗಿ ಆಳ್ವಿಕೆ ನಡೆಸುತ್ತಾರೆ. ಹಾಗೇ ದಕ್ಷಿಣ ಭಾರತದ ವಿಜಯನಗರ ಸಾಮ್ರಾಜ್ಯವು ಭವ್ಯ ಪರಂಪರೆಯಿಂದ ಮೆರೆಯುತ್ತಿರುತ್ತದೆ. ಇಲ್ಲಿ ಸಹ ಕ್ಷತ್ರಿಯರ ಪ್ರಾಬಲ್ಯವನ್ನು ನೋಡಬಹುದು. ಮುಸಲ್ಮಾನರ ದಾಳಿಯಿಂದ ದೆಹಲಿಯ ಚೌಹಾಣ ಕ್ಷತ್ರಿಯರ ಆಡಳಿತ ಅವನತಿಯಾಗುತ್ತದೆ. ಇದೇ ರೀತಿಯಾಗಿ ಭಾರತದಲ್ಲಿ ಹಲವು ಕ್ಷತ್ರಿಯ ರಾಜಮನೆತನಗಳು ಬ್ರಿಟಿಷರ

ದಾಳಿಗೆ ಸಿಲುಕಿ ಆಡಳಿತವನ್ನು ಕಳೆದುಕೊಳ್ಳುತ್ತವೆ. ಭಾರತದಲ್ಲಿ ಜಾತಿ ಪದ್ಧತಿಯು ಒಂದು ವ್ಯವಸ್ಥೆಯಾಗಿದೆ ಸಾಮಾಜಿಕ ಶ್ರೇಣಿಕರಣದ ಆಧುನಿಕ ಪೂರ್ವಮೂಲಗಳನ್ನ ಹೊಂದಿರುವ ಬ್ರಿಟೀಷ್ ಆಳ್ವಿಕೆಯಿಂದ ರೂಪಾಂತರಗೊಂಡು ವರ್ಣವು ಜಾತಿ ಎಂಬುದಾಗಿದೆ, ಹಾಗೂ ಇಂದು ಜಾತಿವ್ಯವಸ್ಥೆಯು ಮೀಸಲಾತಿ ಆಧಾರವಾಗಿ ಬಳಕೆಯಲ್ಲಿದೆ.

ಸಾಮಾಜಿಕ ಶ್ರೇಣಿಯಲ್ಲಿ ಬ್ರಾಹ್ಮಣರ ನಂತರದ ಸ್ಥಾನ ಕ್ಷತ್ರಿಯರದ್ದು. ರಾಜ್ಯವನ್ನು ಆಳುವುದು ಮತ್ತು ಪ್ರಜೆಗಳನ್ನು ರಕ್ಷಿಸುವುದು ಕ್ಷತ್ರಿಯರ ಮುಖ್ಯ ಕರ್ತವ್ಯವಾಗಿತ್ತು. ಬ್ರಾಹ್ಮಣರಂತೆ ಕ್ಷತ್ರಿಯರಿಗೆ ಎಲ್ಲ ಕಾಲದಲ್ಲಿಯೂ ಪ್ರಧಾನವಾದ ಸ್ಥಾನವಾಗಲಿ, ಪಾತ್ರವಾಗಲಿ ಇರಲಿಲ್ಲ. ಏಕೆಂದರೆ ಕ್ಷತ್ರಿಯರ ಸ್ಥಾನಮಾನ ರಾಜಕೀಯ ಶಕ್ತಿ ಮತ್ತು ಅಧಿಕಾರವನ್ನು ಅವಲಂಬಿಸಿಕೊಂಡಿತ್ತು. ಸೈನಿಕ ವರ್ಗ ಇದರಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಿತ್ತು. ಸಾಮಂತ ಅರಸರುಗಳೂ ತಮ್ಮದು ಕ್ಷತ್ರಿಯ ಸ್ಥಾನಮಾನವೆಂದು ಹೇಳಿಕೊಂಡರು. ಆ ಕಾರಣಕ್ಕಾಗಿಯೇ ತಮ್ಮ ಮೂಲವನ್ನು ಸೂರ್ಯವಂಶ, ಚಂದ್ರವಂಶ ಎನ್ನುವ ಪೌರಾಣಿಕ ಮೂಲಗಳಿಂದ ಗುರುತಿಸಿಕೊಳ್ಳಲು ಪ್ರಯತ್ನಪಟ್ಟರು. ಕ್ಷತ್ರಿಯರಲ್ಲೂ ಮೇಲ್ದರ್ಜೆಯ ಕ್ಷತ್ರಿಯರು ಮತ್ತು ಕೆಳದರ್ಜೆಯ ಕ್ಷತ್ರಿಯರಿರುತ್ತಿದ್ದರು. ಆಳ್ವಕೆ ನಡೆಸುವವರು ಮತ್ತು ಗಣ್ಯರು ಮೇಲ್‌ದರ್ಜೆಯವರಾದರೆ ವೈಶ್ಯರು ಮತ್ತು ಶೂದ್ರರು ಮಾಡುವ ಕೆಲಸವನ್ನು ಮಾಡುವವರು ಸಾಮಾನ್ಯ ದರ್ಜೆಯವರಾಗಿದ್ದರು. ಕ್ಷತ್ರಿಯರ ಪುರೋಹಿತವರ್ಗದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿರುತ್ತಿದ್ದರು. ಏಕೆಂದರೆ ಪುರೋಹಿತರು ಕ್ಷತ್ರಿಯರ ರಾಜಕೀಯ ಅಧಿಕಾರವನ್ನು ಶಾಸನಬದ್ಧಗೊಳಿಸುತ್ತಿದ್ದರು. ಕ್ಷತ್ರಿಯ ಸ್ಥಾನಮಾನವನ್ನು ಪಡೆಯಲು ಶಾಸನ ಬದ್ಧಗೊಳ್ಳುವುದು ಅವಶ್ಯಕವಾಗಿತ್ತು. ಹುಟ್ಟಿನಿಂದ ಕ್ಷತ್ರಿಯರಾಗಿಲ್ಲದ ಉನ್ನತವ್ಯಕ್ತಿಗಳನ್ನು ಅವರ ಪರಾಕ್ರಮ ಮತ್ತು ದಕ್ಷತೆಗಳನ್ನೇ ಆಧಾರವನ್ನಾಗಿ ಇಟ್ಟುಕೊಂಡು ಕ್ಷತ್ರಿಯವರ್ಗಕ್ಕೆ ಸೇರಿಸಲಾಗುತ್ತಿತ್ತು. ಕರ್ನಾಟಕವನ್ನು ಅನೇಕ ರಾಜಮನೆತನಗಳು ಆಳ್ವಿಕೆ ನಡೆಸಿವೆ. ಇಲ್ಲಿ ಮುಖ್ಯವಾಗಿ ಕ್ರಿ.ಪೂ. ೪ನೇ ಶತಮಾನದಿಂದ ೧೬ನೇ ಶತಮಾನದವರೆಗೆ ಅನೇಕ ರಾಜರಮನೆತನಗಳು ಪ್ರಾಂತ್ಯವನ್ನು ಮಾಡಿಕೊಂಡು ಕರ್ನಾಟಕವನ್ನು ಮತ್ತು ಮತ ಧರ್ಮವನ್ನು ಕಟ್ಟಿ ಬೆಳೆಸಿದ್ದಾರೆ. ಈ ನಾಡನ್ನು ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಮೈಸೂರು ಒಡೆಯರು, ಇನ್ನೂ ಮುಂತಾದ ರಾಜಮನೆತನಗಳಲ್ಲಿ ಕ್ಷತ್ರಿಯರ ಪಾತ್ರವನ್ನು ಗಮನಿಸಬಹುದು.

ಕ್ಷತ್ರಿಯರನ್ನು ಯಾವ ರೀತಿ ಉದ್ಭವಿಸಿದರು ಎಂಬುದನ್ನು ಋಗ್ವೇದದ ಒಂದು ಭಾಗದಲ್ಲಿ ಹೇಳಿರುವುದನ್ನು ಗಮನಿಸಬಹುದಾಗಿದೆ;

ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೊ ರಾಜನ್ಯಃ ಕೃತಃ

ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತಃ ॥೧೨॥ *(ಶೇಷನವರತ್ನ, (ಅನು), ಮನುಸ್ಮೃತಿ, ಪು-೬೮, ೨೦೧೧).* ಅಂದರೆ ಬ್ರಹ್ಮನ ಮುಖದಿಂದ ಬ್ರಾಹ್ಮಣ, ತೋಳುಗಳಿಂದ ಕ್ಷತ್ರಿಯರು, ತೊಡೆಗಳಿಂದ ವೈಶ್ಯರು ಮತ್ತು ಪಾದಗಳಿಂದ ಶೂದ್ರರು ಜನಿಸಿದವರು. ಪ್ರಸ್ತುತ

ವಿಚಾರಸರಣಿಗೆ ವ್ಯತಿರಿಕ್ತವೆನಿಸಬಹುದಾದ ಚಾತುರ್ವರ್ಣದ ಪ್ರಸ್ತಾಪವು ಪ್ರಥಮ ಬಾರಿಗೆ (ಋಗ್ವೇದದಲ್ಲಿ) ಇಲ್ಲಿ ಬರುತ್ತದೆ. ಇದನ್ನು ಅಪಾರ್ಥ ಕಲ್ಪಿಸಿ ಜನ್ಮದಿಂದ ಜಾತಿ ಎಂದು ನಿರ್ಧರಿಸುವ ಯಾವ ಅವಶ್ಯಕತೆಯೂ ಇಲ್ಲ. ಮಾನಸಯಾಗದಂತೆ ಇಲ್ಲಿಯೂ ಮನುಷ್ಯ – ಸಮಾಜದ ವಿವಿಧ ಕರ್ತವ್ಯಗಳತ್ತ ಉಲ್ಲೇಖವಿದೆಯೇ ಹೊರತು, ಇದನ್ನು ಜಾತಿಸೂಚಕ–ವಾಚಕವಾಗಿ ವಿವರಿಸಬಾರದು. ಆದ್ದರಿಂದ ಪುರುಷಸೂಕ್ತವು ಜಾತಿಯತೆಯನ್ನು ಬಿತ್ತರಿಸದೇ ಸಾಮಾಜಿಕ ಕಾರ್ಯ ವ್ಯವಸ್ಥೆಯನ್ನು ಸೂಚಿಸುತ್ತದೆ. ಕನ್ನಡದ ನೆಲದಲ್ಲಿ ಹಿಂದಿನಿಂದ ಇಂದಿನವರೆಗೆ ಅನೇಕ ಜಾತಿಗಳು ಅಸ್ತಿತ್ವ ಪಡೆದಿವೆ. ಪ್ರಾದೇಶಿಕವಾಗಿ, ಜನಾಂಗಿಕವಾಗಿ ಸಾಕಷ್ಟು ಜಾತಿಗಳು ಅಂದಿನಿಂದ ಇಂದಿನವರೆಗೂ ಉಳಿದು, ಬೆಳೆದುಕೊಂಡು ಬಂದಿವೆ. ಆದರೆ ಪ್ರಾಚೀನ ಇತಿಹಾಸದ ಕಾಲಕ್ಕೆ ಕರ್ನಾಟಕದಲ್ಲಿ ಪರಂಪರಾಗತವಾಗಿ ಪ್ರಮುಖವಾಗಿ 'ಹದಿನೆಂಟು ಜಾತಿ' ಅಥವಾ 'ಅಷ್ಟಾದಶ ಜಾತಿ' ಎಂದು ಕರೆಯಲ್ಪಡುವ ಜಾತಿ ವ್ಯವಸ್ಥೆಯೊಂದು ಇದ್ದುದಾಗಿ ತಿಳಿದು ಬರುತ್ತದೆ. ಅಂದಿನ ಕಾಲ ಸಂದರ್ಭದಲ್ಲಿ ಖಂಡಿತವಾಗಿಯೂ ಹದಿನೆಂಟಕ್ಕೂ ಹೆಚ್ಚಿನ ಜಾತಿಗಳು ಸಮಾಜದಲ್ಲಿ ಇದ್ದಿರುವುದು ವಿದಿತ. ಆದರೂ ಸ್ಥೂಲವಾಗಿ 'ಹದಿನೆಂಟು ಜಾತಿ', 'ಅಷ್ಟಾದಶಜಾತಿ', ಹೊಲಿ ಹದಿನೆಂಟು ಜಾತಿ' ಎಂದು ಹೇಳುವುದು ಅಂದಿನಿಂದ ಇಂದಿನವರೆಗೂ ಉಳಿದುಕೊಂಡು ಬಂದಿದೆ. 'ಅಷ್ಟಾದಶ ಜಾತಿ ಅಥವಾ ಹದಿನೆಂಟು ಜಾತಿಗಳೆಂಬ ಉಲ್ಲೇಖ ನಮಗೆ ಶಾಸನಗಳಿಂದ ದೊರೆಯುತ್ತದೆ. ಆದರೆ, ಆ ಹದಿನೆಂಟು ಜಾತಿಗಳ ಕುರಿತಾದ ಯಾವುದೇ ವಿಸ್ತೃತ ಚರ್ಚೆ ಶಾಸನಗಳಲ್ಲಿ ದೊರೆಯುವುದಿಲ್ಲ. ಮುಂದೆ ೧೨ನೇಯ ಶತಮಾನದ ಅಂಬಿಗರ ಚೌಡಯ್ಯ, ಸೊಡ್ಡಳ ಬಾಚರಸರಂಥ ವಚನಕಾರರ ವಚನಗಳಲ್ಲಿ ಆ ಹದಿನೆಂಟು ಜಾತಿಗಳ ಪಟ್ಟಿಯೇ ದೊರೆಯುತ್ತವೆ' *(ಹದಿನೆಂಟು ಜಾತಿಗಳು, ವಿಜಯಶ್ರೀ ಇಟ್ಟಣ್ಣವರ, ಪು–೭, ೨೦೧೧).*

ಬಸವಣ್ಣನ ಸಮಕಾಲೀನನಾದ ಸೊಡ್ಡಳ ಬಾಚರಸನೆಂಬ ವಚನಕಾರನೂ ಸಹ ಹದಿನೆಂಟು ಜಾತಿಗಳ ಕುರಿತಾಗಿ ಮಾತಾಡುತ್ತಾನೆ.

"ಶಿಖಿ ಬ್ರಾಹ್ಮಣ, ನಯನ ಕ್ಷತ್ರಿಯ, ನಾಶಿಕ ಬಣಜಿಗ, ಅಧರ ಒಕ್ಕಲಿಗ,
ಕರ್ಣಗೊಲ್ಲ, ಕೊರಳು ಕುಂಬಾರ, ಬಾಹುಪಂಚಾಳ, ಅಂಗೈ ಉಪ್ಪಾರ,
ನಖ ನಾಯಿಂದ, ಒಡಲು ಡೊಂಬ, ಬೆನ್ನು ಅಗಸ, ಚರ್ಮ ಬೇಡ
ಪೃಷ್ಠ ಸ್ಥಾನ ಕಬ್ಬಿಲಿಗ, ಒಳದೊಡೆ ಹೊಲೆಯ,
ಮೊಣಕಾಲು ಈಳಿಗ, ಕಣಕಾಲು ಸಮಗಾರ,
ಮೇಗಾಲು ಮಚ್ಚಿಗ, ಚಲಪಾದವೆಂಬ ಅಂಗಾಲು ಶುದ್ಧಮಾದಿಗ ಕಾಣೀರೋ।
ಇಂತಿ ಹದಿನೆಂಟು ಜಾತಿ ತನ್ನಲ್ಲಿ ಉಂಟು.
ಇವು ಇಲ್ಲಾಯೆಂದು ಜಾತಿಗೆ ಹೋರುವ ಅಜ್ಞಾನಿಗಳ
ನಮ್ಮ ಸೊಡ್ಡಗಳ ದೇವರು ಮೆಚ್ಚನಯ್ಯಾ" *(ಸಮಗ್ರ ವಚನ ಸಂಪುಟಗಳು, ಜನಪ್ರಿಯ ಆವೃತ್ತಿ,ಪುಟ–೩೯೧, ೧೯೯೩).* ಹೀಗೆ ಸೊಡ್ಡಳ ಬಾಚರಸನು ಶಿಖಿಬ್ರಾಹ್ಮಣನಿಂದ – ಅಂಗಾಲು

ಶುದ್ಧ ಮಾದಿಗನವರೆಗೆ ಹದಿನೆಂಟು ಜಾತಿಗಳನ್ನು ಹೆಸರಿಸುತ್ತಾನೆ. ಜೊತೆಗೆ 'ಇಂತಿ ಹದಿನೆಂಟು ಜಾತಿ' ತನ್ನಲ್ಲಿ ಉಂಟು' ಎಂದು ಹೇಳುವುದರ ಮೂಲಕವಾಗಿ ಎಲ್ಲ ಮನುಷ್ಯರೂ ಸಾಮಾನ್ಯವಾಗಿ ಎಲ್ಲ ಜಾತಿಗಳನ್ನು ತಮ್ಮೊಳಗಡೆ ಒಳಗೊಂಡಿರುತ್ತಾರೆ ಎನ್ನುವುದು ಬಾಚರಸನ ಅಭಿಪ್ರಾಯ. ಸೊಡ್ಡಳ ಬಾಚರಸನ ಹದಿನೆಂಟು ಜಾತಿಗಳ ಈ ಪಟ್ಟಿಯು ಹೆಚ್ಚು ವಿಶಾಲ ವ್ಯಾಪ್ತಿ ಮತ್ತು ದೃಷ್ಟಿಕೋನದಿಂದ ಹೆಸರಿಸಿದ್ದಾಗಿದೆ. ಸಾಮಾಜಿಕವಾಗಿ ಅಸ್ತಿತ್ವದಲ್ಲಿದ್ದ ಜಾತಿಗಳನ್ನೇ ಇವರು ಹೇಳುತ್ತಾರೆ ನಿಜ. ಹಾಗೇ ಹೇಳುವ ಮೂಲಕವೇ ಸಾಮಾಜಿಕವಾಗಿ ಆಯಾ ಜಾತಿಗಳ ಹಿಂದಿರುವ ಮೇಲು-ಕೀಳುಗಳನ್ನು ಕಂಡ ಇವರು ಸಮಾಜಕ್ಕೆ ಜಾತಿಯ ಕುರಿತಾಗಿ ಹೊಸದೊಂದು ವ್ಯಾಖ್ಯಾನವನ್ನು ಇಂಥ ವಚನಗಳ ಮೂಲಕ ಕೊಡಬಯಸಿದ್ದಾರೆ.

ಅಷ್ಟಾದಶ ಜಾತಿಯ ಕುರಿತಾಗಿ ಶರಣರು ಮಾತನಾಡಿದ ಮೇಲೆ ೪ ಮತ್ತು ೫ನೇಯ ಶತಮಾನಗಳವರೆಗೆ ಮೌನವಿದ್ದು, ಮುಂದೆ ಚಿಕ್ಕದೇವರಾಯನ ಯಶೋಭೂಷಣವು ಹದಿನೆಂಟು ಜಾತಿಗಳ ಪಟ್ಟಿಯನ್ನು ಪ್ರಸ್ತಾಪಿಸುತ್ತದೆ. ಆ ಜಾತಿಗಳು ಅನುಕ್ರಮವಾಗಿ ಈ ಮುಂದಿನಂತಿವೆ ೧. ಬ್ರಾಹ್ಮಣ, ೨. ಕ್ಷತ್ರಿಯ, ೩. ವೈಶ್ಯ, ೪. ಬಗಾಜಿಗ, ೫. ಲಿಂಗವಂತ, ೬. ಗಂಗಡಿಕಾರ, ಅಥವಾ ಒಕ್ಕಲಿಗ, ೭. ಮಡಿವಾಳ, ೮. ಕೆಲಸಿಗ, ೯. ಕುಱುಬ, ೧೦. ಕುಂಬಾರ, ೧೧. ಕಟುಕ, ೧೨. ಬಡಗಿ, ೧೩. ಅಕ್ಕಸಾಲೆ, ೧೪. ತೊರೆಯ, ೧೫. ಉಪ್ಪಾರ, ೧೬, ಬೆಸ್ತ, ೧೭ ಹೊಲೆಯ, ೧೮. ಮಾದಿಗ *(ನಾರಾಯಣ ಪಿ ವಿ , ವಚನ ಸಾಹಿತ್ಯ, ಪುಟ-೬೮,೧೯೮೩).*

ಈ ಪಟ್ಟಿಯ ವಿಶೇಷತೆಯೆಂದರೆ, ಇಲ್ಲಿ ಅಂಬಿಗರ ಚೌಡಯ್ಯನಲ್ಲಾಗಲಿ, ಸೊಡ್ಡಳ ಬಾಚರಸನಲ್ಲಾಗಲಿ ಕಾಣಿಸಿಕೊಳ್ಳವ ಕ್ಷತ್ರಿಯ ಎಂಬ ಜಾತಿ ಅಷ್ಟಾದಶ ಜಾತಿಯಲ್ಲಿ ೨ನೇಯ ಸ್ಥಾನ ಪಡೆದಿರುವುದು ಗಮನಾರ್ಹ ಸಂಗತಿ. ಹನ್ನೆರಡನೆಯ ಶತಮಾನದಲ್ಲಿ ವೀರಶೈವವೆಂಬುದು ಧರ್ಮವಾಗಿ ಆ ಜಾತಿ, ಈ ಜಾತಿ ಎನ್ನದೆ ಎಲ್ಲರಿಗೂ ಲಿಂಗದ ಸಂಸ್ಕಾರ ನೀಡಿ ಸಮಾನತೆಯ ಸಂದೇಶ ಸಾರಿತು. ಆದರೆ ಮುಂದೆ ೫-೬ನೆಯ ಶತಮಾನಗಳ ಅಂತರದಲ್ಲಿ ಸುಮಾರು ೧೭-೧೮ನೆಯ ಶತಮಾನದಲ್ಲಿ ರಚಿತವಾದ 'ಯಶೋಭೊಷಣ'ದ ಕಾಲಕ್ಕಾಗಲೀ 'ಲಿಂಗವಂತ' ಎಂಬುದು ಧರ್ಮದ ವ್ಯಾಪಕಾರ್ಥವನ್ನು ಕಳೆದುಕೊಂಡು ಹತ್ತರಲ್ಲಿ ಹನ್ನೊಂದೆಂಬಂತೆ ಜಾತಿ ಸ್ವರೂಪವನ್ನು ಪಡೆದುಕೊಂಡು ಹದಿನೆಂಟು ಜಾತಿಗಳಲ್ಲಿ ಒಂದಾಗಿ ಸ್ಥಾನ ಪಡೆದುದು ವಿಪರ್ಯಾಸದ ಸಂಗತಿ. ಇನ್ನೊಂದು ಸಂಗತಿಯೆಂದರೆ, ಮೈಸೂರು ಭಾಗದಲ್ಲಿ ಪ್ರಾದೇಶಿಕವಾಗಿ ಪ್ರಾಬಲ್ಯ ಹೊಂದಿದ ಗಂಗಡಿಕಾರ ಒಕ್ಕಲಿಗರು, ಹದಿನೆಂಟು ಜಾತಿಗಳ ಪಟ್ಟಿಯಲ್ಲಿ ಸ್ಥಾನ ಪಡೆದಿರುವರು.

ಹೀಗೆ ಅಂಬಿಗರ ಚೌಡಯ್ಯ, ಸೊಡ್ಡಳ ಬಾಚರಸ, ಚಿಕ್ಕದೇವರಾಯ ಮೂವರಲ್ಲಿ ದೊರೆಯುವ ಹದಿನೆಂಟು ಜಾತಿಗಳ ಪಟ್ಟಿಯಲ್ಲಿ ಏಕರೂಪತೆ ಕಂಡುಬರುವುದಿಲ್ಲ. ಎಲ್ಲರೂ ತಮ್ಮ ತಮ್ಮ ಭೌಗೋಳಿಕ ಪ್ರದೇಶ ಮತ್ತು ಆಯಾ ಕಾಲಕ್ಕೆ ಪ್ರಚಲಿತವಿರುವ ಜಾತಿಗಳನ್ನು ಹೆಸರಿಸಿರುವುದು ಕಂಡುಬರುತ್ತದೆ. ಇದೇ ಕಾರಣಕ್ಕಾಗಿ ಪ್ರತಿಯೊಬ್ಬರ ಹದಿನೆಂಟು ಜಾತಿಗಳ ಪಟ್ಟಿಯೂ ಇನ್ನೊಬ್ಬರಿಂದ ಭಿನ್ನವಾಗಿ ಇದೆ.ಯಾವುದೇ ಭಾಷೆಯು ತನ್ನ ಸಮಾಜ, ಸಾಹಿತ್ಯ, ಸಂಸ್ಕೃತಿಯ ವಿಶಿಷ್ಟ ಅಂಶಗಳನ್ನು ತನ್ನಲ್ಲಿ

ಹಿಡಿದಿಟ್ಟಿರುತ್ತದೆ. ಸಂಸ್ಕೃತಿಯ ಪ್ರತಿಬಿಂಬವಾದ ಭಾಷೆಯಲ್ಲಿನ ಎಲ್ಲ ಶಬ್ದಗಳು ನಿಘಂಟುಗಳಲ್ಲಿ ಸಂಗ್ರಹಗೊಂಡಿರುತ್ತವೆ. ಈ ಕಾರಣಕ್ಕಾಗಿಯೇ ಶಬ್ದಕೋಶಗಳು, ನಿಘಂಟುಗಳಲ್ಲಿ ಯಾವುದೇ ಅಧ್ಯಯನದಲ್ಲಿ ಮುಖ್ಯವಾಗುತ್ತವೆ. ಅಂತೆಯೇ ಹದಿನೆಂಟು ಜಾತಿ ಅಥವಾ ಅಷ್ಟಾದಶ ಜಾತಿಯ ಪದ ಬೇರೆ ಬೇರೆ ನಿಘಂಟುಗಳಲ್ಲಿ ಸ್ಥಾನ ಪಡೆದಿದೆ. ಹೀಗಾದಾಗ ಆಯಾ ನಿಘಂಟುಗಳ ವ್ಯಾಪ್ತಿಯೊಳಗಡೆ 'ಹದಿನೆಂಟು ಜಾತಿ' ಪದ ಮತ್ತು ಅದರೊಳಗಿನ ಜಾತಿಗಳು ತನ್ನದೇ ಆದ ಅರ್ಥ ವಿಸ್ತಾರತೆಯ ಪಡೆದುಕೊಳ್ಳುತ್ತದೆ.

ಭಾರತದ ಮೊದಲ ನಿಘಂಟುವೆಂದು ಹೆಸರುವಾಸಿಯಾದ ಅಮರಕೋಶ ಅಥವಾ ನಾಮಲಿಂಗಾಗಳ ಶಾಸನವೆಂಬ ಕೃತಿ ರಚಿತವಾದದ್ದು, ಅಮರಸಿಂಹನಿಂದ ಕಾಲಕ್ಕನುಗುಣವಾಗಿ ಅಮರಕೋಶವು ಚಾತುವರ್ಣಗಳನ್ನು ಹೇಳುತ್ತದೆಯೇ ಹೊರತಾಗಿ ಜಾತಿಗಳನ್ನಲ್ಲ.

ಬ್ರಹ್ಮ ವರ್ಗದಲ್ಲಿ 'ಬ್ರಾಹ್ಮಣ'ನನ್ನು ಹೇಳುತ್ತಾನೆ. *(ಲೂಯಿಸ್‌ರೈಸ್, (ಸಂ), ಅಮರಕೋಶ, ಪುಟ-೧೮, ೧೯೯೦).*

ಕ್ಷತ್ರಿಯ ವರ್ಗದಲ್ಲಿ 'ಕ್ಷತ್ರಿಯ ಜಾತಿ' ಎನ್ನುವನು *(ಅದೇ, ಪುಟ-೧೧೧).*

ವೈಶ್ಯವರ್ಗದಲ್ಲಿ 'ಕೋಮಟಿ, ವೈಶ್ಯ' ಎಂದು ಹೇಳುವನು *(ಅದೇ, ಪುಟ-೧೨೯).*

ಶೂದ್ರ ವರ್ಗದಲ್ಲಿ ಅನೇಕರನ್ನು ಹೆಸರಿಸುವನು. ಉದಾಹರಣೆಗೆ ಮಾಲಾಕಾರ, ಕುಂಭಕಾರ, ಚರ್ಮಕಾರ, ದಜಾಜೀವಿ, (ಕುರುಬ) ಹೊಲೆಯನು, ಸಾಣಿಗಾರ, *(ಅದೇ, ಪುಟ-೧೪೮-೧೫೦).* ಹೀಗೆ ಸರಿಸುಮಾರು ೩೬ ವೃತ್ತಿ ಸಮುದಾಯಗಳನ್ನು ಅಮರಕೋಶ ಹೆಸರಿಸುತ್ತದೆ. ಇಲ್ಲಿ ವೃತ್ತಿ ಗುಂಪುಗಳಾಗಿ ದೊರೆಯುವವುಗಳಲ್ಲಿ ಅನೇಕ, ಮುಂದೆ ಹದಿನೆಂಟು ಜಾತಿಗಳಿಗಿಂತ ಹೆಚ್ಚಿನ ಜಾತಿಗಳಾಗಿ ಬದಲಾಗಿದ್ದು, ಕಂಡುಬರುತ್ತದೆ. ಈ ಎಲ್ಲ ವೃತ್ತಿ ಸಮುದಾಯಗಳನ್ನು ಅಂದು ಅಮರಕೋಶಕಾರ ಚಾತುರ್ವರ್ಣಗಳಲ್ಲಿ ಶೂದ್ರವರ್ಗಕ್ಕೆ ಸೇರಿಸಿರುವನು. ಅಮರಕೋಶವು ತನ್ನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ನಾಲ್ಕು ವರ್ಣಗಳಲ್ಲಿ ಮನುಷ್ಯರನ್ನು ವಿಭಾಗಿಸಿದೆ. ಬ್ರಾಹ್ಮಣ ಕ್ಷತ್ರಿಯ ವೈಶ್ಯ, ಈ ಮೂವರನ್ನುಳಿದು ಉಳಿದೆಲ್ಲ ವೃತ್ತಿ ಗುಂಪುಗಳು ಅಂದರೆ ಶೂದ್ರ ಅಥವಾ ತಳವರ್ಗಕ್ಕೆ ಸೇರಿಸಲ್ಪಟ್ಟವಾಗಿದ್ದವೆನ್ನುವುದು ಗಮನಾರ್ಹ. ಅಮರಕೋಶದ ಕಾಲಕ್ಕಿನ್ನು ಜಾತಿ ರೂಪ ಪಡೆದುಕೊಂಡಿರದೇ ವೃತ್ತಿ ಆಧಾರದ ಮೇಲಿಂದಲೇ ಮನುಷ್ಯರನ್ನು ವರ್ಗೀಕರಿಸಿರುವುದು ಕಂಡುಬರುತ್ತದೆ. ಈ ವೃತ್ತಿ ಸಮೂಹಗಳೇ ಮುಂದೆ ಜಾತಿ ಸ್ವರೂಪವನ್ನು ಪಡೆದುಕೊಂಡು ಹದಿನೆಂಟು ಜಾತಿಗಳಲ್ಲಿ ಅನೇಕ ಜಾತಿಗಳು ಸ್ಥಳ ಪಡೆದರೆ, ಕೆಲವು ಜಾತಿಗಳು ಹದಿನೆಂಟು ಜಾತಿಗಳಿಂದ ಹೊರಗೆ ಉಳಿದವು.

ಶಾಸನ ಶಬ್ದ ಕೋಶಮು ತೆಲಗು ಶಬ್ದ ಕೋಶವೊಂದು ಹದಿನೆಂಟು ಜಾತಿಗಳ ಪಟ್ಟಿಯನ್ನು ಉಲ್ಲೇಖಿಸುತ್ತದೆಂದು ನಾರಾಯಣ ಪಿ ವಿ ಹೇಳುತ್ತಾರೆ. ಹದಿನೆಂಟು ಜಾತಿಗಳ ಪಟ್ಟಿ ಈ ಮುಂದಿನ ಅನುಕ್ರಮದಲ್ಲಿದೆಯೆಂದು ಅವರು ಹೇಳುವರು. ೧. ಬ್ರಾಹ್ಮಣ, ೨. ಕ್ಷತ್ರಿಯ, ೩. ವೈಶ್ಯ, ೪. ಶೂದ್ರ, ೫. ವ್ಯವಹಾರಿಕ(ಬಣಜಿಗ), ೬. ಗೋರಕ್ಷಕ(ಗೊಲ್ಲ), ೭. ಶಿಲ್ಪಕ(ಶಿಲ್ಪಿ), ೮. ಪಂಚಾಣ(ಪಂಚಾಳ),

೯. ಕುಂಭಕಾರ(ಕುಂಬಾರ), ೧೦. ತುಂತುವಾಯ (ನೇಕಾರ), ೧೧. ಕ್ಷೌರಿಕ, ೧೨. ರಜಕ (ಅಗಸ), ೧೩. ವಸ್ತ್ರಚ್ಛೇದಕ(ಸಿಂಪಿಗ), ೧೪. ಚರ್ಮಕಾರ, ೧೫. ತಿಲಘೌತಕ (ಗಾಣಿಕ), ೧೬. ಲುಬ್ಧಕ(ಬೇಡ), ೧೭. ಚಂಡಾಲ, ೧೮. ಮಾತಂಗ (ನಾರಾಯಣ ಪಿ ವಿ , ವಚನ ಸಾಹಿತ್ಯ, ಪುಟ-೬೮, ೧೯೮೩). ವಿಶೇಷವೆಂದರೆ ವರ್ಣವ್ಯವಸ್ಥೆಯಲ್ಲಿನ ನಾಲ್ಕು ವರ್ಣಗಳು ಈ ಪಟ್ಟಿಯಲ್ಲಿ ನಾಲ್ಕು ಜಾತಿಗಳಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರವೆಂದು ಅನುಕ್ರಮವಾಗಿ ಸೇರಿಸಲ್ಪಟ್ಟಿವೆ. ಉಳಿದಂತೆ ಹದಿನಾಲ್ಕು ಜಾತಿಗಳನ್ನು ಸಂಸ್ಕೃತದ ಪದಗಳಿಂದ ಹೆಸರಿಸಲಾಗಿದೆ. ಆದರೆ ಹದಿನೆಂಟು ಜಾತಿಗೆ ಸಮಾನವಾಗಿ ತೆಲುಗಿನಲ್ಲಿ ಪದವೇನೆಂಬುದು ಇಲ್ಲಿ ಸ್ಪಷ್ಟವಾಗುವುದಿಲ್ಲ. ಸಂಸ್ಕೃತದ ಪದಗಳನ್ನು ಹೊರತುಪಡಿಸಿದರೆ, ತೆಲುಗಿನ ಶಬ್ದಕೋಶದ ಈ ಪಟ್ಟಿ ಬಹುತೇಕ ಸೊಡ್ಡಳ ಬಾಚರಸನ ಪಟ್ಟಿಯನ್ನೇ ಹೋಲುತ್ತದೆ. ತೆಲುಗಿನ ಈ ಶಬ್ದಕೋಶದಲ್ಲಿ ಹದಿನೆಂಟು ಜಾತಿಗಳ ಪಟ್ಟಿ ಇಷ್ಟು ವ್ಯವಸ್ಥಿತವಾಗಿ ದೊರೆಯುತ್ತದೆಂದರೆ, ಆ ಭಾಷಾ ಸಮುದಾಯದಲ್ಲಿಯೂ 'ಹದಿನೆಂಟು ಜಾತಿ'ಗಳು ಎಂಬ ಜಾತಿ ಪದ್ಧತಿ ರೂಢಿಗತವಾಗಿದ್ದಿರಬಹುದು ಎನ್ನುವುದಕ್ಕೆ ಈ ಉಲ್ಲೇಖ ಅವಕಾಶ ಮಾಡಿಕೊಡುತ್ತದೆ. 'ಹದಿನೆಂಟು ಜಾತಿ'ಗಳ ವ್ಯವಸ್ಥೆ ತೆಲುಗಿನಲ್ಲಿ ತುಂಬ ವ್ಯವಸ್ಥಿತವಾಗಿತ್ತೆನ್ನುವುದಕ್ಕೆ ಇನ್ನೊಂದು ಅಂಶವೂ ಪುಷ್ಟಿ ನೀಡುತ್ತದೆ.

"ಲೋಕಾನಾಂತು ವಿವೃಧ್ಯರ್ಥ ಮುಖ ಬಾಹುರೂಪಾದತಃ।

ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂ ಚ ನಿರವರ್ತಯತ್"॥ *(ಚಕ್ರಕೋಡಿ ಈಶ್ವರಶಾಸ್ತ್ರೀ, (ಅನು), ಮನುಸ್ಮೃತಿ, ಪುಟ-೧೮, ೧೯೮೨).* 'ಬ್ರಾಹ್ಮಣ ಮುಖವೆಂದು, ಕ್ಷತ್ರಿಯ ಬಾಹುವೆಂದೂ, ವೈಶ್ಯ ಊರುಸ್ತಂಭ ಹಾಗೂ ಶೂದ್ರ ಪಾದದಂತೆ ಆಧಾರವೆಂದೂ ಹೇಳುತ್ತಾನೆ. ಹೀಗೆ ಹೇಳವುದರಲ್ಲಿಯೇ ಆಯಾ ವರ್ಣದವರು ಮಾಡುವ ಕಾರ್ಯಗಳು ನಿರ್ಧಾರಿತವಾದದ್ದು, ತಿಳಿದುಬರುತ್ತದೆ. ತಲೆಯ ಕೆಲಸವಾದ ಬುದ್ಧಿಯ ಕಾರ್ಯಗಳು ಬ್ರಾಹ್ಮಣನದು, ಕೈಯ ಕೆಲಸ ರಕ್ಷಣಾಕಾರ್ಯ, ಕ್ಷತ್ರಿಯನದು, ಕಾಲಿನ ಕೆಲಸವಾದ ಪ್ರಮಾಣ ವೈಶ್ಯನದು. ಪಾದದ ಕೆಲಸ ಇಡೀ ಶರೀರವನ್ನು ಹೊರುವುದು, ಅಂತೆಯೇ ಶೂದ್ರರದು, ಮೇಲಿನವರ ಸೇವಾಕಾರ್ಯ. ಇದು ಮನುವೊಬ್ಬನ ಅಭಿಪ್ರಾಯವಾಗಿರದೇ ಹಿಂದೂ ಧರ್ಮದ ನಂಬುಗೆಯಾಗಿ ತಲೆತಲಾಂತರದಿಂದ ಉಳಿದು, ಬೆಳೆದುಕೊಂಡುಬಂದಿದೆ. ಚಾತುರ್ವರ್ಣದವರ ಕರ್ತವ್ಯಗಳನ್ನು ಹಿಂದೂ ಧರ್ಮಶಾಸ್ತ್ರಗಳು ನಿರ್ದಿಷ್ಟ ಪಡಿಸಿದ ಪರಿಯನ್ನು ಹೀಗೆ ನೋಡಬಹುದು' *(ಹದಿನೆಂಟು ಜಾತಿಗಳು, ವಿಜಯಶ್ರೀ ಇಟ್ಟಣ್ಣವರ, ಪು-೨, ೨೦೧೧).*

"ಬ್ರಾಹ್ಮಣನಿಗೆ ಕಲಿಸುವುದು, ಕಲಿಯುವುದು, ಹೋಮ ಮಾಡುವುದು, ಮಾಡಿಸುವುದು, ಕೊಡುವುದು, ತೆಗೆದುಕೊಳ್ಳುವುದು-ಆರುಕರ್ತವ್ಯಗಳು.

ಕ್ಷತ್ರಿಯನಿಗೆ ಯಜನ, ಅಧ್ಯಯನ, ದಾನಗಳು ಮಾತ್ರ" *(ಚಕ್ರಕೋಡಿ ಈಶ್ವರಶಾಸ್ತ್ರೀ, (ಅನು), ಮನುಸ್ಮೃತಿ, ಪುಟ-೪೬೪, ೧೯೮೨).*

"ಕ್ಷತ್ರಿಯನಿಗೆ ಶಸ್ತ್ರಾಸ್ತ್ರ, ವೈಶ್ಯನಿಗೆ ವಾಣಿಜ್ಯ, ಪಶುಪಾಲನೆ ಕೃಷಿ ಇವು ಜೀವನಗಳು" ಮತ್ತು

"ಬ್ರಾಹ್ಮಣನಿಗೆ ವೇದಾಭ್ಯಾಸ, ಕ್ಷತ್ರಿಯನಿಗೆ ದೇಶ ರಕ್ಷಣೆ, ವೈಶ್ಯನಿಗೆ ಕೃಷಿ ಇವು ವಿಶೇಷ ಕರ್ಮಗಳು" *(ಚಕ್ರಕೋಡಿ ಈಶ್ವರಶಾಸ್ತ್ರೀ, (ಅನು), ಮನುಸ್ಮೃತಿ, ಪುಟ-೪೬೫, ೧೯೮೨).*

ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್।

ದಾನಮೀಶ್ವರ ಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್॥೪೩॥ *(ಶೇಷಗಿರಿ ರಾವ್ ಎಲ್ ಎಸ್, (ಅನು), ಭಗವದ್ಗೀತಾ, ಪುಟ-೭೫೯, ೧೯೮೯).* ಶೌರ್ಯ, ತೇಜಸ್ಸು, ದೃಢಸಂಕಲ್ಪ, ದಕ್ಷತೆ, ಯುದ್ಧದಲ್ಲಿ ಧೈರ್ಯ, ಔದಾರ್ಯ ಮತ್ತು ನಾಯಕತ್ವ ಇವು ಕ್ಷತ್ರಿಯರಿಗೆ ಕೆಲಸ ಮಾಡಲು ಸಹಜ ಗುಣಗಳಾಗಿವೆಂಬದನ್ನು ಮೇಲಿನ ಶ್ಲೋಕದಿಂದ ತಿಳಿಯಬಹುದು.

"ವೈಶ್ಯನಿಗೆ ಕೃಷಿ, ಗೋರಕ್ಷೆ, ವಾಣಿಜ್ಯಗಳೆಂದು, ಶೂದ್ರನಿಗೆ ಪರಿಚರ್ಯಾಕರ್ಮ"ವೆಂದು ಹೇಳಿದೆ *(ಶೇಷಗಿರಿ ರಾವ್ ಎಲ್ ಎಸ್, ಭಗವದ್ಗೀತಾ, ಪುಟ-೭೫೯, ೧೯೮೯).*

"ಪರಾಶರನು ಶೂದ್ರನು ಲವಣ, ಮಧು, ತೈಲ, ದಧಿ, ತಕ್ರ, ಘೃತ, ಕ್ಷೀರ ಮುಂತಾದುವನ್ನು ವಿಕ್ರಮ ಮಾಡಬಹುದೆಂದು ಹೇಳಿದ್ದಾನೆ" *(ಅ ನ ಕೃಷ್ಣರಾಯರು, (ಸಂ), ಭಾರತೀಯ ಸಂಸ್ಕೃತಿ ದರ್ಶನ, ಪುಟ-೫೫, ೧೯೬೨).* ಈ ರೀತಿಯಾಗಿ ಹಿಂದೂ ಧರ್ಮಶಾಸ್ತ್ರಗಳು ನಾಲ್ಕೂ ವರ್ಣಗಳಿಗೆ ತಮ್ಮದೇ ಆದ ಕಾರ್ಯಗಳನ್ನು ನಿರ್ದಿಷ್ಟ ಪಡಿಸಿದುದು, ಸ್ಪಷ್ಟವಾಗುತ್ತದೆ. ಸನಾತನ ಹಿಂದೂಧರ್ಮದಲ್ಲಿದ್ದ ನಾಲ್ಕು ವರ್ಣಗಳ ನಡುವೆ ವೇದ ಕಾಲದಲ್ಲಿ 'ವರ್ಣಸಂಕರ'ವು ನಿಷಿದ್ಧವಾಗಿರಲಿಲ್ಲವೆಂಬುದು, ಗಮನಾರ್ಹ ಅಂಶ. ಕಾಲದಿಂದ ಕಾಲಕ್ಕೆ ಆಯಾ ವರ್ಣದವರ ಕೆಲಸಗಳು ಹೆಚ್ಚು ನಿರ್ದಿಷ್ಟ ಮತ್ತು ಸ್ಪಷ್ಟವಾಗುತ್ತ ಬಂದವು. ಆದರೆ ಕಾಲಾಂತರದಲ್ಲಿ ವರ್ಣಗಳು ವ್ಯಾಪಕವಾಗಿ ಸ್ಥಿರಗೊಂಡಂತೆ ಅವುಗಳ ನಡುವಿನ ಸಾಮರಸ್ಯ ಮರೆಯಾಗಿ ತಾರ್‍ಯತಮಭಾವ ಪ್ರಬಲವಾಗುತ್ತ ಬಂದು ಕ್ರಿ.ಶ. ೬೦೦ರ ಹೊತ್ತಿಗೆ ನಿಧಾನಗತಿಯಲ್ಲಿ 'ಜಾತಿ' ಸ್ವರೂಪ ಪಡೆಯತೊಡಗಿತು.

"ಗೌತಮ ಮತ್ತು ಮನುಗಳು ಹೇಳುವಂತೆ ವಿವಿಧ ವರ್ಣಗಳ ಮಧ್ಯ ನಡೆಯುವ ಮದುವೆಗಳಿಂದ ಮಿಶ್ರಜಾತಿಗಳು, ಈ ಮಿಶ್ರಜಾತಿಗಳ ಮಧ್ಯ ನಡೆಯುವ ಮದುವೆಗಳಿಂದ ಇನ್ನೂ ಹೆಚ್ಚಿನ ಉಪಜಾತಿಗಳೂ ನಿರ್ಮಾಣಗೊಳ್ಳುತ್ತವೆ. ಅವರ ಪ್ರಕಾರ 'ವರ್ಣಸಂಕರ'ವೇ ಜಾತಿಗಳೂ ಉಗಮಕ್ಕೆ ಮೂಲ. ಪರಂಪರಾಗತವಾಗಿ ಬೇರೆ ಬೇರೆ ವೃತ್ತಿಗಳನ್ನು ಅನುಸರಿಸುತ್ತಿದ್ದ ಗುಂಪುಗಳು ತಮ್ಮ ವೃತ್ತಿ ರಹಸ್ಯಗಳನ್ನು ತಮ್ಮ ಗುಂಪಿನವರಲ್ಲದೇ ಬೇರೆಯವರಿಗೆ ಬಿಟ್ಟು ಕೊಡದೆ ತಮ್ಮ ತಮ್ಮಲ್ಲೇ ಮದುವೆಯಾಗುತ್ತ ಬಂದುದರ ಪರಿಣಾಮವೇ ಬೇರೆ ಬೇರೆ ಜಾತಿಗಳ ಹುಟ್ಟಿಗೆ ಕಾರಣವಾಗಿರಬೇಕು" *(ಚಿದಾನಂದಮೂರ್ತಿ ಎಂ, ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಪುಟ-೯, ೧೯೮೫).* ಇದು ಒಂದು ಕಾರಣ. ಜಾತಿಗಳ ಉಮಗಕ್ಕೆ ಇನ್ನೂ ಒಂದು ಕಾರಣವನ್ನು ಹೀಗೂ ಕಂಡುಕೊಳ್ಳಬಹುದು. ಕೌಟಿಲ್ಯ ಹೇಳುವಂತೆ "ಚೆನ್ನಾಗಿ ಉತ್ತ ಆಯಾಯಾ ಬೆಳೆಗಳಿಗನುಕೂಲವಾದ ಗದ್ದೆಗಳಲ್ಲಿ ದಾಸರಿಂದ ಕೆಲಸದವರಿಂದ ದಂಡನೆಯನ್ನು ಕೊಡಲು ಶಕ್ತರಾಗಿ ಒಪ್ಪಿಕೊಂಡವರಿಂದ ಬಿತ್ತಿಸಬೇಕು ಮತ್ತು ಕಮ್ಮಾರರೇ ಮೊದಲಾದವರ ದೋಷದಿಂದ ಕೃಷಿಯು ನಷ್ಟವಾದರೆ, ಹಾನಿಯುಂಟಾದಷ್ಟು ದಂಡನೆ" *(ಕೃಷ್ಣಭಟ್ಟ ಕೆ, (ಅನು), ಕೌಟಿಲ್ಯನ ಅರ್ಥಶಾಸ್ತ್ರ, ಪುಟ-೧೯೩, ೧೯೨೭).* ಅಂದಾಗ ಈ ರೀತಿಯ ವೃತ್ತಿದೋಷದಿಂದುಂಟಾಗುವ ನಷ್ಟಕ್ಕೆ ಪ್ರಾಚೀನ ಭಾರತದಲ್ಲಿ ದಂಡನೆಯಿತ್ತೆಂಬುದು ವಿದಿತ. ಇದೂ ಸಹ ಜಾತಿಗಳ ಉಗಮಕ್ಕೆ ಸ್ವಲ್ಪಮಟ್ಟಿಗಾದರೂ ಕಾರಣವಾಗುತ್ತದೆ. ಮನುಷ್ಯ ಯಾವಾಗಲೂ ತಾನು

ಮಾಡುವ ತಪ್ಪಿಗಾಗಿ ಶಿಕ್ಷೆ, ದಂಡನೆಯಿದ್ದರೆ ಹೆಚ್ಚು ಜಾಗರೂಕನಾಗುತ್ತಾನೆ. ಮಾಡುವ ಕೆಲಸದಲ್ಲಿ ಪ್ರಾವೀಣ್ಯನಾಗುತ್ತಾನೆ ಮತ್ತು ವೃತ್ತಿಯಲ್ಲಿ ತನ್ನದೇ ಆದ ಕೌಶಲ್ಯಗಳನ್ನು ರೂಢಿಸಿಕೊಳ್ಳುತ್ತಾನೆ. ತನ್ನ ಪ್ರಾವೀಣ್ಯತೆ, ಕೌಶಲ್ಯಗಳನ್ನು ರಹಸ್ಯವಾಗಿ ಕಾಪಾಡಿಕೊಳ್ಳುವುದು, ಮತ್ತು ಅವನ್ನು ತನ್ನ ಮುಂದಿನ ಪೀಳಿಗೆಗೆ ವರ್ಗಾಯಿಸುವುದು ಮನುಷ್ಯ ಸಹಜಗುಣ. ಇದೇ ಕಾರಣಕ್ಕಾಗಿ ಒಂದೊಂದು ವೃತ್ತಿಯೂ ತನ್ನದೇ ಆದ ಗೋಡೆಗಳನ್ನು ನಿರ್ಮಿಸಿಕೊಂಡು ಅದೇ ಪರಿಧಿಯಲ್ಲಿ ವೃತ್ತಿ ಮತ್ತು ಸಂಬಂಧಗಳನ್ನು ಬೆಳೆಯಿಸತೊಡಗಿದವು. ಹೀಗಾದಾಗ ಚಾತುರ್ವರ್ಣದ ಯಾವುದೋ ಒಂದು ವರ್ಣದಲ್ಲಿದ್ದ ವೃತ್ತಿ ಕಾಲಾಂತರದಲ್ಲಿ ಜಾತಿಯಾಗಿ ರೂಪಗೊಳ್ಳುತ್ತದೆ. ಸಮಾಜಶಾಸ್ತ್ರಜ್ಞರಾದ ಸ್ಲೇಟ್‌ರವರ 'ಸಮೂಹದೊಳಗಿನ ಕಸುಬುಗಳ ರಹಸ್ಯವನ್ನು ಕಾಪಾಡಿಕೊಂಡು ಬರಲು ಅಂತರಜಾತಿಯ ವಿವಾಹಗಳನ್ನು ತಡೆಹಿಡಿಯಲಾಯಿತು. ಜೊತೆಗೆ ಉದ್ಯೋಗ ಮತ್ತು ಜನಾಂಗೀಯ ಅಂಶಗಳು ಜೊತೆಗೂಡಿ ಜಾತಿ ಉಗಮವಾಗಿದೆ' *(ಲಕ್ಕಪ್ಪಗೌಡ ಎಚ್ ಜೆ, (ಪ್ರಸಂ), ಜಾನಪದ ಕೈಪಿಡಿ ಪುಟ–೧೯೭).* ಎಂಬ ವಾದವು ಮೇಲಿನ ಮಾತನ್ನು ಪುಷ್ಟೀಕರಿಸುತ್ತದೆ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರವೆಂಬ ನಾಲ್ಕು ವರ್ಣಗಳಿಂದ ಕ್ರಮೇಣ ಅನೇಕ ಜಾತಿ, ಉಪಜಾತಿಗಳು ರೂಪಗೊಂಡವು. ವೃತ್ತಿ ವಿವಿಧತೆಗಳಿಂದ ಭೇದ ಕಲ್ಪಿಸಿಕೊಂಡು ಜಾತಿಗಳಾದವು. ಈ ಜಾತಿಗಳು ವಂಶಪಾರಂಪರ್ಯವಾಗಿ ಬೆಳೆದು ಬಂದು ತಮ್ಮದೇ ಆದ ಸಂಪ್ರದಾಯ, ಆಚಾರ, ವಿಚಾರಗಳನ್ನು ಬೆಳೆಯಿಸಿಕೊಂಡವು. ಜೊತೆಗೆ ಪ್ರತಿ ಜಾತಿಯೂ ಇತರ ಜಾತಿಯ ಜನರೊಂದಿಗೆ ವಿವಾಹ, ಊಟ, ಸಾಮಾಜಿಕ ಸಂಪರ್ಕಗಳ ಮೇಲೆ ನಿರ್ಬಂಧ ನಿಷೇಧಗಳನ್ನು ಹೇರಿಕೊಂಡವು. ಇಂಥ ಕಾರಣಗಳಿಂದಾಗಿಯೇ ಜಾತಿಗಳು ಸಾಮಾಜಿಕವಾಗಿ ಸಶಕ್ತವಾಗಿ ಸ್ಥಿರಗೊಂಡವು. ಇಷ್ಟೇ ಅಲ್ಲದೇ ಕೆಲಸದ ರೀತಿ–ನೀತಿಗಳಿಗನುಗುಣವಾಗಿ ವೃತ್ತಿಯಲ್ಲಿ ತಾರತಮ್ಯತೆ ಭಾವಗಳನ್ನು ಬೆಳೆಸಿಕೊಂಡವು. ಅದೇ ತಾರತಮ್ಯತೆ, ಮೇಲು–ಕೀಳು ಭಾವಗಳು, ಜಾತಿ ಏಣಿಶ್ರೇಣಿಗೆ ಕಾರಣವಾದವು. ಉದಾ. ವಿದ್ಯೆ ಕಲಿಯುವ ಕಲಿಸುವ ಕಾರಣಕ್ಕಾಗಿ ಬ್ರಾಹ್ಮಣ ಮೇಲ್ಜಾತಿಯವನಾದರೆ, ಚರ್ಮ ಹದಮಾಡುವ ಚಮ್ಮಾರ ತಾನು ಮಾಡುವ ಕೆಲಸದ ಕಾರಣಕ್ಕಾಗಿಯೇ ಕೆಳಜಾತಿಯವನಾದ. ವರ್ಣ ವ್ಯವಸ್ಥೆಯಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯ ವರ್ಣಗಳ ಬಗ್ಗೆ ಪರಿಶೀಲಿಸಿದರೆ, ಅಧ್ಯಯನ–ಅಧ್ಯಾಪನ ಬ್ರಾಹ್ಮಣರದು, ರಕ್ಷಣಾಕಾರ್ಯ, ಕ್ಷತ್ರಿಯರದು ಎಂಬರ್ಥದಲ್ಲಿ ಸ್ಪಷ್ಟತೆಯಿದೆ. ಆದರೆ ಮುಂದಿನ ವೈಶ್ಯ ಮತ್ತು ಶೂದ್ರ ವರ್ಣಗಳಲ್ಲಿ ಯಾವುದೇ ತೆರನಾದ ನಿರ್ದಿಷ್ಟತೆಯಿಲ್ಲ ಬದಲಾಗಿ ಗೊಂದಲವಿದೆ. ಇದಕ್ಕೆ ಮೂಲ ಕಾರಣವನ್ನು ನಮ್ಮ ಧರ್ಮಶಾಸ್ತ್ರಗಳಿಂದಲೇ ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ಕ್ರಿ.ಶ. ೮೫೦ರಲ್ಲಿ ರಚಿತವಾದ ಕವಿರಾಜಮಾರ್ಗ ಕೃತಿ ಕನ್ನಡದ ಮೊಟ್ಟ ಮೊದಲ ಉಪಲಬ್ಧ ಗ್ರಂಥ. ಇದರಲ್ಲಿ ಮಾರ್ಗಕಾರ ವರ್ಣ ವ್ಯವಸ್ಥೆ ಕುರಿತು

'ಪರದರ್ಗಾ ಪಾರ್ವರ್ಗಾ

ಯ್ತರಸರ್ಗಾ ಕುಡಿಯರಪ್ಪ ನಾಲ್ವರ್ಗಾಗಳ್

ಸ್ಥಿರ ಗೋಪಾಧ್ಯಾಯ ಕ್ಷಾ

ಪರಿಪಾಲ್ಯ ಕ್ಷೇತ್ರಕರ್ಷಣಂಗಳ್ ಕ್ರಿಯೆಗಳ್' *(ಸೀತಾರಾಮಯ್ಯ ಎಂ ವೀ (ಸಂ), ಕವಿರಾಜಮಾರ್ಗ, ಪುಟ–೧೪).*

–ಎನ್ನುವನು. ವೈಶ್ಯಕ್ಕೆ 'ಗೋಪ' – ಪಶುಪಾಲನ

ಬ್ರಾಹ್ಮಣಕ್ಕೆ 'ಕ್ಷಾಪರಿಪಾಲ್ಯ'–ಅಧ್ಯಯನ, ರಾಜ್ಯಭಾರ

ಕ್ಷತ್ರಿಯಕ್ಕೆ 'ಕ್ಷೇತ್ರಕರ್ಷಣ' – ವ್ಯವಸಾಯ.

ಶೂದ್ರ–ಹೀಗೆ ಅನುಕ್ರಮವಾಗಿ ವೈಶ್ಯ, ಬ್ರಾಹ್ಮಣ, ಕ್ಷತ್ರಿಯ, ಶೂದ್ರ, ವರ್ಣಗಳನ್ನು ಹೆಸರಿಸಿ, ಶೂದ್ರ ವೃತ್ತಿಯನ್ನು ಹೊರತುಪಡಿಸಿ ಮಿಕ್ಕ ಮೂರು ವರ್ಣಗಳ ಕಾರ್ಯಗಳನ್ನು ಮಾರ್ಗಕಾರ ಉಲ್ಲೇಖಿಸುತ್ತಾನೆ.

ಕವಿರಾಜ ಮಾರ್ಗಕಾರನ ಈ ಉಲ್ಲೇಖ ಕನ್ನಡ ನಾಡಿನ ಜಾತಿಯ ವ್ಯವಸ್ಥೆಯ ಕಾಲನಿರ್ಧಾರದ ಸಂದರ್ಭದಲ್ಲಿ ಬಹುಮುಖ್ಯವಾದ ಸಂಗತಿಯಾಗುತ್ತದೆ. ಮಾರ್ಗಕಾರ ತನ್ನ ಕೃತಿಯಲ್ಲಿ ಚಾತುವರ್ಣ ವ್ಯವಸ್ಥೆಯ ಕುರಿತಾಗೇ ಮಾತಾಡುತ್ತಾನೆಂದರೆ, ಕ್ರಿ.ಶ. ೮ನೇಯ ಶತಮಾನದ ಕಾಲಕ್ಕಿನ್ನೂ ಕನ್ನಡ ನಾಡಿನಲ್ಲಿ ವರ್ಣ ವ್ಯವಸ್ಥೆಯೇ ಪ್ರಾಚುರದಲ್ಲಿತ್ತೆಂಬ ಅಂಶ ಸ್ಪಷ್ಟವಾಗುತ್ತದೆ. ಆದರೆ ಜಾತಿ ಪದ್ಧತಿಯು ಕವಿರಾಜಮಾರ್ಗಕಾರನ ಪೂರ್ವದಲ್ಲಿ ಪೂರ್ಣಪ್ರಮಾಣದಲ್ಲಿ ಅಲ್ಲದಿದ್ದರೂ ನಿಧಾನಗತಿಯಲ್ಲಿ ರೂಪುಗೊಳ್ಳತೊಡಗಿತ್ತು, ಎನ್ನುವುದಕ್ಕೆ ನಮಗೆ ಶಾಸನವೊಂದು ಆಧಾರ ಒದಗಿಸುತ್ತದೆ. ಅದರಲ್ಲೂ ಈ ಶಾಸನ ಅಷ್ಟಾದಶ ಜಾತಿಗಳ ಅಸ್ತಿತ್ವದ ಕುರಿತಾದ ಮೊದಲ ಶಾಸನವಾಗಿ ಗಮನ ಸೆಳೆಯುತ್ತದೆ. ಸುಮಾರು ೭೫೦ರ ಲಕ್ಷ್ಮೇಶ್ವರದ ಈ ಶಾಸನವನ್ನು ಚಿದಾನಂದ ಮೂರ್ತಿಯವರು ಹೀಗೆ ಉದ್ಧರಿಸುತ್ತಾರೆ. "ಓಂ ಸ್ವಸ್ತಿ ಶ್ರೀ ವಿಕ್ರಮಾದಿತ್ಯ ಯುವರಾಜರ ಪೂರಿಚೆಯಾ ಮಹಾಜನಕ್ಕುಂ ನಗರಕ್ಕುಂ ಹದಿನೆಂಟು ಪ್ರಕೃತಿಗಳ್ಗುಂ ಕೊಟ್ಟ ಆಚಾರ ವ್ಯವಸ್ಥೆ" *(ಚಿದಾನಂದಮೂರ್ತಿ ಎಂ, ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಪುಟ–೨೨, ೧೯೮೫).* ಅಂದರೆ ಪುಲಿಗೆರೆಯ ಜನರನ್ನು ಈ ಶಾಸನ, ಬ್ರಾಹ್ಮಣ ವರ್ಗ, ವರ್ತಕ ವರ್ಗ ಮತ್ತು ಹದಿನೆಂಟು ಪ್ರಕೃತಿ (ಜಾತಿ) ಎಂದು ವಿಭಾಗಿಸಿದೆ. ಈ ಶಾಸನದಲ್ಲಿ ಹೇಳಲಾದ ಬ್ರಾಹ್ಮಣ ವರ್ಗ ಮತ್ತು ವೈಶ್ಯ ವರ್ಗಗಳು ವರ್ಣವ್ಯವಸ್ಥೆಯಲ್ಲಿನ ಬ್ರಾಹ್ಮಣ ವೈಶ್ಯ ವರ್ಣಗಳನ್ನೇ ಹೇಳುತ್ತಿದ್ದಂತೆ ತೋರತ್ತದೆ. ನಂತರದಲ್ಲಿ ಹೇಳುವ 'ಹದಿನೆಂಟು ಪ್ರಕೃತಿ'ಯ ಜನ ಎಂದರೆ ಹದಿನೆಂಟು ಜಾತಿಗಳ ಕುರಿತಾಗಿ ಹೇಳುತ್ತಿದ್ದಂತೆ ಕಾಣುತ್ತದೆ. ಅಂದರೆ ಕನ್ನಡ ನಾಡಿನಲ್ಲಿ ಜಾತಿ ವ್ಯವಸ್ಥೆ ಅದೇ ತಾನೇ ಅಸ್ಪಷ್ಟವಾಗಿ ರೂಪುಗೊಳ್ಳುತ್ತಿರುವುದು ಸ್ಪಷ್ಟವಾಗುತ್ತದೆ. ಇದೇ ಕಾರಣಕ್ಕಾಗಿಯೇ ಮೇಲಿನ ಶಾಸನದಲ್ಲಿ 'ಪ್ರಕೃತಿ' ಎಂಬ ಶಬ್ದವನ್ನು ಜಾತಿ ಎಂಬ ಅರ್ಥದಲ್ಲಿ ಬಳಸಿರುವುದನ್ನು ಕಾಣುತ್ತೇವೆ. ಅಂದರೆ, ಈ ಶಾಸನದ ಕಾಲಕ್ಕಿನ್ನೂ 'ಜಾತಿ' ಎಂಬ ಪದವಾಗಲಿ, ಜಾತಿ ವ್ಯವಸ್ಥೆಯಾಗಲೀ ಒಂದು ಸ್ಪಷ್ಟ ರೂಪ ಪಡೆದಿರಲಿಲ್ಲವೆಂಬುದನ್ನು ಶಾಸನವೇ ಹೇಳುತ್ತದೆ.

ಭಾರತದಲ್ಲಿ ಜಾತಿ ವ್ಯವಸ್ಥೆಯನ್ನು ನೋಡುವುದಾರೆ ಅದು ಎಲ್ಲಿ ಹೇಗೆ ಮತ್ತು ಯಾವಾಗ ಹುಟ್ಟಿ ಬೆಳವಣಿಗೆ ಹೊಂದಿ ಸುದೀರ್ಘ ಅವಧಿವಾಗಿ ಸಾಗಿ ಬಂದಿತು ಎಂಬ ಬಗ್ಗೆ ಶಾಸ್ತ್ರೀಯ ಮಾಹಿತಿಗಳನ್ನು ಕಂಡುಕೊಳ್ಳವುದು ತುಂಬ ಕಠಿಣತಮವಾದ ಕೆಲಸವಾಗಿದೆ. ಆದಾಗ್ಯೂ ಜಾತಿ ವ್ಯವಸ್ಥೆಯ ವಿಕಾಸಾತ್ಮಕ ಬೆಳವಣಿಗೆಯನ್ನು ಮೂರು ಕಾಲಘಟ್ಟಗಳಲ್ಲಿ ಗುರುತಿಸಬಹುದಾಗಿದೆ, ಒಂದು ಪ್ರಾಚೀನ ಯುಗದಲ್ಲಿ ಜಾತಿವ್ಯವಸ್ಥೆ, ಎರಡನೆಯದಾಗಿ ಮಧ್ಯಯುಗದಲ್ಲಿ ಜಾತಿವ್ಯವಸ್ಥೆ, ಮೂರನೆಯದಾಗಿ

ಆಧುನಿಕಯುಗದಲ್ಲಿ ಜಾತಿವ್ಯವಸ್ಥೆ. ಹಾಗೂ ಜಾತಿ ವ್ಯವಸ್ಥೆ ಹೇಗೆ ಉಂಟಾಯಿತೆಂಬ ವಿಷಯದಲ್ಲಿ ಹಲವು ಸಿದ್ಧಾಂತಗಳು ಬಂದಿವೆ. ಹೆಚ್ಚು ಜನರು ವೃತ್ತಿ ಮೂಲದಿಂದ ಉಂಟಾಯಿತೆಂದು ನಿರ್ಧರಿಸಿದ್ದಾರೆ. ಮೊದಲು ಬುಡಕಟ್ಟುಗಳಾಗಿ ಏರ್ಪಟ್ಟವೆ ಜಾತಿಗಳಾದವೆಂದು ಕೆಲವರವಾದ. ಕೆಲವರು ಶುಭ್ರತೆಯ ವಿಷಯದ ಮೇಲೆ ಆಧಾರಪಟ್ಟು ಉಂಟಾದವೆಂದರು. ಮತ್ತೆ ಕೆಲವರು ಒಬ್ಬ ಪುರಾಣ ಪುರುಷನ ಸಂತತಿಯಾಗಿ ಬಂದು ಜಾತಿಗಳಾಗಿ ಉಂಟಾದವೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ವೃತ್ತಿಯ ಮೇಲೆ ಆಧಾರವಾಗಿ ಬಂದವೆಂಬುದು ಹೆಚ್ಚು ಅಂಗೀಕಾರ ಪಡೆದ ಸಿದ್ಧಾಂತವಾಗಿದೆ.

ಸಾಮಾಜಿಕ ಅಗತ್ಯಗಳಿಗೆ ವೃತ್ತಿಗಳು ಹೆಚ್ಚಾಗುತ್ತಾ ಇದ್ದರೆ, ಅವನ್ನು ಕೈಗೊಳ್ಳುವ ಜನರೂ ಹೆಚ್ಚಾಗುತ್ತಾ ಬಂದರು. ಪ್ರಧಾನವಾಗಿ ಸಮಾಜದಲ್ಲಿ ಜನರು ವೃತ್ತಿಗಳನ್ನು ಗಮನಿಸಿ ಬೇರೆಯಾಗುವುದು ನಡೆಯಿತು. ಪಂಗಡಗಳು, ಬುಡಕಟ್ಟುಗಳು ಜನರನ್ನು ಬೇರೆ ಮಾಡಿದರೂ ಆಯಾ ಪಂಗಡಗಳು, ಬುಡಕಟ್ಟುಗಳ ನಡುವೆ ವೃತ್ತಿ ಮತ್ತೆ ವಿಭಜನೆ ಮಾಡಿತು. ಪ್ರಧಾನವಾದ ವಿಭಜನೆ ವೃತ್ತಿಪರವಾಯಿತು. ಈ ವಿಭಜನೆ ಸ್ಥಿರವಾದ ಹಂತದಲ್ಲಿ ವರ್ಣವಾಗಿ ಅದನ್ನು ಅಂಗೀಕರಿಸುವುದು, ನಡೆಯಿತು. ವೃತ್ತಿ ವರ್ಣವಾಗಿ ಆ ವರ್ಣ ಜಾತಿಯಾಗಿ ಬದಲಾಯಿತು. ಇದು ಹೇಗೆ ಬದಲಾಯಿತು ಎನ್ನುವುದೇ ಪ್ರಶ್ನೆರ್ಹವಾದ ವಿಷಯ.

ಜಾತಿ ವ್ಯವಸ್ಥೆಗೆ ಮೂಲವಾದ ಚಾತುರ್ವರ್ಣದ ವ್ಯವಸ್ಥೆಗೆ ಸುಮಾರು ಮೂರು ಸಾವಿರ ವರ್ಷಗಳ ಚರಿತ್ರೆ ಇದೆ. ಆದ್ದರಿಂದ ಜಾತಿ ವ್ಯವಸ್ಥೆ ಮೂರು ಸಾವಿರ ವರ್ಷಗಳ ಮೊದಲನಿಂದಲೂ ಅಸ್ತಿತ್ವದಲ್ಲಿದೆಯೆಂದು ಹೇಳಬಹುದು. ಆರ್ಯರ ಆಗಮನದಿಂದ ನಮ್ಮ ದೇಶದಲ್ಲಿ ಪ್ರವೇಶಿಸಿದ ಹಿಂದೂ ಧರ್ಮ, ಸಂಸ್ಕೃತಿ ನಂತರದ ಕಾಲದಲ್ಲಿ ಅದಕ್ಕೆ ವಿರುದ್ಧವಾಗಿ ಉದ್ಭವಿಸಿದ ಬೌದ್ಧ ಧರ್ಮ, ಕ್ರಿಸ್ತಪೂರ್ವದಲ್ಲೇ ಅಸ್ತಿತ್ವದಲ್ಲಿ ಇತ್ತು. ಹಿಂದೂ ಧರ್ಮ ತನ್ನ ಸಂಸ್ಕೃತಿಗೆ ಪವಿತ್ರ ಗ್ರಂಥಗಳೆಂದು ಪರಿಗಣಿಸುವ ವೇದಗಳಲ್ಲಿ ಮೊದಲನೆಯ ವೇದವಾದ ಋಗ್ವೇದದಲ್ಲಿ ಜಾತಿಪ್ರಸ್ತಾಪ ಪ್ರತ್ಯಕ್ಷವಾಗಿಲ್ಲ. ಚಾತುವರ್ಣ ವ್ಯವಸ್ಥೆ ಆ ಗ್ರಂಥದಲ್ಲಿಯೇ ಹುಟ್ಟಿದೆ. ಆದರೆ ನಂತರದ ಕಾಲದಲ್ಲಿ ಋಗ್ವೇದ ಸಾರವನ್ನು ಸುಲಭವಾಗಿ ಜನರ ತಿಳಿಯಲು ಇತರೆ ವೇದಗಳು ಮಹಾಭಾರತ, ರಾಮಾಯಣ, ಇತಿಹಾಸಗಳು ಪುರಾಣಗಳು ಧರ್ಮಶಾಸ್ತ್ರಗಳಲ್ಲಿಯೂ ನೋಡುತ್ತೇವೆ.

'ಬ್ಯೂಗಲ್ ಬುದ್ಧ ಧರ್ಮದ ಕುರಿತು ಮಾತನಾಡತೊಡಗುತ್ತಾನೆ. ಏಕೆಂದರೆ ಜಾತಿ ವಿರುದ್ಧ ಪ್ರತಿಭಟನೆ ಎಂದಾಕ್ಷಣ ಬುದ್ಧನ ಕಡೆ ಎಲ್ಲರೂ ಕೈತೋರಿಸುತ್ತಾರೆ. ಬ್ಯೂಗಲ್ ಸೆನಾರ್ಟ್‌ನ ಮಾತಿನ ಬೆಂಬಲದಲ್ಲಿ ಈ ರೀತಿ ಹೇಳುತ್ತಾನೆ. ಬುದ್ಧ ಧರ್ಮ, ನೊಬಲರಿಗೆ ರೂಪಿಸಿದ ವಿಚಾರ, ಕ್ಷತ್ರಿಯ ಪಂಥದ ತಾತ್ವಿಕ ವಿಚಾರ, ಇದರ ತತ್ವಶಾಸ್ತ್ರ ತರ್ಕ ಬ್ರಾಹ್ಮಣರ ವಿರುದ್ಧ ಅವರ ಮೇಲ್ಮೈ ಪ್ರಶ್ನಿಸಿದ ಕ್ಷತ್ರಿಯ ತರ್ಕ ಎನ್ನುವ ಪರಿಭಾವನೆ ಉಂಟಾಗುವುದನ್ನು ಪಡೆಯಲು ಸಾಧ್ಯವಿಲ್ಲ ಎನ್ನುತ್ತಾನೆ. ಜಾತಿ ಪದ್ಧತಿಯು ಹಿಂದೂ ಸಮಾಜದ ಒಂದು ವಿಶಿಷ್ಟ ಲಕ್ಷಣವಾಗಿದೆ' *(ಜಾತಿ, ಕೆಲವು ಟಿಪ್ಪಣಿಗಳು, ಶಿವರಾಮ ಕೃಷ್ಣನ್, ಪು-೭, ೨೦೦೭).* 'ರಿಸ್ಲೆಯವರ ಪ್ರಕಾರ ಜಾತಿಯೆಂದರೆ ಒಬ್ಬ ಐತಿಹಾಸಿಕ ವ್ಯಕ್ತಿ ಅಥವಾ ದೈವ ಸಂಭೂತನೆನ್ನಲಾದ ಕಾಲ್ಪನಿಕ ಪೂರ್ವಜನಿಂದ ತಮ್ಮ ವಂಶವನ್ನು ಗುರುತಿಸುವ

ಕೆಲವು ಕುಟುಂಬಗಳ ಒಂದು ಸಂಕಲನ ಅಥವಾ ಕುಟುಂಬಗಳ ಸಮೂಹ ಪಾರಂಪರ್ಯವಾಗಿ ವಿವಾಹ ಸಂಬಂಧಗಳು ಆಯಾ ಜಾತಿಗಳ ಪರಿಮಿತಿಯಿಂದಲೇ ಪಡೆಯುತ್ತವೆ' *(ಜಾತಿ, ಕೆಲವು ಟಿಪ್ಪಣಿಗಳು, ಶಿವರಾಮ ಕೃಷ್ಣನ್, ಪು-೪, ೨೦೦೭).* ಜಾತಿಯು ಬಹುಮಟ್ಟಿಗೆ ಪಾರಂಪರ್ಯವಾಗಿ ಬಂದ ಒಂದು ವೃತ್ತಿಯನ್ನು ಅನುಸರಿಸುವುದಾದರೂ ಇತ್ತೀಚಿನ ದಿನಗಳಲ್ಲಿ ಕೆಲವು ಬದಲಾವಣೆಗಳು ಕಂಡುಬರುತ್ತದೆ. ಉಡಿಗೆ-ತೊಡಿಗೆಗಳು, ಆಹಾರಾಭ್ಯಾಸಗಳು, ವಿವಾಹ ಅಂತ್ಯಕ್ರಿಯೆ ಮುಂತಾದ ಧಾರ್ಮಿಕ ಆಚಾರಗಳು, ರೂಢಿ ಪದ್ಧತಿಗಳು ಜಾತಿಯಿಂದ ಜಾತಿಗೆ ವಿಭಿನ್ನವಾಗಿವೆ. ಬುಡಕಟ್ಟು ಎಂಬುದು ಅನೇಕ ಕುಲಗಳು, ಅಲೆಮಾರಿ ತಂಡಗಳು ಅಥವಾ ನಿಶ್ಚಿತ ಭೌಗೋಳಿಕ ಪ್ರದೇಶಗಳೊಳಗೆ ವಾಸಿಸುವ ಪ್ರತ್ಯೇಕ ಉಪಭಾಷೆ, ವಿಶಿಷ್ಟ ಸಂಸ್ಕೃತಿ ಹಾಗೂ ಒಂದು ಸಾಮಾನ್ಯ ಸಾಮಾಜಿಕ ಸಂಘಟನೆ ಅಥವಾ ಇತರರಿಗಿಂತ ತಮ್ಮ ಜಾತಿ ಎಂಬ ಏಕತಾ ಭಾವನೆಯಿರುವ ಒಳಗುಂಪುಗಳ ಸಮೂಹವಾಗಿವೆ. ಅನೇಕ ಜಾತಿ ಮತ್ತು ಬುಡಕಟ್ಟಿನ ಜನಾಂಗದವರಿರುತ್ತಾರೆ. ಈ ಪ್ರತಿಯೊಂದು ಜಾತಿ, ಉಪಜಾತಿ ಹಾಗೂ ಬುಡಕಟ್ಟಿನ ಜನರ ವಿವರಣೆಯನ್ನು ಇಲ್ಲಿ ಸಾಮಾಜಿಕ ಹಾಗೂ ಧಾರ್ಮಿಕ ಆಚಾರಗಳ ಬಗ್ಗೆ ಸಂಕ್ಷಿಪ್ತವಾಗಿ ನೋಡಬಹುದು.

ಹಿಂದೂ ಧರ್ಮದಲ್ಲಿರುವ ಜಾತಿಗಳು, ಉಚ್ಚ ನೀಚ ಭಾವನೆಗಳಿಂದ ಪ್ರೇರಿತವಾಗಿರುವವು ಅನ್ನುವುದು ಖಚಿತ, ಹಿಂದೂ ಸಮಾಜ ಒಂದು ಗೋಪುರವಿದ್ದಂತೆ ಹಾಗೂ ಅದರ ಒಂದೊಂದು ಜಾತಿ ಒಂದೊಂದು ಅಂತಸ್ತು ಆದರೆ ಈ ಗೋಪರಕ್ಕೆ ಮೆಟ್ಟಿಲುಗಳಿಲ್ಲ ಅನ್ನುವುದು ನೆನಪಿಡಬೇಕಾದ ವಿಷಯ, ಹಾಗಾಗಿ ಒಂದಸ್ತಿನಿಂದ ಇನ್ನೊಂದಸ್ತಿಗೆ ಹೋಗಲೂ ದಾರಿಯಿಲ್ಲ. ಪ್ರತಿಯೊಬ್ಬರೂ ಹುಟ್ಟಿರುವ ಅಂತಸ್ತಿನಲ್ಲೇ ಸಾಯಬೇಕು. ಕೆಳ ಅಂತಸ್ತಿನ ಮನುಷ್ಯ ಎಷ್ಟೇ ಯೋಗ್ಯನಾಗಿದ್ದರೂ ಅವನಿಗೆ ಮೇಲಂತಸ್ತಿಗೆ ಪ್ರವೇಶವಿಲ್ಲ ಹಾಗೂ ಮೇಲಂತಸ್ತಿನ ಮನುಷ್ಯ ಎಷ್ಟೇ ಅಯೋಗ್ಯನಾಗಿದ್ದರೂ ಕೆಳ ಅಂತಸ್ತಿಗೆ ಆತನನ್ನು ದೂಡುವ ಧೈರ್ಯ ಯಾರಲ್ಲೂ ಇಲ್ಲ. ಸ್ಪಷ್ಟವಾಗಿ ಹೇಳುವುದಾದರೆ ಜಾತಿ ಜಾತಿಗಳಲ್ಲಿರುವ ಈ ಉಚ್ಚ ನೀಚ ಭಾವನೆ ಗುಣಗಳ ಮೇಲೆ ಆಧರಿಸಿಲ್ಲ. ಉಚ್ಚ ಜಾತಿಯಲ್ಲಿ ಹುಟ್ಟಿದವನು ಎಷ್ಟೇ ನೀಚ ಗುಣದವನಾಗಿದ್ದರೂ ಅವನನ್ನು ಉಚ್ಚ ಜಾತಿಯವನೆಂದೇ ಹೇಳಬೇಕು. ಹಾಗೆಯೇ ನೀಚ ಜಾತಿಯಲ್ಲಿ ಹುಟ್ಟಿದವನು ಎಷ್ಟೇ ಒಳ್ಳೆಯ ಗುಣಗಳನ್ನು ಹೊಂದಿದ್ದರೂ ಆತ ನೀಚ ಜಾತಿಯವನೇ ಆಗಿರುತ್ತಾನೆ.

ಹಿಂದೂ ಧರ್ಮದ ಎಲ್ಲಾ ಜಾತಿ ಪಂಗಡಗಳು, ಉಪ ಪಂಗಡಗಳು ಪರಸ್ಪರ ಸಹಕಾರ ಶಾಂತಿ, ಸಹಬಾಳ್ವೆಗಳಲ್ಲಿ ನಂಬಿಕೆಯಿಟ್ಟಿರುವವರು, ಪ್ರತಿಯೊಂದು ಪಂಗಡವೂ ತನ್ನ ತನ್ನ ಸಂಪ್ರದಾಯ, ಆಚಾರ-ವಿಚಾರಗಳನ್ನು ಪಾಲಿಸಿಕೊಂಡು ಕಾಲಾನಂತರದ ತಮ್ಮ ನಂಬಿಕೆಗಳ ಬಲದಿಂದ ಬದುಕುತ್ತಿದ್ದಾರೆ. ಸಂತೃಪ್ತಿಯೊಂದೇ ಎಲ್ಲ ಪಂಗಡಗಳ ಧ್ಯೇಯವಾಗಿದೆ. ಶತಶತಮಾನಗಳಿಂದಲೂ ಕ್ಷತ್ರಿಯ ಜನಾಂಗದವರು ಯೋಧರಾಗಿ ಅರಸರಾಗಿ, ರಾಜರಾಗಿ ವಣಿಕರಾಗಿ ರಾಷ್ಟ್ರಕ್ಕೆ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಸಮಾಜಶಾಸ್ತ್ರವನ್ನು ಅಧ್ಯಯನವಾಗಿ ಇಟ್ಟುಕೊಂಡಿರುವ ಸಮಾಜಶಾಸ್ತ್ರೀಯ ಚಿಂತನೆಯಲ್ಲಿ ಭಾರತೀಯ ಸಮಾಜದ ವಾಸ್ತವಿಕತೆಗಳಲ್ಲಿ ಒಂದಾದ ಜಾತಿಯು ಮುಖ್ಯವಾದ ಕಾಳಜಿ ವಿಷಯವಾಗಿದೆ. ಮಾನವಶಾಸ್ತ್ರ ಸಮಾಜಶಾಸ್ತ್ರದಲ್ಲಿ ಜನಾಂಗೀಯ ಅಧ್ಯಯನವನ್ನು ತಮ್ಮದೇ ಆದ ನೆಲೆಯಲ್ಲಿ ಜಾತಿಯನ್ನು

ಅಭ್ಯಾಸಿಸಿವೆ. ಇವೆಲ್ಲವನ್ನು ಇಟ್ಟುಕೊಂಡು ನೋಡಿದರೆ ಮಾನವಿಕ ವಿಜ್ಞಾನಗಳಲ್ಲಿ ಜಾತಿಯ ಕುರಿತು ನಿಖರವಾದ ಅಧ್ಯಯನಕ್ಕೆ ನೂರು ವರ್ಷಕ್ಕೆ ಹೆಚ್ಚಿನ ಇತಿಹಾಸವಿದೆ. ಅಂದರೆ ನಮ್ಮ ಅಧ್ಯಯನದ ವಿಷಯಕ್ಕೆ ಸಮಾಜಶಾಸ್ತ್ರಜ್ಞರ ಮತ್ತು ಮಾನವ ಶಾಸ್ತ್ರಜ್ಞರ ಅಧ್ಯಯನದ ವಾದಗಳು ತುಂಬ ಅರ್ಥಗಂಭೀರತೆಯಿಂದ ಇರುತ್ತದೆ.

ನಂತರದ ದಿನಗಳಲ್ಲಿ ವರ್ಣ ಸಂಕರಣವಾಗಿದೆ ಆಂದರೆ ಸಮಾಜದ ಶಾಂತಿಯನ್ನು ಕಲಕುವ ಅನಪೇಕ್ಷಿತ ಜನಸಂಖ್ಯೆ ಈ ಸಾಮಾಜಿಕ ಕ್ಷೋಭೆಯನ್ನು ತಡೆಯಲು ವಿವಿಧ ನಿಯಮಗಳಿವೆ. ಇವುಗಳಿಂದ ಜನತೆಯು ತಾನಾಗಿಯೇ ಶಾಂತಿಯುತವಾಗಿ ಬದುಕಿನಲ್ಲಿ ಆಧ್ಯಾತ್ಮಿಕ ಪ್ರಗತಿಗೆ ವ್ಯವಸ್ಥೆಗೊಳ್ಳುತ್ತವೆ. ರಜೋಗುಣದ ಕ್ಷತ್ರಿಯನು ಹಿಂಸೆಯನ್ನು ಆಚರಿಸಬಹುದು ಆದುದರಿಂದ ಕ್ಷತ್ರಿಯನಿಗೆ ಅಹಿಂಸೆಯ ತತ್ವಗಳನ್ನು ಆಚರಿಸುವ ಬ್ರಾಹಣನ್ನು ಅನುಸರಿಸುವುದಕ್ಕಿಂತ ಹಿಂಸೆಯ ನಿಯಮಗಳನ್ನು ಅನುಸರಿಸಿ ಸೋಲುವುದು ಉತ್ತಮ. ಕೃಷ್ಣ ಪ್ರಜ್ಞೆಯ ಆ ಪರಿಪೂರ್ಣ ಸ್ಥಿತಿಯಲ್ಲಿ ಕ್ಷತ್ರಿಯನು ಬ್ರಾಹ್ಮಣ ಕರ್ತವ್ಯವನ್ನು ಮಾಡಬಹುದು ಮತ್ತು ಬ್ರಾಹ್ಮಣನು ಕ್ಷತ್ರಿಯನ ಧರ್ಮವನ್ನು ಪಾಲಿಸಬಹುದು. ವಿಶ್ವಾಮಿತ್ರನು ಮೂಲತಃ ಕ್ಷತ್ರಿಯನು ಆದರೆ ಅನಂತರ ಅವನು ಬ್ರಾಹ್ಮಣನಂತೆ ವರ್ತಿಸಿದನು. ಪರಶುರಾಮನು ಬ್ರಾಹ್ಮಣ ಆದರೆ ಅನಂತರ ಅವನು ಕ್ಷತ್ರಿಯನಂತೆ ನಡೆದುಕೊಂಡು ಆಧ್ಯಾತ್ಮಿಕ ನೆಲೆಯನ್ನು ಸಾಧಿಸಿದ ಅವರು ಹಾಗೆ ಮಾಡಲು ಸಾಧ್ಯವಾಯಿತು ಕ್ಷತ್ರಿಯರನ್ನು ಪುರಾಣಗಳಕಾಲದಿಂದ ಹಿಡಿದು ಇಂದಿನವರೆಗೆ ನಾವು ಗಮನಿಸುವುದಾದರೆ ಕ್ಷತ್ರಿಯರ ಮೂಲಗಳನ್ನು ಶೋಧಿಸುತ್ತಾ ಹೋದಂತೆ ಅವರ ಮೂಲಗಳು ಮತ್ತು ಇಂದಿನ ಪರಿಸ್ಥಿತಿಯು ತುಂಬಾ ವಿಭಿನ್ನವಾಗಿದೆ, ಎಂಬುದನ್ನು ಅರಿಯಬಹುದು.

ಕ್ಷತ್ರಿಯರ ಸಾಮಾಜಿಕ ಅಧ್ಯಯನವನ್ನು ತಿಳಿಯಬೇಕಾದರೆ ವೇದಗಳು, ಉಪನಿಷತ್ತು, ಮಹಾಕಾವ್ಯಗಳು, ಮನುಸ್ಮೃತಿ, ಕೌಟಿಲ್ಯನ ಅರ್ಥಶಾಸ್ತ್ರ ಮುಂತಾದ ಪ್ರಾಚೀನ ಬರಹಗಳಲ್ಲಿ ಆಳ್ವಿಕೆ ನಡೆಸಿದ ಕಾಲಘಟ್ಟದಲ್ಲಿ ಅವರೇ ಹಾಕಿಸಿದ ಶಿಲಾಶಾಸನಗಳನ್ನು ಗಮನಿಸಬಹುದು. ಅರಸರು ಹಾಕಿಸಿದ ಶಾಸನಗಳು ರಾಜಮನೆತನಗಳ ಕುರಿತು ಮಾಹಿತಿ ತಿಳಿಯಬಹುದು. ಬ್ರಿಟೀಷರು ಭಾರತಕ್ಕೆ ಬಂದ ಮೇಲೆ ಆದಾ ಬದಲಾವಣೆಯಲ್ಲಿ ಕ್ಷತ್ರಿಯರಲ್ಲಿ ಬದಲಾವಣೆಯನ್ನು ನೋಡಬಹುದು. ಬ್ರಿಟೀಷರು ಭಾರತವನ್ನು ಬಿಟ್ಟು ಹೋದ ಕಾಲದಲ್ಲಿ ಅಂದರೆ ೨೦ನೇ ಶತಮಾನದಲ್ಲಿ ಕ್ಷತ್ರಿಯರು ಎಂಬ ನಾಮ ಪದವನ್ನು ಹೊಂದಿದ ಜನರ/ಸಮುದಾಯಗಳ ಬಗ್ಗೆ ತಿಳಿಯಬಹುದಾಗಿದೆ.

### ೨.೨. ವೇದಗಳಲ್ಲಿ ಕ್ಷಾತ್ರ ಪ್ರಜ್ಞೆ

ಪುರಾಣಗಳ ಪ್ರಕಾರ ಇಂದು ಲೋಕದಲ್ಲಿ 'ಕ್ಷತ್ರಿಯರು' ಇಲ್ಲಿ ನಂದಾಂತಂ ಕ್ಷತ್ರಿಯ ಕುಲನಂದ ಪ್ರಭುತ್ವವು ಮುಗಿದ ಮೇಲೆ ಧನನಂದನ ಆಳ್ವಿಕೆಯ ಬಳಿಕ ಜಗತ್ತಿನಲ್ಲಿ ಕ್ಷತ್ರಿಯರೆ ಉಳಿಯಲಿಲ್ಲ. ಉಳಿದವರೆಲ್ಲರೂ ಬೇರೆ ಬೇರೆ ವರ್ಣದವರು, ಜನ್ಮಮೂಲವಾದ ಕ್ಷಾತ್ರವು ಹೊರಟು ಹೋಯಿತು ಎಂದು ಒಕ್ಕಣಿಯುಂಟು. ಕ್ಷತ್ರಿಯ ಎನ್ನುವುದನ್ನು ಕೇವಲ ರಕ್ತವೊಂದರಿಂದ ಸಿದ್ಧವಾಗುವ ಜನ್ಮೈಕನಿಷ್ಠಮೌಲ್ಯವೆಂದು ಕೊಂಡರೆ, ಈ ಅಭಿಪ್ರಾಯ ಸರಿಯಾಗಿರಬಹುದು. ಆದರೆ ನವನಂದನಿಗೂ ಮುನ್ನ 'ಎಲ್ಲ ವರ್ಣಗಳಲ್ಲಿಯೂ ಸಾಂಕರ್ಯವುಂಟಾಗಿದೆ, ಯಾವ ವರ್ಣವೂ ಶುದ್ಧವಾಗಿ ಸ್ಪಷ್ಟವಾಗಿ

ಉಳಿದಿಲ್ಲ' ಎಂಬ ಮಾತನ್ನು ಮಹಾಭಾರತ ವನಪರ್ವದ ಅಜಗರೋಪಾಖ್ಯಾನದಲ್ಲಿ ಧರ್ಮರಾಜನ ಮಾತಿನಲ್ಲಿ ಕಾಣುತ್ತೇವೆ. ಪಾಂಡವರಾದರೂ ರಕ್ತದಿಂದಲೇ ಅಪ್ಪಟ ಕ್ಷತ್ರಿಯರೇ? ಅಲ್ಲವಲ್ಲ. ಹೀಗಾಗಿ ಗುಣಕ್ಕೆ ಪ್ರಾಶಸ್ತ್ಯಕೊಡಬೇಕು. ಆ ಗುಣ ಎನ್ನುವುದು ಪ್ರಕೃತಿ ಮತ್ತು ಸಂಸ್ಕೃತಿಗಳೆಲ್ಲದರಿಂದ ಒಡಮೂಡಿ ಬರುವಂಥದ್ದು, ಕೆಲವೊಮ್ಮೆ ಜನ್ಮಜಾತವಾಗಿರುತ್ತದೆ. ಕೆಲವೊಮ್ಮೆ ಪರಿಸರದಿಂದ ಬರುತ್ತದೆ. ಅಧ್ಯಯನದಿಂದ ಪ್ರೇರಣೆಯಿಂದಲೂ ಬರುತ್ತದೆ. ಹೀಗೆ ಬೆರಳಿಟ್ಟು ಇಂಥದ್ದರಿಂದಲೇ ಈ ಗುಣ ಬಂದಿದೆ ಎಂದು ತೋರ್ಪಡಿಸುವುದಕ್ಕೆ ಸಾಧ್ಯವಿಲ್ಲ. ಒಟ್ಟಿನಲ್ಲಿ ಕ್ಷಾತ್ರವು ಗುಣಾಶ್ರಿತವಾದಂಥದ್ದು ಜನ್ಮಾಶ್ರಿತವಾದುದಲ್ಲ, ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನೇ ಹೇಳಿದ್ದಾನೆ.

**ವೇದಗಳಲ್ಲಿ ಕ್ಷಾತ್ರ ಪ್ರಜ್ಞೆ:** ವರ್ಣಗಳೂ ಬ್ರಹ್ಮನಿಂದ-ಪ್ರಜಾಪತಿಯಿಂದ ಸೃಷ್ಟಿವಾದದ್ದು, ಇಂದ್ರನು ಸಾಕ್ಷಾತ್ ಕ್ಷತ್ರಿಯತತ್ತ್ವದ ಸಂಕೇತವಾಗಿ ನಿಲ್ಲುತ್ತಾನೆ. ಅಗ್ನಿಯು ಬ್ರಾಹ್ಮತತ್ತ್ವದ ಸಂಕೇತವಾಗಿ ನಿಲ್ಲುತ್ತಾನೆ. ಇಂದ್ರಾಗ್ನಿಗಳು ಕ್ಷಾತ್ರ-ಬ್ರಾಹ್ಮಗಳ ಸಮಾಯೋಗವಾಗಿ ಬರುತ್ತಾರೆ. ಇಂದ್ರನನ್ನೇ ಋಗ್ವೇದದಲ್ಲಿ ಹೆಚ್ಚಾಗಿ ಸ್ತೋತ್ರ ಮಾಡಿದ್ದಾರೆ. ಹೀಗಾಗಿ ಋಗ್ವೇದದ ಪ್ರಧಾನದೇವತೆ ಇಂದ್ರ. ಆ ಇಂದ್ರನೊಳಗೆ ಕ್ಷಾತ್ರ-ಪೌರುಷದ ಎಳೆಗಳಾದ ವಿಷ್ಣುವಾಗಲಿ, ಶಿವನಾಗಲಿ ಸೇರಿ ಹೋಗುತ್ತಾರೆ. ಇಂದ್ರನ ಮಗಳು ದೇವಸೇನೆಯನ್ನು ಮದುವೆಯಾದ ಸ್ಕಂದನೂ ಅಲ್ಲಿಯೇ ಸೇರುತ್ತಾನೆ. ವೇದಗಳಲ್ಲಿ ಬರುವ ಪ್ರಮುಖ ದೇವತೆಗಳ ಪೈಕಿ ಇಂದ್ರ, ರುದ್ರ ಮತ್ತು ವಿಷ್ಣುಗಳು ವಿಶೇಷವಾಗಿ ಕ್ಷಾತ್ರವನ್ನು ಪ್ರತಿನಿಧಿಸುತ್ತಾರೆ. ವರುಣನು ಕ್ಷಾತ್ರದ ಜೊತೆಗೆ ನಿಯಮದ ವ್ಯವಸ್ಥೆಯನ್ನು ಕಾಪಾಡಿಕೊಂಡು ಬರುವ ಋತಾಧಿದೇವತೆ. ದೇವತೆಗಳ ಮತ್ತು ಋಷಿಗಳ ವಂಶಗಳೂ ಪುರಾಣಗಳಲ್ಲಿ ವ್ಯಾಪಕವಾಗಿ ಕಾಣಿಸುತ್ತವೆ. ಬ್ರಹ್ಮನಿಂದ ನವಬ್ರಹ್ಮರು ಅಥವಾ ಪ್ರಜ್ಞಾಪತಿಗಳ ಸೃಷ್ಟಿಯಾಯಿತು. ಅವರಲ್ಲಿ ಅನ್ಯತಮರಾದ ಭೃಗುಋಷಿಗಳಲ್ಲಿ ಭಾರ್ಗವ ಸಂತಾನವು ಕ್ಷಾತ್ರ ಪೌರುಷಕ್ಕೆ ಸಂಕೇತವಾಗಿ ನಿಲ್ಲುತ್ತದೆ. ಅಂಗೀರಸರಲ್ಲಿ ಕ್ಷಾತ್ರಸತ್ತ್ವದ ಬ್ರಾಹ್ಮೋದ್ದೀಪನವು ಹೆಚ್ಚಾಗಿತ್ತು. ಸಿಂಧುದ್ವೀಪ, ವಿಶ್ವಾಮಿತ್ರ, ದೇವಾಪಿ ಮೊದಲಾದ ಕ್ಷತ್ರಿಯರೇ ಮುಂದೆ ಮಹರ್ಷಿಗಳಾದರು. ಹೀಗಾಗಿ ಮುನಿಗಳಲ್ಲಿಯೂ ಕ್ಷಾತ್ರಪೌರುಷವು ಕಾಣಿಸುತ್ತದೆ. ಹಾಗೆಯೇ ಆಧುನಿಕವಿದ್ಯೆಯಾದ ಮಾನವಶಾಸ್ತ್ರದ ಹಿನ್ನೆಲೆಯಲ್ಲಿ ನೋಡಿದರೆ ಕ್ಷತ್ರಿಯಾಂಶವು ಮೊದಲಿಗೇ ಕಂಡುಬರುವುದು, ಜನಸಮುದಾಯದಲ್ಲಿ ಯಾವಾಗ ಅವ್ಯವಸ್ಥೆಯುಂಟಾಯಿತೋ, ಆಗಲೇ ಇದು ಉದಯಿಸಿತು, ವ್ಯವಸೆಯೆಂದೊಡನೆ ಕ್ಷಾತ್ರವೇ ಬೇಕು. ಆ ದೃಷ್ಟಿಯಿಂದ ನೋಡಿದರೆ ಜನಜೀವನ ಭಾಷೆಗೆ ವ್ಯಾಕರಣ ಎಂದರೆ ಕ್ಷಾತ್ರ ವ್ಯಾಕರಣಕ್ಕೆ ಒಂದು ದರ್ಶನ ಬೇಕಾಗುತ್ತದೆ. ಅದೇ ಬ್ರಾಹ್ಮ, ವ್ಯವಹಾರ್ಯವಾದ ಮಾತಿಗೆ ಒಂದು ವ್ಯಾಕರಣ ಎಂಬಂತೆ ಜಗದ್ಭಾಷೆಗೆ ಬೇಕಾದದ್ದು ಕ್ಷಾತ್ರವೇ.

ದೇಶ ಕಾಲ-ನಿಯಮಗಳು ಬಂದೊಡನೆ ವ್ಯವಸ್ಥೆ ಬಂದಿತು. ಭಾಷೆಯು ಕಾಲದ ಅಧೀನ. ಅಂತೆಯೇ 'ಕ್ಷಾತ್ರ'ವೆನ್ನುವುದು ನಿಸರ್ಗಸಹಜವಾಗಿಯೇ ಇದೆ ಎನ್ನುವುದನ್ನು ಒಪ್ಪಬೇಕು, ಅದು ಯಥಾಕಾಲ ಆವಿರ್ಭವಿಸುತ್ತದೆ. ಮಾನವಶಾಸ್ತ್ರ ವಿದ್ವಾಂಸರು ಹೇಳುವಂತೆ ಹಿಂಸಿಸುವ ಹಿಂಸ್ರಪ್ರಾಣಿಗಳ ಮೊದಲಾದ ವಿಧ್ವಂಸಕಗಳಿಂದ ಆದಿಮನುಜರು ತಮ್ಮನ್ನು ರಕ್ಷಣೆ ಮಾಡಿಕೊಳ್ಳಬೇಕಾದರೆ ಒಬ್ಬ ಮುಂದಾಳು ಬೇಕಾದನು. ಇಲ್ಲಿಂದಲೇ ಕ್ಷಾತ್ರವು ಉದಯಿಸಿತು, ನಮ್ಮಲ್ಲಿಯೇ ಇದು ಅನುದಿನವೂ

ಗೋಚರವಾಗುತ್ತದೆ. ನಮ್ಮಲ್ಲಿ ಕೂಡ ಕ್ಷಾತ್ರಾಂಶವಿಲ್ಲದಿದ್ದರೆ ಹೇಗೆ? ಅನುಕ್ಷಣದ 'ಪರಾವರ್ತಿತ ಪ್ರತಿಕ್ರಿಯೆ'ಯು (Reflex action) ಕ್ಷಾತ್ರದ ಅಂಶವೇ ಆಗಿದೆ. ನಿಸರ್ಗದಲ್ಲಿ ಕ್ಷಾತ್ರವು ಅನಿವಾರ್ಯ, ನಾವು ಇದನ್ನು ಪ್ರಶ್ನೆ ಮಾಡುವಂತೆಯೇ ಇಲ್ಲ. ನಿಸರ್ಗ ಅಥವಾ ಪ್ರಕೃತಿಗೆ ಅವಿರೋಧವಾಗಿಯೇ ಸಂಸ್ಕೃತಿಯು ಬೆಳೆಯುತ್ತದೆ, ಬೆಳೆಯಬೇಕು ಕೂಡ, ಹೀಗಲ್ಲವಾದರೆ ವಿನಾಶವು ಶತಸಿದ್ಧ.

**ಯಜುರ್ವೇದದಲ್ಲಿ ಕ್ಷಾತ್ರಪ್ರಜ್ಞೆ:** ಯಜುರ್ವೇದದಲ್ಲಿ ಬಹಳ ವ್ಯಾಪಕವಾಗಿ ಕ್ಷಾತ್ರತತ್ತ್ವದ ಸಾರ್ವಭೌಮತ್ವವನ್ನು ಕಾಣುತ್ತೇವೆ. ಅಲ್ಲಿ ಅಶ್ವಮೇಧಯಾಗವೇ ಕ್ಷಾತ್ರತತ್ತ್ವದ ಬಲುದೊಡ್ಡ ಸಂಕೇತವಾಗಿದೆ. ತೈತ್ತಿರೀಯ ಯಜುರ್ವೇದ ಸಂಹಿತೆಯಲ್ಲಿ 'ಯಜುರ್ವೇದಂ ಕ್ಷತ್ರಿಯಸ್ಯಾಹುರ್ಯೋನಿಮ್'(ಯಜುರ್ವೇದವು ಕ್ಷತ್ರಿಯನ ಮೂಲ) ಎಂಬ ಮಾತು ಬರುತ್ತದೆ. ನಮ್ಮ ವೇದಗಳಲ್ಲಿ ಋಕ್ಕನ್ನು ಬ್ರಾಹ್ಮ, ಯಜುಸ್ಸನ್ನು ಕ್ಷಾತ್ರ ಮತ್ತು ಸಾಮವನ್ನು ವೈಶ್ಯ ಎಂದು ಕರೆಯಲಾಗಿದೆ. ಋಕ್ಕು ಪ್ರಾರ್ಥನಾತ್ಮಕವಾದದ್ದು, ಸಾಮ ಔಪಾಸನಾತ್ಮಕವಾದದ್ದು, ಅಥರ್ವಣವು ಲೌಕಿಕಾಲೌಕಿಕಗಳನ್ನು ಸೇತುಭೂತವಾದದ್ದು.

ಯಜುರ್ವೇದವು ಕ್ಷಾತ್ರ, ರಕ್ಷಣಾತ್ಮಕ ಮತ್ತು ಶತ್ರು ನಿವಾರಣಾತ್ಮಕ, ಧನುರ್ವೇದ ಅಥವಾ ಅಥರ್ವವೇದವನ್ನು ಇದರ ಉಪ ವೇದವೆಂದೇ ಕರೆಯಲಾಗುತ್ತದೆ. ಯಜುರ್ವೇದದಲ್ಲಿ ಬರುವ ರಾಜಸೂಯ ಸೌತ್ರಾಮಣಿ, ವಾಜಪೇಯ, ಅಶ್ವಮೇಧಾದಿ ಯಾಗಗಳೆಲ್ಲ ಕ್ಷಾತ್ರಯಾಗಗಳು ಎಂದೇ ಪ್ರಸಿದ್ಧವಾಗಿವೆ. ನಷ್ಟರಾಜ್ಯಸಂಪಾದನಕ್ಕಾಗಿ, ಸೇನಾಸನ್ನಾಹಕ್ಕಾಗಿ ಮಾಡುವುದು ವಾಜಪೇಯ, ಮಿತ್ರಸಂಚಯಕ್ಕಾಗಿ ಮಾಡುವುದು ಸೌತ್ರಾಮಣಿ, ರಾಜನೊಬ್ಬನ ಉದಯವಾಗಿದೆ ಎಂದು ಘೋಷಣೆ ಮಾಡುವುದು ರಾಜಸೂಯ, ಸಾಮ್ರಾಜ್ಯವಿಸ್ತರಣೆ ಮಾಡಿ ಸಾರ್ವಭೌಮತ್ವವನ್ನು ಪಡೆಯುವಂಥದ್ದು, ಅಶ್ವಮೇಧ ಇವುಗಳಲ್ಲೆಲ್ಲ ಅಪ್ರತಿಮಕ್ಷಾತ್ರವನ್ನು ಕಾಣುತ್ತೇವೆ.

**ಅಥರ್ವವೇದದಲ್ಲಿ ಕ್ಷಾತ್ರಪ್ರಜ್ಞೆ:** ಅಥರ್ವವೇದದಲ್ಲಿ ರಾಜನೀತಿ ಮತ್ತು ಯುದ್ಧನೀತಿ ಪ್ರಕರಣಗಳು 'ದೇವತೆಗಳೇ! ನಮಗೆ ಶತ್ರುಗಳೇ ಇಲ್ಲದಂತೆ ಮಾಡಿ, ಮಹತ್ತಾದ ಕ್ಷಾತ್ರಕ್ಕಾಗಿ ಉನ್ನತಿಗಾಗಿ ನಮ್ಮನ್ನು ನೀವು ಪ್ರೇರಿಸಿರಿ' ಎಂದು ಕೇಳಿವೆ. ಇದರಿಂದ ವೇದ ಕಾಲದಲ್ಲಿ ಯಾವ ರೀತಿಯಾದ ಶೌರ್ಯದ ಬೋಧನೆಯನ್ನು ಮಾಡುತ್ತಿದ್ದರೆಂಬುದು ತಿಳಿಯುತ್ತದೆ. ರಾಜನಿಗೆ ಪಟ್ಟಾಭಿಷೇಕ ಮಾಡುವಾಗ ಪುರೋಹಿತನು ಹೇಳುವ ಮಾತಿದ, 'ಅಯಂ ದೇವಾನಾಮಸುರೋ ಭಿರಾಜತಿ....' 'ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನ ಅನುಗ್ರಹವಿದೆ. ಐತರೇಯಬ್ರಾಹ್ಮಣದಲ್ಲಿ ಉಲ್ಲೇಖಿಸಿದಂತೆ ಸಿಂಹಾಸನಾರೋಹಣ ಮಾಡಿದ ಬಳಿಕ ರಾಜನ ತಲೆಯ ಮೇಲೆ ಬ್ರಹ್ಮದಂಡದಿಂದ ಬಡಿದು 'ಧರ್ಮದಂಡ್ಯನಾಗಿದ್ದೀಯೆ' ಎಂದು ಅವನನ್ನು ಮೂರು ಬಾರಿ ಎಚ್ಚರಿಸುತ್ತಾರೆ. ಇದಕ್ಕೆ ಪೂರ್ವಭಾವಿಯಾಗಿ ರಾಜನಿಗೆ ಇಡಿಯ ಸಮುದಾಯವೇ 'ನೀನು ನಮ್ಮನ್ನು ಆಳು' ಎಂದು ಅಪ್ಪಣೆ ಕೊಟ್ಟಿರುತ್ತದೆ. ಆದರೆ ಆಳ್ವಿಕೆಯು ಮಾತ್ರ ಧರ್ಮಬದ್ಧ ಆಗಿರಬೇಕೆಂಬುದು ಅವಿಸ್ಮಾರ್ಯ.

ಇದಲ್ಲದೆ ಅಥರ್ವಸಂಹಿತೆಯ ಸಾಕಷ್ಟು ಭಾಗಗಳು ಕ್ಷಾತ್ರ ಮತ್ತು ರಾಜನೀತಿಗಳಿಗೆ ಮೀಸಲಾಗಿರುವುದನ್ನು ವೇದಜ್ಞರೆಲ್ಲ ಬಲ್ಲರು, ಪೃಥ್ವೀಸೂಕ್ತದಲ್ಲಿಯೂ ಋಷಿಗಳು ನಮಗೆ ಕೊಟ್ಟಿರುವ

ಮೌಲ್ಯಗಳ ಬಗೆಗೆ ತಿಳಿಸಿಕೊಡಲಾಗಿದೆ. ಮಾತೃಭೂಮಿಯ ಬಗೆಗೆ ಇರುವ ಆದರ, ತನ್ಮೂಲಕ ಕ್ಷಾತ್ರದ ಬಗೆಗೆ ಇರುವ ನಿಷ್ಠೆ ಎರಡನ್ನೂ ಅಲ್ಲಿಯ ಸುಮಾರು ಅರವತ್ಮೂರು ಮಂತ್ರಗಳಲ್ಲಿ ನೋಡಬಹುದಾಗಿದೆ. ಆದುದರಿಂದ ಹೆಚ್ಚೇನು, 'ಬ್ರಹ್ಮಚರ್ಯೇಣ ತಪಸಾರಾಜಾ ರಾಷ್ಟ್ರಂ ದಿ ರಕ್ಷತಿ' ಎನ್ನುತ್ತಾ ರಾಜನು ತಪಸ್ಸು ಮತ್ತು ಸಂಗಮಗಳಿಂದ ರಾಷ್ಟ್ರವನ್ನು ರಕ್ಷಿಸುವನೆಂಬ ಬ್ರಾಹ್ಮಮಯವಾದ ಕ್ಷಾತ್ರವನ್ನು ಅಥರ್ವವೇದವು ಎತ್ತಿಹಿಡಿದಿರುವುದು ಗಮನಾರ್ಹ.

### ೨.೩. ಧರ್ಮಶಾಸ್ತ್ರಗಳಲ್ಲಿ ಕ್ಷಾತ್ರಪ್ರಜ್ಞೆ

ಧರ್ಮಶಾಸ್ತ್ರಗಳಲ್ಲಿ ರಾಜಧರ್ಮಕ್ಕೆಂದು ಮೀಸಲಾದ ಒಂದು ವಿಶೇಷವೂ ವಿಸ್ತೃತವೂ ಆದ ಪ್ರಕರಣವೇ ಇದೆ. ಮನು-ಯಾಜ್ಞವಲ್ಕ್ಯ-ನಾರದೀಯಾದಿ ಸ್ಮೃತಿಗಳಲ್ಲಿ, ಆಪಸ್ತಂಬ-ಬೋಧಾಯನ-ಗೌತಮಾದಿಗಳ ಧರ್ಮಸೂತ್ರಗಳಲ್ಲಿ ರಾಜಧರ್ಮವನ್ನು ಕುರಿತು ಸಾವಿರಾರು ಪುಟಗಳಷ್ಟು ವಿವರಗಳಿವೆ. ಅವೆಲ್ಲವೂ ಪ್ರಭುತ್ವ ಅದೇಷ್ಟು ಪಾರದರ್ಶಕವೂ ಲೋಕಹಿತಕರವೂ ಆದ ರೀತಿಯಲ್ಲಿ ಸಾಗಬೇಕೆಂಬ ಸನಾತನಧರ್ಮದ ನೀಲನಕ್ಷೆಗಳೇ ಆಗಿವೆ. ಇಂಥ ಸುಸಂಸ್ಕೃತವೂ ವಿಶ್ವಮಂಗಳವೂ ಆದ ಮೌಲ್ಯಗಳು ನಮ್ಮ ಕ್ಷಾತ್ರಪ್ರಜ್ಞೆಯ ಅಂತರ್ದ್ರವ್ಯಗಳಾಗಿ ದುಡಿದಿವೆ.

ಭಾರತೀಯ ಕ್ಷಾತ್ರ ಪರಂಪರೆಯ ರಾಜಧರ್ಮಾದರ್ಶವು ಎಂಥದ್ದೆಂಬುದನ್ನು ಮನಗಾಣಲು ಈ ಕೆಲವು ಧರ್ಮಾರ್ಥಶಾಸ್ತ್ರ ಸೂಕ್ತಗಳ ನಿಯಮಾವಳಿಯನ್ನು ಗಮನಿಸಬಹುದು. ಇಲ್ಲಿ ಮುಖ್ಯವಾಗಿ ಮನಸ್ಮೃತಿಯ ಸೂಕ್ತಿ ನಿಯಮವನ್ನು ನಾವು ಇಲ್ಲಿ ನೋಡಬಹುದು.

'ಸರ್ವೋ ದಂಡಜಿತೋ ಲೋಕೋ ದುರ್ಲಭೋಹಿ ಶುಚಿರ್ನರಃ ।

ದಂಡಸ್ಯ ಹಿ ಭಯಾತ್ಸರ್ವಂ ಜಗದ್ಭೋಗಾಯ ಕಲ್ಪತೇ ॥

ದಂಡೋ ಹಿ ಸುಮಹತ್ತೇಜೋದುರ್ಧರಶ್ಚಾಕೃತಾತ್ಮಭಿಃ ।

ಧರ್ಮಾದ್ವಿಚಲಿತಂ ಹಂತಿ ನೃಪಮೇವ ಸಬಾಂಧವಂ ॥ *(ಶೇಷನವರತ್ನ, ಮನುಸ್ಮೃತಿ, ಪುಟ-೨೫೫-೨೫೭, ೨೦೧೧,).* ಜಗತ್ತೆಲ್ಲವೂ ದಂಡಭೀತಿಯಿಂದಲೇ ತಲೆಬಾಗಿ ನಿಲ್ಲುತ್ತದೆ. ತನ್ನಂತೆಯೇ ನ್ಯಾಯವಾಗಿ ಬಾಳುವ ಮಾನವರ ಸಂಖ್ಯೆ ಎಂದೂ ಸ್ವಲ್ಪವೇ. ದಂಡಭೀತಿಯ ಕಾರಣದಿಂದಲೇ ಜಗತ್ತು ಎಲ್ಲ ಜೀವಿಗಳಿಗೆ ಜೀವನಯೋಗ್ಯವೆನಿಸುತ್ತದೆ. ಆದರೆ ರಾಜನಾದವನು ಇಂಥ ದಂಡವನ್ನು ಸರಿಯಾಗಿ ಬಳಸದಿದ್ದರೆ ಇಡಿಯ ದೇಶದಲ್ಲಿಯೇ ನ್ಯಾಯ-ನೀತಿಗಳೂ ನೆಮ್ಮದಿ-ಸಂಪದಗಳೂ ನಶಿಸಿ ತನ್ಮೂಲಕ ಧರ್ಮಚ್ಯುತನಾದ ಪ್ರಭುವು ತನ್ನ ಬಂಧು ಪರಿವಾರ ಸಮೇತ ಅಳಿಯುತ್ತಾನೆ.

ಇದೇ ರೀತಿಯಾಗಿ ಅಸಂಖ್ಯ ಧರ್ಮಶಾಸನಗಳು ಭಾರತೀಯ ಕ್ಷಾತ್ರಪ್ರಜ್ಞೆಯ ಬುನಾದಿಯನಿಸಿವೆ. ಇವೆನ್ನೆಲ್ಲ ಕಂಡಾಗ ನಮ್ಮ ನಾಡಿನ ರಾಜಧರ್ಮವು ಆದೆಷ್ಟು ಉದಾರ, ಧೀರ ಗಂಭೀರ ಎಂದು ತಿಳಿಯದಿರದು. ಧರ್ಮಶಾಸ್ತ್ರಗಳಲ್ಲಿ ಬರುವ ಆಚಾರ, ಪ್ರಾಯಶ್ಚಿತ್ತ ವ್ಯವಹಾರ ಮತ್ತು ದಂಡ ಎನ್ನುವ ನಾಲ್ಕು ಪಾದಗಳಲ್ಲಿ ವ್ಯವಹಾರ-ದಂಡನಗಳೆಂಬ ಎರಡು ಪಾದಗಳು ಕ್ಷತ್ರಿಯಾಧೀನವಾದವು, ಆಚಾರ-

ಪ್ರಾಯಶ್ಚಿತ್ತಗಳು ಬ್ರಾಹ್ಮಾಧೀನವಾದವು. ರಾಜ್ಯದಲ್ಲಿ ಉತ್ತಮಾಧಿಕಾರಿಯಾಗಿ ಸಾರ್ವಭೌಮನಾಗಿ ರಾಜನಿರುತ್ತಾನೆ. ಯಾವುದೇ ಧರ್ಮಶಾಸ್ತ್ರ ಸಂಬಂಧಿಯಾದ ಸಮಸ್ಯೆ ಬಂದರೆ ಅದನ್ನು ಪರಿಹರಿಸುವ ಸಮಿತಿಯಲ್ಲಿ ಕ್ಷತ್ರಿಯನೂ ಒಬ್ಬ ಸದಸ್ಯನಾಗಿರಬೇಕು ಎಂಬುದನ್ನು ಶಾಸ್ತ್ರಕಾರರು ಸ್ಪಷ್ಟವಾಗಿ ಹೇಳಿದ್ದಾರೆ. ರಾಜನಿಗೆ ಸಾಮಾಜಿಕ ಮನ್ನಣೆಯು ನಿರಂತರವಾಗಿ ಸಲ್ಲುತ್ತಾ ಬಂದಿದೆ. ಹೀಗಾಗಿ ಕ್ಷಾತ್ರ ಜೀವನವನ್ನು ಗೌರವಿಸುವ ಪ್ರವೃತ್ತಿ ನಮ್ಮಲ್ಲಿ ಬೆಳೆಯಿತು. ರಾಜನಿಂದ ದೇಶದ ರಕ್ಷಣೆಯೂ ನಡೆಯುತ್ತಿತ್ತು. ಸಮೃದ್ಧಿ-ಶಾಂತಿಗಳು ತಮ್ಮಂತೆ ತಾವೇ ನೆಲೆಯಾಗಿರುತ್ತಿದ್ದುವು. ಈಗಲೂ ಅನೇಕ ಉಪನಾಮಗಳು ಕ್ಷಾತ್ರ ಸಂಬಂಧಿಯಾಗಿರುವುದನ್ನು ನಾವು ನೋಡುತ್ತೇವೆ. ಗೌಡ, ಗೌಂಡ, ದೇಸಾಯಿ, ವರ್ಮಾ, ಪಟೇಲ್, ರಾಯಡು, ನಾಯುಡು, ರೆಡ್ಡಿ, ಮೊದಲಿಯಾರ್ ಮುಂತಾದುವೆಲ್ಲ ಇಂಥವೇ. ಆಯುಧಗಳ ಹಾಗೂ ಆಯುಧೋಪಜೀವಿಗಳ ಹೆಸರನ್ನು ಅನೇಕರು ಇಟ್ಟುಕೊಂಡಿದ್ದಾರೆ. ಕಟಿಯಾರ್, ತಲವಾರ್, ರಾಣಾ, ನಾಯಕ, ರಾಠೋಡ, ಚೌಹಾನ್, ಸಿಂಹ ಇತ್ಯಾದಿ ಅನೇಕ ಉದಾಹರಣೆಗಳನ್ನು ನೀಡಬಹುದು. ಜಾಟ/ಜಾಠರು ವಸ್ತುತಃ ಯೋಧರೇ ಆಗಿದ್ದಾರೆ. ಎಲ್ಲ ಕ್ಷತ್ರಿಯ ಸಾಮಾನ್ಯರ ಉಪನಾಮವೆನಿಸಿದ 'ವರ್ಮಾ' ಎಂಬುದು ಕವಚಾರ್ಥಕವಾಗಿದೆ. ಕ್ಷತ್ರಿಯರು ಇಡಿಯ ಸಮಾಜದ ಕವಚವೆಂಬುದು ಇಲ್ಲಿಯ ಆಶಯ.

**೨.೪. ಪುರಾಣಗಳಲ್ಲಿ ಕ್ಷಾತ್ರಪ್ರಜ್ಞೆ**

ವೇದ ಮತ್ತು ಪುರಾಣಗಳೆರಡರಲ್ಲೂ ರಾಜಪರಂಪರೆ ಮತ್ತು ಋಷಿ ಪರಂಪರೆಯನ್ನು ನಾವು ಕಾಣಬಹುದು. ವೇದಗಳಲ್ಲಿ ಮತ್ತೆ ಮತ್ತೆ ಪಂಚಜನರ ಉಲ್ಲೇಖ ಬರುತ್ತದೆ. ಅವು ಯದುಗಳು, ದ್ರುಹ್ಯುಗಳು, ತುರ್ವಷರು, ಪುರುಗಳು ಮತ್ತು ಆನುಗಳು ಎಂಬ ಐದು ಬುಡಕಟ್ಟುಗಳು. ನಮ್ಮ ದೇಶವನ್ನು ಆಳಿದವರು ಪುರುಗಳು, ಅವರ ಅಧೀನದಲ್ಲಿದ್ದವರು ಯದುಗಳು ಮತ್ತು ತುರ್ವಷರು. ಆನು ಹಾಗೂ ದ್ರುಹ್ಯುಗಳು ಬೇರೆ ಬೇರೆ ಕಡೆ ಹೋಗಿ, ವಸಾಹತುಗಳಾಗಿ ಬೆಳೆದರು. ತಾತ್ಪರ್ಯತಃ ನೋಡಿದರೆ ಈ ಐದು ಬುಡಕಟ್ಟುಗಳು ಐದು ವಂಶಗಳಾಗಿ ಬೆಳೆದುಬಂದಿವೆ. ಇವೆಲ್ಲವೂ ಮುಖ್ಯವಾಗಿ ಚಂದ್ರವಂಶಕ್ಕೆ ಸಂಬಂಧಿಸಿವೆ, ಚಂದ್ರವಂಶದ ಕವಲು ಯದುವಂಶ. ಅದರ ಇನ್ನೊಂದು ಕವಲಾಗಿ ಭರತವಂಶ ಅಥವಾ ಕುರುವಂಶವನ್ನು ಕಾಣುತ್ತೇವೆ. ಸೂರ್ಯವಂಶವೂ ಪ್ರಸಿದ್ಧವಾದದ್ದು. ಎರಡೂ ಮುಖ್ಯ ರಾಜವಂಶಗಳು ನಮ್ಮ ಇಡಿಯ ಭಾರತೀಯ ಪುರಾಣಕಥಾನಕಗಳ ಜೀವನಪದ್ಧತಿಯನ್ನೆಲ್ಲ ರೂಪಿಸಿವೆ.

ನಮ್ಮ ದೇಶದ ಎಲ್ಲ ರಾಜರೂ ತಮ್ಮನ್ನು ತಾವು ಚಂದ್ರ ಅಥವಾ ಸೂರ್ಯ ವಂಶಗಳಿಗೆ ಸೇರಿದ್ದೇವೆ ಎಂದು ಉಲ್ಲೇಖ ಮಾಡಿಕೊಳ್ಳುತ್ತಿದ್ದರು. ಎಲ್ಲೋ ಹುಟ್ಟಿದ ಇವರು ತಮ್ಮನ್ನು ತಾವು ಶ್ರೇಷ್ಠವಂಶಸ್ಥರು ಎಂದು ಗುರುತಿಸಿಕೊಳ್ಳುವ ಬೂಟಾಟಿಕೆ ಮಾಡುತ್ತಿದ್ದಾರೆಂದು ಎನ್ನಿಸಿದರೂ ಹಾಗೆ ಅದನ್ನು ಉಪೇಕ್ಷೆ ಮಾಡುವಂತಿಲ್ಲ. ಭಾರತೀಯ ಕ್ಷಾತ್ರಪರಂಪರೆಯ ವೈಭವ ಹಾಗೂ ಅದರ ಮೂಲದ ಜೊತೆಗೆ ಸಮೀಕರಿಸಿಕೊಳ್ಳಲು ಈ ಪ್ರಕ್ರಿಯೆ ಅವಶ್ಯವಾಗಿರುವುದನ್ನು ಕಾಣುತ್ತೇವೆ. ಪ್ರತಿಯೊಬ್ಬರೂ ತನ್ನ ಬದುಕಿಗೆ, ಅಸ್ತಿತ್ವಕ್ಕೆ ಅರ್ಥವನ್ನು ಕಂಡುಕೊಳ್ಳಲು ಪ್ರಯತ್ನಿಸಬೇಕು. ಅದರಲ್ಲಿ

ನೆಮ್ಮೆ ಮತ್ತು ನೆಮ್ಮದಿಗಳನ್ನು ಕಾಣಬೇಕು. ಹಾಗಿಲ್ಲದೆ ಬದುಕಲು ಸಾಧ್ಯವಿಲ್ಲ, ಶೂನ್ಯವಾದವೇ ಕಾಣುತ್ತದೆ. ನಾವು ಉದ್ದೀಪನ ಮಾಡಿಕೊಳ್ಳಲು ಇಲ್ಲಿ ಮುಖ್ಯವಾಗಿ ಸೂರ್ಯವಂಶವೋ ಮತ್ತು ಚಂದ್ರವಂಶವೋ ಯಾವುದಾದರೊಂದು ಬೇಕಾಗುತ್ತದೆ. 'ಕಾಶ್ಯಪಗೋತ್ರಃ, ಆಪಸ್ತಂಬಸೂತ್ರಃ ಯಜುಃಶಾಖಾಧ್ಯಾಯೀ' ಎಂದು ಪ್ರವರವನ್ನು ಹೇಳುವಾಗ 'ಈ ಎಲ್ಲ ಋಷಿಪರಂಪರೆಯಿಂದ ಬಂದಿರುವುದರಿಂದ ನಾನು ಜವಾಬ್ದಾರಿಯಿಂದ ಬದುಕಬೇಕು' ಎನ್ನುವ ಪ್ರಜ್ಞೆಯುಂಟಾಗುತ್ತದೆ. ಬಾಧ್ಯತೆಯನ್ನು ಉನ್ನತೀಕರಣಗೊಳಿಸಿಕೊಳ್ಳಲು ಪುನರ್ನವೀಕರಿಸಿಕೊಳ್ಳಲು ನಾವು ಸೌರ-ಚಂದ್ರ ಮೊದಲಾದ ರಾಜವಂಶಗಳ ಕಡೆಗೆ ತಿರುಗಬೇಕಾಗುತ್ತದೆ. ಸ್ವಸ್ಥಾನಪರಿಜ್ಞಾನ ಹಾಗೂ ತನ್ಮೂಲಕ ಬಾಧ್ಯತೆಗಳನ್ನು ಕಂಡುಕೊಳ್ಳಲು ಇವುಗಳು ಬಂದಿವೆಯೆಂಬುದನ್ನು ಗಮನಿಸಬೇಕು. ಆ ಪರಂಪರೆಯನ್ನು ನಮ್ಮ ಪುರಾಣೇತಿಹಾಸಗಳು ಮತ್ತೆ ಮತ್ತೆ ಹೇಳುತ್ತ ಬಂದಿವೆ. ಇದು ಕ್ಷಾತ್ರ ಪರಂಪರೆಯನ್ನು ಮತ್ತೆ ನೆನಪು ಮಾಡಿಕೊಳ್ಳಬೇಕೆಂಬುದನ್ನು ತೋರಿಸುತ್ತದೆ.

### ೨.೫. ಇತಿಹಾಸಕಾವ್ಯಗಳಲ್ಲಿ ಕ್ಷಾತ್ರಪ್ರಜ್ಞೆ

ರಾಮಾಯಣ-ಮಹಾಭಾರತಗಳೆರಡರಲ್ಲಿಯೂ ಮುಖ್ಯವಾಗಿ ಕಾಣುವುದು ದುಷ್ಟದಮನ ಮತ್ತು ಶಿಷ್ಟರಕ್ಷಣೆಯ ತತ್ತ್ವ ರಾಮಾಯಣ ಮತ್ತು ಮಹಾಭಾರತದ ಮೂಲರಸಗಳಾವುವು ಎನ್ನುವ ಪ್ರಶ್ನೆಯನ್ನಿಟ್ಟುಕೊಂಡು ಆನಂದವರ್ಧನನು 'ರಾಮಾಯಣದ್ದು ಕರುಣರಸ, ಮಹಾಭಾರತದ್ದು ಶಾಂತರಸ 'ರಸಾನಾಂ ರಸಃ' ಎಂದು ವೀರರಸವನ್ನು ಎತ್ತಿಹಿಡಿಯುತ್ತಾರೆ. ರಾಮಾಯಣ-ಮಹಾಭಾರತಗಳಲ್ಲಿ ಎದ್ದು ಕಾಣುವಂಥದ್ದು 'ಧರ್ಮವೀರ' ಕೆಲವೊಂದಂಶಗಳಿಂದ ಅದೇ ಯುಕ್ತವಾದದ್ದೆಂದು ಎನಿಸುತ್ತದೆ.

ನಾಟ್ಯಶಾಸ್ತ್ರದ ವ್ಯಾಖ್ಯಾನವನ್ನು ಬರೆಯುತ್ತಾ ಅಭಿನವಗುಪ್ತನು 'ಅಭಿನವಭಾರತೀಯ'ಯ ಆರನೆಯ ಅಧ್ಯಾಯನದಲ್ಲಿ ರಸಾಧ್ಯಾಯದ ವಿವರಣೆ ಕೊಡುತ್ತಾನೆ. ರಸಗಳಲ್ಲಿ ಪುರುಷಾರ್ಥಗಳನ್ನು ಸಮೀಕರಿಸಿ ತೋರ್ಪಡಿಸುತ್ತಾನೆ. ನಮ್ಮ ಪರಂಪರೆಯಂತೂ ಪುರುಷಾರ್ಥಗಳ ಮೇಲೆಯೇ ನಿಂತಿದೆ. ವಿಶ್ವವ್ಯವಸ್ಥೆಯಿರುವುದೇ ಪುರುಷಾರ್ಥಗಳಲ್ಲಿ ಇಲ್ಲಿ ತ್ರಿವರ್ಗಕ್ಕೂ ಮುಖ್ಯವಾಗಿ ಬೇಕಾಗಿರುವುದು ಕ್ಷಾತ್ರ ಧರ್ಮ ಎನ್ನುವುದು ಒಂದು ವ್ಯವಸ್ಥೆ. ಅದು ನಿಲ್ಲಬೇಕಾದರೆ ದಂಡಧಾರಿಯೊಬ್ಬನು ಬೇಕು ಅಂಥ. ಧರ್ಮದ ಮೂಲಕ ಅರ್ಥ-ಕಾಮಗಳಿಗೆ ನೆಲೆ. ಆಗ ಅವುಗಳಿಗೆ ಬೆಲೆಯೂ ಬರುತ್ತದೆ. ಇಲ್ಲದಿದ್ದರೆ ಅರ್ಥ-ಕಾಮಗಳು ಒಂದನ್ನೊಂದು ತಿಂದುಬಿಡುತ್ತವೆ, ವೀರ ಮತ್ತು ಶೃಂಗಾರಗಳೆರಡೂ ಧರ್ಮ-ಅರ್ಥ-ಕಾಮ ಎಂಬೀ ಮೂರು ಪುರುಷಾರ್ಥಗಳನ್ನು ಪ್ರತಿಪಾದಿಸುವಂಥ ರಸಗಳು. ವೀರಕ್ಕೆ ಧರ್ಮ-ಅರ್ಥಗಳನ್ನು ಪ್ರತಿನಿಧಿಸುವ ಶಕ್ತಿಯಿದೆಯೆಂದರೆ ಧರ್ಮದಲ್ಲಿ ಪಾಲನಲಕ್ಷಣವಿದೆ ಎಂದೇ ಅರ್ಥ. 'ಧಾರಣಾತ್ ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ' ಎನ್ನುವುದು ಮಹಾಭಾರತದಲ್ಲಿ ಪ್ರಸಿದ್ಧವಾದ ಮಾತು. 'ಧಾರಣ' ಎನ್ನುವುದು ಧರ್ಮದ ಇನ್ನೊಂದು ಲಕ್ಷಣ. 'ಧಾರಣಾದ್ಧರ್ಮ(ಧೃ-ಧಾರಣೇ ಎಂಬ ಧಾತುವಿನಿಂದ 'ಧರ್ಮ' ಶಬ್ದವು ನಿಷ್ಪನ್ನ)ಎನ್ನುವಲ್ಲಿ 'ಕ್ಷಿ' ಧಾತುವಿನ ಮೂಲವನ್ನು ನೋಡುತ್ತೇವೆ. ಧರ್ಮ ಎನ್ನುವುದು ಆಶ್ರಯ, ಪಾಲನೆ, ಸಂರಕ್ಷಣೆಗೆ ಸಂಬಂಧಪಟ್ಟಿದೆ. ಅರ್ಥ

ಎನ್ನುವಲ್ಲಿ ಐಶ್ವರ್ಯವಿದ್ದೇ ಇದೆ. ಹೀಗಾಗಿ ಅರ್ಥ ಮತ್ತು ಧರ್ಮ ಈ ಎರಡೂ ಪುರುಷಾರ್ಥಗಳಿಗೆ ಕ್ಷತ್ರಿಯನು ಅನಿವಾರ್ಯನಾಗುತ್ತಾನೆ.

**ರಾಮಾಯಾಣದಲ್ಲಿ ಕ್ಷಾತ್ರಪ್ರಜ್ಞೆ:** ರಾಮಾಯಾಣದಲ್ಲಿ ವಾಲ್ಮೀಕಿಯು 'ಕುಲೋಚಿತಮಿತಿ ಕ್ಷಾತ್ರಂಧರ್ಮಂ ಸ್ವಂ ಬಹುಮನ್ಯತೇ' ಎಂದು ಹೇಳುತ್ತ ಅಯ್ಯೋಧ್ಯಾಕಾಂಡದ ಆರಂಭದಲ್ಲಿ ಹೇಳುತ್ತಾರೆ. ತನ್ನ ಕುಲಕ್ಕೆ ಉಚಿತವಾದದ್ದು ಕ್ಷಾತ್ರವೆಂದು ರಾಮನಿಗೆ ತನ್ನ ಕ್ಷತ್ರಿಯ ವೃತ್ತಿಯ ಬಗೆಗೆ ತುಂಬ ಹೆಮ್ಮೆಯಿತ್ತಂತೆ. ಇದು ಭಾರತವು ಜಗತ್ತಿಗೆ ತೋರ್ಪಡಿಸುವ ಸರಿದಾರಿ. ತನ್ನ ವೃತ್ತಿಯ ಬಗೆಗೆ ಅಭಿಮಾನವಿರಬೇಕು. ರಾಮನು ಗಜವಾಹಿಯಾಗಿ ತುರಗವಾಹಿಯಾಗಿ ಎಲ್ಲ ಕ್ಷಾತ್ರಕರ್ಮವನ್ನೂ ಚೆನ್ನಾಗಿ ಬಲ್ಲವನಾಗಿದ್ದ ಯುದ್ಧಕ್ಕೆ ಹೋದರೆ ಜಯಗಳಿಸದೆ ಬರುತ್ತಿರಲಿಲ್ಲ. ಸುಮಾರು ಇಪ್ಪತ್ನಾಲ್ಕು ಶ್ಲೋಕದಲ್ಲಿ ಇದರ ಬಗಗೆ ಮಹರ್ಷಿಗಳು ಹೇಳುತ್ತಾರೆ. ಅರಣ್ಯಕಾಂಡದ ಆರಂಭದಲ್ಲಿಯೇ ಜನಸ್ಥಾನದಲ್ಲಿರುವ ಋಷಿಗಳು 'ರಾಕ್ಷಸಭಾದೆ' ಬಹಳವಾಗಿದೆ. ನೀನು ರಕ್ಷಣೆ ಕೊಡಬೇಕು ಎಂದು ರಾಮನನ್ನು ಕೇಳಿದಾಗ 'ತಥಾಸ್ತು' ಎಂದು ಹೇಳಿಕಳಿಸಿದದಂತೆ. ಅದಕ್ಕೆ ಸೀತೆ, "ರಾಕ್ಷಸರು ನಮಗೇನೂ ಅಪಕಾರ ಮಾಡಿಲ್ಲ. ಅದಲ್ಲದೆ ನಾವು ವಾನಪ್ರಸ್ಥರಂತೆ ಬಂದಿದ್ದೇವೆ. ವಾನಪ್ರಸ್ಥದಲ್ಲಿರುವಾಗ ಪಾಶುಕಯಾಗ (ಪಶುವನ್ನು ಬಲಿಕೊಟ್ಟ ಮಾಡುವ ಯಾಗ)ಗಳನ್ನು ಧಾನ್ಯಕಯಾಗವಾಗಿ, ಅಜ್ಯಕಯಾಗವಾಗಿ ಮಾಡಬೇಕು. ಈ ಕುರಿತು ಬೃಹದಾರಣ್ಯಕದ ಕಡೆಯಲ್ಲಿ ಹೇಳಿದೆ. ಇಷ್ಟರ ಮಟ್ಟಿಗೆ ಅಹಿಂಸವಾದಿಗಳಾಗಿರಬೇಕೆಂದು ಶಾಸ್ತ್ರವು ಹೇಳುತ್ತದೆ. ನಾವು ದುಷ್ಟರಾಕ್ಷಸರನ್ನು ಹಿಂಸಿಸುವುದಕ್ಕೆ ಇನ್ನಷ್ಟು ದೌಷ್ಟ್ಯಮಾರ್ಗವನ್ನು ಅನುಸರಿಸಬೇಕು. ಇದು ಸರಿಯೇ?" ಎಂದು ಪ್ರಶ್ನಿಸುತ್ತಾಳೆ. ಅದಕ್ಕೆ ಇದು ಆಗಂತಂಕಧರ್ಮ, ನಾವು ಬಯಸಿ ತಂದುಕೊಂಡದ್ದಲ್ಲ. ನಾವು ಶಾಸ್ತ್ರದಲ್ಲಿ ಹೇಳಿದೆ ಎಂದು ವಾನಪ್ರಸ್ಥಕ್ಕೆ ಬಂದವರಲ್ಲಿ ತಂದೆಯವರ ಮಾತನ್ನು ನಡೆಸಿಕೊಳ್ಳುವುದಕ್ಕೆ ಆಗಂತುಕವಾಗಿ ಬಂದಿರುವುದು. ಮೂಲದಿಂದ ನಮ್ಮದು ಕ್ಷಾತ್ರವೃತ್ತಿ, ನಾವು ಎಷ್ಟು ಆಶ್ರಮಗಳನ್ನು ಬದಲಾಯಿಸಿದರೂ ನಮ್ಮ ವರ್ಣವು ಹೋಗುವುದಿಲ್ಲ. ದುಷ್ಟದಮನವೇ ಕ್ಷಾತ್ರವರ್ಣದ ಧರ್ಮ. ಹೀಗಾಗಿ 'ಸ್ನೇಹಾಚ್ಚ ಬಹುಮಾನಾಚ್ಚ ಸ್ಮಾರಯೇ ನ ತು ಶಿಕ್ಷಯೇ' ಎಂಬಂತೆ ನಯವಾಗಿಯೇ ಹೇಳಿದ್ದೇನೆ ಎಂದರೂ ನಿನ್ನ ಮಾತು ನಡೆಯುವಂಥದ್ದಲ್ಲ ಎನ್ನುತ್ತಾನೆ ರಾಮ. ಮಹಾಕಾವ್ಯವಾದ ರಾಮಾಯಣದಲ್ಲಿ ರಾಮನ ಶೌರ್ಯ–ಸ್ಥೈರ್ಯಗಳು ಹೆಜ್ಜೆಹೆಜ್ಜೆಗೆ ಕಾಣುತ್ತೇವೆ. ರಾಮಃ ಸತ್ಯಪರಾಕ್ರಮಃ, ಅಮೋಘ ಕ್ರೋಧಹರ್ಷಣಃ ರಾಮನು ಸತ್ಯವನ್ನೇ ನೆಮ್ಮಿದ ಶೂರ, ರಾಮನ ಸಂತೋಷ–ಕೋಪಗಳಾವುವೂ ವ್ಯರ್ಥವಾಗುವುದಿಲ್ಲ ಇಲ್ಲಿ ಆತನ ಕ್ಷಾತ್ರ ಶೌರ್ಯವನ್ನೇ ತೋರ್ಪಡಿಸುತ್ತವೆ. ಲಕ್ಷ್ಮಣನಲ್ಲಿ, ಹನುಮಂತನಲ್ಲಿ ನಾವು ಅವೇ ಗುಣಗಳನ್ನು ನೋಡುತ್ತೇವೆ. ರಾಮನಿಗೆ ಆ ದೀಕ್ಷೆಯನ್ನು ನೀಡಿದ ವಿಶ್ವಾಮಿತ್ರನು ಸಹ ಅದೇ ಬಗೆಯವನು. ವಾಲಿ, ರಾವಣ, ಮಾರೀಚ, ಸುಬಾಹು, ತಾಟಕೆ, ಶೂರ್ಪಣಕೆಯವರಂಥ ದುಷ್ಟರ ಕೈಗೆ ಸಿಲುಕಿ ನಶಿಸುತ್ತಿದ್ದ ಕ್ಷಾತ್ರವನ್ನು ಪುನರುದ್ಧರಿಸಿದವನು ಶ್ರೀರಾಮ, ವಿಶ್ವಾಮಿತ್ರನಾದರೂ ಹಿಂದೊಮ್ಮೆ ಬ್ರಾಹ್ಮಧ ವಿರುದ್ಧ ಕತ್ತಿ ಮಸೆದು ಆ ಬಳಿಕ ವಿವೇಕಿಯಾಗಿ ಬ್ರಾಹ್ಮ–ಕ್ಷಾತ್ರಗಳ ನೆಲೆ–ಬೆಲೆಗಳನ್ನು ಚೆನ್ನಾಗಿ ಅರಿತು: ಅನುಸರಿಸಿ, ಆಚಾರ್ಯ ಸ್ಥಾನಕ್ಕೇರಿದ ಮಹಾಮಹಿಮ ಹನುಮಂತ, ವಾಲಿ, ಸುಗ್ರೀವ ಮತ್ತು ಲಕ್ಷ್ಮಣ, ಭರತ, ಅಂಗದ, ವಿಭೀಷಣಾದಿಗಳೂ ಕ್ಷಾತ್ರದ ಬೇರೆ ಬೇರೆ ಮಜಲುಗಳಿಗೆ ಮಾದರಿಯಾಗಿದ್ದಾರೆ.

**ಮಹಾಭಾರತದಲ್ಲಿ ಕ್ಷಾತ್ರಪ್ರಜ್ಞೆ:** ಮಹಾಭಾರತಕ್ಕೆ 'ಜಯ' ಎಂಬ ಹೆಸರೂ ಇದೆ. ಜಯ ಶಬ್ದದಲ್ಲಿಯೇ ವೇದವ್ಯಾಸರು ಕ್ಷಾತ್ರಪೌರುಷವನ್ನು ಹೇಳಲು ಹೊರಟಿದ್ದಾರೆ. ಇದರಲ್ಲಿ ಧರ್ಮ ಮತ್ತು ಅಧರ್ಮಗಳು ಎರಡು ಧ್ರುವಗಳು, ದುರ್ಯೋಧನನನ್ನು ದುರ್ಯೋಧನೋ ಮನ್ಯುಮಯೋ ಮಹಾದ್ರುಮಃ ಎಂದೂ ಧರ್ಮರಾಜನನ್ನು ಯುಧಿಷ್ಠಿರೋ ಧರ್ಮಮಯೋ ಮಹಾದ್ರಮಃ ಎಂದೂ ಹೇಳುವಲ್ಲಿ ಕ್ಷತ್ರಿಯನು ಧರ್ಮದಲ್ಲಿ ನೆಲೆಯಾಗಬೇಕು.

ಮಹಾಭಾರತವು ಆರಂಭವಾಗುವುದು ಜನಮೇಜಯನ ಸರ್ಪಯಾಗದ ಮೂಲಕ. ಮಹಾಭಾರತದಲ್ಲಿ ಹೆಜ್ಜೆಹೆಜ್ಜೆಗೂ ಕ್ಷಾತ್ರವು ಹಾಸಗೊಂಡಾಗ ಜಗತ್ತಿಗೆ ಬಂದ ವಿಪತ್ತುಗಳೇನು? ಎಂಬುದರ ಮೀಮಾಂಸೆಯಿದೆ. ಭೀಷ್ಮರ ಪ್ರತಿಜ್ಞೆ, ಶಂತನುವಿನ ಬಯಕೆ, ಪಾಂಡವರ ಜನನ, ಜರಾಸಂಧ ವಧೆ, ರಾಜ ಸೂಯ, ಗೋ ಗ್ರಹಣ, ಕುರುಕ್ಷೇತ್ರಯುದ್ಧದಲ್ಲಿ ಈ ವಿವರಗಳಿವೆ. ಮಹಾಭಾರತದಲ್ಲಿ ವೀರ ಮಹಿಳೆ ಕುಂತಿಯು ತನ್ನ ಮುಪ್ಪಿನಲ್ಲಿ ಕೂಡ ಕ್ಷಾತ್ರಪೌರುಷವನ್ನು ಮೆರೆದ ಸಂಗತಿಯು ಉದ್ಯೋಗ ಪರ್ವದಲ್ಲಿ ಒಕ್ಕಣೆಗೊಂಡಿದೆ. ಆಕೆಯು ರಾಜಸಂಧಾನಕ್ಕೆಂದು ಹಸ್ತಿನಾವತಿಗೆ ಬಂದಿದ್ದ ಶ್ರೀಕೃಷ್ಣನ ಮೂಲಕ ತನ್ನ ಮಕ್ಕಳಿಗೆ ಕಳುಹಿಸಿದ ಸಂದೇಶವು ವಿಶ್ವ ಸಾಹಿತ್ಯದಲ್ಲಿ ನಿಲ್ಲುವಂಥ ವೀರಕಾವ್ಯ.

ಧರ್ಮರಾಜನ ಕ್ಷಾತ್ರ ವಿಮುಖತೆಯನ್ನಂತೂ ಭೀಮ-ದ್ರೌಪದಿಯರ ಮೂಲಕ, ಕುಂತಿ-ಕೃಷ್ಣರ ಮೂಲಕ ಮತ್ತೆ ಮತ್ತೆ ಮೂದಲಿಸಿ ಪರಾಕ್ರಮಪಾರಮ್ಯವನ್ನು ಮೆರೆದಿರುವುದು ವನಪರ್ವ, ಉದ್ಯೋಗಪರ್ವ, ಹಾಗೂ ಶಾಂತಿಪರ್ವಗಳಲ್ಲಿ ಕಾಣುತ್ತೇವೆ. ಮಹಾಭಾರತದಲ್ಲಿ ವೀರ ಜೀವನವನ್ನು ಓಜಸ್ವಿಯಾಗಿ ನಿರೂಪವಿದೆ. ಅತಿಮಾನುಷಸ್ತರದ ದೇವಾಸುರಯುದ್ಧ ಅವಮಾನುಷಸ್ತರದ ಗರುಡ-ಸರ್ಪಯುದ್ಧ ಹಾಗೂ ಮಾನಷಸ್ತರದ ಪಾಂಡವ-ಕೌರವಯುದ್ಧಗಳನ್ನು ಒಳಗೊಳ್ಳುತ್ತ ನಮ್ಮ ಕ್ಷಾತ್ರ ಪರಂಪರೆಯ ನೆಲೆ-ಬೆಲೆಗಳನ್ನು ಮಾರ್ಮಿಕವಾಗಿ ವಿವೇಚಿಸಿದೆ. ಭಗವದ್ಗೀತೆಯಲ್ಲಿ ಕೃಷ್ಣನು ಕ್ಷಾತ್ರಧರ್ಮವನ್ನು ಬೋಧಿಸುತ್ತಾನೆ. ಕೃಷ್ಣ ಬಾಯಿಯಲ್ಲಿ ಬರುವ ಮೊದಲ ಮಾತು:

"ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥
ಕ್ಲೈಬ್ಯಂ ಮಾಸ್ಮ ಗಮಃ ಪಾರ್ಥ ನೈತತ್ತ್ವಯುಪಪದ್ಯತೇ ।
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ"॥ *(ಶೇಷಗಿರಿ ರಾವ್ ಎಲ್ ಎಸ್, ಭಗವದ್ಗೀತಾ, ಪುಟ-೬೮, ೭೧, ೧೯೮೯).* 'ಓಹಿ ಶತ್ರೂನ್ ಎನ್ನುವ ಗೀತೆಯ ಮಾತಿನಲ್ಲಿ ಅಧಾರ್ಮಿಕರಾದ ನಿನ್ನ ಶತ್ರುಗಳನ್ನು ಧನುರ್ಧಾರಿಯಾಗಿ ಕೊಲ್ಲು ಎಂದು ಕ್ಷಾತ್ರವನ್ನು ಪ್ರಚೋಧನೆ ಮಾಡುತ್ತಾನೆ. ಅದನ್ನು ಅರ್ಜುನ ಒಪ್ಪಿಕೊಂಡು 'ಸ್ಥಿತೋಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ' ಎನ್ನುತ್ತಾನೆ. 'ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ'ಎಂಬಲ್ಲಿ ಬಿಲ್ಲು ಹಿಡಿದ ಅರ್ಜುನನ ಸತ್ತ್ವವು ತಿಳಿಯುತ್ತದೆ. ಮಹಾಭಾರತದ ಕೇಂದ್ರವಾದ ಗೀತೆಯನ್ನು ಮೊದಲುಗೊಂಡು

ಎಲ್ಲ ವಿವರಗಳಲ್ಲಿಯೂ ಬ್ರಾಹ್ಮಾಧೀನವಾದ ಕ್ಷಾತ್ರಮೌಲ್ಯವನ್ನೇ ಕಾಣುತ್ತೇವೆ. ಅಂಥ ಧರ್ಮರಾಜನೂ ಯುದ್ಧಕ್ಕೆ ಬಂದಾಗ ಅವನು ಹಿಂಜರಿಯುವುದಿಲ್ಲ. ಅವನಿಗೆ ಗೀತೋಪದೇಶ ಬೇಕಾಗುವುದಿಲ್ಲ. ಭೀಮ ನಕುಲ, ಸಹದೇವರಿಗೂ ಬೇಕಾಗಲಿಲ್ಲ. ಇದರಿಂದ ಅವರೆಲ್ಲರ ಬದ್ಧತೆ ಅದೆಷ್ಟು ದೃಢವಾಗಿತ್ತು ಎನ್ನುವುದು ತಿಳಿಯುತ್ತದೆ. 'ಮಹಾಭಾರತದ ಉತ್ತರಾರ್ಧದಲ್ಲಿ ವಾನಪ್ರಸ್ಥನಾಗುವಾಗ ಧೃತರಾಷ್ಟ್ರನು ಧರ್ಮರಾಜನಿಗೆ ಮಾಡಿದ ಉಪದೇಶದಲ್ಲಿಯೂ ಕಟ್ಟ ಕಡೆಯಲ್ಲಿ, ಸಾವಿತ್ರಿಯಲ್ಲಿಯೂ ನಮಗೆ ಕ್ಷಾತ್ರಾನುಪ್ರಾಣಿತವಾದ ಧರ್ಮ ಮತ್ತದರ ಬೆಲೆ ತಿಳಿಯುತ್ತದೆ. ಎಲ್ಲ ಮಹಾಕಾವ್ಯಗಳಲ್ಲಿಯೂ ಕ್ಷಾತ್ರ ಪರಂಪರೆಯ ಮೌಲ್ಯ ಕಾಣಿಸುತ್ತದೆ' *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೨೬, ೨೦೧೬).*

**೨.೬. ಸಾಮ್ರಾಜ್ಯಯುಗದಲ್ಲಿ ಕ್ಷತ್ರಿಯರು**

ವೇದಇತಿಹಾಸ, ಪುರಾಣಗಳಿಂದ ನಾವು ವಾಸ್ತವದ ಘಟಕ್ಕೆ ಬರುವುದಾದರೆ, ವೇದಗಳಲ್ಲಿ ಕಂಡಬರುವ ರಾಜವಂಶೀಯ ವಿವರಗಳೆಲ್ಲವೂ ಇತಿಹಾಸವೇ. ಉದಾರಣೆಗೆ ವೇದಗಳಲ್ಲಿ ಕಂಡಬರುವ ರಾಜರಲ್ಲಿ ಒಬ್ಬನು ದಿವೋದಾಸ ಅವನ ಮಗ ಸುದಾಸ. ಸುದಾಸನ ಪುರೋಹಿತರು ವಸಿಷ್ಠರು ದಾಶರಾಜ್ಞಯುದ್ಧ ಎಂದು ಹತ್ತು ರಾಜರುಗಳು ಸೇರಿ ಅವನ ವಿರುದ್ಧ ಸೆಣಸಾಡಿದ್ದು, ಅವರೆಲ್ಲರನ್ನು ವಿಶ್ವಾಮಿತ್ರರು ನಿಭಾಯಿಸಿದ್ದು, ಈ ಎಲ್ಲವೂ ಋಗ್ವೇದದಲ್ಲಿ ಕಾಣಸಿಗುತ್ತದೆ. ಅದೆಲ್ಲ ಅಕ್ಷರಶಃ ಇತಿಹಾಸವೇ. ವೇದಗಳಲ್ಲಿ ಕಾಣುವ ಮತ್ತೊಬ್ಬ ಅತಿಶ್ರೇಷ್ಠ ಮಹಾರಜ ದುಷ್ಯಂತ ಮತ್ತು ಅವನ ಮಗ ಭರತ (ಸರ್ವದಮನ) ಚಕ್ರವರ್ತಿ, ಆ ಭರತನಿಂದಲೇ ನಮ್ಮ ದೇಶಕ್ಕೆ 'ಭಾರತ' ಎನ್ನುವ ಹೆಸರು ಬಂದಿದೆ. ಅವನ ಉಲ್ಲೇಖಗಳನ್ನು ಐತ್ತರೇಯಾದಿ ಬ್ರಾಹ್ಮಣಗಲ್ಲಿ ಕಾಣುತ್ತವೆ. ಭರತಚಕ್ರವರ್ತಿಯು ನೂರಮೂವತ್ತು ಅಶ್ವಮೇಧಯಾಗಗಳನ್ನು ಐವತ್ತು ರಾಜಸೂಯಯಾಗಗಳನ್ನು ಮಾಡಿದವನು. ಅಷ್ಟು ಪ್ರಮಾಣದಲ್ಲಿ ರಾಜಸೂಯ, ಅಶ್ವಮೇಧಾದಿಗಳನ್ನು ಮಾಡಿದವರು ಮತ್ತೆಲ್ಲಿಯೂ ಕಾಣಸಿಗುವುದಿಲ್ಲ. ಈ ಮೂಲಕ ನಾವಿಲ್ಲಿ ಕ್ಷಾತ್ರತೇಜಸ್ಸು ಅದೆಷ್ಟು ಪೌನಃ ಪಣ್ಯ ಚೈತನ್ಯವನ್ನು ಪಡೆಯುತ್ತಿತ್ತೆಂಬುದನ್ನು ಅರಿಯಬಹುದು. ಒಂದೊಂದು ಕ್ಷತ್ರಿಯಯಾಗವೂ ಒಂದೊಂದು ರೀತಿಯ ಉತ್ಸಾಹ, ಶೌರ್ಯ ದೇಶ ಹಿತಗಳ ನಿರೀಕ್ಷಣವೆಂದೇ ಹೇಳಬೇಕು. ಅಶ್ವಮೇಧ ಯಾಗವು, ರಾಜ್ಯವಿಸ್ತರಣೆ, ಮತ್ತು ಸಾರ್ವಭೌಮತ್ವ ಪ್ರಾಪ್ತಿಗಾಗಿ ಮಾಡುವಂಥದ್ದು. ಅದು ರಾಜನ ಸೃಷ್ಟಿಶೀಲತೆಯನ್ನು ಸಂಕೇತಿಸುತ್ತದೆ. ಸನಾತನೀಯರಲ್ಲಿ ಪ್ರಚಲಿತವಿದ್ದ ನಾಲ್ಕು ಕ್ಷತ್ರಿಯಯಾಗಗಳೆಂದರೆ, ಸೌತ್ರಾಮಣಿ, ವಾಜಪೇಯ, ರಾಜಸೂಯ ಮತ್ತು ಅಶ್ವಮೇಧ. ಈ ಯಾಗಗಳಿಂದಾಗಿ ಕ್ಷಾತ್ರಪರಂಪರೆಯ ನಿಸ್ವಾರ್ಥತೆ, ದೂರದೃಷ್ಟಿ ಮತ್ತು ದೇಶಾಭಿವೃದ್ಧಿಯ ಕಡೆಗೆ ಅವರು ನೀಡುತ್ತಿದ್ದ ಲಕ್ಷ್ಯವನ್ನು ನಾವಿಲ್ಲಿ ಗಮನಿಸಬೇಕು.

ಬುದ್ಧನ ಕಾಲದ ಭಾರತದಲ್ಲಿ ಅನೇಕ ಕ್ಷಾತ್ರಕುಲದ ಬುಡಕಟ್ಟುಗಳಿದ್ದವು. ಅವೆಲ್ಲ ಗಣತಂತ್ರಗಳೆಂದು ಹೆಸರಾಗಿದ್ದವು. ಮತ್ತೆ ಕೆಲವು ರಾಜಪ್ರಭುತ್ವಗಳೂ ಇದ್ದವು. ಇವುಗಳೆನ್ನೆಲ್ಲ ಕುರಿತು 'ಷೋಡಶಮರಾಜನಪದ' ಎಂದು ಬೌದ್ಧಗ್ರಂಥಗಳಲ್ಲಿ ಉಲ್ಲೇಖಗಳಿವೆ. ಕ್ಷಾತ್ರ ಪರಂಪರೆಯ ಹಿನ್ನೆಲೆಯಲ್ಲಿ ಮಗಧ ಸಾಮ್ರಾಜ್ಯವನ್ನು ನೋಡುವುದಾದರೆ, ಶಿಶುನಾಗ ಮೊದಲು ಆಳಿದನು. ಆ ಬಳಿಕ ಬಂದವರು

ನಂದರು. ನಂದರ ವಂಶದ ಕೊನೆಯ ರಾಜ ಧನನಂದ, ಮಹಾಪದ್ಮನಂದನಿಂದ ಆರಂಭವಾಗಿ ಸುನಂದನೇ ಮುಂತಾದವರೆಲ್ಲ ಆಳಿದರು. ಸಾರ್ವಭೌಮನಾದವನು ತುಂಬ ವಿಸ್ತಾರವಾದ ರಾಜ್ಯವನ್ನು ವಿಕೇಂದ್ರೀಕರಣಗೊಳಿಸಿದಾಗ ಏಕಚಕ್ರಾಧಿಪತ್ಯವನ್ನಿಟ್ಟುಕೊಂಡು ಮಿಕ್ಕ ಪ್ರಾಂತಗಳ ಜೊತೆಗೆ ಸಾಮರಸ್ಯ ಸಂಪರ್ಕವನ್ನಿಟ್ಟುಕೊಳ್ಳದಿದ್ದಾಗ, ನಿರಂತರ ಚಾರಚಕ್ಷುವಾಗಿಲ್ಲದಿದ್ದಾಗ ಆ ಸಾಮ್ರಾಜ್ಯವು ಕುಸಿದು ಹೋಗುತ್ತದೆ. ಅದಕ್ಕೆ ಅಶೋಕನ ಕಾಲದಲ್ಲಿಯೇ ದೃಷ್ಟಾಂತಗಳು ಸಿಗುತ್ತವೆ.

ನಂದರ ಕಾಲದಲ್ಲಿ ಒಂದಿಷ್ಟು ದೌರ್ಜನ್ಯದಿದ್ದಿತು. ಅದೆಲ್ಲವನ್ನೂ ನಿರ್ಮೂಲಿಸುವಂತೆ ಒಂದು ಮಹಾಶಕ್ತಿಯ ಉದಯವಾಯಿತು, ಅವನೇ ಚಂದ್ರಗುಪ್ತಮೌರ್ಯ. ನಮ್ಮ ಲಿಖಿತ ಇತಿಹಾಸವೆಂದು ಎಲ್ಲರೂ ಒಪ್ಪುವಲ್ಲಿ ಎದ್ದುತೋರುವ ಪ್ರಖರವಾದ ಕ್ಷಾತ್ರತೇಜಸ್ಸಿನ ಒಂದು ಕಾಂತಿಯೆಂದರೆ ಚಂದ್ರಗುಪ್ತಮೌರ್ಯ. ಈ ಬಗೆಗೆ ಜೈನ, ಬೌದ್ಧ, ಮತ್ತು ಸನಾತನ, ಧರ್ಮೀಯ ಆಕರಗಳು ಬಹಳಷ್ಟಿವೆ. ಕೆಲವು ಆಕರಗಳ ಪ್ರಕಾರ ಚಂದ್ರಗುಪ್ತನು ಸರ್ವಾರ್ಥಸಿದ್ಧಿ ಎಂಬ ರಾಜನ ಮಗನಾದ ಮೌರ್ಯನ ಮಕ್ಕಳಲ್ಲಿ ಒಬ್ಬ. ಧೀರ ಮನೋಧರ್ಮವೇ ಬಹಳ ಮುಖ್ಯ, ಕೆಲವರಿಗೆ ಅದು ಜನ್ಮತಃ ಬಂದಿರುತ್ತದೆ. ನಾಮಮಾತ್ರ ಕ್ಷತ್ರಿಯರಾದ ಎಲ್ಲರಿಗೂ ಬರುತ್ತದೆ, ಎಂದು ಹೇಳುವುದಕ್ಕಾಗುವುದಿಲ್ಲ, ಕೆಲವರು ನೋಡಿ ಕಲಿತಿರಬಹುದು, ಇನ್ನು ಕೆಲವರಿಗೆ ವ್ಯಕ್ತಿತ್ವದಿಂದಲೇ ಬಂದಿರಬಹುದು.

ಚಂದ್ರಗುಪ್ತಮೌರ್ಯನು ತನ್ನ ಸಾಮರ್ಥ್ಯದಿಂದಲೇ ಬೆಳೆದವನು. ಇಂಥವರು ಯಾವುದೇ ಒಂದು ಜನಾಂಗದಲ್ಲಿ, ದೇಶದಲ್ಲಿ ನಿರ್ಣಾಯಕವಾದ ಸ್ಥಾನಕ್ಕೆ ಬಂದು ಎಲ್ಲರು ಅಭಿವೃದ್ಧಿಗೆ ಕಾರಣವಾಗಬಲ್ಲರು. ಚಾಣಕ್ಯನು ಅವನನ್ನು ಚೆನ್ನಾಗಿ ರೂಪಿಸಿದನು. ಇಲ್ಲಿ ಯಜುರ್ವೇದದ ಮಾತನ್ನು ಮತ್ತೆ ನೆನಪು ಮಾಡಿಕೊಳ್ಳಬೇಕು. "ಯತ್ರ ಬ್ರಹ್ಮಂ ಚ ಕ್ಷತ್ರಂ ಚ ಸಂಯಂಚೌ ಚರತಃ ಸಹ", ಕ್ಷಾತ್ರ–ಬ್ರಾಹ್ಮ ಸಮಾಯೋಗವು ಬಹಳ ಮುಖ್ಯ ಅವರೆಡೂ ಇರುವುದಷ್ಟೆ. ಪ್ರಜಾನೀಕ, ಸಾಮಾನ್ಯ ಪ್ರಜೆಗಳ ಹಿತಕ್ಕಾಗಿ ಪ್ರಜ್ಞಾಶಾಲಿಗಳಾದವರೂ ಪರಾಕ್ರಮಶಾಲಿಗಳಾದವರೂ ದುಡಿಯಬೇಕು, ಸನಾತನಧರ್ಮವು ಇದನ್ನು ಎಡೆ ಬಿಡಿದ ಪಲ್ಲವಿಯಂತೆ ಹೇಳಿಕೊಂಡುಬಂದಿದೆ.

ಗಣತಂತ್ರವ್ಯವಸ್ಥೆಯಲ್ಲಿ ಇರುವ ದೊಡ್ಡ ಸಮಸ್ಯೆಯೇ ಒಳಜಗಳದ್ದು. ಪ್ರತಿಯೊಂದನ್ನೂ ಸಂಕುಚಿತವಾದ ಮಿತಿಯಿಂದ ನೋಡುವುದರಿಂದ ವೈರಿಗಳು ಎದುರಾದಾಗ ಎಲ್ಲ ಗಣಗಳೂ ಒಂದಾಗಿ ಯುದ್ಧ ಮಾಡುವುದಿಲ್ಲ. ಅದಕ್ಕೆ ಸಾರ್ವಭೌಮೀಯತೆ ಬೇಕು. ಆದರೆ ಸಾರ್ವಭೌಮೀಯತೆಯಲ್ಲಿ ಇರುವ ತೊಂದರೆಯೆಂದರೆ ಸ್ಥಾನೀಯತೆ ಇರುವುದಿಲ್ಲ. ಒಂದು ಆದರ್ಶ ರಾಜ್ಯವು ಸ್ಥಾನೀಯವೂ ಸಾರ್ವದೇಶಿಕವೂ ಆಗಬೇಕು. ಅನಂತ ಕಾಲ–ಅನಂತ ದೇಶಗಳಿಂದ ನಾವು ನಮ್ಮ ಸ್ಥಳಕ್ಕೆ ನಮ್ಮ ಹೊತ್ತಿಗೆ ಬರುವುದು.

ಸನಾತನ ಧರ್ಮದಲ್ಲಿ ಧ್ಯಾನಶೀಲವಾದ ಒಂದು ಕೇಂದ್ರದ ಸುತ್ತಲೂ ಸಮೃದ್ಧವಾದ ಚಲನಶೀಲವೂ ಆದ ಆ ಒಂದು ಪ್ರಪಂಚವೇ ಇರುತ್ತದೆ. ಕ್ಷಾತ್ರಪರಂಪರೆಗೆ ಮುಖ್ಯವಾಗಿ ಬೇಕಾಗಿರುವ ತಂತ್ರ ಇದನ್ನು ಕಂಡುಕೊಂಡವನು ಕೌಟಿಲ್ಯ. ಇದು ವೇದೋದಿತವಾದದ್ದು. ಅದನ್ನು ಚೆನ್ನಾಗಿ ಅನ್ವಯಕ್ಕೆ ತಂದುಕೊಂಡದ್ದರಿಂದಲೇ ಕೌಟಿಲ್ಯದ ಅರ್ಥಶಾಸ್ತ್ರದಲ್ಲಿ ಪ್ರತಿಯೊಂದು ಹಂತಕ್ಕೂ ವ್ಯವಸ್ಥೆ ಇದೆ.

ಮೊದಲೇ ಹೇಳಿದಂತೆ ವೇದಗಳಲ್ಲಿ ಕ್ಷತ್ರಿಯನಿಗೆ 'ಗೋಪ' ಎನ್ನುತ್ತಾರೆ. ಕೌಟಿಲ್ಯನು ಹಳ್ಳಹಳ್ಳಿಗಳಲ್ಲಿ 'ಗೋಪ' ಎನ್ನುವಂತಹ ಗ್ರಾಮ ಪ್ರಮುಖನಿಂದ ಆರಂಭ ಮಾಡಿ ಅಲ್ಲಿಂದ ಮಹಾರಾಜಾಧಿರಾಜ, ರಾಜಭಟ್ಟಾರಕ, ರಾಜಪರಮೇಶ್ವರರವರೆಗೆ ಎಲ್ಲರನ್ನೂ ಒಗ್ಗೂಡಿಸಿಕೊಂಡು ಹೋಗುತ್ತಾನೆ. ನಮ್ಮ ಧರ್ಮಶಾಸ್ತ್ರಗಳಲ್ಲಿಯೂ ನಾವಿದನ್ನು ನೋಡುತ್ತೇವೆ. ಸ್ಥಾನೀಯವಾದ ಆಚಾರಗಳು–ಮರ್ಯಾದೆಗಳನ್ನು ಯಾರೂ ಉಲ್ಲಂಘನೆ ಮಾಡಬಾರದು, ಗೌರವಿಸಿಕೊಂಡು ಹೋಗಬೇಕು *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ–೫೧, ೨೦೧೬).*

ಕೌಟಿಲ್ಯನು ಗಣತಂತ್ರದ ಉತ್ತಮಾಂಶಗಳನ್ನು ರೂಢಿಸಿಕೊಂಡನು. ಸಾರ್ವಭೌಮೀಯವಾದ ರಾಷ್ಟ್ರವೆಂಬ ಅಶ್ವಮೇಧದ ಕಲ್ಪನೆಯನ್ನೂ ಮತ್ತೆ ತಂದುಕೊಟ್ಟನು. ಇವೆರಡೂ ವೇದಮೂಲದ್ದೇ ಯಜ್ಞ ಎನ್ನುವುದನ್ನು ನಾವು ಎಷ್ಟು ವ್ಯಾಪಕಾರ್ಥದಲ್ಲಿ ಕಾಣುತ್ತೇವೆಂಬುದನ್ನಿಲ್ಲಿ ಗಮನಿಸಬೇಕು. ಇಂಥ ಯಜ್ಞವಿರೋಧವನ್ನು ಮಾಡಿದರೆ ಯಾರಿಗಾದರೂ ದೊಡ್ಡ ಸಮಸ್ಯೆ ಬಾರದಿರದು. ತಾತ್ವಿಕವಾಗಿ ಅಂತರ್ಯಾಗವೇ ಹಿರಿದೆಂದರೂ ಬಹಿರ್ಯಾಗವಿಲ್ಲದೆ ಅಂತರ್ಯಾಗವಿಲ್ಲ. ಕೇವಲ ಅನುಭೂತಿಯ ವಲಯಕ್ಕೆ ಬಂದಾಗ ಒಂದು ಎಂದು ಆಸ್ವಾದ್ಯವಾಗುತ್ತದೆ. ಪ್ರಕೃತಿಯಲ್ಲಿಯೂ ಅಷ್ಟೇ. ಇದನ್ನೂ ತೋರ್ಪಡಿಸಿದ್ದು, ಚಾಣಕ್ಯನ ಶ್ರೇಯಸ್ಸು. ಅದೆಲ್ಲವನ್ನೂ ಸಾಬೀತುಮಾಡುವ ಶಕ್ತಿ ಚಂದ್ರಗುಪ್ತ ಮೌರ್ಯನದಾಗಿತ್ತು. ಈ ಸಾಮರಸ್ಯದ ಕಾರಣದಿಂದಲೇ ಅವರು ಒಂದು ದೊಡ್ಡ ಸಾಮ್ರಾಜ್ಯವನ್ನು ಕಟ್ಟಲು ಸಾಧ್ಯವಾಯಿತು.

ಅಶೋಕನು ಆದರ್ಶರಾಜನೆಂದೇ ಪ್ರಸಿದ್ಧಿಯುಂಟು. ಪ್ರಾಚೀನ ರಾಜರುಗಳಲ್ಲಿ ಯಾರೂ ಯಾವ ದೇಶದಲ್ಲಿಯೂ ಅಶೋಕನಂತೆ ಧರ್ಮಶಾಸನಗಳನ್ನು ಮಾಡಿರಲಿಲ್ಲ. ಅಶೋಕನು ಕಳಿಂಗ ದೇಶದ ಮೇಲೆ ಯುದ್ಧ ಮಾಡಿದಾಗ ಅವನಿಗೆ ತಾನೆಸಗಿದ ಹಿಂಸೆಯ ಬಗೆಗೆ ವೈರಸ್ಯವುಂಟಾಯಿತೆಂಬುದು ಪ್ರಸಿದ್ಧ. ಅವನು ತನ್ನ ತಂದೆ–ತಾಯಿಂದಿರು ಗಳಿಸಿಕೊಟ್ಟಂಥ ಸಾಮ್ರಾಜ್ಯವನ್ನು ಸಾಕಷ್ಟು ವಿಸ್ತಾರ ಮಾಡಿಕೊಂಡಿದ್ದ. ಆದರೆ ಆಗ್ನೇಯ ದಿಕ್ಕಿನಲ್ಲಿದ್ದ ಕಳಿಂಗದ ಮೇಲೆ ಪ್ರಭುತ್ವ ಸ್ಥಾಪಿಸಬೇಕೆಂಬ ಅಭಿಲಾಷೆ ಅವನಿಗೆ ಇದ್ದಿತು. ಅದಕ್ಕಾಗಿ ಭೀಕರ ಯುದ್ಧ ಮಾಡಿದ. ಆ ಯುದ್ಧದಲ್ಲಿ ಅಶೋಕನ ಒಂದು ಲಕ್ಷಕ್ಕೂ ಮಿಕ್ಕು ಜನರನ್ನು ಕೊಲ್ಲಬೇಕಾಯಿತು. ಇಷ್ಟು ದೊಡ್ಡ ಪ್ರಮಾಣದಲ್ಲಿ ರಕ್ತಪಾತ ನಡೆದಿತ್ತೆಂಬುದು ಅಂದಿನ ದಾಖಲೆಗಳಿಂದ ತಿಳಿಯುತ್ತದೆ. ಅವನು ಈ ರೀತಿಯಾದ ಉಗ್ರಹಿಂಸೆಯನ್ನಸಗಿ ಪಶ್ಚಾತ್ತಾಪಪಟ್ಟು ಕೊನೆಗೆ ಬೌದ್ಧನಾದ ಎನ್ನುಲಾಗಿದೆ' *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ–೫೪, ೨೦೧೬).*

ಸಮಾಜದ ಎಲ್ಲವರ್ಗವನ್ನೂ ಗೌರವಿಸಬೇಕೆಂದು ಆತನು ಹೇಳುತ್ತಾನೆ. ಬಹಳ ಚೆನ್ನಾಗಿ ಆತ್ಮವಿಮರ್ಶೆ ಮಾಡಿಕೊಳ್ಳುತ್ತಾನೆ. ಆಹಾರನಿಯಮವನ್ನು ಹೇಗೆ ಮಾಡಿಕೊಳ್ಳಬೇಕು? ಪ್ರಜೆಗಳು ತಮ್ಮಲ್ಲಿ ಮೌಲ್ಯವನ್ನು ಹೇಗೆ ಸ್ಥಾಪನೆ ಮಾಡಿಕೊಳ್ಳಬೇಕು? ಎಂಬೆಲ್ಲವನ್ನು ವಿವೇಚಿಸುವ ಆತನ ಆತ್ಮಾವಲೋಕನವು ಸಾಗುತ್ತದೆ. ಒಂದಂತೂ ನಿಜ, ಕಳಿಂಗ ಯುದ್ಧವಾದ ಬಳಿಕ ಅವನು ಮತ್ತಾವುದೆ ಯುದ್ಧವನ್ನು ಮಾಡಲಿಲ್ಲ. ಅರ್ಜುನನಿಗೆ ಅಶೋಕನಂತೆಯೇ ವಿರಕ್ತಿ ಬಂದಿತು. ಅದು ಯುದ್ಧ

ಪೂರ್ವದ್ದು, ಆದರೆ ಅವನಿಗೆ ಶ್ರೀಕೃಷ್ಣನಿದ್ದ ಕಾರಣ ವಿವೇಕೋದಯವಾಯಿತು. ಅಶೋಕನಿಗಾದರೆ ಕೃಷ್ಣನಂಥ ಬೆಳಕು ಸಿಕ್ಕಲಿಲ್ಲ, ಬುದ್ಧನ ದಿಟ್ಟವಾದ ಬದುಕೂ ದಕ್ಕಲಿಲ್ಲ. ಒಟ್ಟಿನಲ್ಲಿ ಅವನು ಕ್ಷಾತ್ರಕ್ಕೆ ವರವಾದನು.

ಬುದ್ಧನಲ್ಲಿ ಕ್ಷಾತ್ರಪ್ರಜ್ಞೆ : ಅಶೋಕನಿಗೂ ಬುದ್ಧನಿಗೂ ಮುನ್ನೂರು ವರ್ಷಗಳ ಅಂತರವಿತ್ತು. ಬುದ್ಧನು ಕ್ರಿ.ಪೂ, ಆರನೆಯ ಶತಮಾನದಲ್ಲಿ ಇದ್ದಂಥವನು. ಅವನು ತನ್ನ ಪರಿಸರದಲ್ಲಿದ್ದ ಕ್ಷಾತ್ರತೇಜಸ್ಸನ್ನು ಗಮನಿಸಿಕೊಂಡಿದ್ದ. ಗಣತಂತ್ರವ್ಯವಸ್ಥೆಯ ಲೋಪದೋಷಗಳನ್ನೂ ನೋಡಿದ್ದ. ಆದರೂ ಸ್ವಾತಂತ್ರ್ಯಪ್ರೀತಿಯಿಂದ ಹೋರಾಡುವುದನ್ನು ಬೆಂಬಲಿಸಬೇಕೆಂತಲೂ ಅಂದುಕೊಂಡಿದ್ದ ಬುದ್ಧನಿಗೆ ಜ್ಞಾನೋದಯವಾದ ಬಳಿಕ ಮಗಧ ದೇಶದ ಬಿಂಬಸಾರನ ಜೊತೆಗೆ ತುಂಬ ಆತ್ಮೀಯನಾಗಿದ್ದ. ಅವನ ಮಗ ಅಜಾತಶತ್ರುವಿನ ಜೊತೆಗೂ ಚೆನ್ನಾಗಿದ್ದ ಕಾಶಿಯನ್ನಾಳುತ್ತಿದ್ದ ಬ್ರಹ್ಮದತ್ತನ ಜೊತೆಯೂ ಆತ್ಮೀಯನಾಗಿದ್ದ. ಹೀಗೆ ಪ್ರಸಿದ್ಧರಾಜ ಕ್ಷತ್ರಿಯರ ಜೊತೆ ಅವನ ಸಂಬಂಧ ಚೆನ್ನಾಗಿಯೇ ಇತ್ತು. ಕ್ಷಾತ್ರಗುಣಗಳಾದ ಮಲ್ಲ, ಮದ್ರ, ಶಾಕ್ಯ, ಕೋಲೀಯ, ವಜ್ಜಿ, ಮುಂತಾದವುಗಳ ಜೊತೆಗೂ ಅವನ ಒಡನಾಟವಿದ್ದಿತ್ತು. ಬುದ್ಧನಿಗೆ ಎಲ್ಲೆಡೆಯೂ ಸೌಹಾರ್ದ ಸಂಬಂಧವಿತ್ತು. ಅನೇಕ ಮಂದಿ ರಾಜರು, ರಾಜಪುತ್ರರು, ವರ್ತಕರು ಹಾಗೂ ತನಗಾಗಿಯೇ ನಿರ್ಮಿಸಿದ ವಿವಾಹರಗಳಲ್ಲಿ ತಂಗುತ್ತಿದ್ದನು. ಸಾಮಾನ್ಯ ಜನರ ಮತ್ತು ಕ್ಷತ್ರಿಯರ ಜೊತೆಗೂ ಚೆನ್ನಾಗಿ ಸ್ಪಂದಿಸುತ್ತಿದ್ದ, ಆಕಾರಣದಿಂದಲೇ ವಜ್ಜಿಗಣದ ಸೇನಾಪತಿಯಾಗಿದ್ದ ಲಚ್ಛವಿಗಳ ಪ್ರಮುಖನಾಯಕನಾಗಿದ್ದ ಸಿಂಹಸೇನಾಪತಿಯು ಬುದ್ಧನನ್ನು ಮಾತನಾಡಿಸಿದ ವಿವರಗಳು ಸುತ್ತಪಿಟಿಕದಲ್ಲಿ ಬರುತ್ತವೆ.

'ಬುದ್ಧನು ಹೇಳಿದ ಸಪ್ತಶೀಲದಲ್ಲಿ ಪ್ರಜಾಪ್ರಭುತ್ವವು ಉಳಿಯಬೇಕೆಂದರೆ, ಪ್ರಜೆಗಳ ಕ್ರಿಯಾಶೀಲತೆ, ಪ್ರಜ್ಞಾಪಟುತ್ವ ಹಾಗೂ ನಿರಂತರ ಜಾಗರೂಕತೆಗಳು ಬೇಕು. ಯುದ್ಧವೆಂದು ತತ್‌ಕ್ಷಣ ಎಲ್ಲಾ ಭಿನ್ನಾಭಿಪ್ರಾಯಗಳನ್ನೂ ಬದಿಗಿಟ್ಟು ಇಡಿಯ ದೇಶ ಒಂದೇ ಅಖಂಡ ಸೈನ್ಯರ ಮೂರ್ತಸ್ವರೂಪವಾಗಿ ನಿಲ್ಲಬೇಕು. ಇದು ಬುದ್ಧನು ಬೋಧಿಸಿದ ಕ್ಷಾತ್ರ, ರಾಷ್ಟ್ರರಕ್ಷಕರು ನಿರಂತರ ಆಯುಧ ಜೀವಿಗಳಾಗಿರಬೇಕೆಂದೂ ಮೌಲ್ಯಮಯಜೀವನವನ್ನು ಸಾಗಿಸಬೇಕೆಂದೂ ಅವನು ಹೇಳಿದ್ದಾನೆ' *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೫೪-೬೫, ೨೦೧೬).* ಆಡಳಿತದಲ್ಲಿ ಅಶೋಕನು ಅರ್ಥಶಾಸ್ತ್ರದ ದಾರಿಯನ್ನೇ ಅನುಸರಿಸಿದ್ದನು ಬೇರೆ ಬೇರೆ ವರ್ಗಗಳಲ್ಲಿ ಪ್ರಭುತ್ವವನ್ನು ಬಹಳ ಚೆನ್ನಾಗಿ ವಿಭಜಿಸಿದ್ದನು. ಇವರಲ್ಲಿ ರಾಜೋಕ, ಯುತ, ಮಹಾಮಾತ್ರ ಎನ್ನುವ ಮೂರು ಸ್ತರಗಳಿದ್ದವು.

ಭಾರತೀಯ ಕ್ಷಾತ್ರದ ಮತೋದಾರತೆಯು ಗುಪ್ತರ ಸಾಮ್ರಾಜ್ಯದಲ್ಲಿ ನೋಡಬಹುದು. ಗುಪ್ತರಲ್ಲಿ ಪರಮಭಾಗವತ ಚಂದ್ರಗುಪ್ತ ವಿಕ್ರಮಾದಿತ್ಯ, ಅವನನ್ನು ಎರಡನೆಯ ಚಂದ್ರಗುಪ್ತನೆಂದೂ ಗುರುತಿಸುತ್ತಾರೆ. ಈತನ ಮಗ ಕುಮಾರಗುಪ್ತನು ಶಿವನನ್ನೂ ಸುಬ್ರಹ್ಮಣ್ಯವನ್ನೂ ಆರಾಧಿಸುತ್ತಿದ್ದನು. ತಂದೆ ಒಂದು ಮತ, ಮಗ ಒಂದು ಮತ. ಹೀಗೆಂದರೇನು? ಇದರರ್ಥ ಅವರ ವೈಯಕ್ತಿಕ ಆದ್ಯತೆ ಶಿವನಿಗೋ ಸ್ಕಂದನಿಗೋ ಇದ್ದಿತಾದರೂ ಅದನ್ನೆಂದೂ ಅವರು ತಮ್ಮ ಜನರ ಮೇಲೆ ಹೇರಲಿಲ್ಲ.

ಪರಮವೈಷ್ಣವನಾಗಿದ್ದ ಚಂದ್ರಗುಪ್ತ ವಿಕ್ರಮಾದಿತ್ಯನ ಆಸ್ಥಾನದಲ್ಲಿಯೇ ಪ್ರಾಯಶಃ ಇದ್ದವನು. ಕವಿಕುಲಗುರು ಕಾಳೀದಾಸನೆಂದು ಅನೇಕ ಸಾಕ್ಷ್ಯಗಳಿಂದ ಗೊತ್ತಾಗುತ್ತದೆ.

'ಶುಂಗರ ಕ್ಷಾತ್ರ ಪ್ರಜ್ಞೆಯನ್ನು ನಾವು ನೋಡುವುದಾರೆ, ಪುಷ್ಯ ಮಿತ್ರಶುಂಗನು ನಮ್ಮ ದೇಶವನ್ನು ಯವನರಿಂದ ಮುಕ್ತ ಮಾಡಬೇಕೆಂದು ಪ್ರಯತ್ನ ಪಟ್ಟನು. ಯವನರದಾಳಿ ಅಲೆಕ್ಸಾಂಡರ್‌ನಿಂದ ಆರಂಭವಾಗಿ ಮಿನಾಂದರನವರೆಗೆ ಮುಂದುವರಿಯಿತು. ಮಿನಾಂದರನೇ ಮುಂದೆ ಮಿಲಿಂದರ ಅಂತ ಹೆಸರಾದವನು. ಬೌದ್ಧಗ್ರಂಥಗಳಲ್ಲಿ ಆತನ ಉಲ್ಲೇಖವುಂಟು. ನಾಗಸೇನ ಮತ್ತು ಮಿಲಿಂದರನ ನಡುವೆ ನಡೆದ ಸಂವಾದವೇ 'ಮಿಲಿಂದಪನ್ಹೋ' ಎಂಬ ಪಾಲಿ (ಮಾಗಧಿ) ಭಾಷೆಯ ಕೃತಿ. ಅಷ್ಟೇ ದೀರ್ಘಕಾಲ ಅಂದರೆ ಸಮಾರು ಮುನ್ನೂರು ವರ್ಷಗಳ ಕಾಲ ಅಯೋನಿಯನ್ನರ ದಾಳಿ ಆಗಿಂದಾಗ ನಡೆಯುತ್ತಲೇ ಇತ್ತು. ಅನಂತರ ಅವರು ನಮ್ಮ ದೇಶದ ಮುಖ್ಯವಾಹಿನಿಯ ಜೊತೆಗೇ ಒಂದಾಗಿಬಿಟ್ಟರು. ಅವರನ್ನು ಶುದ್ಧಶೂದ್ರರು ಎಂದು ಕರೆಯುತ್ತಿದ್ದರು; ವ್ರಾತ್ಯಕ್ಷತ್ರಿಯರು ಎಂದೂ ಹೇಳುತ್ತಿದ್ದರು' *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೭೭, ೨೦೧೬).* ಸದಾಚಾರವನ್ನು ಸ್ವಲ್ಪ ಬಿಟ್ಟಂಥ ಕ್ಷತ್ರಿಯರು ಎಂದು ತಾತ್ಪರ್ಯ. ಒಟ್ಟಿನಲ್ಲಿ ಇವರೆಲ್ಲ ಸನಾತನಧರ್ಮೀಯರೇ ಆದರು, ಚಂದ್ರಗುಪ್ತ ವಿಕ್ರಮಾದಿತ್ಯ, ಕುಮಾರಗುಪ್ತರವರೆಗೂ ಸನಾತನಧರ್ಮದಲ್ಲಿ ಇದಕ್ಕೆ ಅವಕಾಶವಿತ್ತು. ಸುಮಾರು ಕ್ರಿ.ಶ. ಐದು–ಆರನೇಯ ಶತಮಾನದವರೆಗೂ ಈ ರೀತಿಯ ಆದಾನ–ಪ್ರದಾನಗಳು ಚೆನ್ನಾಗಿ ನಡೆಯುತ್ತಿದ್ದವೆಂದು ಅನೇಕ ಗ್ರಂಥಗಳಿಂದ ಶಾಸನಾದಿಗಳಿಂದ ತಿಳಿದುಬರುತ್ತದೆ.

ಭಾರತೀಯ ಕ್ಷಾತ್ರಪರಂಪರೆಯಲ್ಲಿ ನಾವು ಮುಖ್ಯವಾಗಿ ಗಮನಿಸುವುದು ಸರ್ವಮತ ಸಮನ್ವಯವನ್ನು ಮತಾತೀತವಾದ ದೃಷ್ಟಿಯು ಸನಾತನಧರ್ಮದ ಚೌಕಟ್ಟಿನಲ್ಲಿಯೇ ಇದೆ. ಈ ದೃಷ್ಟಿಯಿಲ್ಲದಿದ್ದರೆ ಕ್ಷಾತ್ರಪೌರುಷವೂ ಬರ್ಬರವಾಗುತ್ತದೆ. ಇಸ್ಲಾಂನಲ್ಲಿ ಆದದ್ದೂ ಅದೇ ಕ್ರೈಸ್ತಮತದಲ್ಲಿ ಇದನ್ನೇ ನೋಡುತ್ತೇವೆ. ಭಾರತದಲ್ಲಿ ಆ ರೀತಿಯದು ಆಗದಿರುವುದಕ್ಕೆ ಕಾರಣ ಮತದೊಳಗಿದ್ದೇ ಅದರಿಂದ ಮೀರಿಹೋಗುವ ಸಾಧ್ಯತೆಯೂ ಉಂಟೆಂಬುದನ್ನು ನಮ್ಮ ಪರಂಪರೆ ತೋರ್ಪಡಿಸಿರುವುದೇ ಆಗಿದೆ. ಎಲ್ಲ ದಾರಿಗಳಲ್ಲಿಯೂ ಸ್ವಾರಸ್ಯವಿದೆ. ಸತ್ಯವಿದೆಯೆಂಬ ಧೀರೋದಾರ ಸಂದೇಶವನ್ನು ಮೊದಲಿನಿಂದಲೂ ಅಮಾಚಾನವಾಗಿ 'ವೇದಗಳಲ್ಲಿ' ನಾವು ನೋಡುತ್ತ ಬಂದಿದ್ದೇವೆ. ಇದು ಭಾರತೀಯ ಕ್ಷಾತ್ರದ ಬಹು ಮುಖ್ಯಸಂಗತಿ. 'ಶಕರಲ್ಲಿ ಸತ್ರಪ ಅಥವಾ ಕ್ಷತ್ರಪ ಎನ್ನುವ ಹೆಸರಿನ ಅನೇಕ ನಾಯಕರಿದ್ದರು. ಅವರೆಲ್ಲರೂ ಸನಾತನ ಧರ್ಮೀಯರೇ ಆಗಿ ಬಿಟ್ಟರು. ಸಂಸ್ಕೃತ ಭಾಷೆಯಲ್ಲಿ ಇಂದು ಉಳಿದಿರುವ ಅತ್ಯುತ್ತಮವಾದ ಮೊದಮೊದಲ ಶಾಸನಗಳೆಂದರೆ, ಕ್ಷಾತ್ರಪರದ್ದೇ (ಭೂಮಕ, ನಹಪಾನ ಜಯದಾಮ, ರುದ್ರದಾಮ ಮುಂತಾದವರು) ಇವರೆಲ್ಲರೂ ಶಾತವಾಹನರೇ ಮುಂತಾದ ಸ್ಥಳೀಯ ಕ್ಷತ್ರಿಯರೊಡನೆ ವಿವಾಹ ಸಂಬಂಧಗಳನ್ನು ಬೆಳೆಸಿದ್ದರು. ಗ್ರೀಕರು ಶಕರು (ಸಿಥಿಯನ್ನರು), ಪಹ್ಲವಿಯರು (ಪರ್ಶಿಯನ್ನರು) ಮುಂತಾದವರ ಬಳಿಕ ಬಂದವರು ಭಯಂಕರವಾದ ಹೂಣರು ಹಾಗೂ ಕುಷಾಣರು. ಕುಷಾಣರ ಕಾಲದಲ್ಲಿ ಪ್ರಸಿದ್ಧರಾದವರು ವಸಿಷ್ಕ, ಕನಿಷ್ಕ, ಹುವಿಷ್ಕ ಮೊದಲಾದವರು. ಈ ಕನಿಷ್ಕನು ಉತ್ತಮವಾದ ರಾಜನೆನಿಸಿ ಚೆನ್ನಾಗಿ ರಾಜ್ಯಪರಿಪಾಲನೆ ಮಾಡಿದ. ಅವನಲ್ಲಿ ಕ್ಷಾತ್ರಪೌರಷ ಇದದ್ದು ಹೌದು, ಆದರೆ

ಅದು ಛಾಯಾತ್ಮಕವಾಗಿದ್ದು ಪ್ರತಿಫಲಗಾತ್ಮಕವಾಗದೆ ಭಾರತೀಯ ಅಸ್ಮಿತಾಭಾವವನ್ನು ಚೆನ್ನಾಗಿ ತೋರಿಸಲಾಗಲಿಲ್ಲ' *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೮೦,೨೦೧೬).*

ಗುಪ್ತರು ವೈಶ್ಯಕುಲದಿಂದ ಬಂದವರು. 'ಜನ್ಮಕ್ಷಾತ್ರ' ಎನ್ನುವುದಕ್ಕೆ ಯಾವುದೇ ಹಿರಿದಾದ ಅರ್ಥವಿಲ್ಲವೆಂದು ಮೊದಲೇ ಹೇಳಲಾಗಿದೆ. ಈ ವಿಷಯವನ್ನು ಉದ್ದೇಶ ಪೂರ್ವಕವಾಗಿ ಮರೆಮಾಡಿ ನಮ್ಮ 'ಜಾತ್ಯತೀತ'ರು ಬ್ರಾಹ್ಮಣರು ಹಾಗೂ ಕ್ಷತ್ರಿಯರು ಒಟ್ಟಾಗಿ ಷಾಮೀಲಾಗಿ ಮಿಕ್ಕವರ್ಣಗಳನ್ನು ತುಳಿದು ದೂರವಿಟ್ಟರು ಎನ್ನುತ್ತಾರೆ. ಸಾಮಾನ್ಯ ಜನರಿಗೆ, ಸಂಬಂಧಪಟ್ಟವರೇ ಕೃಷಿ ಗೋರಕ್ಷೆ ಮಾಡುವುದು, ಪಾರಂಪರಿಕ ಕಾಲದಲ್ಲಿ ಉದ್ಯೋಗವೆಂದರೆ, ಜಜಾಮಾನಿಯಾಗಿತ್ತು. ಅಂದರೆ ಕಮ್ಮಾರರಾದರೆ, ನೇಗಿಲಗುಳ, ಹಾರೆ, ಕುಡುಗೋಲು, ಕೊಡಲಿಗಳನ್ನು ತಯಾರುಮಾಡುವುದು, ಕುಂಬಾರರಾದರೆ, ಹಸುವಿಗೆಂದು ಕಲಗಚಿನಬಾನಿ, ಗಿಡಮರಗಳಿಗೆ ನೀರುಣಿಸಲು ಮಡಿಕೆ, ಹಾಲು-ಹೈನಿಗೆಂದು ಗಡಿಗೆ ಮಾಡುವುದು. ಹೀಗೆ ಎಲ್ಲ ಗುಡಿಗಾರಿಕೆಗಳ ಬಾಳು. ವೇದಗಳಲ್ಲಿಯೇ ಸುಮಾರು ಇಪ್ಪತ್ತೈದುಕ್ಕೂ ಹೆಚ್ಚು ಬಗೆಯ ಜೀವಿತಾ ವ್ಯಾಪಾರಗಳನ್ನು ನಾವು ನೋಡುತ್ತೇವೆ. ಅಮರಕೋಶದ ಎರಡನೆಯ ಕಾಂಡದಲ್ಲಿ ವೈಶ್ಯ ವರ್ಗವೆಂಬ ಭಾಗವಿದೆ. ಇದೂ ಅದರ ಮುಂದಿನ ಶೂದ್ರವರ್ಗವೂ ಪ್ರಾಚೀನ ಭಾರತದಲ್ಲಿ ಸಾಮಾನ್ಯ ಜನರ ಬಾಳಿಗೆ ಕನ್ನಡಿಯನ್ನಬಹುದು. ಇಲ್ಲಿಂದ ಬಂದವರು ಗುಪ್ತರು, ಶ್ರೀಗುಪ್ತನು ಆ ವಂಶಪ್ರವರ್ತಕ ಆಮೇಲೆ ಬಂದವನು. ಘಟೋತ್ಕಚಗುಪ್ತ, ವೈಶ್ಯರಿಗೆ 'ಗುಪ್ತ' ಎಂಬ ಉಪನಾಮವೂ ಈಗಲೂ ಇದೆ. ಮನುವಾದಿ ಸ್ಮೃತಿಗಳಲ್ಲಿಯೂ ಅದನ್ನವರ ಉಪನಾಮವೆಂದಿದ್ದಾರೆ. 'ಗುಪ್ತ' ಎಂದರೆ ಕಾಪಾಡುವನು ಎಂದರ್ಥ. ಸಾಮಾನ್ಯರಿಗೆ ಜಗತ್ತು ಬೇಕು; ಜಗತ್ತಿಗೆ ಸಾಮಾನ್ಯರು ಬೇಕು. ವೈಶ್ಯವರ್ಗವನ್ನು ಜಗತ್ತಿನ ವಿಶ್ವಸ್ಥರು, ಇವರು ನ್ಯಾಸಪಾಲಕರು, ಇಲ್ಲಿಂದ ಬಂದವರೇ ಗುಪ್ತರು. ಅವರಲ್ಲಿ ಮಿಗಿಲಾದ ಕ್ಷಾತ್ರಪೌರುಷವಿತ್ತು. ಹೀಗಾಗಿ ಅವರು ಗುಣತಃ ಕ್ಷತ್ರಿಯರೇ ಆದರು *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೮೬, ೨೦೧೬).*

ಶಾಂತಿ ಮತ್ತು ಕ್ರಾಂತಿ ಈ ಎರಡು ಸಮಯಗಳಿಗೂ ಕ್ಷಾತ್ರವು ಸರಿಯಾಗಿರಬೇಕು. ಪೂರ್ವದಲ್ಲಿ ವೇದಗಳ ಕಾಲದಲ್ಲಿ ಮಹಾಭಾರತದ ಕೃಷ್ಣಾರ್ಜುನರಲ್ಲಿಯೂ ಇದನ್ನು ನೋಡುತ್ತೇವೆ. ಚಂದ್ರಗುಪ್ತಮೌರ್ಯ, ಪುಷ್ಯಮಿತ್ರಶೃಂಗ ಸಮುದ್ರಗುಪ್ತ ಮತ್ತವನ ಮಗ ಎರಡನೇಯ ಚಂದ್ರಗುಪ್ತ ವಿಕ್ರಮಾದಿತ್ಯನಲ್ಲಿ ಮುಂದಿನವರಾದ ಕುಮಾರಗುಪ್ತ-ಸ್ಕಂದಗುಪ್ತರಲ್ಲಿ, ಪುಲಕೇಶಿ, ಹರ್ಷವರ್ಧನ, ಭೋಜರಾಜ, ರಾಜರಾಜಚೋಳ, ಬುಕ್ಕರಾಯ, ಪ್ರೌಢದೇವರಾಯ, ಕೃಷ್ಣದೇವರಾಯ, ಶಿವಾಜಿ ಹೀಗೆ ಹಲವರಲ್ಲಿ ನಾವು ಈ ಶಾಂತಿ ಮತ್ತು ಕ್ರಾಂತಿಯ ಸಮನ್ವಯವನ್ನು ನೋಡುತ್ತೇವೆ. ಇದು ದೊಡ್ಡ ಆದರ್ಶವಾಗಿ ಬದುಕಬೇಕೆಂದು ಹಂಬಲಿಸುವಂತೆ ಆಯಿತು. ಧರ್ಮ ಎಂದರೆ ಕೇವಲ ನಂಬಿಕೆ-ಆಗ್ರಹಗಳ ಮೊತ್ತವಲ್ಲ ಅದು ತಾಳಿಸುವ ಬಾಳಿಸುವ ಗುಣ. ವಿಶ್ವಶ್ರೇಯಸ್ಕರವಾದ ಯಜ್ಞ-ದಾನ-ತಪಸ್ಸುಗಳ ಮೇಲೆ ನಿಂತಿರುವಂಥದ್ದು. ಅಂದು ಗುಪ್ತರೂ ಅವರ ಮಿತ್ರರೂ ಮಾಡಿದುದೇ ಇಂದಿಗೂ ನಮ್ಮ ದೇಶದಲ್ಲಿ ಉಳಿದಿದೆ. ಇಂದೂ ನಮ್ಮ ದೇಶದ ಜೀವನಾಡಿಯೆನ್ನುವುದು ಉಳಿದಿದ್ದರೆ, ಅದು ಗುಪ್ತರ ಕಾಲದಿಂದ ನಡೆದುಬಂದಿದ್ದೇ. "ಇದನ್ನೇ ಮುಂದೆ ನಮ್ಮ ಬಾದಾಮಿಯ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು,

ಗುರ್ಜರ ಪ್ರತಿಹಾರರು, ದೇವಗಿರಿಯ ಯಾದವರು, ಹೊಯ್ಸಳರು, ರಾಷ್ಟ್ರಕೂಟರು, ಪಾಲರು-ಸೇನರು ಕೈಗೊಂಡರು. ಅಲ್ಲಾದೆ ಪಾಂಡ್ಯರು ಪಲ್ಲವರು ಚೇರರು ಆಳವಡಿಸಿಕೊಂಡರು ಮತ್ತು ಆಂಧ್ರದ ಕಾಕತೀಯರು, ರೆಡ್ಡಿರಾಜರು, ವಿಜಯನಗರ ಸಾಮ್ರಾಜ್ಯದವರು, ಮತ್ತು ಶಿವಾಜಿ, ಉತ್ತರದ ರಜಪೂತರು, ಪೇಶ್ವೆಗಳೂ ಅಳವಡಿಸಿಕೊಂಡರು" *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೯೨, ೨೦೧೬).*

ಭಾರತದ ಆರ್ಯಕರಣವೆಂಬುದು ಅರಸರ ರಾಜಕೀಯದಿಂದಾಗಲಿ ಬ್ರಾಹ್ಮಣಾದಿಗಳ ಒತ್ತಾಯದ ಮತೀಕರಣದಿಂದಾಗಲಿ ಉಂಟಾದುದಲ್ಲ. ಆ ಕಾಲಕ್ಕೆ ಅನ್ವಯಿಸಿದಂತೆ ಧರ್ಮಶಾಸ್ತ್ರಗಳು ಹವಣಿಸಿದ ವ್ಯವಸ್ಥೆಯೇ ಆರ್ಥಿಕ, ಸಾಮಾಜಿಕ, ಅಧ್ಯಾತ್ಮಿಕ, ಮತ್ತು ಸಾಂಸ್ಕೃತಿಕ ಸಮುದಾಯಕ್ಕೆ, ಉತ್ತಮವೆಂದು ತಾವೇ ಸಂತೋಷದಿಂದ ಅರಿತವರ ಮೂಲಕ ಮಾತ್ರ ಅದು ಸಾಧ್ಯವಾಗುತ್ತದೆ. ಸನಾತನಧರ್ಮದ ಕ್ಷಾತ್ರಪರಂಪರೆಗೆ ಇರುವ ವೈಶಿಷ್ಟವೇನೆಂದರೆ, ನಮ್ಮಲ್ಲಿ ರಕ್ತಪಾತವಿಲ್ಲದಿಲ್ಲ. ರಾಜಕೀಯದಲ್ಲಿ ಚತುರೋಪಾಯಗಳನ್ನು ಬಳಸುತ್ತಿದ್ದರು. ಆದರೆ ದಂಡೋಪಾಯದಲ್ಲಿ ಮಾತ್ರ ರಕ್ತಪಾತವಿರುತ್ತಿತ್ತು. ಮತ್ತು ಸಾಮದಾನೋಪಾಯಗಳೇ ಹೆಚ್ಚಾಗಿ ಬಳಕೆಯಲ್ಲಿ ಇದ್ದದ್ದು. ಆತ್ಮ-ದೇಹಗಳ, ನೆಲೆ-ಬೆಲೆಗಳನ್ನು ಬಲ್ಲದ್ದೂ ಆದ ನಾಗರಿಕೆತೆಯು ತನ್ನವರೊಡನೆ ಹಾಗೂ ತನ್ನಂಥವರೊಡನೆ ವ್ಯವಹಾರ ಪ್ರಪಂಚಕ್ಕಿಳಿದಾಗ ಸಾಮದಾನಗಳ ಭೇದ-ದಂಡಗಳನ್ನಲ್ಲ, ಸಾಮ-ದಾನಗಳಲ್ಲಿ ವಂಚನೆ-ಹಿಂಸೆಗಳಿಲ್ಲ, ಅವೇನಿದ್ದರೂ ಬೇಧ-ದಂಡಗಳ ಪರಿಧಿಯದ್ದು. ಆದರೆ ಅಸಂಸ್ಕೃತರೂ ಧೂರ್ತರೂ ಬರ್ಬರರೂ ಅವರೊಡನೆ ವ್ಯವಹರಿಸುವಾಗ ಭೇಧ-ದಂಡಗಳೇ ಶರಣ್ಯ.

ನಮ್ಮ ಜೀವನವಿದೆಯೆಂದು ತೋರ್ಪಡಿಸುವ ಹದವೇ ನಿಜವಾದ ಕ್ಷಾತ್ರ, ಕ್ಷಾತ್ರಕ್ಕಿರುವ ವೈಶಿಷ್ಟ್ಯವೇ ಇಂಥ ಆರ್ಷಸಂಸ್ಕಾರದಿಂದ ಭಾವನೆಗೊಂಡಿರುವಂಥದ್ದು. ಚಂದ್ರಗುಪ್ತ ವಿಕ್ರಮಾದಿತ್ಯನು ಆ ಜಾಡಿನವನು. ಸಮುದ್ರಗುಪ್ತನು ಯಾವ ಗಾನಕಲಾಕೌಶಲದಿಂದ ಕಲೆತಿದ್ದನೋ, ಕಾವ್ಯಕೌಶಲದಿಂದ ಕೂಡಿದ್ದನೋ, ಮಹಾ ಸೇನಾಪತಿಯಾಗಿದ್ದನೋ, ಚಂದ್ರಗುಪ್ತ ವಿಕ್ರಮಾದಿತ್ಯನೂ ಹಾಗೆಯೇ ಆಗಿದ್ದನು. ಅವನ ಪರಾಕ್ರಮವನ್ನು ಕುರಿತು ಎಷ್ಟು ಹೇಳಿದರೂ ಸಾಕಾಗುವುದಿಲ್ಲ. ಹಾಗೆ ನೋಡಿದರೆ ವಿಕ್ರಮಾದಿತ್ಯ ಎನ್ನುವುದು ನಮ್ಮ ಅಭಿಜಾತ ಜಾನಪದ ಸಂಸ್ಕೃತಿಯ ಒಂದು ದೊಡ್ಡ ಆದರ್ಶ. ಶೂದ್ರಕ, ವಿಕ್ರಮಾದಿತ್ಯ, ಶಾಲಿವಾಹನ ಮುಂತಾದವರನ್ನೆಲ್ಲ ನಮ್ಮ ಜಾನಪದವು ದೈವತ್ವದ ಮಟ್ಟಕ್ಕೆ ಬೆಳೆಸಿತು. ಶಾಲಿವಾಹನ ಎಂದರೆ ಶಾತವಾಹನರ ಪ್ರಮುಖನೇ, ದಕ್ಷಿಣ ಭಾರತದಲ್ಲಿ ಪಲ್ಲವರಿಗಿಂತ, ಚೋಳರಿಗಿಂತ ಜೇರರಿಗಿಂತ, ಪಾಂಡ್ಯರಿಗಿಂತ, ಕದಂಬರಿಗಿಂತ, ಚಾಲುಕ್ಯರಿಗಿಂತ ಒಂದಿಷ್ಟು ಮಿಗಿಲಾಗಿ ನಮಗೆ ಕಾಣಿಸುವ ಮಹಾನಕ್ಷತ್ರಗಳು ಶಾತವಾಹನರು. "ದಕ್ಷಿಣ ಭಾರತದಲ್ಲಿ ವೈದಿಕಸಂಸ್ಕೃತಿಯು ಇದರಿಂದ ಗಟ್ಟಿಯಾಯಿತು. ಶಾತವಾಹನರು ಗೋದಾವರಿತೀರದ ಪ್ರತಿಷ್ಠಾನವನ್ನು ಕೇಂದ್ರವನ್ನಾಗಿಸಿಕೊಂಡು ಆಳುತ್ತಿದ್ದರಾದರೂ ಆಂಧ್ರದ ಧಾನ್ಯಕಟಕ ಮತ್ತು ಕರ್ನಾಟಕದ ಬನವಾಸಿಗಳೂ ಅವರ ಇನ್ನಿತರ ಕೇಂದ್ರಗಳಾಗಿದ್ದವು. ಅವರ ಪರಾಕ್ರಮ ಜೀವನದ ಧರ್ಮದ ಸಂಕೇತವಾಗಿಯೇ ಶಾಲಿವಾಹನ ಅಥವಾ ಶಾತವಾಹನನು ಈ ವಂಶದ ಮೂಲ ಪುರುಷನಾದನೆಂದು ಉಲ್ಲೇಖಗಳಿವೆ"*(ಗಣೇಶ್ ಆರ್, ಭಾರತೀಯ ಕ್ಷಾತ್ರ*

*ಪರಂಪರೆ, ಪುಟ-೧೧೩, ೨೦೧೬).* ಶಾತವಾನರೆಲ್ಲರು ವರ್ಣದಿಂದ ಬ್ರಾಹ್ಮಣರು, ವೃತ್ತಿಯಿಂದ ಕ್ಷತ್ರಿಯರು, ತಮ್ಮ ತಾಯಂದಿರ ಹೆಸರನ್ನೇ ಹೆಮ್ಮೆಯಿಂದ ತಳೆದ ದ್ವಾಮುಷ್ಯಾಯಣರು ಇವರು ವೈದಿಕ ಮತ್ತು ಬೌದ್ಧಗಳೆರಡನ್ನೂ ಆದರಿಸಿದ ವಿಶಾಲ ಹೃದಯಿಗಳು. ಶಾತವಾಹನರಲ್ಲಿ ಅಶ್ವಮೇಧಾದಿಗಳನ್ನು ಮಾಡಿ ಕ್ಷಾತ್ರವನ್ನು ಮೆರೆದ ಶಾತಕರ್ಣಿಯು ಪ್ರಮುಖ.

ಈ ಕ್ಷಾತ್ರ ಪರಂಪರೆಯು ಅನೌಪಚಾರಿಕವಾಗಿಯಾದರೂ ಅದನ್ನು ಅಡಕವಾಗಿ ತರಬೇಕೆಂಬ ಹಂಬಲವಿದೆ. ಈ ಕ್ಷಾತ್ರಪರಂಪರೆಗೆ ಸಂಬಂಧಿಸಿದಂತೆ ಗಮನಿಸದೆ ಹೋದಂಥ ಬಹಳಷ್ಟು ರಾಜವಂಶಗಳಿವೆ. ಕೇವಲ ಹೆಗ್ಗುರುತುಗಳನ್ನಷ್ಟೇ ಇಲ್ಲಿ ಉಲ್ಲೇಖಿಸುಸಿರುವೆ. ನಮ್ಮ ಕ್ಷಾತ್ರಪರಂಪರೆಯ ಪರಿಚಯವನ್ನು ಉತ್ತರ ಭಾರತದ ಮಗಧ ಸಾಮ್ರಾಜ್ಯದಿಂದ ಆರಂಭಿಸಿ ಶುಂಗರ ಬಗೆ, ಮಧ್ಯಭಾರತದ ವಾಕಾಟಕರ ಬಗೆಗೂ ಹೇಳುವುದಕ್ಕಾಗಲಿಲ್ಲ. ಅಲ್ಲದೆ ಪಾಂಡ್ಯ-ಜೋಳ-ಚೇರರು ಅಪ್ಪಟ ವೈದಿಕರು, ಸನಾತನಧರ್ಮ ದೀಪಕರು. ಇವರ ಪ್ರಾಚೀನತೆಯು ಇತಿಹಾಸಪ್ರಸಿದ್ಧ ಮಹಾಭಾರತಾದಿಗಳಲ್ಲಿಯೂ ಪಾಂಡ್ಯರ ಉಲ್ಲೇಖವಿದೆ. "ಕ್ರಿಸ್ತಶಕದ ಆರಂಭದಿಂದಲೇ ಆಳಿಕೊಂಡುಬಂದ ನಮ್ಮವರೇ ಆದ ಬಾಣರಿದ್ದಾರೆ, ಕದಂಬರಿದ್ದಾರೆ ಮತ್ತು ಪೂರ್ವದ ರಾಷ್ಟ್ರಕೂಟರೂ ಆಂಧ್ರದ ರಾಜಮನೆತನಗಳಲ್ಲಿ ಪ್ರಸಿದ್ಧರಾದವರು, ಇದ್ದಾರೆ. ರೆಡ್ಡಿರಾಜರೂ, ವಿಷ್ಣುಕುಂಡಿನರೂ ಕರ್ನಾಟಕದಲ್ಲಿ ಅಲೂಪರು, ನೊಳಂಬರು, ಹೀಗೆ ಎಷ್ಟೆಷ್ಟೋ ಕ್ಷಾತ್ರಶಾಖೆಗಳಿವೆ"*(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೧೨೩, ೨೦೧೬).*

ಅಹಿಂಸಾಪಾರಮ್ಯದ ಜೈನಧರ್ಮೀಯದಾಗಿದ್ದರೂ ಮಹಾವೀರನೆನಿಸಿ ಕ್ಷಾತ್ರಮಹಾತ್ಮವನ್ನು ಮೆರೆದ ಕಳಿಂಗದ ಖಾರವೇಲನ ಬಗೆಗೂ ನಾವು ಈವರೆಗೆ ತಿಳಿದಿರಲಿಲ್ಲ. ಈತನು ತುಂಬ ಹಿಂದಿನವನು. ನಾವೆಲ್ಲ ಹೆಮ್ಮೆಪಡಬೇಕಾದಂಥವನು. ಅವನು ಕಳಿಂಗದ ಚಕ್ರೇಶ್ವರನಾಗಿದ್ದು, ದಿಗ್ವಿಜಯಗಳನ್ನೂ ಮಾಡಿ ಮೌರ್ಯರನ್ನೂ ಎದುರಿಸಿದನು. ಶಾತವಾಹನರ ಮಹಾರಾಜ ಶಾತಕರ್ಣೀಯನ್ನೂ ಜಯಿಸಿದ ಯಶಸ್ಸು ಈತನದು. ಹಾಗೆ ಗಂಗಾನದಿಯ ತೀರದಲ್ಲಿ ಮಗಧೇಶ್ವರನನ್ನೂ ಯುದ್ಧದಲ್ಲಿ ಎದುರಿಸಿದ್ದ "ಖಾರವೇಲನು ಕೃಷ್ಣೆ-ಕಾವೇರಿಯ ದಡದವರೆಗೂ ಬಂದಿದ್ದನು. ಮಹಾಮೇಘವಾಹನ ಎಂಬ ವಂಶಕ್ಕೆ ಸೇರಿದ ಖಾರವೇಲನು ನಮ್ಮ ದೇಶದ ಬ್ರಾಹ್ಮ-ಕ್ಷಾತ್ರಗಳ ಪ್ರಾಚೀನ ಪ್ರತಿನಿಧಿಗಳ ಪೈಕಿ ಸದಾಸ್ಮರಣೀಯ, ಸ್ಫೂರ್ತಿದಾಯಕ ಕೂಡ"*(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೧೨೪, ೨೦೧೬).*

ಇಲ್ಲಿ ಇಡಿಯ ಭಾರತದ ಕ್ಷಾತ್ರ ಚರಿತ್ರೆಯನ್ನು ಸಂಗ್ರಹವಾಗಿ ಸಹ ಹೇಳುವುದಕ್ಕೆ ಹೊರಟಿಲ್ಲ. ಕೇವಲ ಅದರ ಕೆಲವೊಂದು ಹೆಗ್ಗರುತುಗಳನ್ನಷ್ಟೇ ನೆನಪಿಸಿಕೊಳ್ಳುವುದು, ಸದ್ಯದ ಆಶಯವಾಗಿದೆ. ಸತ್ಯದ ಬೆಳಕಿನಲ್ಲಿ ನಮ್ಮ ಯಶಸ್ವಿಯಾದ ಚರಿತ್ರೆಯನ್ನು ಹೇಗೆ ಅರ್ಥಮಾಡಿಕೊಳ್ಳಬೇಕೆಂಬುದಷ್ಟೇ ಇಲ್ಲಿಯ ನಿಲವು. ಕ್ಷಾತ್ರಪರಂಪರೆಯ ಏಳುಬೀಳುಗಳನ್ನೆ ಗಮನಿಸಿಕೊಂಡು ಬರುವುದು ಇಲ್ಲಿಯ ಮುಖ್ಯಾಶಯ. ಈ ಒಂದು ಪ್ರಕ್ರಿಯೆಯಲ್ಲಿ ನಾವು ಅನಿವಾರ್ಯವಾಗಿ ದಾಖಲೆ ಮತ್ತು ಪುರಾವೆಗಳ ಮೂಲಕ ಸಾಬೀತಾದ ವೀರಚರಿತ್ರವುಳ್ಳವರನ್ನಷ್ಟೇ ಗಮನಿಸಲಾಗುತ್ತದೆ. ನಮ್ಮ ರಾಜ್ಯದ ಎಷ್ಟೋ ರಾಜಮನೆತನಗಳ ಪೈಕಿ ಪ್ರಮುಖವಾದ ಕೆಲವೊಂದು ರಾಜಮನೆತನಗಳ ಬಗೆಗಷ್ಟೇ ನಾವು ಚರಿತ್ರೆಯಲ್ಲಿ ಹೇಳುತ್ತೇವೆ.

ಇಲ್ಲಿ ಮುಖ್ಯವಾಗಿ ಚುಟುಗಳಾಗಲಿ, ನೊಳಂಬರಾಗಲಿ, ಕಲಚೂರ್ಯರಾಗಲಿ, ಬಾಣರೋ, ಸೇಂದ್ರಕರೋ ಮತ್ತಾರೇ ಆಗಲಿ, ನಮಗೆ ಒಬ್ಬ ಚಾಲುಕ್ಯರಷ್ಟು, ಒಬ್ಬ ರಾಷ್ಟ್ರಕೂಟರಷ್ಟು, ಒಬ್ಬ ವಿಜಯನಗರದವರಷ್ಟು ವಿವರವಾಗಿ ಕಾಣಿಸುವುದಿಲ್ಲ. ದುರ್ದೈವದಿಂದ ಸುದೀರ್ಘಕಾಲ ಆಳಿದ ಇಂಥ ಚಿಕ್ಕ-ಪುಟ್ಟ ಸ್ಥಾನೀಯ ರಾಜವಂಶಗಳ ಬಗೆಗೆ ಹೆಚ್ಚಿನ ಸಂಗತಿಗಳ ನಮಗೆ ತಿಳಿದುಬಂದಿಲ್ಲ. ಅಳಿದುಳಿದ ಶಾಸನಗಳಲ್ಲಿ ತೋರಿಸಿಕೊಳ್ಳುವ ಅಷ್ಟೋ ಇಷ್ಟೋ ವಿವರಗಳ ಹೊರತಾಗಿ ಯಾವುದೇ ಪ್ರತ್ಯೇಕ ಗ್ರಂಥಗಳೋ ಕಾವ್ಯಗಳೋ ನಮಗೆ ನೆರವಾಗುವಂತೆ ಉಳಿದಿಲ್ಲದ ಕಾರಣದಿಂದ ಕೂಡ ನಾವು ಅನಿವಾರ್ಯವಾಗಿ ಕೈಚೆಲ್ಲಿ ಕುಳಿತುಕೊಳ್ಳಬೇಕಾಗುತ್ತದೆ.

ನಮ್ಮ ಕರ್ಣಾಟಕದ ತುಂಬ ದೊಡ್ಡ ರಾಜ ಮನೆತನವಲ್ಲದಿದ್ದರೂ ದೀಘಕಾಲ ಆಳಿದ ಹಿರಿಮೆಗೆ ಪಾತ್ರವಾದ ಮೈಸೂರಿನ ಒಡೆಯರ ಪೈಕಿ ರಣದೀರ ಕಂಠೀರವ ನರಸಿಂಹರಾಜರು ಎದ್ದುಕಾಣುವಂತೆ ತೋರುತ್ತಾರೆ. ಶಿವಾಜಿಯ ಮಗನಿಗೆ ಆಶ್ರಯ ಕೊಡುವಂಥ ಶಕ್ತಿಶಾಲಿನಿಯಾಗಿದ್ದವಳು ಬಿದನೂರಿನ ಚೆನ್ನಮ್ಮಾಜಿ, ಇಂಥ ಹಲವು ಹೆಗ್ಗುರುತುಗಳು ಸಾಮಾನ್ಯವಾದ ಹಿನ್ನೆಲೆಯಲ್ಲಿಯೂ ಮೂಡಿಬರುತ್ತವೆ.

ಯಾವ ಸಮ್ರಾಟನು ತನ್ನ ರಾಜನೀತಿಯನ್ನು ಬ್ರಾಹ್ಮ-ಕ್ಷಾತ್ರಗಳ ಸಮಾಯೋಗ ಸಂಕೇತವೆಂಬಂಥೆ ಜೀವನಮುಖಿಯನ್ನಾಗಿಸಿಕೊಂಡಿಲ್ಲವೋ ಅಂಥವನಲ್ಲಿ ಅದೆಷ್ಟು ಗುಣಗಳಿದ್ದರೂ ಪರಾಕ್ರಮವಿದ್ದರೂ ಅವನ ಬಳಿಕ ಸಾಮ್ರಾಜ್ಯವು ಕುಸಿದು ಬೀಳುತ್ತದೆ. ಇದಕ್ಕೆ ಮೂರು ಉದಾಹರಣೆ ಕೊಡುವುದಾದರೆ, ಒಬ್ಬ ಅಶೋಕ, ಮತ್ತೊಬ್ಬ ಕನಿಷ್ಕ, ಇನ್ನೊಬ್ಬ ಹರ್ಷ, ಇವರು ಮೂರು ಜನರ ಬಳಿಕ ಅವರಿಗೆ ಸಮರ್ಥರಾದ ಉತ್ತರಾಧಿಕಾರಿಗಳು ಬರದೆ ಅವರವರ ಸಾಮ್ಯಾಜ್ಯಕ್ಕೆ ಅವರು ದೊಡ್ಡ ದೊಡ್ಡ ಹೆಗ್ಗುರುತಳೆಂದೇ ಆದರೂ, ಆ ಸಾಮ್ರಾಜ್ಯವು ಪತನವಾದ್ದನ್ನು ನೋಡುತ್ತೇವೆ. ಕುಷಾಣರ ಪ್ರಭುತ್ವವು ಶೀಖರಕ್ಕೇರಿದ್ದೂ ಕನಿಷ್ಕನ ಕಾಲದಲ್ಲಿಯೇ ಇಳಿದದ್ದೂ ಅವನ ಅಳಿವಿನ ಕಾಲದಲ್ಲಿಯೇ. ಅಶೋಕ, ಕನಿಷ್ಕ, ಹರ್ಷಾದಿಗಳು ಕರುಣಾಳುಗಳಾಗಿ ಮತಪ್ರೇಮವುಳ್ಳವರಾಗಿ ಪ್ರಜಾವತ್ಸಲರಾಗಿ ಮೆರೆದಿದ್ದರು. ಇಲ್ಲಿ ಕ್ರೌರ್ಯ-ಕಾರುಣ್ಯಾದಿಗಳು ಲೆಕ್ಕಕ್ಕೇ ಬರುವುದಿಲ್ಲವೇನೋ, ಯದ್ವಾ ತದ್ವಾ ಮತೀಯತೆಯಿಂದಲಂತೂ ಅನರ್ಥವೇ ಗತಿ. ಕ್ಷಾತ್ರಕ್ಕೆ ಬೇಕಾದುದು ಒಂದು ಸಂತುಲನ 'ನಾತಿಕ್ರೂರಃ ನಾತಿಮೃದುಃ' ಎಂಬಂತೆ ಸಂದರ್ಭೋಚಿತವಾಗಿ ಪ್ರತಿಕ್ರಿಯೆಗಳನ್ನು ತೋರಬೇಕು *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೧೩೦, ೨೦೧೬).*

**ಬಾದಾಮಿಯ ಚಾಲುಕ್ಯರು:** ಇಮ್ಮಡಿ ಪುಲಕೇಶಿಯು ಪ್ರಬಲನು, ಹರ್ಷನು ವೈಶ್ಯಕುಲದವನು, ಪುಲಕೇಶಿಯು ಶೂದ್ರಕುಲದವನು, ಚಾಲುಕ್ಯರು ಮೂಲತಃ ಕೃಷಿಯ ಕೆಲಸ ಮಾಡುತ್ತಿದ್ದವರು. ಚಾಲುಕ್ಯಕುಲೋಯತ್ಪತ್ತಿಯನ್ನು ಕುರಿತು ಬಿಲ್ಹಣನ 'ವಿಕ್ರಮಾಂಕ ದೇವರಚರಿತ'ದ ಮೊದಲನೆಯ ಸ್ವರ್ಗದಲ್ಲಿಯೇ ಒಂದು ಪೌರಾಣಿಕಶೈಲಿಯ ಕಥೆಯಿದೆ, ಒಮ್ಮೆ ದೇವತೆಗಳೆಲ್ಲರೂ 'ಲೋಕಕ್ಕೆ ತೊಂದರೆ ಬಂದಿದೆ ಒಬ್ಬ ಧಾರ್ಮಿಕನಾದ ಮಹಾಕ್ಷತ್ರಿಯೋತ್ತಮನು ಹುಟ್ಟಬೇಕು' ಎಂದು ಬ್ರಹ್ಮನಲ್ಲಿ ಕೇಳಿದಾಗ 'ಸಂಧ್ಯಾಂಜಲಿ'ಯನ್ನು ಕೊಡುವುದಕ್ಕೆ ಸಿದ್ಧನಾಗಿದ್ದ ಬ್ರಹ್ಮನು ತನ್ನ ಚಾಲುಕ(ಬೊಗಸೆ)ದಿಂದಲೇ ಚಾಲುಕ್ಯ ಎನ್ನುವ ವೀರನನ್ನು ನಿರ್ಮಿಸಿದನು. ಅವನಿಂದ ಚಾಲುಕ್ಯವಂಶವು ಹೊಮ್ಮಿತು. ಈಗಿನ ವಿದ್ವಾಂಸರ

ಪ್ರಕಾರ ಚಾಲುಕ್ಯವು ಸಂಸ್ಕೃತ ಶಬ್ದದಲ್ಲಿ 'ಚುಲುಕ'ದಿಂದ ಬಂದದ್ದು, ಚೌಲುಕ್ಯ ಆಗುತ್ತದೆ. ಚಾಲುಕ್ಯ ಎಂದು ಆಗುವಂಥದ್ದಲ್ಲ. ಹೀಗಾಗಿ ಅದು 'ಸಲಿಕೆ' ಎಂಬ ಮೂಲದ್ದು. ಅರ್ಥಾತ್ ಸಲಿಕೆ ಹಿಡಿದು ಕೆಲಸ ಮಾಡುತ್ತಿದ್ದ ಒಕ್ಕಲಿಗರಿಂದ ಬಂದಿದ್ದು, ನಮ್ಮಲ್ಲೊಂದು ಭಯಾನಕವಾದ ಭ್ರಮೆ ಸೇರಿಕೊಂಡಿದೆ. ಅದನ್ನೂ ಎಂದಿನಂತೆ ಕಮ್ಯೂನಿಷ್ಟರೇ ಸೃಷ್ಟಿ ಮಾಡಿದ್ದು, ಆ ಪ್ರಕಾರ 'ಬ್ರಾಹ್ಮಣ ಕ್ಷತ್ರಿಯರು ಒಟ್ಟಾಗಿ ಮಿಕ್ಕೆಲ್ಲರನ್ನೂ ಶೋಷಣೆ ಮಾಡಿದರು' ಎಂದು ವಾಸ್ತವದಲ್ಲಿ ಹಾಗೇನಾದರೂ ಶೋಷಣೆ ನಡೆದಿದ್ದರೆ ಅದು ಶೂದ್ರರಿಂದಲೇ ಆದದ್ದು, ಭಾರತದ ಪ್ರತಿಶತ ತೊಂಬತ್ತರಷ್ಟು ರಾಜರು ಶೂದ್ರರೇ ಆಗಿದ್ದರು. ಇದಕ್ಕೆ ಮೌರ್ಯರು, ಯಾದವರು, ಪರಮಾರರು, ಚಂದೇಲರು, ಹೊಯ್ಸಳರು, ಸೇವುಣರು, ಚಾಲುಕ್ಯರು, ಚೋಳರು, ಚೇರರು, ರಾಷ್ಟ್ರಕೂಟರು, ಸಂಗಮರು, ಸಾಳ್ವರು, ತುಳುವರು, ಅರವೀಡಿನವರು, ರಾಠೋಡರು, ಸೋಲಂಕಿಗಳು, ಭೋಸಲೆಗಳು, ಚೌಹಾಣರು, ಹೀಗೆ ಅನೇಕರನ್ನು ಉದಾಹರಣೆಯಾಗಿ ಕೊಡಬಹುದು. ಮೌರ್ಯರಿಂದ ಆರಂಭವಾಗಿ ಎರಡುಸಾವಿರದೈನೂರು ವರ್ಷಗಳಲ್ಲಿ ಸುಮಾರು ಇನ್ನೊರೈವತ್ತು ರಾಜವಂಶಗಳು ಹೀಗಿದ್ದವು. ಇಂದಿಗೂ ಕರ್ನಾಟಕದಲ್ಲಿ ಲಿಂಗಾಯಿತ ಒಕ್ಕಲಿಗರದೇ ಪ್ರಾಬಲ್ಯ. ಆಂಧ್ರದಲ್ಲಿ ಕಮ್ಮ-ಕಾಪು-ರೆಡ್ಡಿಗಳದೇ ಪಾರಮ್ಯ, ತಮಿಳುನಾಡಿನಲ್ಲಿಂತೂ ಹೇಳಲೇಬೇಕಿಲ್ಲ. ಗುಜರಾತಿನಲ್ಲಿ ಪಟೇಲರ ಪ್ರಾಬಲ್ಯ, ಬಿಹಾರದಲ್ಲಿ ಯಾದವರು, ಹೀಗೆ ಸಮಗ್ರ ಭಾರತದಲ್ಲಿ ಇಂದಿಗೂ ಅದು ಸಾಗಿದೆ*(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೧೩೬, ೨೦೧೬)*. ಚಾಲುಕ್ಯರು ಮಹಾಪರಾಕ್ರಮಿಗಳಾದ ಅನೇಕರಾಜರುಗಳನ್ನು ಕೊಡುಗೆಯಾಗಿ ಕೊಟ್ಟಿದ್ದಾರೆ. 'ವೀರಭೋಜ್ಯಾ ವಸುಂಧರಾ' ಎನ್ನುವ ಮಾತಿದೆ. ಕ್ಷತ್ರಯನುಗುಣದಿಂದ ಕ್ಷತ್ರಿಯನ್ನೇ ಹೊರತು ಜನ್ಮಮಾತ್ರದಿಂದಲ್ಲ ಎಂದು ಇಂದಿನ ಆಧುನಿಕ ಕಾಲದ ರಾಜಕೀಯ ವ್ಯವಸ್ಥೆಯಿಂದ ತಿಳಿಯಬಹುದಾಗಿದೆ.

**ಕದಂಬ-ಗಂಗರು:** ಕರ್ನಾಟಕದ ಎದ್ದು ತೋರುವ ಕ್ಷಾತ್ರತ್ವದ ಕುಡಿ ಎಂದರೆ ಕದಂಬವಂಶದ ಪ್ರವರ್ತಕನಾದ ಮಯೂರಶರ್ಮ, ಮಯೂರ ಶರ್ಮನ ಹಿನ್ನೆಲೆಯನ್ನು ನೋಡಿದರೆ ಅವನು ಬ್ರಾಹ್ಮಣನೆಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ಶಾತವಾಹನರ ಕಡೆಯಿಂದ ಬಂದವನೆನ್ನುತ್ತಾರೆ. ಮಯೂರನು ಪಲ್ಲವರ ವಿರುದ್ಧ ಸೆಣಸಾಡಿ ಸಿಡಿದು ಬಂದವನು. ಬನವಾಸಿಯನ್ನೂ ಶ್ರೀಶೈಲವನ್ನೂ ಕೇಂದ್ರವನ್ನಾಗಿಸಿಕೊಂಡು ರಾಜ್ಯಭಾರಮಾಡಿದವನು. ಬನವಾಸಿಯನ್ನೇ ಮಯೂರನು ತನ್ನ ವಶಕ್ಕೆ ತೆಗೆದುಕೊಂಡು ಬಂದು ರಾಜವಂಶದ ಪ್ರವರ್ತಕನೇ ಆದನು. ಕದಂಬರಲ್ಲಿ ಮುಂದೆ ಎಷ್ಟೋ ಬಾರಿ ಬಂದರೂ ಯಾರೂ ಸಹ ಇವನಂತೆ ಪ್ರೌಢಿಮೆಯನ್ನು ತೋರಿಸಲಿಲ್ಲ. ಅವರೆಲ್ಲ ಹೊಯ್ಸಳರಿಗೆ, ಚಾಲುಕ್ಯರಿಗೆ ರಾಷ್ಟ್ರಕೂಟರಿಗೆ ಅಧೀನರಾಗಿ ಬಾಳುವುದೇ ಹಿರಿದಾಯಿತು. ಕರ್ನಾಟಕದಲ್ಲಿ ಸಾಕಷ್ಟು ಧೀರ್ಘವಾಗಿ ಆಳಿದವರ ಪೈಕಿ ಗಂಗರು ಮಾನ್ಯರು, ಇವರಲ್ಲಿ ಮಾಧವವರ್ಮ, ಕೊಂಗಣಿವರ್ಮ, ಅವನೀತ, ದುರ್ವಿನೀತ, ಮೊದಲಾದವರು ಮುಖ್ಯರು. ಹಾಗೇ ದುರ್ವಿನೀತನು ಪ್ರಬಲನು ಆಗಿದ್ದನು. ದುರ್ವಿನೀತನು ದೊಡ್ಡ ವ್ಯಾಕರಣ ಶಾಸ್ತ್ರಜ್ಞನಾಗಿದ್ದ ಸಂಗೀತದಲ್ಲಿಯೂ ಕೋವಿದನಾಗಿದ್ದ, ಒಟ್ಟಿನಲ್ಲಿ ಪರಾಕ್ರಮದ ಜೊತೆಗೆ ಸಂಸ್ಕೃತಿಯನ್ನೂ ಚೆನ್ನಾಗಿ ಮೈಗೂಡಿಸಿಕೊಂಡಿದ್ದ ಆದರ್ಶ ಬ್ರಾಹ್ಮ-ಕ್ಷಾತ್ರನಿಧಿ ದುರ್ವಿನೀತ.

ಸಾಮಾನ್ಯವಾಗಿ ಸುಮಾರು ಇನ್ನೂರಿಪ್ಪತ್ತು ಇನ್ನೂರೈವತ್ತು ವರ್ಷಗಳಾದರೂ ಗಟ್ಟನಿಂತರೆ ಅದನ್ನೊಂದು ಯಶಸ್ವೀ ರಾಜ್ಯವೆನ್ನಬಹುದು. ನಮ್ಮ ದೇಶದ ಈ ಹೊತ್ತಿನ ಸಾಮಾನ್ಯ ಗಾತ್ರದ ನಾಲ್ಕು ರಾಜ್ಯಗಳಷ್ಟಾದರೂ ವ್ಯಾಪ್ತಿಯುಳ್ಳದ್ದಾದರೆ ಆಗ ಅದನ್ನು ಸ್ಥೈರ್ಯವುಳ್ಳ ಸುದೀರ್ಘವಾಗಿ ಆಳಲ್ಪಟ್ಟ ಸಾಮ್ರಾಜ್ಯವೆನ್ನುತ್ತೇವೆ. ಈ ಅಳತೆಗೋಲಿನಲ್ಲಿ ನೋಡಿದಾಗ ನಮಗೆ ಮೌರ್ಯರು, ಗುಪ್ತರು, ಚಾಲುಕ್ಯರು, ರಾಷ್ಟ್ರಕೂಟರು, ಪ್ರತಿಹಾರರು, ವಿಜಯನಗರದವರು, ಹೀಗೆ ಕೆಲವೇ ರಾಜಮನೆತನಗಳು ಸಿಗುತ್ತವೆ. ದಕ್ಷಿಣ ಭಾರತದಲ್ಲಿ ಮಾತ್ರ ಪಲ್ಲವರು, ಚಾಲುಕ್ಯರು, ರಾಷ್ಟ್ರಕೂಟರೇ ವಿಜೃಂಭಿಸಿದುದನ್ನು ಕಾಣುತ್ತೇವೆ.

ಭಾರತೀಯ ಶಾಲಾ-ಕಾಲೇಜುಗಳ ಇತಿಹಾಸ ಪುಸ್ತಕಗಳಲ್ಲಿ ಶ್ರೀಹರ್ಷನ ಆಳ್ವಿಕೆಯ ಬಳಿಕ ಭಾರತವೆಲ್ಲ ಅತಂತ್ರವಾಯಿತೆಂಬಂತೆ ಚಿತ್ರಿಸುತ್ತಾರೆ. ಇಂಥ ಅನ್ಯಾಯದ ಕಾರಣ ಇಸ್ಲಾಮಿನ ಆಕ್ರಮಣದ ಹೊತ್ತಿಗೆ ಭಾರತವು ಛಿದ್ರವಿಛಿದ್ರವಾಗಿತ್ತು. ದೆಹಲಿಯ ಇಸ್ಲಾಮಿ ಪ್ರಭುತ್ವವೇ ಭಾರತವನ್ನು ಒಗ್ಗೂಡಿಸಿತು. ಆ ಬಳಿಕ ಬ್ರಿಟಿಷರ ಕ್ರೈಸ್ತ ಪ್ರಭುತ್ವವೇ ನಮ್ಮ ದೇಶಕ್ಕೊಂದು ರಾಷ್ಟ್ರತ್ವವನ್ನು ದಯಪಾಲಿಸಿತೆಂದು ವಿದ್ಯಾವಂತರೂ ಭ್ರಮಿಸುವಂತಾಯಿತು. ಈ ಅಪಕಲ್ಪನೆಯು ನಮ್ಮ ಕ್ಷಾತ್ರಪರಂಪರೆಗೆ ತೀರದ ವಂಚನೆಯನ್ನೆಸಗಿದ. ಪ್ರಸ್ತುತಃ ಘೂರ್ಜರ ಪ್ರತಿಹಾರರು, ಚೌಹಾಣರು, ಚಂದೇಲರು, ಪಾಲರು ಹಾಗೂ ಸೇನರು ಉತ್ತರ ಭಾರತದಲ್ಲಿ ಹಲವು ಶತಮಾನಗಳ ಭವ್ಯ ಸಾಮ್ರಾಜ್ಯಗಳನ್ನು ರೂಪಿಸಿದ್ದರಲ್ಲದೆ ದಕ್ಷಿಣದಿಂದ ಹೊಮ್ಮಿದ ಚಾಲುಕ್ಯರೂ ರಾಷ್ಟ್ರಕೂಟರೂ ಉತ್ತರದಲ್ಲಿ ಕೂಡ ವಿಜೃಂಭಿಸಿದರು. ಉತ್ತರ ಭಾರತದಲ್ಲಿ ಸೋಲಂಕಿಗಳೂ ರಾಠೋಡರೂ ಇವರೇ ಅಲ್ಲದೆ ಬೇರೆ ಯಾರೂ ಅಲ್ಲವೆಂಬುದು ಸರ್ವಸುವೇದ್ಯ. ಇವರೊಟ್ಟಿಗೆ ಕಲಚೂರ್ಯರು ಹಾಗೂ ಕಳಿಂಗ ಗಂಗರು ದೊಡ್ಡ ರೀತಿಯಲ್ಲಿ ಸಾಮ್ರಾಜ್ಯಗಳನ್ನು ಕಟ್ಟಿ ನಡೆಸಿದ್ದಾರೆ. ಹೀಗಾಗಿ ಹರ್ಷಾನಂತರವೂ ನಮ್ಮ ಕ್ಷಾತ್ರದ ವೈಭವಕ್ಕೆ ಕೊನೆಯಿರಲಿಲ್ಲ. ಆದುದರಿಂದ ಸದ್ಯಕ್ಕೆ ಸಂಕ್ಷಿಪ್ತವಾಗಿಯಾದರೂ ಈ ಕೆಲವು ರಾಜವಂಶಗಳ ಕ್ಷಾತ್ರತೇಜಸ್ಸನ್ನು ಪರಿಚಯಿಸಿಕೊಳ್ಳುವುದು ಅಪೇಕ್ಷಣೀಯ.

**ಘೂರ್ಜರ ಪ್ರತಿಹಾರರು:** ಕರ್ನಾಟಕದ ಕದಂಬರಂತೆಯೇ ಬ್ರಾಹ್ಮದಿಂದ ಕ್ಷಾತ್ರಕ್ಕೆ ಹೊರಳಿದವರು. ಮಾಲವೇಶ್ವರ ಯಶೋಧರ್ಮನ ಅವಸಾನದ ಬಳಿಕ ಪಶ್ಚಿಮೋತ್ತರ ಭಾರತದಲ್ಲಿ ಉಂಟಾಗಿದ್ದ ಅರಾಜಕತೆಯನ್ನು ನೀಗಲೆಂದು ಅಪದ್ಧರ್ಮವಾಗಿ ಶಸ್ತ್ರವನ್ನು ಹಿಡಿದು ಹರಿಚಂದ್ರನು ಇಂದಿನ ಪಂಜಾಬ್, ರಾಜಾಸ್ಥಾನ, ಗುಜರಾತ್ ಮತ್ತು ಸಿಂಧ್ ಪ್ರಾಂತಗಳಿಗೆಲ್ಲ ವ್ಯಾಪ್ತಿಸಿಕೊಂಡು ತನ್ಮೂಲಕ ಭಾರತದ ಗಡಿನಾಡನ್ನೆಲ್ಲ ಕಾಯುವ ರಕ್ಷಕಭಟವೆಂಬ ಪ್ರತಿಹಾರರೆಂಬ ಅಗ್ಗಳಿಕೆಯನ್ನು ಒಡೆದ ಬಲಾಢ್ಯರಾಜವಂಶಕ್ಕೆ ಮೂಲವೆನಿಸಿದನು. ಈ ವಂಶದ ರಾಜರು ಗಡಿನಾಡಿನಲ್ಲಿ ಅರಬ್ಬರ ದಾಳಿಯನ್ನು ತಡೆಯಲು ಅದೆಷ್ಟೋ ಬಗೆಯಲ್ಲಿ ಹೆಣಗಿದರು ಕೆಲವೊಮ್ಮೆ ಗೆಲವೂ ಕೆಲವೊಮ್ಮೆ ಆಗಿ ದೈವದುರ್ವಿಪಾಕದಿಂದ ಕ್ರಮೇಣ ಕಣ್ಮರೆಯಾದರು.

ಪ್ರತಿಹಾರರ ಆಳ್ವಿಕೆಯಲ್ಲಿ ಸನಾತನಧರ್ಮವು ಗುಪ್ತಯುಗದ ವೈಭವವನ್ನು ಮುಂದುವರಿಸಿಕೊಂಡಿತು. ಪುರಾಣ-ಆಗಮ-ಧರ್ಮಶಾಸ್ತ್ರ-ಸಾಹಿತ್ಯ-ಕಲೆಗಳೆ ಮುಂತಾದ ಆಯಾಮಗಳಲ್ಲಿ ಅದ್ಭುತ ಸಾಧನೆಗಳನ್ನು

ಮಾಡಿತು. ಮುಖ್ಯವಾಗಿ ಇಸ್ಲಾಮಿನ ಆಕ್ರಮಣಗಳ ತಡೆಗೂ ಸನಾತನ ಧರ್ಮಸಂರಕ್ಷಣೆ ಮತ್ತು ಪ್ರಸಾರಗಳಿಗೂ ಬುನಾದಿಯಾಗಿ ಈ ಮಹಾರಾಜವಂಶವು ದೇಶದ ಸೈನ್ಯಶಕ್ತಿ, ಆಯುಧಬಲ ಮತ್ತು ಸಂಘಟನ ವ್ಯವಸ್ಥೆಗಳನ್ನೂ ಉದ್ಯಮ-ಕೃಷಿ-ವಾಣಿಜ್ಯಗಳ ಸರ್ವತೋಮುಖ ಸಮೃದ್ಧಿಯನ್ನೂ ಸಾಧಿಸಲು ಪ್ರಾಂಜಲವಾಗಿ ದುಡಿಯಿತು. ಮನುಸ್ಮೃತಿ ಗ್ರಂಥಕ್ಕೆ ಪ್ರಪ್ರಥಮ ವ್ಯಾಖ್ಯಾನವನ್ನು ಬರೆದ ಈ ಕಾಲದ ವಿದ್ವಾಂಸ ಮೇಧಾತಿಥಿಯ ಬರೆಹದಲ್ಲಿ ಈ ಎಲ್ಲ ಆಯಾಮಗಳ ಪ್ರತಿಧ್ವನಿಯನ್ನು ಕೇಳುತ್ತೇವೆ. ಇವನು ಬ್ರಹ್ಮಾವರ್ತ, ಆರ್ಯಾವರ್ತ ಮತ್ತು ಯಜ್ಞಿಯ ದೇಶಗಳಿಗೆ ದೇಶಾತೀತವಾದ ವ್ಯಾಖ್ಯಾನವನ್ನಿತ್ತದ್ದು, ಬೃಹದ್ಭಾರತದ ಬೆಳವಣಿಗೆಗೆ ಭಾವನಾತ್ಮಕವಾಗಿ ತುಂಬ ನೆರವಾಯಿತು. ಅಲ್ಲದೆ, ಮೇಧಾತಿಥಿಯು ವರ್ಣಾಶ್ರಮಗಳ ಗತಿಶೀಲವೂ ಅಸಂಕುಚಿತವೂ ಆದ ಪರಿಯನ್ನು ವಿವರಸಿರುವುದಾಗಲಿ ಬಲವಂತವಾಗಿ ಮತಾಂತರ ಹೊಂದಿದ ಹಿಂದೂಗಳನ್ನಾಗಲಿ ಅನ್ಯಮತೀಯರನ್ನಾಗಲಿ ಸನಾತ ಧರ್ಮಕ್ಕೆ ಮತ್ತೆ ಬರಮಾಡಿಕೊಳ್ಳುವ ಅವಕಾಶವಾಗಲಿ, ಮ್ಲೇಚದಿಂದ ಅತ್ಯಾಚಾರಕ್ಕೆ ತುತ್ತಾದ ಸ್ತ್ರೀಯನ್ನು ಪುನಃ ಗೌರವಸ್ಥಾನಕ್ಕೆ ತಂದುಕೊಳ್ಳುವ ಬಗೆಯಾಗಲಿ ಸತೀಪದ್ಧತಿ ವಿರೋಧವಾಗಲಿ ಸುತರಾಂ ಸ್ತುತ್ಯ, ಗಮನಾರ್ಹ *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೧೫೫, ೨೦೧೬).*



**ಪಾಲರು:** ಶಶಾಂಕನ ತರುವಾಯ ಬಂಗಾಳವು ಸುಮಾರು ನೂರುವರ್ಷಗಳಷ್ಟು ಧೀರ್ಘಕಾಲ ಅರಾಜಕತೆಯಲ್ಲಿದ್ದಿತು. ಇದನ್ನು ಬಗೆಹರಿಸಲೆಂದು ಅಲ್ಲಿಯ ಸಣ್ಣಪುಟ್ಟ ದೊರೆಗಳೆಲ್ಲ ಒಟ್ಟಿಗೆ ಸೇರಿ ಪ್ರಜಾಹಿತವೊಂದನ್ನೇ ಗಮನದಲ್ಲಿರಿಸಿಕೊಂಡು ತಮ್ಮಲ್ಲೇ ಒಬ್ಬನನ್ನು ಪರಮಾಧಿಕಾರಿಯನ್ನಾಗಿ ಆಯ್ದುಕೊಂಡರಂತೆ ಇದರ ಫಲವಾಗಿ ಹೊಮ್ಮಿದ್ದೇ ಈ ಪಾಲವಂಶ. ಇದು ನಿಜಕ್ಕೂ ಭಾರತೀಯ ಕ್ಷಾತ್ರಮೌಲ್ಯದ ಕ್ಷಣಗಳಲ್ಲೊಂದು ಪಾಲಾನ್ವಯದ ಶಿಖರಗಳೆಂದರೆ ಧರ್ಮಪಾಲ ಮತ್ತು ಅವನ ಮಗ ದೇವಪಾಲ. ಈ ತಂದೆ ಮಕ್ಕಳಿಬ್ಬರೂ ಕೂಡಿ ಎಂಬತ್ತುವರ್ಷಗಳ ಆಳ್ವಿಕೆಯನ್ನು ನಡೆಸಿದರು.

ಪಾಲವಂಶೀಯರು ಬೌದ್ಧಮತೀಯರಾಗಿದ್ದರೂ ತಮ್ಮ ಆರಂಭ ಕಾಲದಲ್ಲಿ ಸನಾತನಧರ್ಮದ ಮೌಲ್ಯಗಳನ್ನು ಚೆನ್ನಾಗಿ ಮೈಗೂಡಿಸಿಕೊಂಡಿದ್ದರು. ಕ್ಷಾತ್ರದ ಮಹತ್ವವನ್ನರಿತಿದ್ದರು. ನಲಂದದಂಥ ಬೌದ್ಧಕೇಂದ್ರಗಳಿಗೆ ಹಿರಿದಾದ ಕೊಡುಗೆಗಳನ್ನು ಕೊಟ್ಟಿದ್ದರೂ ದೇಶ-ವಿದೇಶಗಳಿಂದ ಹರಿದುಬರುತ್ತಿದ್ದ ಬೌದ್ಧಮತೀಯರಾದ ರಾಜರ ಹಾಗೂ ವಿದ್ವಾಂಸರ ಆಶೋತ್ತರಗಳಿಗೆ ಚೆನ್ನಾಗಿ ಸ್ಪಂದಿಸುತ್ತಿದ್ದರಾದರೂ ತಮ್ಮ ಬಹುಸಂಖ್ಯಾತರಾದ ಸನಾತನಧರ್ಮಿಯ ಪ್ರಜೆಗಳ ಬಾಳಿನಲ್ಲಿ ಮತಾಂತರದ ಪಿಡಗನ್ನುಂಟುಮಾಡಲಿಲ್ಲ. ಸ್ವತಃ ಪಾಲರೇ ಬಗೆಬಗೆಯ ದೇವತೆಗಳ ಆರಾಧನ ಕೇಂದ್ರಗಳನ್ನು ನಿರ್ಮಿಸಿದರು. ಹೀಗಾಗಿ ಆರಂಭಿಕ ಪಾಲರ ಪ್ರಭುತ್ವದಲ್ಲಿ ಸನಾತನ ಧರ್ಮ ಪ್ರೀತಿಯು ಸ್ಪಷ್ಟವಾಗಿ ತೋರುತ್ತದೆ. ಆದುದರಿಂದಲೇ ಧರ್ಮಪಾಲು-ದೇವರ ಪಾಲರ ಸಾಮ್ರಾಜ್ಯದ ಸರ್ವಾಂಗೀಣ ಸಮೃದ್ಧಿಯೂ ಇತ್ತು. ಇಮ್ಮಡಿ ವಿಗ್ರಹಪಾಲನ ಮಗ ಮಹೀಪಾಲನು ಕ್ಷಾತ್ರವೃತ್ತಿಯನ್ನು ಪ್ರಜ್ವಲಿಸಿ ಮತ್ತೆ ಬಂಗಾಳದಲ್ಲಿ ತನ್ನ ನೆಲೆಯನ್ನು ಗಟ್ಟಿಗೊಳಿಸಿಕೊಂಡನೆಂದು ತಿಳಿಯುತ್ತದೆ. ಅನಂತರ ಕರ್ನಾಟಕದ ಮೂಲದಿಂದ ಹೊಮ್ಮಿದ ಸೇನರು ಪೂರ್ವ ಭಾರತದಲ್ಲಿ ಪ್ರಬಲರಾದರು. ಹೀಗಾಗಿ ನಾವು

ಮೊದಲಿನಿಂದ ಗಮನಿಸಿದಂತೆ ಅಶೋಕ, ಕನಿಷ್ಕ, ಶ್ರೀಹರ್ಷರ ಜಾಡಿನಲ್ಲಿಯೇ ಪಾಲರ ಕ್ಷಾತ್ರ ತ್ಯಾಗವೂ ಅನಪೇಕ್ಷಿತ ಫಲಗಳನ್ನು ನೀಡಿತು. ಇದು ಭಾರತಕ್ಕೆ ಮಾತ್ರವಲ್ಲ, ಜಾಗತಿಕವಾದ ಯಾವುದೇ ರಾಷ್ಟ್ರೀಯತೆಗೂ ಒಂದು ಎಚ್ಚರಿಕೆಯ ಪಾಠವೆಂದರೆ ತಪ್ಪಲ್ಲ.

**ಸೇನರು:** ಪಾಲವಂಶೀಯರ ಕೊನೆಯ ಕುಡಿಯಾದ ರಾಮಪಾಲನನ್ನು ಮೂಲೆಗೊತ್ತರಿಸಿ ಪ್ರವರ್ಧಮಾನಕ್ಕೆ ಬಂದ ಕರ್ನಾಟಕ ಕ್ಷತ್ರಿಯವಂಶವೇ ಸೇನರದು. ಕನ್ನಡದ ಚಾಲುಕ್ಯ ರಾಜವಂಶದವರೆನ್ನಬಹುದಾದ ಈ ರಾಜರ ಪೈಕಿ ಅಗ್ರಗಣ್ಯರೆಂದರೆ, ವಿಜಯಸೇನ ಮತ್ತು ಲಕ್ಷ್ಮಣಸೇನರು ಇವರೆಲ್ಲ ಸನಾತನಧರ್ಮಕ್ಕೂ ಕ್ಷಾತ್ರಪೌರುಷಕ್ಕೂ ಮನ್ನಣೆ ನೀಡಿ ಕಲೆಸಾಹಿತ್ಯಗಳನ್ನು ಬೆಳೆಸಿದವರು, ಉಮಾಪತಿಧರ, ಶರಣ, ಗೋವರ್ಧನ ಶ್ರುತಿಧರ, ಧೋಯೀ, ವಟುದಾಸ, ಶ್ರೀಧರದಾಸ, ಹಲಾಯುಧ, ಮುಂತಾದ ಸಂಸ್ಕೃತ ಕವಿಗಳೆಲ್ಲ ಸೇನರ ಆಶ್ರಯದಲ್ಲಿ ಬೆಳೆದವರು. ಲಕ್ಷ್ಮಣ ಸೇನನ ಮಗ ಕೇಶವಸೇನನೂ ಇಸ್ಲಾಮಿನ ವಿರುದ್ಧ ಸೆಣಸಿದನು. ಒಟ್ಟಿನಲ್ಲಿ ಸೇನರು ಶೈವ-ವೈಷ್ಣವ-ಶಕ್ತಾದಿಮತಗಳಿಗೆಲ್ಲ ಮಾನ್ಯತೆ ನೀಡಿ ತಮ್ಮಳವಿನಲ್ಲಿ ಬ್ರಾಹ್ಮ-ಕ್ಷಾತ್ರಗಳ ನಲ್ಮೆಯನ್ನು ಮೆರೆದರು. ಪ್ರತಿಹಾರರ ಅವಸಾನದ ಬಳಿಕ ಉತ್ತರಾಪಥದಲ್ಲಿ ವಿವಿಧರಾಜ ಪುತ್ರವರ್ಗದ ಸಾಮಂತ ಮನೆತನಗಳೇ ಸ್ವತಂತ್ರವಾಗಿ ತಮ್ಮ ತಮ್ಮ ಅಭ್ಯುದಯಗಳನ್ನು ಕಂಡವು. ಇಂಥ ಸಮೂಹದಲ್ಲಿ ಚಂದೇಲರು, ಪರಮಾರರು, ಗುರ್ಜರ ಚಾಲುಕ್ಯರು, ಮೇವಾಡದ ಗುಹಿಲರೇ ಮುಂತಾದವರು ಗಣ್ಯರು. ಇವರಲ್ಲಿ ಕೆಲವರ ಪರಿಚಯವು ಭಾರತೀಯ ಕ್ಷಾತ್ರವೈದುಷ್ಯದ ನಿಟ್ಟಿನಿಂದ ಅಪೇಕ್ಷಿತ, ಅಂಥ ಒಂದು ರಾಜವಂಶವೆಂದರೆ ಚಂದೇಲರದು.

**ಚಂದೇಲರ:** ಚಂದೇಲರ ಬುಂದೇಲ ಖಂಡವನ್ನು ಕಾಲಂಜರವನ್ನು ಕೇಂದ್ರವಾಗಿಸಿಕೊಂಡು ಬೆಳೆದವರು. ಇವರು ಮೂಲತಃ ಶೂದ್ರಕುಲದವರು, ತಮ್ಮ ವಿಕ್ರಮದಿಂದಲೇ ಕರ್ಮಕ್ಷತ್ರಿಯರಾದವರು. ಇವರಲ್ಲಿ ಹರ್ಷ ಪುತ್ರ ಯಶೋವರ್ಮನು ತನ್ನ ಸಾಧನೆಗಳಿಂದ ಗಣ್ಯನಾಗಿದ್ದಾನೆ. ಇವನು ಪರಮಾರ ಪಾಲನೃಪತಿ ವಿಗ್ರಹಪಾಲನನ್ನೂ ಕಲಚುರಿ ಯುವ ರಾಜನನ್ನೂ ಗೆದ್ದ ಶೂರ. ತನ್ನ ಪರಾಕ್ರಮಕ್ಕೆ ಹೆಗಲೆಣೆಯಾಗಿ ದೈವಭಕ್ತಿ ಮತ್ತು ಕಲಾಸಕ್ತಿಗಳನ್ನೂ ಹೊಂದಿದ್ದುದಕ್ಕೆ ಸಾಕ್ಷಿಯಾಗಿ ಖಜುರಾಹೋ ನಗರದಲ್ಲಿ ನಿರ್ಮಿಸಿದ ದೇವಾಲಯ ಸಮುಚ್ಚಯಗಳೂ ಚತುರ್ಭುಜನಾರಾಯಣನ ಮಂದಿರವೂ ಇದೆ. ಇವನ ಮಗ ಧಂಗನು (ಕ್ರಿ.ಶ. ೯೫೦-೧೦೦೦ರ) ಚಂದೇಲರ ಸರ್ವೋಚ್ಚ ಮಹಾರಾಜ, ಇವನು ತನ್ನ ರಾಜ್ಯದ ಎಲ್ಲೆಯನ್ನೂ ಮತ್ತು ವಿಸ್ತರಿಸಿ ಗುರ್ಜರ ಪ್ರತಿಹಾರರ ಮಟ್ಟದ ಸಾರ್ವಭೌಮನಾದನು. ಬುಂದೇಲ ಖಂಡದಲ್ಲಿ ಸನಾತನ ಧರ್ಮವನ್ನು ಎತ್ತಿಹಿಡಿದ ಚಂದೇಲರ ಯೋಗದಾನ ಹಿರಿದು.

ಕರ್ನಾಟಕದ ಮಹಾರಾಜರುಗಳ ಪೈಕಿ ಅಗ್ರಗಣ್ಯನಾದವನು ಕಲ್ಯಾಣಿ ಚಾಲುಕ್ಯರ ಮಹಾರಾಜ ಆರನೆಯ ವಿಕ್ರಮಾದಿತ್ಯ. ಇವನು ಮೊದಲನೆಯ ಸೋಮೇಶ್ವರನ ಮಗ. ಪುಣ್ಯವಶಾತ್ ಇವನಿಗೆ ವಿದ್ಯಾಪತಿ ಬಿಲ್ಲಣನಂಥ ಕವಿಯು ದೊರೆತದ್ದರಿಂದ ಇವನ ಸಾಧನೆಗಳು ಅಜರಾಮರವಾಗಿ ಉಳಿದುಕೊಂಡವು. ಪರಂಪರೆಯಲ್ಲಿ ಎದ್ದು ತೋರುವ ಮತ್ತೊಬ್ಬ ಮಹಾರಾಜ ಹೊಯ್ಸಳರ ಬಿಟ್ಟಿದೇವ ವಿಷ್ಣುವರ್ಧನ. ಈತನು ತನ್ನ ರಾಜ್ಯವನ್ನು ತಿರುಚಿನಾಪಳ್ಳಿಯಿಂದ ಕೃಷ್ಣಾ ನದಿಯವರೆಗೂ ವಿಸ್ತರಿಸಿದ್ದನು.

ಈತನೂ ಮಾಡಿದ ಅನೇಕ ಯುದ್ಧಗಳಲ್ಲಿ ಗೆದ್ದಿದ್ದಾನೆ. ಇವನು ಅನೇಕಾನೇಕ ವಿಷ್ಣು-ಶಿವದೇವ ಸ್ಥಾನಗಳನ್ನೂ ಜಿನಾಲಯಗಳನ್ನೂ ನಿರ್ಮಿಸಿದನು. ಬೇಲೂರು-ಹಳೇಬೀಡುಗಳ ಅಸಮಾನ ವಾಸ್ತುಶಿಲ್ಪ ಸೌಂದರ್ಯವು ಇವನ ಪ್ರೋತ್ಸಾಹ ಫಲ. ಈತನು ಶ್ರೀವೈಷ್ಣವಪಂಥಕ್ಕೆ ಮತಾಂತರವಾದನೆಂಬ ಅಭಿಪ್ರಾಯವಿದೆ. ಆದರೆ ಅದು ನಿಜವಲ್ಲ ವಿಷ್ಣುವರ್ಧನ ಎಂಬ ಹೆಸರು ಅವನ ಮೂಲನಾಮವೇ ವಿಷ್ಣು ಎಂಬ ಪದವೇ ಬಿಟ್ಟಿ-ಬಿಟ್ಟಗ ಎಂದು ತದ್ಭವಗೊಂಡಿದೆ. ಹೀಗಾಗಿ ಈತನು ಬಿಟ್ಟಿಗನೆಂಬ ಜೈನ, ಬಳಿಕ ವಿಷ್ಣುವರ್ಧನನೆಂಬ ಶ್ರೀವೈಷ್ಣವನಾದನೆಂಬ ಕಥೆಗೆ ಕಾಲಿಲ್ಲ. ಆದರೆ ತನ್ನ ಸಮಕಾಲೀಕನರಾದ ರಾಮಾನೂಜ ಚಾರ್ಯರಿಗೆ ವಿಶೇಷ ಆದರ ಗೌರವವನ್ನು ನೀಡಿದ್ದನು.

ಮುಂದೆ ನಾವು ಕಾಣುವ ವಿಶಿಷ್ಟ ಶಕ್ತಿಯೆಂದರೆ, ಸೇವುಣರು. ಇವರನ್ನೂ ದೇವಗಿರಿಯ ಯಾದವರೆಂದೂ ಹೇಳುವರು. ಇಂದಿನ ಮಹಾರಾಷ್ಟ್ರ ಪ್ರಾಂತದಲ್ಲಿ ಸೇವುಣರ ಆಳ್ವಿಕೆ ಸಾಗಿತ್ತು. ಇವರು ಅಪ್ಪಟ ಕನ್ನಡಿಗರಾಗಿದ್ದರು ಮತ್ತು ಸನಾತನ ಧರ್ಮಕ್ಕೆ ಪೂಕರವಾಗಿಯೇ ನಡೆದುಕೊಂಡರು ಇವರು ಗೊಲ್ಲರ ಕುಲಕ್ಕೆ ಸೇರಿದವರು, ಸಮಾಜದ 'ತೀರ ಕೆಳಗಿನ' ಹಂತದಿಂದ ಹೊರಹೊಮ್ಮಿದವರು ಹಾಗೆ ಬಂದವರೇ ನಮ್ಮ ಇತಿಹಾಸದಲ್ಲಿ ಗಟ್ಟಿಯಾಗಿ ನಿಂತಿದ್ದಾರೆ. ಬ್ರಾಹ್ಮ-ಕ್ಷಾತ್ರ ಸಮಾಯೋಗದ ಅತ್ಯುತ್ತಮ ದರ್ಶನಗಳಿವೆ. ವಿಜಯನಗರ ವೈಭವ, ಗಮನಿಸುವುದಾದರೆ, ವಿಜಯನಗರವನ್ನು ಸಂಗಮ, ಸಾಳ್ವ, ತುಳುವ, ಮತ್ತು ಅರವೀಡುಗಳೆಂಬ ನಾಲ್ಕು ರಾಜವಂಶಗಳು ಆಳಿದವು. ಇದರಲ್ಲಿ ಸಂಗಮ ಮತ್ತು ತುಳುವ ವಂಶಜರ ಅವಧಿಯಲ್ಲಿ ವಿಜಯನಗರದ ಉಚ್ಛ್ರಾಯವನ್ನು ಕಾಣಬಹುದು. ವಿಜಯನಗರವು ನಮಗಿಲ್ಲಿ ಮುಖ್ಯವಾಗುವುದು. ಮುಸಲ್ಮಾನರ ಜೊತೆಗೆ ನೇರವಾಗಿ ನಡಸಿದ ಹೋರಾಟಕ್ಕಾಗಿ ಇಲ್ಲಿಯವರೆಗೂ ಸನಾತನಧರ್ಮೀಯರ ನಡುವೆಯೇ ಯುದ್ಧಗಳಾಗಿದ್ದವು. ಇದೇ ಮೊದಲ ಬಾರಿಗೆ ದಕ್ಷಿಣ ಭಾರತದಲ್ಲಿ ಮುಸಲ್ಮಾನರ ಜೊತೆಗೆ ನೈಜ ಸಂಘರ್ಷ ಪ್ರಾರಂಭವಾದದ್ದು.

ಹೊಯ್ಸಳರ ಅಧೀನದಲ್ಲಿದ್ದ ಸಂಗಮನ ಐವರು ಮಕ್ಕಳಲ್ಲಿ ಪ್ರಮುಖರಾದವರು ಹರಿಹರ ಮತ್ತು ಬುಕ್ಕರಾಯ, ಇವರು ಹಾಲುಮತ ಅಥವಾ ಕುರುಬರ ಸಮುದಾಯಕ್ಕೆ ಸೇರಿದವರು ತಮ್ಮ ಕುಲಪುರೋಹಿತರಾದ ಮಾಧವಾಚಾರ್ಯರ (ಮುಂದೆ ಇವರೇ ಯತಿಗಳಾಗಿ ವಿದ್ಯಾರಣ್ಯರೆನಿಸಿದರು) ಮಾರ್ಗದರ್ಶನದಲ್ಲಿ ವಿಜಯನಗರದ ಸ್ಥಾಪನೆಯನ್ನಿವರು ಮಾಡಿದರು. ಪ್ರೌಢದೇವರಾಯನು ಗೋವೆಯವರೆಗೂ ಕರಾವಳಿಯನ್ನು ಭದ್ರಪಡಿಸಿ ಅನೇಕ ರೇವುಗಳನ್ನು ನೀರ್ಮಿಸಿದ. ಲಕ್ಕಣ್ಣ ದಂಡೇಶನನ್ನೂ ಒಳಗೊಂಡಂತೆ ಅನೇಕ ಸಮರ್ಥ ದಂಡನಾಯಕರು ಇವನ ಅವಧಿಯಲ್ಲಿದ್ದರು. ಪ್ರೌಢದೇವರಾಯನು ವಿಜಯನಗರ ಸಾಮ್ರಾಜ್ಯವನ್ನು ಅಮೂಲಾಗ್ರವಾಗಿ ಬಲಗೊಳಿಸಿದನು. ಮಾತ್ರವಲ್ಲ, ಕಲೆ-ಸಾಹಿತ್ಯ-ಶಾಸ್ತ್ರಾದಿಗಳ ಪೋಷಣೆಯನ್ನೂ ಚೆನ್ನಾಗಿ ನಡೆಸಿದ ಬ್ರಾಹ್ಮ-ಕ್ಷಾತ್ರತೆ ನಿಡಿದವನು. ವಿಜಯನಗರದ ಮತ್ತೊಬ್ಬ ಸಮರ್ಥನಾಯಕನೇ ಕೃಷ್ಣದೇವರಾಯ. ಗಂಗರಾಜರ ಮೇಲೆ, ಗಜಪತಿಗಳ ಮೇಲೆ, ಬಹಮನಿಯವರ ಮೇಲೆ, ಮಾಡಿದ ಯಾವ ಯುದ್ಧಗಳಲ್ಲಿಯೂ ಇವನು ಸೋತಿಲ್ಲ. ಕೊನೆಗಾಲದಲ್ಲಿ ಕೂಡ ಕೃಷ್ಣದೇವರಾಯನ ಹೆಸರು ಕೇಳಿದರೆ ಸಾಕು, ಶತ್ರುಗಳ ಎದೆ ನಡುಗುತ್ತಿತ್ತು. ಇವನು ಅಳಿದ ಬಳಿಕವೂ ಈತನ ಬಗೆಗೆ ಶತ್ರುಗಳು ಅಂಜುತ್ತಿದ್ದರು. ಅಲ್ಲಸಾನಿ ಪೆದ್ದನನು ಒಂದು

ಚಾಟುಪದ್ಯದಲ್ಲಿ ಬರೆದಂತೆ, ಕೃಷ್ಣ ದೇವರಾಯ ತೀರಿಕೊಂಡ ಹೊಸದರಲ್ಲಿ ದಾಳಿಮಾಡಿದ ಬಹಮನಿಯವರು ವಿಜಯನಗರದವರ ಕೆರಳಿಕೆಯ ಹೂಂಕಾರಕ್ಕೆ ಹೆದರಿ ದೂರ ಹೋಗಿದ್ದರು. ಆದರೂ ಅದ್ಭುತವಾದ ಸಂಘಟನೆ, ಶಿಸ್ತು ಮತ್ತು ಆಧುನಿಕ ಯುದ್ಧತಂತ್ರಗಳ ಫಲವಾಗಿ ಕೃಷ್ಣದೇವರಾಯನ ಕ್ಷಾತ್ರವೂ ತಿಮ್ಮರಸರನ ಬ್ರಾಹ್ಮಣವೂ ಸಿದ್ಧಿಯನ್ನು ಕಂಡಿದ್ದವು. ಒಮ್ಮೆಯಂತೂ ಯುದ್ಧಕ್ಕೆ ಹೋದವನು ಹಿಂದಿರುಗಿ ಬಂದದ್ದು, ನಾಲ್ಕು ವರ್ಷಗಳ ಬಳಿಕ ಪೋರ್ಚುಗೀಸ್ ಪ್ರವಾಸಿ ನ್ಯೂನಿಜನು ಕೃಷ್ಣದೇವರಾಯನ ರಾಯಚೂರು ವಿಜಯಯಾತ್ರೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ಇದು ಕೃಷ್ಣದೇವರಾಯನ ಉದಾರತೆಗೂ ಭಾರತೀಯ ಕ್ಷಾತ್ರ ಪರಂಪರೆಯ ಧರ್ಮದೀಪ್ತಿಗೂ ಒಂದು ಸುಂದರ ಸಾಕ್ಷಿ. ಪುತ್ರ ವ್ಯಾಮೋಹಿಯಾಗಿದ್ದ ಕೃಷ್ಣದೇವರಾಯನಿಗೆ ಮಗನ ಸಾವಿನ ಬಳಿಕ ಬದುಕಿನಲ್ಲಿ ಹೆಚ್ಚಿನ ಉತ್ಸಾಹ ಉಳಿಯಲಿಲ್ಲ. ತಿಮ್ಮರಸನ ಅಭಿಪ್ರಾಯದಂತೆ, 'ಸಿಂಹಾಸನದಲ್ಲಿ ಸರ್ವದಾಸಮರ್ಥನಾದ ರಾಜನಿರಬೇಕು. ಅವನ ರಕ್ತ ಅರ್ಥಾತ್ ವಂಶೀಯತೆಯು ಮುಖ್ಯವಲ್ಲ, ಆದರೆ ರಾಜರಿಗೆ ತಮ್ಮ ರಕ್ತದವನೇ ರಾಜನಾಗಬೇಕಂಬ ವ್ಯಾಮೋಹವಿರುತ್ತದೆ. ಇಲ್ಲಿಯೇ ನಾವು ಕೇವಲ ಜನ್ಮ ಮಾತ್ರದ ಕ್ಷಾತ್ರಕ್ಕೂ ಗುಣಕರ್ಮಕ್ಷಾತ್ರಕ್ಕೂ ಇರುವ ಅಂತರವನ್ನು ಕಾಣುತ್ತೇವೆ.

ವಿಜಯನಗರದ ಅವಧಿಯಲ್ಲಿ ಯಾವುದೇ ರೀತಿಯ ಮತಾಂಧತೆಯಾಗಲಿ ಭಾಷಾದ್ವೇಷಗಳಾಗಲಿ ಇರಲಿಲ್ಲ. ಭಾರತೀಯ ಕ್ಷಾತ್ರಪರಂಪರೆಯನ್ನು ಗಮನಿಸುವಾಗ ಮುಖ್ಯವಾಗಿ ಕಾಣವು ಒಂದಂಶವೆಂದರೆ, ಸಾಂಸ್ಕೃತಿಕ ವೈರತ್ವ, ಯಾವುದೇ ಕಾಲವಿರಲಿ ಇಲ್ಲಿ ತಂತ್ರದ ಕೊರತೆಯಿದ್ದರೂ ಔದಾರ್ಯ, ನೀತಿ ಮತ್ತು ಪ್ರೀತಿಗಳ ಕೊರತೆಯಿರಲಿಲ್ಲ. ಆದರೆ ಇದನ್ನು ದಾಳಿಕೋರ ಮತಗಳಾದ ಪ್ರವಾದಿತಂತ್ರಗಳು ಅರಿಯಲಿಲ್ಲ, ಆದರಿಸಲು ಇಲ್ಲ. ಕನ್ನಡದವರಿಗೆ ನೃಪತುಂಗನ ಹೆಸರು ಮಹತ್ತ್ವದ್ದು. ಅವನೂ ಶ್ರೀ ವಿಜಯನೂ ಸೇರಿ ರಚಿಸಿದ 'ಕವಿರಾಜಮಾರ್ಗ'ದ ಕಾರಣ ಆತನಿಗೆ ಈ ವಿಶೇಷ ಪ್ರಾಶಸ್ತ್ಯ ಈತನು ಮಿಗಿಲಾದ ಕ್ಷಾತ್ರ ತೇಜವುಳ್ಳವನಾಗದಿದ್ದರೂ ಶಾಂತಿಯ ಕಾಲದಲ್ಲಿ ರಾಜ್ಯವನ್ನು ಚೆನ್ನಾಗಿ ನಡೆಸುವುದರ ಹದವೇನೆಂಬುದನ್ನು ತಿಳಿಸಿದ್ದು ದಿಟವೇ ಈತನ ವಂಶವು ಕ್ಷಾತ್ರಕ್ಕೆ ತವರು. ರಾಷ್ಟ್ರಕೂಟರು ಕನೂಜ್‌ದ ದೊರೆಗಳನ್ನು ಹಲವು ಬಾರಿ ಮಣಿಸಿ ಕಪ್ಪಕಾಣಿಕೆಗಳನ್ನು ಪಡೆದಿದ್ದರು. ಇತಿಹಾಸಕಾರರಾದ ಡಾ. ಸೂರ್ಯನಾಥ ಕಾಮತ್ ಮೊದಲಾದವರು ಹೇಳುವಂತೆ `The history and culture of Indian people ಕೃತಿ ಶ್ರೇಣಿಯಲ್ಲಿ ಬರುವ `Imperil Kanooj' ಎಂಬ ಸಂಪುಟದ ಶೀರ್ಷಿಕೆಯು `Imperial' Rastrakoota ಎಂದಾಗಬೇಕೆಂಬ ಮಟ್ಟಿಗೆ ಅಮೋಘವರ್ಷನ ಆಚೀಚಿನವರು ಸಾಧಿಸಿದ್ದಾರೆ*(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೧೮೬, ೨೦೧೬).*

ರಾಷ್ಟ್ರಕೂಟರು ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಧಿಕಾರ ನಡೆಸಿದರು. ನೃಪತುಂಗನದು ಆಕ್ರಮಣ ಕಾರಿಯಾದ ವ್ಯಕ್ತಿತ್ವವಲ್ಲ. ಈತನು ಶಾಂತಿ-ಸುಭಿಕ್ಷತೆಗಳಿಗೆ ಹೆಚ್ಚು ಗಮನವನ್ನು ನೀಡಿದನು. ಎಲ್ಲ ಪಂಥಗಳನ್ನೂ ಸಮಾನವಾಗಿ ಕಂಡನು. ಇವನು ಹಿಂದಿನವರಾದ ದಂತಿದುರ್ಗ, ಕೃಷ್ಣ ಧ್ರುವ ಗೋವಿಂದ ಮೊದಲಾದವರು ಮಹಾಪರಾಕ್ರಮಿಗಳಾಗಿದ್ದರು. ರಾಷ್ಟ್ರಕೂಟರ ಕ್ಷಾತ್ರ ಇತಿಹಾಸವನ್ನು ಅಧ್ಯಯನ ಮಾಡಬೇಕಾದರೆ, ಆ ಕಾಲದಲ್ಲಿ ಆದೇಶವು ಹೇಗಿತ್ತು ಎಂಬ ಏಕಮುಖವೂ

ಕೇಂದ್ರಿತವೂ ಆದ ಚಿಂತನೆಯ ಜೊತೆಗೆ ಆ ಸಮಯದಲ್ಲಿ ಇಡಿಯ ಜಗತ್ತು ಹೇಗಿತ್ತು? ಬೇರೆ ಬೇರೆ ನಾಗರಿಕತೆಗಳು ಹೇಗಿದ್ದುವೆಂಬುದನ್ನು ನಿಶ್ಚಿತವಾಗಿ ಗಮನಿಸಬೇಕು. ಕ್ಷಾತ್ರದ ಬಗೆಗೆ ತಿಳಿಯಬೇಕಾದರೂ ಈ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಕೌಟಿಲ್ಯನು ಹೇಳಿದಂತೆ, ಕ್ಷಾತ್ರವೆಂದರೆ, 'ತ್ರಯೀ ಅನ್ವೀಕ್ಷಿಕೀ, ವಾರ್ತಾ, ದಂಡನೀತಿ'ಗಳ ಸಮರ್ಥನಿರ್ವಹಣೆ, ತ್ರಯೀ ಎಂದರೆ ಪಾರಂಪರಿಕ ಜ್ಞಾನ, ಅನ್ವೀಕ್ಷಿಕೀ ಎಂದರೆ, ಯಾವುದೇ ಜ್ಞಾನರಾಶಿಯನ್ನಾಗಲಿ ನಿರಾಗ್ರಹದಿಂದ ನಿಶ್ಚಿತವಾಗಿ ವಿಮರ್ಶಿಸಿ ವಿಚಾರ ಮಾಡುವ ಶಕ್ತಿ 'ವಾರ್ತಾ' ಎಂಬುದು ಸಂಪನ್ಮೂಲಗಳನ್ನು ಕುರಿತಾದ್ದು. ದಂಡನೀತಿಯೆಂದರೆ, ಸೈನ್ಯ ಮತ್ತು ಸೈನ್ಯೇತರವಾದ ಎಲ್ಲ ಆಡಳಿತಗಳ ನಿರ್ವಹಣೆ ಇಲ್ಲಿಯೂ ಮುಖ್ಯವಾಗಿ ಕ್ಷಾತ್ರವೆಂಬುದು 'ದಂಡನೀತಿ'ಯ ಸಂದರ್ಭಕ್ಕೆ ಹೆಚ್ಚಾಗಿ ಬರುತ್ತದೆ. ಆದರೆ ದಂಡನೀತಿಯು ಉಳಿದ ಮೂರು ವಿಷಯಗಳ ಮೇಲೆಯೇ ಅವಲಂಬಿತವಾಗಿದೆ. ಹೀಗಾಗಿ ಇವೆಲ್ಲವೂ ಪರಸ್ಪರ ಸಂಬಂಧವಾಗಿ ಕ್ಷಾತ್ರಪರಂಪರೆಯ ಜೀವಧಾತುಗಳೆನಿಸಿವೆ.

ತಮಿಳುನಾಡಿನ ಪೂರ್ವದ ಕರಾವಳಿಯಲ್ಲಿ ಚೋಳರು, ಮಧ್ಯದಲ್ಲಿ ಪಾಂಡ್ಯರು ಮತ್ತು ಪಶ್ಚಿಮದ ಕರಾವಳಿಯಲ್ಲಿ ಚೇರರು ಆಡಳಿತ ನಡೆಸುತ್ತಿದ್ದರು. ಇವರನ್ನು 'ಮೂವೇಂದಿರರ್' ಎಂದೇ ಕರೆಯಲಾಗುತ್ತದೆ. ಅಂದಿನ ಚೇರವೇ ಇಂದಿನ ಕೇರಳ. ಕೇರಳವು ಕ್ಷಾತ್ರ ಪರಂಪರೆಗೆ ಸಕ್ರಿಯವಾದ ನೇರವಾದ ಕೊಡುಗೆಯನ್ನೇನೂ ನೀಡಿಲ್ಲ. ಆದರೆ ಅದು ಕ್ಷಾತ್ರದ ಮತ್ತೊಂದು ಮುಖವಾದ ವಿದ್ಯಾವರ್ಧನ ಮತ್ತು ವಿಶ್ವತ್ಪೋಷಣಗಳನ್ನು ಅಸಮಾನವಾಗಿ ಮಾಡಿತು.

### ೨.೭. ಸ್ತ್ರೀಯರಲ್ಲಿ ಕ್ಷಾತ್ರಪ್ರಜ್ಞೆ

ನಮ್ಮಲ್ಲಿ ಸ್ತ್ರೀಯರಿಗೂ ಕ್ಷಾತ್ರ ಪ್ರವೃತ್ತಿಯಿತ್ತು ಎನ್ನುವುದು ಸೂಚಿಸುವಂಥ ಅನೇಕ ಉಲ್ಲೇಖಗಳಿವೆ. ಉದಾಹರಣೆಗೆ ರಾಮಾಯಣದಲ್ಲಿ ಬರುವ ಕೈಕೇಯೀ ಪ್ರಸಂಗ, ದಶರಥನಿಗೆ ದೇವಾಸುರಯುದ್ಧದಲ್ಲಿ ಅವಳು ನೆರವನ್ನು ಕೊಟ್ಟಿದ್ದಳೆಂಬ ಪ್ರಸಂಗ ನಮಗೆಲ್ಲ ಗೊತ್ತಿದೆ. ಹಾಗೆಯೇ ಮಹಾಭಾರತದಲ್ಲಿ ಅರ್ಜುನು ಸುಭದ್ರೆಯನ್ನು ಅಪಹರಿಸಿಕೊಂಡು ಬರುವಾಗ, ಬೆಂಬತ್ತಿ ಬಂದ ಯಾದವ ಸೈನ್ಯವನ್ನು ಏಕಾಕಿಯಾಗಿ ಎದುರಿಸುವ ಹೊತ್ತಿನಲ್ಲಿ ಸುಭದ್ರೆಯು ಯುದ್ಧ ಸಾರಥ್ಯವನ್ನು ವಹಿಸುವ ಕೌಶಲದಿಂದ ರಥವನ್ನು ಚಾಲನೆ ಮಾಡಿಕೊಂಡು ಬಂದಳು. ಅರ್ಜುನನ್ನು ಹಿಂದೆ ಬೆಂಬತ್ತಿ ಬರುತ್ತಿದ್ದ ಭಟರನ್ನು ತನ್ನ ಧನುರ್ಭಾಣಗಳ ಮೂಲಕ ಎದುರಿಸಿದಳೆಂಬ ಉಲ್ಲೇಖವಿದೆ. ಆಯಾ ವರ್ಣೋಚಿತವಾದ ಸಕಲವಿದ್ಯೆಗಳನ್ನು ಸ್ತ್ರೀ-ಪುರುಷ ಭೇದವಿಲ್ಲದೆಯೇ ಎಲ್ಲರಿಗೂ ಕೊಡಬೇಕು ಎನ್ನುವ ಮನುವಿನ ಮಾತಿನಲ್ಲಿಯೂ ನಾವಿದನ್ನು ಕಾಣುತ್ತೇವೆ. ಅಷ್ಟು ಮಾತ್ರವಲ್ಲ ಇತಿಹಾಸದ ಉಲ್ಲೇಖಗಳೂ ಅನೇಕವಿವೆ. ಅಲೆಕ್ಸಾಂಡರನ ದಾಳಿಯಾದಾಗ ಮೊದಲು ಗಂಡಸರು, ಆಮೇಲೆ ಹೆಂಗಸರು, ಆ ಬಳಿಕ ಮಕ್ಕಳೂ ಕೂಡ ಆಯುಧಗಳನ್ನು ಹಿಡಿದು ಹೋರಾಡಿರುವುದನ್ನು ಕಾಣುತ್ತೇವೆ. ಅರ್ಥಶಾಸ್ತ್ರಾದಿಗ್ರಂಥಗಳಲ್ಲಿ ಉಲ್ಲೇಖವಾಗಿರುವಂತೆ ಅಂಗರಕ್ಷಣೆಗೆ ಇರುವಂಥ ಒಂದು ಸೈನ್ಯವಲಯದಲ್ಲಿ ಸ್ತ್ರೀಯರೇ ಇರುತ್ತಿದ್ದರು. ಇವರಲ್ಲಿ ಕೆಲವರನ್ನು ಬೇರೆ ಬೇರೆ ದೇಶಗಳಿಂದಲೂ ಕರೆಸಿಕೊಳ್ಳಲಾಗುತ್ತಿತ್ತು. ಚಂದ್ರಗುಪ್ತ ಮೌರ್ಯನಿಗೆ ಶೋಣೋತ್ತರೆಯೆಂಬ ಅಂಗರಕ್ಷಕಿ ಇದ್ದಳೆಂಬುದನ್ನು ವಿಶಾಖದತ್ತನ ಮುದ್ರಾರಾಕ್ಷಸದಲ್ಲಿ ನೋಡುತ್ತೇವೆ.

ಹಾಗಲ್ಲದೆ ಅನೇಕಭಾರತೀಯ ಮಹಿಳೆಯರೂ ರಕ್ಷಣಾ ನಿಪುಣರಾಗಿದ್ದರು. ಮುಂದಿನ ಇತಿಹಾಸದಲ್ಲಿಯೂ ಅನೇಕರು ನಮಗೆ ಕಾಣಸಿಗುತ್ತಾರೆ. ಅವರಲ್ಲಿ ಎದ್ದು ತೋರುವಂಥ ದೊಡ್ಡ ಹೆಸರೆಂದರೆ ದಕ್ಷಿಣ ಭಾರತದ ರುದ್ರಮದೇವಿಯದು. ಕನ್ನಡನಾಡಿನ ಬೆಳವಡಿ ಮಲ್ಲಮ್ಮ, ಅಬ್ಬಕ್ಕಾದೇವಿ, ಭೈರಾದೇವಿ, ಬಿದನೂರಿನ ಪರಂಪರೆಯಲ್ಲಿ ಬಂದ ಚೆನ್ನಮ್ಮಾಜಿ, ಕಿತ್ತೂರಿನ ರಾಣಿಚೆನ್ನಮ್ಮ, ಅಹಲ್ಯಾಬಾಯಿ, ಝಾನ್ಸಿರಾಣಿ, – ಹೀಗೆ ದೊಡ್ಡ ಪರಂಪರೆ ಬೆಳೆದುಬಂದಿದೆ. ಮಧ್ಯಭಾರತದ ಗೊಂಡ್ವಾಲದಲ್ಲಿದ್ದ ರಾಣಿ ದುರ್ಗವತಿ ವೀರಾಗ್ರಣಿಗಳಲ್ಲೊಬ್ಬಳು. ಈ ನೆಲಕ್ಕೆ ಬಂದ ಮೇಲೆ ಮುಸ್ಲಿಂ ಮಹಿಳೆಯೂ ಹಾಗೆಯೇ ಆದಳು ಎನ್ನುವುದಕ್ಕೆ ರಜಿಯಾಬೇಗಂ ಒಂದು ಉದಾಹರಣೆ, ಗುಲಾಮಿ ಮನೆತನದ ಇಲ್ತಿಮಷನ ಮಗಳಾಗಿ ಅವಳು ಮಾಡಿದ ಸಾಹಸಕೃತ್ಯವನ್ನು ನಾವು ನೋಡುತ್ತೇವೆ *(ಗಣೇಶ್ ಆರ್, ಭಾರತೀಯ ಕ್ಷಾತ್ರ ಪರಂಪರೆ, ಪುಟ-೩೩, ೨೦೧೬).*

ಹಲವು ಜಾತಿ ಪಂಗಡ ಸಮುದಾಯಗಳ ಸಂಸ್ಕೃತಿಗಳನ್ನು ಪರಿಚಯಿಸುವ ಅನೇಕ ಗ್ರಂಥಗಳು ಈಗಾಗಲೇ ಬೆಳಕು ಕಂಡಿವೆ. ಆದರೆ ನಾಡಿನಾದ್ಯಂತ ವಿವಿಧ ಗುಂಪುಗಳಾಗಿ ಬೇರೆ ಬೇರೆ ಕುಲನಾಮಗಳಲ್ಲಿ ಹಂಚಿಹೋದ ಕ್ಷತ್ರಿಯರ ಸಮಗ್ರ ಸಂಸ್ಕೃತಿಯನ್ನು ಪರಿಚಯಿಸುವ ಒಂದು ಗ್ರಂಥವು ಈ ತನಕ ಪ್ರಕಟವಾಗಿಲ್ಲ. ಇದರಲ್ಲಿ ಕೆ.ಆರ್.ಶಿಲಾಹಾರರ ಕ್ಷತ್ರಿಯರ ಮೂಲಶೋಧ ಮತ್ತು ಸಂಸ್ಕೃತಿ ಸಂಪ್ರದಾಯ ಹಾಗೂ ಪ್ರಕಾಶ್ ಕೆ. ರಾವ್ ಅವರು ಸಂಪಾದಿಸಿದ ಕ್ಷತ್ರಿಯ ಎಂಬೆರಡು ಕಿರುಹೊತ್ತಿಗೆಯು ಹೆಚ್ಚು ಬೆಳಕು ಚೆಲ್ಲಲಾರದು. ಕರ್ನಾಟಕದ ಬೇರೆ ಬೇರೆ ಭಾಗದಲ್ಲಿ ಉದ್ಯೋಗ ನಿಮಿತ್ತ ನೆಲೆನಿಂತು ವಿಭಿನ್ನ ಹೆಸರುಗಳಿಂದ ಕರೆಯಲ್ಪಡುವ ಕ್ಷತ್ರಿಯರ ಭೌಗೋಳಿಕ ನೆಲೆಯನ್ನು ಗುರುತಿಸಬಹುದಾಗಿದೆ. ಉತ್ತರ ಮತ್ತು ದಕ್ಷಿಣ ಕನ್ನಡ ಹಾಗೂ ಕನಾರ್ಟಕದ ಎಲ್ಲ ಜಿಲ್ಲೆಗಳಲ್ಲಿ ನೆಲೆನಿಂತಿರುವ ಕ್ಷತ್ರಿಯರನ್ನು ಹಿಂದೂ ಕ್ಷತ್ರಿಯರು, ರಾಮಕ್ಷತ್ರಿಯ, ಸೋಮವಂಶ, ಆರ್ಯಕ್ಷತ್ರಿಯ ನಯನಜಕ್ಷತ್ರಿಯ ಈ ಮುಂತಾದ ಹೆಸರುಗಳಿಂದ ಕರೆಯುವ ಸಮುದಾಯಗಳಾಗಿ ನೆಲೆನಿಂತಿದ್ದಾರೆ.

ಹಿಂದಿನ ಬಳ್ಳಾರಿ ಜಿಲ್ಲೆಯ ಹೊಸಪೇಟೆ ಸಮೀಪದ ತುಂಗಭದ್ರೆಯ ಎಡದಂಡೆಯ ಉತ್ತರಕ್ಕಿರುವ ಕಿಷ್ಕಿಂದೆ ಎಂದು ಕರೆಯಲ್ಪಡುತ್ತಿದ್ದ ಪ್ರದೇಶದಲ್ಲಿ ಸುಮಾರು ೧೪ನೇ ಶತಮಾನದಲ್ಲಿ ಆನೆಗುಂದಿ ಸಂಸ್ಥಾನದ ಅರಸರು ಆಳುತ್ತಿದ್ದರು. ಆನೆಗುಂದಿಯ ಆಸುಪಾಸಿನ ಜನರು ವ್ಯವಸಾಯದಲ್ಲಿ ತೊಡಗಿದ್ದರು. ಇವರಲ್ಲಿ ಕೆಲವರು ಸೈನಿಕ ಸೇವೆಯಲ್ಲಿ ಪರಾಕ್ರಮಿಗಳೆಂದು ಹೆಸರು ಗಳಿಸಿದ್ದರು. ವಿಜಯನಗರ ಸಂಸ್ಥಾನದ ಸ್ಥಾಪಕರೆಂದು ಕರೆಯಲ್ಪಡುವ ಮಹರ್ಷಿ ಮಾಧವಾಚಾರ್ಯರು ವಿದ್ಯಾರಣ್ಯರೆಂಬ ನಾಮಧೇಯದೊಡನೆ ಹೆಸರಾಗಿದ್ದರು. ಈ ಪ್ರಾಂತ್ಯದಲ್ಲಿ ಶಬರಿ ಆಶ್ರಮ ಎಂಬ ಆರಾಧನಾ ಮಂದಿರವಿದೆ. ಹನುಮನ ಜನ್ಮಭೂಮಿಯಿದೆ. ಶ್ರೀರಾಮನ ಅನನ್ಯ ಭಕ್ತರಾಗಿದ್ದ ಕ್ಷತ್ರಿಯರೆಂದೇ ಕರೆಯಲ್ಪಡುತ್ತಿದ್ದ ಜನರು ಸೇನೆಗೆ ಸೇರಿ ರಾಜನ ಆಜ್ಞೆಯಂತೆ ಪಡುಗಡಲ ತಡಿಯಲ್ಲಿ ಪರಕೀಯರ ವಶದಲ್ಲಿದ್ದ ಎರಡು ಆಯಕಟ್ಟಿನ ಕೋಟೆಯನ್ನು ವಶಪಡಿಸಿಕೊಂಡು ವಿಜಯದುರ್ಗ ಮತ್ತು ಸಿಂಧುದುರ್ಗ ಎಂದು ನಾಮಕರಣ ಮಾಡಿದ್ದರು. ಕ್ಷತ್ರಿಯರ ಕರ್ತವ್ಯ ದಕ್ಷತೆಯನ್ನು ಮೆಚ್ಚಿದ ವಿಜಯನಗರದ ಸಾಮ್ರಾಟರು ವಿಜಯದುರ್ಗ ಮತ್ತು ಸಿಂದುದುರ್ಗಗಳ ದಕ್ಷಿಣ ಕರಾವಳಿಯ ದಂಡಯಾತ್ರೆಯಲ್ಲಿ

ಪಾಲ್ಗೊಂಡು ಕರಾವಳಿಯ ಕೋಟೆಗಳನ್ನು ವಶಪಡಿಸಿಕೊಳ್ಳಲು ಆದೇಶಿಸಿದರು' *(ಸುರೇಶ ನಾರಾಯಣನಾಯ್ಕ, ರಾಮಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ-೧೭, ೨೦೧೧).* ಕ್ಷತ್ರಿಯರನ್ನು ಕೋಟೆಗಳ ಸಂರಕ್ಷಕ ಸೇವಕರಾಗಿ ಅರಸರು ನೇಮಿಸಿದರು. ಕರಾವಳಿಯ ಎಲ್ಲ ಕೋಟೆಗಳ ರಕ್ಷಣೆಯ ಕಾರ್ಯ ಕ್ಷತ್ರಿಯ ಸಮುದಾಯದವರು ನಿರ್ವಹಿಸುತ್ತಿದ್ದರು. ಕನ್ನಡ ಭಾಷೆ ಮಾತನಾಡುವವರಾಗಿ ಕನ್ನಡ ನಾಡಿನ ಬಳ್ಳಾರಿ ಸಮೀಪ ಕೊಪ್ಪಳದ ಆಸುಪಾಸಿನಲ್ಲಿ ಮೂಲನೆಲೆಯಾಗಿ ಆನೆಗುಂದಿ ಸಂಸ್ಥಾನದ ರಾಜ ಸೇವಕರಾಗಿ ರಾಜರ ರಕ್ಷಣೆಯ ಕೆಲಸವನ್ನು ನಿರ್ವಹಿಸಿ ವಿಜಯನಗರದ ಕೆಳದಿ ಸಾಮ್ರಾಜ್ಯದಲ್ಲಿ ಮೈಸೂರು ಸೇನೆಯಲ್ಲಿ ಕಾರ್ಯನಿರ್ವಹಿಸಿದ ಕ್ಷತ್ರಿಯರ ಸೇವಾ ಜೀವನ ಕೆಳದಿ ಸಂಸ್ಥಾನ ಬಿದನೂರು ಪತನಗೊಂಡ ನಂತರ ಕೊನೆಗೊಂಡಿತು.

ಐತಿಹಾಸಿಕ ಹಿನ್ನೆಲೆಯ ಪ್ರಕಾರ ನಮ್ಮ ಪೂರ್ವಜರು ತಿಳಿದಂತೆ ಹಿಂದೂಕ್ಷತ್ರಿಯ, ಕ್ಷತ್ರಿಯ:ಕ್ಷತ್ರಿ, ಕೋಟೆಗಾರ, ಸೇರುಗಾರ, ಕುಮಾರ ಕ್ಷತ್ರಿಯ, ಕ್ಷತ್ರಿಯ ಕೋಮರಪಂತ್, ರಾಮಕ್ಷತ್ರಿಯ, ರಾಮರಾಜ ಕ್ಷತ್ರಿಯ, ಕೋಟೆ ಕ್ಷತ್ರಿಯ, ರಾಜುಕ್ಷತ್ರಿಯ, ಸೋಮವಂಶ ಕ್ಷತ್ರಿಯ, ಮಲ್ಲ ಕ್ಷತ್ರಿಯ ಸಮುದಾಯದವರು ಕರ್ನಾಟಕ, ಗೋವಾ, ಕೇರಳ, ಆಂಧ್ರ ಇನ್ನೂ ಅನೇಕ ರಾಜ್ಯಗಳಲ್ಲಿ ನೆಲೆಸಿದ್ದಾರೆ. ಅವರಲ್ಲಿ ಕ್ಷತ್ರಿಯರು ಕೋಟೆಗಾರರು ಪೋರ್ಚುಗೀಸರ ದಬ್ಬಾಳಿಕೆಯಿಂದ ಕಂಗೆಟ್ಟು ಅವರು ಕೊಡುವ ಹಿಂಸೆಯನ್ನು ತಾಳಲಾರದೆ ಆ ಸ್ಥಳಗಳನ್ನು ಬಿಡಬೇಕಾಯಿತು. ಅಲ್ಲಿಯೇ ನೆಲೆಸಿದ್ದರೆ, ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರವಾಗಬೇಕಾಗಿತ್ತು. ಈ ಕಾರಣದಿಂದ ನಮ್ಮ ಪೂರ್ವಜರು ಆಸ್ತಿಪಾಸ್ತಿ ಎಲ್ಲವನ್ನೂ ಬಿಟ್ಟು ಕಾರವಾರದ ಸದಾಶಿವಗಡ, ಕುಮಟಾದ ಮಿರ್ಜಾನ, ಚಂದಾವರ, ಹೊನ್ನಾವರದ ಹೊಸಪಟ್ಟಣ, ಮಂದೆ, ಬೈಂದೂರು, ಬಸ್ರೂರು, ಕುಂದಾಪುರ, ಶಿವಮೊಗ್ಗ, ದಾವಣಗೆರೆ, ಚಿತ್ರದುರ್ಗ, ಹಾವೇರಿ, ಹುಬ್ಬಳ್ಳಿ, ಧಾರವಾಡ, ಮಂಗಳೂರು, ಬೆಳ್ತಂಗಡಿ, ಕಾರ್ಕಳ, ಕುಂಬಳೆ, ಕಾಸರಗೋಡು, ಸಿರಸಿ, ಸಿದ್ಧಾಪುರ, ಮತ್ತು ಕೊಪ್ಪಳ, ಗದಗ, ವಿಜಯಪುರ, ಹಾವೇರಿ, ಬೆಳಗಾವಿ, ಇತ್ಯಾದಿ ಜಿಲ್ಲೆ ಮತ್ತು ತಾಲೂಕ ಗ್ರಾಮಗಳಲ್ಲಿ ನೆಲೆಯೂರಿದ್ದಾರೆ. ಕೋಟೆಗಳ ಕಾವಲುಗಾರರಾಗಿ ಗುಡ್ಡ ಬೆಟ್ಟದಲ್ಲಿ ವಾಸಿಸುವ ಇವರು ಹೈನುಗಾರಿಕೆ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡರೆ, ನದಿಮುಖಜ ಭೂಮಿಯಲ್ಲಿ ವಾಸಿಸುವವರು ಕೃಷಿ ಮಾಡಿ ಜೀವಿಸುತ್ತಿದ್ದರು. ಇವರು ಸೇರಿಬಂದವರಾದ್ದರಿಂದ ಸೇರುಗಾರರು, ಸರ್ವೆಗಾರರು, ಕೋಟೆ ಕೆಲಸ ಮಾಡುತ್ತಿದ್ದುದರಿಂದ ಕೋಟೆಯವರು, ಕೋಟೆಗಾರ ಕ್ಷತ್ರಿಯ, ಶ್ರೀರಾಮನ ಭಕ್ತರಾಗಿರುವುದರಿಂದ ರಾಮಕ್ಷತ್ರಿಯ ಹೀಗೆ ಹಲವು ನಾಮಗಳಿಂದ ಇವರನ್ನು ಕರೆಯುತ್ತಿದ್ದರು. ಕ್ಷತ್ರಿಯ ಜನಾಂಗದವರು ೪೦೦ ವರ್ಷಗಳ ಹಿಂದೆ ಸುಮಾರು ೧೬ನೇ ಶತಮಾನಗಳ ಮೊದಲು ಗೋವಾದಿಂದ ವಲಸೆ ಬಂದವರು, ಗೋವಾ ಗೆಝೆಟಿಯರಲ್ಲಿ ಉಲ್ಲೇಖವಾದಂತೆ ಇವರು ಗೋವಾದ ಮೂಲ ನಿವಾಸಿಗಳು. ತಮ್ಮ ರಾಜರ ಕೋಟೆಯ ಕಾವಲುಗಾರರಾಗಿ ಮತ್ತು ಬೇಟೆಗಾರರಾಗಿ ಸೇವೆ ಸಲ್ಲಿಸುತ್ತಿದ್ದರು. ಈ ಸಮುದಾಯದ ಬಗ್ಗೆ ಮೂಲ ಮಾಹಿತಿ ನಿಖರವಾಗಿ ತಿಳಿಯಲು ಸಾಹಿತ್ಯಾಧಾರ ದಾಖಲೆಗಳು ಹಾಗೂ ಸಾಕ್ಷ್ಯಾಧಾರಗಳ ಕೊರತೆ ಇದೆ*(ಸುರೇಶನಾರಾಯಣನಾಯ್ಕ, ರಾಮಕ್ಷತ್ರಿಯ ಸಮುದಾಯದಸಂಸ್ಕೃತಿ, ಪುಟ-೧೮, ೨೦೧೧).*

ಥರ್ಸ್ಟನ್ ೧೯೦೯ ರಲ್ಲಿ ಅಭಿಪ್ರಾಯ ಪಟ್ಟಂತೆ ಕ್ಷತ್ರಿಯ ಸಮುದಾಯದವರು ೧೬ನೇ ಶತಮಾನದಲ್ಲಿ ಕರ್ನಾಟಕ ಕರಾವಳಿ ಪ್ರದೇಶಕ್ಕೆ ಬರಲು ಮುಖ್ಯವಾದ ಕಾರಣವೆಂದರೆ, ಪೋರ್ಚುಗೀಸರು ಪ್ರಾರಂಭಿಸಿದ ದಬ್ಬಾಳಿಕೆಯ ಮತಾಂತರ ಚಳುವಳಿ. ಪೋರ್ಚುಗೀಸರು ಗೋವಾವನ್ನು ವಶಪಡಿಸಿಕೊಂಡಾಗ ಯಾರು ಅಲ್ಲಿಂದ ಪಲಾಯನವಾಗಲಿಲ್ಲವೋ ಅವರನ್ನು ಬಲವಂತವಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳಿಸುತ್ತಿದ್ದರು*(ಸುರೇಶನಾರಾಯಣನಾಯ್ಕ, ರಾಮಕ್ಷತ್ರಿಯ ಸಮುದಾಯದಸಂಸ್ಕೃತಿ, ಪುಟ-೧೮, ೨೦೧೧).*

ಕ್ಷತ್ರಿಯರು ಆರ್ಯ ಮೂಲದ ಚಂದ್ರವಂಶಿಯರು ಹಾಗೂ ಸರಸ್ವತೀ ನದಿ ತೀರದಿಂದ ವಲಸೆ ಬಂದವರು ಎಂದು ಸಿವಿ ವೈದ್ಯರು `Down Fall of Hindu India' ಎಂಬ ಗ್ರಂಥದಲ್ಲಿ ಈ ರೀತಿ ಹೇಳಿದ್ದಾರೆ *(ಪುಟ ೩೭೫).* 'The land of Saraswati as also Panchala was the ancient land of the Brahmins and Kshatriyas and all brahmins and Kshatriyas in the East and South of the Indian came originally from this region'. ಪರಂಪರಾಗತವಾಗಿ ಕ್ಷತ್ರಿಯರು ಇಂದಿಗೂ ಆಚರಿಸಿಕೊಂಡು ಬಂದಿರುವ ಆಚರಣೆಗಳಿಂದ ಈ ಮಾತನ್ನು ಪುಷ್ಟೀಕರಿಸಬಹುದು*(ಸುರೇಶನಾರಾಯಣನಾಯ್ಕ, ರಾಮಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ-೨೨, ೨೦೧೧).*

ಇವರ ಪೂರ್ವಜರು ಹಿಮಾಲಯದ ಉತ್ತರ ಭಾಗದ ಪ್ರದೇಶಗಳಿಂದ ಬಂದವರೆಂದು ಅವರ ಮೂಲಪುರುಷರು ಪುರೂರವರೆಂದು ತಿಳಿಯಲಾಗಿದೆ. ರತ್ನಗಿರಿಯ ಸಮೀಪದ ಪ್ರಾಚೀನವೂ ಸುಪ್ರಸಿದ್ಧವೂ ಆದ ವಿಜಯದುರ್ಗವು ಕ್ಷತ್ರಿಯರ ಮೂಲಸ್ಥಾನ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ. ಕ್ರಿ.ಶ.೧೪-೧೫ನೇ ಶತಮಾನದಲ್ಲಿ ಶಿಲಾಹಾರ ಕುಲದ ಅರಸರು ಆಳಿಕೊಂಡಿದ್ದ ಪ್ರದೇಶಗಳೆಲ್ಲವೂ ಮುಸಲ್ಮಾನ ಬಹುಮನಿ ಅರಸರ ಮತ್ತು ಪೋರ್ಚುಗೀಸರ ದಬ್ಬಾಳಿಕೆಗೆ ತುತ್ತಾಗಿ ತತ್ತರಿಸಿ ಹೋಯಿತು. ಆ ಪ್ರದೇಶದಲ್ಲಿದ್ದ ಅಳಿದುಳಿದ ಕ್ಷತ್ರಿಯ ಕುಟುಂಬದವರು ವಲಸೆ ಬಂದು ಅಂದಿನ ವಿಜಯನಗರ ಮತ್ತು ಕೆಳದಿ ಅರಸರ ಆಶ್ರಯ ಪಡೆದರು. ಮುಂದೆ ಅವರ ಆಜ್ಞಾನುಸಾರ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡದಲ್ಲಿನ ಕೋಟೆಯ ಪಾಲಕರಾಗಿ ಬಂದು ನೆಲೆಸಿದರು. ಇಂದಿಗೂ ಅವರ ಪೀಳಿಗೆ ಅಲ್ಲೇ ಉಳಿದಿರುವುದನ್ನು ಕಾಣಬಹುದು.

ನಾಗರಿಕತೆಯ ಬೆಳವಣಿಗೆಯ ಹಂತದಲ್ಲಿ ಇವರು ಗ್ರಾಮವಾಸಿಗಳಾಗಿ ಕೃಷಿ, ಪಶುಪಾಲನೆ ಮತ್ತಿತರ ಉದ್ಯೋಗವನ್ನು ಮಾಡುತ್ತಾರೆ. ತಾವು ಶ್ರೀರಾಮನ ಕುಲದವರೆಂದು ಇವರ ಪೌರಾಣಿಕ ನಂಬಿಕೆ. ಶ್ರೀರಾಮ ಆರ್ಯಕುಲದವನಾಗಿದ್ದರಿಂದ ಇವರು ತಾವು ಸಹ ಆರ್ಯಕುಲದವರೆಂದು ಹೇಳಿಕೊಳ್ಳುತ್ತಾರೆ. ಆಧುನಿಕ ನಾಗರಿಕತೆಗೆ ಎಷ್ಟೇ ಒಗ್ಗಿಸಿಕೊಂಡಿದ್ದರೂ ಇವರಲ್ಲಿ ಮೂಲ ಸಂಸ್ಕೃತಿಯ ಅಂಶಗಳು ಇನ್ನೂ ಜೀವಂತವಾಗಿರುವುದು. ಈ ಸಮುದಾಯ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿ ಇತ್ತು ಎಂಬ ಬಗ್ಗೆ ಯಾವುದೇ ಅನುಮಾನವಿಲ್ಲ. ವೀರಯೋಧರೆಂದು ಖ್ಯಾತರಾದ ಇವರು ಶತ್ರುಗಳನ್ನು ಸಂಹರಿಸಿ ರಾಜನ ಕೋಟೆಯನ್ನು ಸಂರಕ್ಷಣೆ ಮಾಡುತ್ತಿದ್ದರು. ಮೂಲತಃ ಉತ್ತರಪ್ರದೇಶ, ಮಹಾರಾಷ್ಟ್ರ,

ವಿಜಯನಗರ, ಕೆಳದಿ ಮೊದಲಾದ ಕಡೆಗಳಿಂದ ವಲಸೆ ಬಂದು ರಾಜರ ಸೈನಿಕರ ಜೊತೆ ಸೇರಿ ರಾಜ ಮನ್ನಣೆಗೆ ಪಾತ್ರರಾಗಿದ್ದರು. ವಲಸೆ ಬರುವ ಮೊದಲು ವಿಜಯನಗರದ ಅರಸರು ಮತ್ತು ಕೆಳದಿ ಅರಸರ ಕೈಕೆಳಗೆ ಸೇನಾವೃತ್ತಿ, ಸೇವಕರಾಗಿ ವಿವಿಧ ಜವಾಬ್ದಾರಿಗಳನ್ನು ನಿರ್ವಹಿಸಿದರು. ವಿಜಯನಗರ ಅರಸರ ಕಾಲದಲ್ಲಿ ಕೆಲವರು ಪಾಳೇಗಾರರಾಗಿ ನಿಯುಕ್ತಗೊಂಡು ಅರಸರಿಗೆ ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಿದ್ದರು. "ರಕ್ಕಸ ತಂಗಡಿ" ಯುದ್ಧದಲ್ಲಿ ಹೋರಾಡಿ ಸೋತ ನಂತರ ವಿಜಯನಗರ ಸಾಮ್ರಾಜ್ಯ ತನ್ನ ವೈಭವಾದಿಗಳನ್ನು ಕಳೆದುಕೊಂಡ ನಂತರ ಕ್ಷತ್ರಿಯರು ಜೀವನೋಪಯಕ್ಕಾಗಿ ಮಹಾರಾಷ್ಟ್ರ, ಗೋವಾದಿಂದ ಕರ್ನಾಟಕಕ್ಕೆ ವಲಸೆ ಬರುತ್ತಾರೆ.

**ಆಧಾರ ಸಾಹಿತ್ಯಗಳು**


ಕೃಷ್ಣರಾಯರು ಅ ನ (ಸಂ), *ಭಾರತೀಯ ಸಂಸ್ಕೃತಿ ದರ್ಶನ,* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೨.

ಕೃಷ್ಣಭಟ್ಟ ಕೆ (ಅನು), *ಕೌಟಲ್ಯನ ಅರ್ಥಶಾಸ್ತ್ರ,* ಸಮಾಜ ಪುಸ್ತಕಾಲಯ, ಧಾರವಾಡ, ೧೯೭೨.

ಗಣೇಶ್ ಆರ್, *ಭಾರತೀಯ ಕ್ಷಾತ್ರ ಪರಂಪರೆ,* ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೧೬

ನಾರಾಯಣ ಪಿ ವಿ, *ವಚನ ಸಾಹಿತ್ಯ,* ಪ್ರಸಾರಂಗ ಮೈಸೂರು ವಿಶ್ವವಿದ್ಯಾಲಯ, ೧೯೮೩.

ಚಕ್ರಕೋಡಿ ಈಶ್ವರಶಾಸ್ತ್ರೀ (ಅನು), *ಮನುಸ್ಮೃತಿ,* ಧಾರವಾಡ ಸಮಾಜ ಪುಸ್ತಕಾಲಯ, ೧೯೮೨.

ಚಿದಾನಂದಮೂರ್ತಿ ಎಂ, *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು,* ೧೯೮೫.

ಸಿವರಾಮ ಕೃಷ್ಣನ್ ಜಿ, *ಜಾತಿ ಕೆಲವು ಟಿಪ್ಪಣಿಗಳು,* ಪ್ರಕಾಶನ ಪರಸ್ಪರ, ಬೆಂಗಳೂರು, ೨೦೦೭.

ಲಕ್ಕಪ್ಪಗೌಡ ಎಚ್ ಜೆ, (ಪ್ರಸಂ), *ಜಾನಪದ ಕೈಪಿಡಿ,* ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

ಲೂಯಿಸ್‌ರೈಸ್ (ಸಂ), *ಅಮರಕೋಶ,* ಪ್ರಸಾರಂಗ ಮೈಸೂರು ವಿಶ್ವವಿದ್ಯಾಲಯ, ೧೯೯೦.

ವಿಜಯಶ್ರೀ ಇಟ್ಟಣ್ಣವರ, *ಹದಿನೆಂಟು ಜಾತಿಗಳು,* ಮಂಟಪ ಮಾಲೆ –೨೬೬, (ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧).

ಶೇಷನವರತ್ನ (ಅನು), *ಮನುಸ್ಮೃತಿ,* ಸಮಾಜ ಪುಸ್ತಕಾಲಯ, ಧಾರವಾಡ, ೨೦೧೧.

ಶೇಷಗಿರಿರಾವ್ ರಾವ್ ಎಲ್ ಎಸ್, *ಭಗವದ್ಗೀತಾ ಯಥಾರೂಪ,* ಭಕ್ತಿವೇದಾಂತ ಬುಕ್ ಟ್ರಸ್ಟ್ ಬೆಂಗಳೂರು–೧೯೮೯.

ಸೀತಾರಾಮಯ್ಯ ಎಂ ವೀ (ಸಂ), *ಕವಿರಾಜಮಾರ್ಗ,* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಸುರೇಶ ನಾರಾಯಣ ನಾಯ್ಕ, *ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ,* ಸುವರ್ಣ ಪ್ರಕಾಶನ, ಹೊನ್ನಾವರ, ೨೦೧೧.

ಹಿರೇಮಠ ಬಿ ಆರ್ (ಸಂ), *ಸಮಗ್ರ ವಚನ ಸಂಪುಟ–೮,* ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೧. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ೨೦೧೬.

# ಅಧ್ಯಾಯ: ಮೂರು
## ಕ್ಷತ್ರಿಯ ಸಮುದಾಯಗಳು

೩.೧. ಸೂರ್ಯವಂಶ ಕ್ಷತ್ರಿಯ

೩.೨. ಲಾಡ್/ಕ್ಷತ್ರಿಯಲಾಡ್/ಸುಗಂಧಿಲಾಡ್

೩.೩. ಸೋಮವಂಶ ಆರ್ಯ ಕ್ಷತ್ರಿಯ

೩.೪. ನಯನಜ ಕ್ಷತ್ರಿಯ

೩.೫. ವನ್ನಿಕುಲಕ್ಷತ್ರಿಯ

೩.೬. ಭಾವಸಾರ ಕ್ಷತ್ರಿಯ

೩.೭. ತೊಗಟ/ತೊಗಟರು/ತೊಗಟವೀರ/ತೊಗಟಗೇರ/ತೊಗಟವೀರಕ್ಷತ್ರಿಯ/ತೊಗಜಪುಷ್ಪಾಂಜಲಿ

೩.೮. ರಾಮರಾಜ ಕ್ಷತ್ರಿಯರು

೩.೯. ಕ್ಷತ್ರಿಯ/ ಕ್ಷತ್ರಿ

೩.೧೦. ರಾಜು ಕ್ಷತ್ರಿಯ

೩.೧೧. ಕ್ಷತ್ರಿಯ ಮರಾಠ

# ಅಧಾಯ: ಮೂರು
# ಕ್ಷತ್ರಿಯ ಸಮುದಾಯಗಳು

**ಪೀಠಿಕೆ**

ಭಾರತದ ಪರಿಸ್ಥಿತಿಯನ್ನು ನೋಡಿದರೆ ಒಟ್ಟು ದೇಶವೇ ಜಾತಿಯ ಬುನಾದಿಯ ಮೇಲೆ ರಚನೆಯಾಗಿರುವಂತೆ ಕಾಣಿಸುತ್ತದೆ. ಮನುಷ್ಯನ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕಮಟ್ಟವನ್ನು ಜಾತಿಯೇ ನಿರ್ಣಯಿಸುತ್ತಿರುವ ಪರಿಸ್ಥತಿ ಕಾಣಿಸುತ್ತದೆ. ವನವಾಸ ಮಾಡುತ್ತಿದ್ದ ರಾಮನನ್ನು ನೋಡುವುದಕ್ಕೆ ಭರತನು ಬಂದಾಗ ರಾಮನು ಹಾಕಿದ ಮಾದಲ ಪ್ರಶ್ನೆ ಅಮ್ಮ, ಅಪ್ಪ ಚೆನ್ನಾಗಿದ್ದಾರಾ ಎಂದಲ್ಲ, ರಾಜ್ಯದಲ್ಲಿ ಆಯಾ ವರ್ಣದವರು ಆಯಾ ವೃತ್ತಿಗಳನ್ನು ಮಾಡುತ್ತಿದ್ದಾರಾ ಇಲ್ಲವಾ? ಎಂದ*(ಬೊಜ್ಜಾ ತಾರಕಂ, ಸುಜ್ಞಾನಮೂರ್ತಿ ಬಿ, (ಕಅ) ಜಾತಿ ವಿನಾಶ ವರ್ಗವಿನಾಶ, ಪುಟ-೧೬, ೨೦೧೨).* ಆಗಿನ ಕಾಲದಲ್ಲಿಯೇ ಎಷ್ಟು ಕಟ್ಟುಪಾಡು ಮಾಡಿದ್ದಾರೋ ನೋಡಿ. ಆದರೆ ವೃತ್ತಿ ಕುಟುಂಬದಲ್ಲಿ ಹುಟ್ಟಿದವರು ಆ ವೃತ್ತಿಯನ್ನೇ ಮಾಡಬೇಕೆಂಬ ನಿಯಮ ಸಡಿಲಿಸಿದಾಗ, ಸ್ವಲ್ಪ ಪ್ರಮಾಣದಲ್ಲಿ ಜೀವನೋಪಾಯವನ್ನು ಕಲ್ಪಿಸಿದಾಗ, ಕೆಲವು ಅವಕಾಶಗಳನ್ನು ನೀಡಿದಾಗ ಕುಟುಂಬ ವೃತ್ತಿಯನ್ನು ಬೇಡವೆಂದು, ಬೇರೆ ವೃತ್ತಿಯನ್ನು ಮಾಡುವ ಅವಕಾಶ ಸಿಕ್ಕಿತು. ವೃತ್ತಿಜಾತಿ ಜಾತಿವೃತ್ತಿಯಾಯಿತು. ಆದರೆ ಜಾತಿವೃತ್ತಿಯನ್ನು ದಾಟುವ ಅಗತ್ಯ ಏರ್ಪಟ್ಟಾಗಲೂ ವರ್ಣವಿಭಜನೆ ಪರಿಧಿಯಲ್ಲಿ ಇದೆಯೇ ಇಲ್ಲವೇ ಎಂದು ಕೂಡಾ ನೋಡಿಕೊಳ್ಳುತ್ತಿದ್ದರು. ಅಂದರೆ ಕುಲಕಸುಬುನ್ನು ಬೇಡವೆಂದು ಬೇರೆ ಕಸುಬುನ್ನು ಹಿಡಿದರೂ ಅದಕ್ಕೂ ಇದಕ್ಕೂ ದೊಡ್ಡ ವ್ಯತ್ಯಾಸ ಇರಬಾರದು. ಅಂದರೆ ಕೆಲಸ ಮಾಡುವ ಜಾತಿಗಳು ಯಾವುದೋ ಒಂದು ಕೆಲಸವನ್ನು ಮಾಡಬೇಕೆ ಹೊರತು ಸಂಬಂಧವಿಲ್ಲದ ಕಸುಬುನ್ನು ಹಿಡಿದರೆ ಸ್ವಲ್ಪ ಕಷ್ಟವುಂಟಾಗುತ್ತಿತ್ತು. ಇದಕ್ಕೆ ಭಿನ್ನವಾಗಿ ಮೇಲ್ಜಾತಿಗೆ ಸೇರಿದ ವ್ಯಕ್ತಿ ಯಾರಾದರೂ ಯಾವುದಾದರೂ ಕೆಳಜಾತಿಯವರು ಮಾಡುವ ಕೆಲಸವನ್ನು ಮಾಡಿದರೆ ದೊಡ್ಡ ಸಹಾನುಭೂತಿ ದೊರಕುತ್ತಿತ್ತು. ಜಾತಿ ಕಸುಬುನ್ನು ಹಿಡಿಯದೆ ಹೋದರೂ ಆ ವ್ಯಕ್ತಿಯನ್ನು ಅದೇ ಜಾತಿಗೆ ಸೇರಿದ ವ್ಯಕ್ತಿಯೆಂದು ಗುರುತಿಸುತ್ತಿದ್ದರು. ಮಾಡುವ ಕೆಲಸಕ್ಕೆ ಸಂಬಂಧವಿಲ್ಲದೆ, ಸಾಧಿಸಿದ ಪ್ರತಿಭೆಗೆ ನಿಮಿತ್ತವಿಲ್ಲದೆ ಮನುಷ್ಯನ ಸ್ಥಾನವನ್ನು ಅವನು ಹುಟ್ಟಿದ ಜಾತಿಯಿಂದ

ಗುರುತಿಸುತ್ತಿದ್ದರು. ಮನುಷ್ಯನ ಬೆಲೆಯನ್ನು ಗುರುತಿಸುವ ಒರೆಗಲ್ಲು ಜಾತಿಯಾಯಿತು. ಜಾತಿಗೆ ಅಷ್ಟು ಪ್ರಾಧಾನ್ಯತೆ ಬಂತು.

ಬ್ರಾಹ್ಮಣ ಜಾತಿಯಲ್ಲಾಗಲಿ, ಕ್ಷತ್ರಿಯ ಜಾತಿಯಲ್ಲಾಗಲಿ ಯಾವುದೇ ಕೆಲಸಕ್ಕೆ ಬಾರದವನಾಗಿ ಹುಟ್ಟಿದರೂ ಅವನು ಬ್ರಾಹ್ಮಣನೇ ಆದ, ಕ್ಷತ್ರಿಯನೇ ಆದ. ಅದೇ ರೀತಿ ಅಸ್ಪೃಶ್ಯ ಜಾತಿಯಲ್ಲಿ ಪ್ರತಿಭಾವಂತನು ಹುಟ್ಟಿದರೂ, ಹಿಂದುಳಿದ ಜಾತಿಯಲ್ಲಿ ಪ್ರಜ್ಞಾವಂತನು ಹುಟ್ಟಿದರೂ, ಅವನು ಅಸ್ಪೃಶ್ಯನೇ ಆದ, ಹಿಂದುಳಿದ ಜಾತಿಯವನೇ ಆದ, ಹಿಂದುಳಿದ ಜಾತಿಯವನು ಉಪಾಧ್ಯಾಯ ವೃತ್ತಿಯನ್ನು ಹಿಡಿದರೂ ಹಿಂದುಳಿದ ಜಾತಿಯವನೇ ಆದ. ಒಬ್ಬ ಕ್ಷತ್ರಿಯನ ಹತ್ತಿರ ಒಂದು ಸೆಂಟು ಭೂಮಿಯಿಲ್ಲದಿದ್ದರೂ ಕ್ಷತ್ರಿಯನೇ ಆದ. ಒಬ್ಬ ಹಿಂದುಳಿದ ಜಾತಿಯವನು ಕೆಲವಾರು ಎಕರೆಗಳಿಗೆ ಜಮೀನ್ದಾರನಾದರೂ ಅವನು ಹಿಂದುಳಿದ ಜಾತಿಯವನೇ ಆದ. ಅಂದರೆ ಮನುಷ್ಯನ ಆರ್ಥಿಕ ಸಾಮರ್ಥ್ಯದ ಜೊತೆ ಸಂಬಂಧವಿಲ್ಲದೆ ಅವನು ಹುಟ್ಟಿದ ಜಾತಿಗೆ ಬೆಲೆ ಕಟ್ಟುವುದೇ ಮುಂದುವರಿಯುತ್ತ ಬಂತು. ನಾಲ್ಕು ವರ್ಣಗಳು ನಂತರ ಅನೇಕ ಜಾತಿಗಳಾಗಿ ಬದಲಾದರೂ ನಾಲ್ಕು ವರ್ಗಗಳಾಗಿಯೇ ಇದ್ದುಬಿಟ್ಟರು. ಮೊದಲ ಮೂರು ವರ್ಗಗಳಿಗೆ ಅದೇ ಅರ್ಹತೆ, ನಾಲ್ಕನೇ ವರ್ಗ ಮಾತ್ರ ಅನೇಕ ಚೂರುಗಳಾಗಿ ಅದರಲ್ಲಿಯೇ ಒಂದೊಂದು ಜಾತಿಗೆ ಒಂದೊಂದು ಅರ್ಹತೆಯನ್ನು ಏರ್ಪಡಿಸಿಕೊಂಡರು. ಆ ಅರ್ಹತೆ ಕೂಡಾ ಮೇಲಕ್ಕೆ ಹೋಗುತ್ತಿದ್ದಂತೆ ಕೆಲವು ದೊಡ್ಡ ಜಾತಿಯೆಂದು, ಕೆಳಕ್ಕೆ ಬರುತ್ತಿದ್ದಂತೆ ಕೆಳಜಾತಿಯೆಂಬ ಭಾವನೆಯನ್ನು ಉಂಟುಮಾಡಿಕೊಂಡರು.

ಕಸುಬುಗಳು ಜಾತಿಗಳಾಗಿ ಬದಲಾದರೂ ಬ್ರಾಹ್ಮಣರು ಅದೇ ಕಸುಬುನ್ನು ಉಳಿಸಿಕೊಂಡರು. ಉಪಾಧ್ಯಾಯ ವೃತ್ತಿ, ಪೌರೋಹಿತ್ಯ, ಪೂಜಾರಿಕೆ, ಮಂತ್ರಿತ್ವವನ್ನು ಮುಂದುವರಿಸಿದರು. ಕ್ಷತ್ರಿಯರಿಗೆ ಆಡಳಿತವಿಲ್ಲದಿದ್ದರೂ ಗ್ರಾಮಮಟ್ಟದಲ್ಲಿ ಭೂಮಿಯ ಮೇಲೆ ಈ ಒಡೆತನವಿಟ್ಟುಕೊಂಡು ತಮ್ಮ ಅಧಿಕಾರವನ್ನು ಉಳಿಸಿಕೊಂಡರು. ವೈಶ್ಯರು ವೈಶ್ಯರಾಗಿಯೇ ಮುಂದವರೆದರು, ಅವರ ವೃತ್ತಿ ಅದೇ ಆಯಿತು. ಜಾತಿಯೂ ಅದೇ ಆಯಿತು. ಇನ್ನು ಶೂದ್ರರ ವಿಷಯಕ್ಕೆ ಬಂದರೆ ಚಾತುರ್ವರ್ಣದ ವ್ಯವಸ್ಥೆಯಲ್ಲಿ ಮೇಲಿನ ಮೂರು ವರ್ಣಗಳಿಗೆ ಸೇವಕ ವೃತ್ತಿ ಮಾಡುವುದು ನಿರ್ಧಾರವಾದರೆ ಜಾತಿವ್ಯವಸ್ಥೆಯಲ್ಲಿಯೂ ಶೂದ್ರ ಜಾತಿಗಳಿಗೆ ಮೇಲಿನ ಮೂರು ಜಾತಿಗಳಿಗೆ ಸೇವಕ ವೃತ್ತಿ ಮಾಡುವುದನ್ನೇ ಸೀಮಿತಗೊಳಿಸಿದರು. ಅದಕ್ಕಿಂತಲೂ ಹೆಚ್ಚಿನ ಸ್ಥಾನ, ಮಟ್ಟವನ್ನು ಕಲ್ಪಿಸಲಿಲ್ಲ.

ಕೆಲವು ಜಾತಿಗಳಿಗೆ ಕೆಲವು ಕಸುಬುಗಳು ನಿರ್ಧಾರವಾದರೂ ಕಸುಬುಗಳು ಬೆಳೆಯುವಷ್ಟು ಎತ್ತರಕ್ಕೆ ಅಭಿವೃದ್ಧಿ ಹೊಂದಲಿಲ್ಲ. ವೃತ್ತಿಗಳೇ ಅಲ್ಲ, ಯಾವ ವಲಯವನ್ನು ತೆಗೆದುಕೊಂಡರೂ ಅದು ಹೊಂದಬಹುದಾದಷ್ಟು ಅಭಿವೃದ್ಧಿ ಹೊಂದಲಿಲ್ಲ. ದೇಶರಕ್ಷಣೆಯನ್ನು ತಗೆದುಕೊಂಡರೆ ಅದು ಕ್ಷತ್ರಿಯ ಜಾತಿಗೆ ಪರಿಮಿತವಾಯಿತು. ಜಾತಿ ಹೇಗೆ ಉಂಟಾಯಿತೆಂಬ ವಿಷಯದಲ್ಲಿ ಹಲವು ಸಿದ್ಧಾಂತಗಳು ಬಂದಿವೆ. ಹೆಚ್ಚು ಜನರು ವೃತ್ತಿಮೂಲದಿಂದ ಉಂಟಾಯಿತೆಂದು ನಿರ್ಧರಿಸಿದ್ದಾರೆ. ಮೊದಲು ಬುಡಕಟ್ಟುಗಳಾಗಿ ಏರ್ಪಟ್ಟವೇ ಜಾತಿಗಳಾದವೆಂದು ಕೆಲವರ ವಾದ. ಕೆಲವರು ಶುಭ್ರತೆಯ ವಿಷಯದ ಮೇಲೆ ಆಧಾರಪಟ್ಟು ಉಂಟಾದವೆಂದರು. ಮತ್ತೇ ಕೆಲವರು ಒಬ್ಬ ಪುರಾಣ ಪುರುಷನ

ಸಂತತಿಯಾಗಿ ಬಂದು ಜಾತಿಗಳಾಗಿ ಉಂಟಾದವೆಂದು ಅಭಿಪ್ರಾಯ ಪಟ್ಟಿದ್ದಾರೆ. ಗುಂಪು ಗುಂಪುಗಳಾಗಿದ್ದ ಸಮಾಜದಲ್ಲಿ ಅಂದಿನ ಅಭ್ಯಾಸವೆನೆಂದರೆ ಗುಂಪು ಹೊರಗಿನವರನ್ನು ಮದುವೆ ಮಾಡಿಕೊಳ್ಳುವುದು. ಗುಂಪಿನ ಒಳಗಿರುವವರನ್ನು ಮದುವೆ ಮಾಡಿಕೊಳ್ಳುವುದು ನಿಷೇಧ. ಯಾವಾಗ ಈ ಬಾಹ್ಯ ವಿವಾಹಪದ್ಧತಿಯನ್ನು ಬಿಟ್ಟು ಅಂತರ್ವಿವಾಹಗಳನ್ನು ಆರಂಭಿಸಿದರೊ ಆಗಲೇ "ಜಾತಿ" ಉಂಟಾಯಿತೆಂದು ಅಂಬೇಡ್ಕರ್ ಅಭಿಪ್ರಾಯ. ಹಾಗೇ ನಾಲ್ಕು ವರ್ಣಗಳು ನಾಲ್ಕು ವರ್ಗಗಳು ಅನೇಕ ಜಾತಿಗಳಾಗಿ ಬದಲಾದವು. ಅದಕ್ಕೆ ಅಂಬೇಡ್ಕರ್ 'ಕಟ್ಟಿಕೊಂಡ ವರ್ಗವೇ ಜಾತಿ' ಎನ್ನುತ್ತಾರೆ. ಸೀಮಿತಕಾಲದಿಂದ ಜೀವನಪರ್ಯಂತದವರೆಗೂ ವೃತ್ತಿ ಬೆಳೆದು ಅಲ್ಲಿಂದ ವಾರಸತ್ವಕ್ಕೆ ಬದಲಾದುರಿಂದ ವರ್ಣ ಸ್ಪಷ್ಟವಾದ ವರ್ಗವಾಗಿ ರೂಪುಗೊಂಡಿತು. ಈ ವರ್ಗ ಅಂತರ್ವಿವಾಹವನ್ನು ಪಾಲಿಸುವುದರಿಂದ ಜಾತಿ ಉಂಟಾಗಿದೆಯೆಂದು ನಮಗೆ ಈಗ ಸ್ಪಷ್ಟವಾಯಿತು.

ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಉತ್ಪಾದನೆ ಮತ್ತು ಹಂಚಿಕೆಯ ವಿಧಾನಗಳು ಇದಕ್ಕೆ ಪೂರಕವಾಗಿಯೆ ಇದ್ದವು. ವರ್ಣ/ಜಾತಿ, ಕುಟುಂಬ, ಶಿಕ್ಷಣ ಮತ್ತು ಆಡಳಿತ ಈ ನಾಲ್ಕು ವ್ಯವಸ್ಥೆಗಳು ಸಾಮಾಜಿಕ ರಚನೆಯ ನಿರ್ಧಾರಕ ಅಂಶಗಳಾಗಿದ್ದವು. ಇವು ಸಮಾಜದಲ್ಲಿ ವಹಿಸುತ್ತಿದ್ದ ಪಾತ್ರ ಹಾಗೂ ಅದರ ಪರಿಣಾಮಗಳು ಕನಿಷ್ಠತೆಯಿಂದ ಕೊಡಿ ಗರಿಷ್ಠತೆವರೆಗೆ ಕೂಡಿರುತ್ತಿತು. ಜಾತಿ ಎನ್ನುವುದು ಬೇರೆ ಬೇರೆ ಸಾಮಾಜಿಕ ಅಂತಸ್ತುಗಳನ್ನು ಸೂಚಿಸುವ ಪದ. ಇದೊಂದು ಕ್ರೂರ ಸಂಪ್ರದಾಯವಾಗಿದ್ದು, ನಿರ್ಜೀವ ಆಚರಣೆಗಳೊಂದಿಗೆ ಬೆಳೆದು ಬಂತು. ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ರಚನೆಯನ್ನು ಅಭ್ಯಸಿಸುವಾಗ ಜಾತಿ ಪದ್ಧತಿ ಪ್ರಬಲ ರಚನೆಯಾಗಿ ಕಂಡುಬರುತ್ತದೆ. ಪುರೋಹಿತಶಾಹಿಯು ಈ ವ್ಯವಸ್ಥೆಯ ಸ್ಥಾಪಕನಾಗಿ ಮತ್ತು ನಿರ್ದೇಶಕನಾಗಿ ಕಾರ್ಯನಿರ್ವಹಿಸಿತು. ಧರ್ಮವನ್ನು ಈ ವ್ಯವಸ್ಥೆಗೆ ಮಾಧ್ಯಮವನ್ನಾಗಿ ಬಳಸಿಕೊಳ್ಳಲಾಯಿತು. ರಾಜಪ್ರಭುತ್ವವು ತನ್ನ ಉದ್ದೇಶಗಳ ಈಡೇರಿಕೆಗಾಗಿ ಜಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿತು. ಮೇಲ್ವರ್ಗಗಳ ಒಲವನ್ನು ಗಳಿಸಲು ಅರಸರಿಗೆ ಜಾತಿ ಪದ್ಧತಿಯನ್ನು ಯಥಾಪ್ರಕಾರ ಮುಂದುವರೆಸಿಕೊಂಡು ಹೋಗುವುದು ಅನಿವಾರ್ಯವಾಗಿತ್ತು.

ವೃತ್ತಿ ಆಧಾರದ ಮೇಲೆ ರೂಪುಗೊಂಡಿದ್ದ ಸಮಾಜ ಕ್ರಮೇಣ ವರ್ಣ ವ್ಯವಸ್ಥೆಗೆ ಪರಿವರ್ತನೆಗೊಂಡು ನಂತರ ಜಾತಿ ವ್ಯವಸ್ಥೆಗೆ ಪರಿವರ್ತನೆಗೊಂಡಿರುವುದು ಈಗಾಗಲೇ ಸಾಕಷ್ಟು ಒಳಪಟ್ಟಿರುವಂತದ್ದು. ವರ್ಣ ವ್ಯವಸ್ಥೆಗಿಂತ ಮೊದಲು ಜಾತಿಗಳು ಹುಟ್ಟಿಕೊಂಡಿದ್ದವು ಎನ್ನುವ ವಾದವೂ ಇದೆ. ವರ್ಣ ಮತ್ತು ಜಾತಿ ಎನ್ನುವ ಪದಗಳ ಬಗ್ಗೆ ಎಷ್ಟೇ ವ್ಯಾಖ್ಯಾನಗಳು ಬಂದರೂ ಅವುಗಳ ಸಂದರ್ಭದಲ್ಲಿನ ಗೊಂದಲವಂತೂ ನಿವಾರಣೆಯಾಗಿಲ್ಲ. ಸಮಾನ ಧಾರ್ಮಿಕ ಆಚರಣೆಗಳು ಜಾತಿಗಳನ್ನು ಒಟ್ಟುಗೂಡಿಸಿ ಅನುಕ್ರಮವಾಗಿ ಶ್ರೇಣಿಕರಿಸುವುದು ವರ್ಣವ್ಯವಸ್ಥೆ. ಜಾತಿ ಪದವು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥವನ್ನು ಕೊಡುತ್ತಿರುತ್ತದೆ. ಇದರಲ್ಲಿ ನೀತಿ, ನಿಯಮಗಳು ಮೊದಲೇ ರೂಪುಗೊಂಡಿರುತ್ತವೆ. ವ್ಯಕ್ತಿಯ ಜೀವನದ ಪ್ರತಿಯೊಂದು ಹಂತವನ್ನೂ ಅದು ನಿರ್ಧರಿಸುತ್ತಿರುತ್ತದೆ. ಮಾನವ ಬದುಕಿದ್ದಾಗ ಮಾತ್ರವಲ್ಲದೆ ಸತ್ತ ಮೇಲೂ ಅವನಿರಬೇಕಾದ ಜಾಗವನ್ನು

ನಿರ್ಧರಿಸುತ್ತದೆ. ಈ ವ್ಯವಸ್ಥೆಯಲ್ಲಿ ಆದಿವಾಸಿ ಬುಡಕಟ್ಟುಗಳು ಹಾಗೂ ಅಲೆಮಾರಿಗಳು ಮನುಷ್ಯವರ್ಗಕ್ಕೆ ಸೇರಿದವರೇ ಅಲ್ಲ ಎನ್ನುವ ತೀರ್ಮಾನವಿದೆ. ಅವರು ಸವಲತ್ತುಗಳನ್ನು ಪಡೆಯುವುದಾಗಲಿ, ವೃತ್ತಿಗಳನ್ನು ಬದಲಾಯಿಸುವುದಾಲಿ ಸಾಧ್ಯವಿರಲಿಲ್ಲ. ಈ ವ್ಯವಸ್ಥೆಯಲ್ಲಿ ಮೇಲ್ವರ್ಗ ಮೇಲ್ವರ್ಗವಾಗಿಯೇ ಇತ್ತು ಹಾಗೂ ಕೆಳವರ್ಗ ಕೆಳವರ್ಗವಾಗಿಯೇ ಇತ್ತು. ಸಾಮಾಜಿಕ ಯಥಾಸ್ಥಿತಿಯನ್ನು ಕಾಯ್ದುಕೊಳ್ಳಲು ವೇದಗಳ ಮೂಲಕ ಕಾನೂನಿನ ಚೌಕಟ್ಟನ್ನು ನಿರ್ಮಿಸಲಾಯಿತು. ಇದಕ್ಕೆ ಮೂಲಕಾರಣವೆಂದರೆ ಬ್ರಾಹ್ಮಣ ಮತ್ತು ಕ್ಷತ್ರಿಯರು ಅಲ್ಪಸಂಖ್ಯಾತರಾಗಿರುವುದೇ ಆಗಿತ್ತು. ಬಹುಸಂಖ್ಯಾತರಾಗಿದ್ದ ವೈಶ್ಯ ಹಾಗೂ ಶೂದ್ರರನ್ನು ಹತೋಟಿಯಲ್ಲಿಡಲು ಈ ಚೌಕಟ್ಟು ಅನಿವಾರ್ಯವಾಗಿತ್ತು.

"ಜಾತಿಗಳಲ್ಲೆಲ್ಲ ಬ್ರಾಹ್ಮಣ ಶ್ರೇಷ್ಠ ಎಂಬುದು ಸಾರ್ವತ್ರಿಕವಾಗಿ ಒಪ್ಪಿತವಾಗಿದಿತು. ಅಂದಿನ ಸಾಹಿತ್ಯ ಕೃತಿಗಳು ಮತ್ತು ಶಾಸನಗಳು ಈ ಕುರಿತು ಹೇರಳವಾದ ಮಾಹಿತಿಗಳನ್ನು ನೀಡುತ್ತವೆ. ಅವುಗಳಲ್ಲಿ ಹದಿನೆಂಟು ಜಾತಿಗಳ ಉಲ್ಲೇಖಗಳಿದ್ದು, ಮೊದಲನೆಯದು ಬ್ರಾಹ್ಮಣ, ಕೊನೆಯದು ಅಂತ್ಯಜ ಅಥವಾ ಹೊಲೆಯ ಎನ್ನುವ ವಿವರಗಳಿವೆ. ಇದು ಅಂದಿನ ಶ್ರೇಣೀಕೃತ ಸಮಾಜ ವ್ಯವಸ್ಥೆಯ ಯಥಾವತ್ತಾದ ಚಿತ್ರಣವಾಗಿ ಕಂಡುಬರುತ್ತದೆ. ಜಾತಿಗಳು ಹದಿನೆಂಟು ಎಂಬುದು ಒಂದು ಅಂಗೀಕೃತವಾದ ಮಾತಾಗಿದ್ದಿರಬಹುದೆಂದು ತೋರುತ್ತದೆ. ಏಕೆಂದರೆ ಜಾತಿಗಳು ಹದಿನೆಂಟಕ್ಕಿಂತ ಎಷ್ಟೋ ಹೆಚ್ಚಾಗಿದ್ದವು ಎಂಬುದು ಶಾಸನಗಳಿಂದ ಮತ್ತು ಸಾಹಿತ್ಯ ಕೃತಿಗಳಿಂದ ಗೊತ್ತಾಗುತ್ತದೆ. ವಚನಕಾರರು ಹದಿನೆಂಟು ಜಾತಿಗಳ ಪಟ್ಟಿಯನ್ನು ಕೊಟ್ಟಿದ್ದಾರೆ. ಸೊಡ್ಡಳ ಬಾಚರಸ ಎನ್ನುವವನು ಮನುಷ್ಯನ ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ, ಹದಿನೆಂಟು ಜಾತಿಗಳ ಪಟ್ಟಿಯನ್ನು ಕೊಟ್ಟಿದ್ದಾನೆ. ಅವುಗಳೆಂದರೆ; ಬ್ರಾಹ್ಮಣ (ಶಿಖಿ), ಕ್ಷತ್ರಿಯ (ನಯನ), ಬಣಜಿಗ (ನಾಸಿಕ), ಒಕ್ಕಲಿಗ (ತುಟಿ), ಗೊಲ್ಲ (ಕರ್ಣ), ಕುಂಬಾರ (ಕೊರಳು), ಪಂಚಾಳ (ಬಾಹು), ಉಪ್ಪಾರ (ಅಂಗೈ), ನಾಯಿಂದ (ಉಗುರು), ಡೊಂಬ (ಒಡಲು), ಅಗಸ (ಬೆನ್ನು), ಜೇಡ (ಚರ್ಮ), ಕಬ್ಬಿಲ (ಪೃಷ್ಠ), ಹೊಲೆಯ (ಒಳದೊಡೆ), ಈಳಿಗ (ಮಣಿಕಾಲು), ಸಮಗಾರ (ಕಣಗಾಲು), ಮಚ್ಚಿಗ (ಮೇಗಾಲು), ಮತ್ತು ಶುದ್ಧ ಮಾದಿಗ (ಅಂಗಾಲು)"*(ಸಮಗ್ರ ವಚನ ಸಂಪುಟಗಳು ಜನಪ್ರೀಯ ಆವೃತ್ತಿ, ಪುಟ-೮೬, ೨೬೯, ೧೯೯೩).* ಅಂಬಿಗರ ಚೌಡಯ್ಯನು ಇದೇ ರೀತಿ ಮನುಷ್ಯನ ದೇಹವನ್ನು ಆಧಾರವನ್ನಾಗಿಟ್ಟುಕೊಂಡು ಸಮಾಜದ ವಿಭಿನ್ನ ಸ್ತರಗಳನ್ನು ವಿವರಿಸುವ ಪ್ರಯತ್ನವಾಗಿ ಕಂಡುಬರುತ್ತವೆ. ಮನುಷ್ಯನ ದೇಹದ ಅಂಗಗಳು ಇಲ್ಲಿ ಸಾಂಕೇತಿಕವಾಗಿ ಕಂಡುಬರುತ್ತವಷ್ಟೆ. ಸಮಾಜವನ್ನು ಒಬ್ಬ ವ್ಯಕ್ತಿಯಲ್ಲಿ ಕಾಣುವ ವಚನಕಾರರ ದೃಷ್ಟಿ ಮತ್ತು ಆಶಯಗಳು ಏನೇ ಇದ್ದರೂ, ಅದು ಅಂದಿನ ಜಾತಿ ವ್ಯವಸ್ಥೆಯ ಹಾಗೂ ಸಮಾಜದ ರಚನೆಯ ಸ್ವರೂಪವನ್ನು ತಿಳಿಯಲು ಸಹಕಾರಿಯಾಗುತ್ತದೆ.

ಸಾಮಾಜಿಕ ಶ್ರೇಣೀಯಲ್ಲಿ ಬ್ರಾಹ್ಮಣರ ನಂತರದ ಸ್ಥಾನ ಕ್ಷತ್ರಿಯರದ್ದು. ರಾಜ್ಯವನ್ನು ಆಳುವುದು ಮತ್ತು ಪ್ರಜೆಗಳನ್ನು ರಕ್ಷಿಸುವುದು ಕ್ಷತ್ರಿಯರ ಮುಖ್ಯ ಕರ್ತವ್ಯವಾಗಿತ್ತು. ಬ್ರಾಹ್ಮನರಂತೆ ಕ್ಷತ್ರಿಯರಿಗೆ ಎಲ್ಲ ಕಾಲದಲ್ಲಿಯೂ ಪ್ರಧಾನವಾದ ಸ್ಥಾನವಾಗಲಿ, ಪಾತ್ರವಾಗಲಿ ಇರಲಿಲ್ಲ. ಏಕೆಂದರೆ ಕ್ಷತ್ರಿಯರ ಸ್ಥಾನಮಾನ ರಾಜಕೀಯ ಶಕ್ತಿ ಮತ್ತು ಅಧಿಕಾರವನ್ನು ಅವಲಂಬಿಸಿಕೊಂಡಿತ್ತು. ಸೈನಿಕ ವರ್ಗ ಇದರಲ್ಲಿ

ಪ್ರಧಾನ ಪಾತ್ರವನ್ನು ವಹಿಸುತ್ತಿತ್ತು. ಸಾಮಂತ ಅರಸರುಗಳೂ ತಮ್ಮದು ಕ್ಷತ್ರಿಯ ಸ್ಥಾನಮಾನವೆಂದು ಹೇಳಿಕೊಂಡರು. ಆ ಕಾರಣಕ್ಕಾಗಿಯೇ ತಮ್ಮ ಮೂಲವನ್ನು ಸೂರ್ಯವಂಶ, ಚಂದ್ರವಂಶ ಎನ್ನುವ ಪೌರಾಣಿಕ ಮೂಲಗಳಿಂದ ಗುರುತಿಸಿಕೊಳ್ಳಲು ಪ್ರಯತ್ನಪಟ್ಟರು. ಕ್ಷತ್ರಿಯರಲ್ಲೂ ಮೇಲ್ದರ್ಜೆಯ ಕ್ಷತ್ರಿಯರು ಮತ್ತು ಕೆಳದರ್ಜೆಯ ಕ್ಷತ್ರಿಯರಿರುತ್ತಿದ್ದರು. ಆಳ್ವಿಕೆ ನಡೆಸುವವರು ಮತ್ತು ಗಣ್ಯರು ಮೇಲ್‌ದರ್ಜೆಯವರಾದರೆ ವೈಶ್ಯರು ಮತ್ತು ಶೂದ್ರರು ಮಾಡುವ ಕೆಲಸವನ್ನು ಮಾಡುವವರು ಸಾಮಾನ್ಯ ದರ್ಜೆಯವರಾಗಿದ್ದರು. ಕ್ಷತ್ರಿಯರ ಪುರೋಹಿತವರ್ಗದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿರುತ್ತಿದ್ದರು. ಏಕೆಂದರೆ ಪುರೋಹಿತರು ಕ್ಷತ್ರಿಯರ ರಾಜಕೀಯ ಅಧಿಕಾರವನ್ನು ಶಾಸನಬದ್ಧಗೊಳಿಸುತ್ತಿದ್ದರು. ಕ್ಷತ್ರಿಯ ಸ್ಥಾನಮಾನವನ್ನು ಪಡೆಯಲು ಶಾಸನ ಬದ್ಧಗೊಳ್ಳುವುದು ಅವಶ್ಯಕವಾಗಿತ್ತು. ಹುಟ್ಟಿನಿಂದ ಕ್ಷತ್ರಿಯರಾಗಿಲ್ಲದ ಉನ್ನತವ್ಯಕ್ತಿಗಳನ್ನು ಅವರ ಪರಾಕ್ರಮ ಮತ್ತು ದಕ್ಷತೆಗಳನ್ನೇ ಆಧಾರವನ್ನಾಗಿ ಇಟ್ಟುಕೊಂಡು ಕ್ಷತ್ರಿಯವರ್ಗಕ್ಕೆ ಸೇರಿಸಲಾಗುತ್ತಿತ್ತು.

ನಮ್ಮ ದೇಶದಲ್ಲಿ ಜಾತಿಯ ಹುಟ್ಟು ಇಂದು ಮತ್ತು ನಿನ್ನೆಯದಲ್ಲ, ಪ್ರಕೃತಿ ನಿಯಮದಂತೆ ಮನುಷ್ಯನ ಹುಟ್ಟು ಯಾವುದೇ ಜಾತಿ ಆಧಾರದ ಮೇಲೆ ಆಗುವುದಿಲ್ಲ. ಹಾಗೆ ಹುಟ್ಟಿದ ಮನುಷ್ಯನಿಗೆ ಯಾವುದೇ ಜಾತಿ ಧರ್ಮದ ಸೋಂಕು ಇರುವುದಿಲ್ಲ. ಪರಿಶುದ್ಧವಾದ ಮಾನವ, ಜನ್ಮ ಹಕ್ಕು ಮಗುವಿನದು ಆದರೆ ನಮ್ಮ ಜಾತಿ ವ್ಯವಸ್ಥೆಯಿಂದಾಗಿ ತಂದೆ ತಾಯಿಯ ಜಾತಿಯನ್ನಾಧರಿಸಿ ಆ ಅಮಾಯಕ ಮಗುವಿಗೆ ಸಮಾಜ ಒಂದು ಜಾತಿಯ ಹಣೆಪಟ್ಟಿ ಕಟ್ಟಿ ಬಿಡುವುದು ಭಾರತದಲ್ಲಿನ ಮಾನವ ಜನ್ಮದ ದುರಂತ ನಂತರ ಜಾತಿ ವ್ಯವಸ್ಥೆಯ ಚೌಕಟ್ಟಿನಲ್ಲಿ ಬೆಳೆಯುವ ಮಗುವಿನ ಭವಿಷ್ಯ ಸಮಾಜದಲ್ಲಿನ ಆಯಾ ಜಾತಿಯ ಸ್ಥಾನಮಾನಕ್ಕನುಗುಣವಾಗಿ ನಿರ್ಧಾರವಾಗುತ್ತಾ ಹೋಗುತ್ತದೆ. ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಉನ್ನತ ಸ್ಥಾನಮಾನಗಳಿಗೆ ಭಾಜನವಾದ ಜಾತಿಯ ಮಗು ಸಮಾಜದಲ್ಲಿ ಮುಕ್ತ ಅವಕಾಶ ಪಡೆದು ಎಲ್ಲ ಕ್ಷೇತ್ರಗಳಲ್ಲೂ ಗೌರವ ಪಡೆಯುತ್ತಾ ಬೆಳೆಯುತ್ತದೆ. ಆದರೆ, ಕೀಳೆಂದು ಪರಿಗಣಿಸಲ್ಪಟ್ಟ ಜಾತಿಗೆ ಸೇರಿದ ಮಗು ಸಮಾಜದಲ್ಲಿ ಅವಕಾಶಗಳಿಂದ ವಂಚಿತವಾಗಿ ಕೀಳರಿಮೆಯಿಂದ ಕಡೆಗಣನೆಗೆ ಗುರಿಯಾಗುತ್ತಾ ಬೆಳೆಯುತ್ತದೆ.

ಹಾಗೆಯೇ ಜಾತಿಯಿಂದಾಗಿ ವರ್ಗ ಹೇಗೆ ಉಂಟಾಯಿತು ಎಂಬುದನ್ನು ನೋಡುವುದಾದರೆ, ಮಾನವ ಸಮಾಜ ಬೆಳವಣಿಗೆ ಹೊಂದುತ್ತಾ ಜಾತಿ ಜಾತಿಗಳಾಗಿ ಒಂದಾಗಿ ಮತ್ತೆ ವರ್ಗಗಳಾಗಿ ಏರ್ಪಟ್ಟ ಇಂದಿಗೂ ಮುಖ್ಯವಾಗಿ ಎರಡಾಗಿ ಸೀಳಿವೆ. ಒಂದು ಬೂರ್ಜ್ವಾ ವರ್ಗ, ಇನ್ನೊಂದು ಕಾರ್ಮಿಕ ವರ್ಗ, ಒಟ್ಟು ಜನರನ್ನು ಶ್ರೀಮಂತರು, ಬಡವರೆಂದು ವಿಭಜಿಸಿದರೂ ವರ್ಗ ಲಕ್ಷಣಗಳನ್ನು ಗಮನಿಸಿ ಬೂರ್ಜ್ವಾ ಮತ್ತು ಕಾರ್ಮಿಕ ವರ್ಗಗಳೆಂದು ಜನರನ್ನು ವಿಭಜಿಸುವುದು ನಡೆಯಿತು.

ಮುಕ್ತ ಸ್ವರೂಪದ ಸ್ತರವ್ಯವಸ್ಥೆ ಎಂದು ಕರೆಯಲಾಗುತ್ತಿರುವ ವರ್ಗ ವ್ಯವಸ್ಥೆಯು ಪಾಶ್ಚಿಮಾತ್ಯ ಸಮಾಜಗಳನ್ನೊಳಗೊಂಡಂತೆ ಇಂದಿನ ಆಧುನಿಕ ನಾಗರಿಕ ಸಮಾಜಗಳಲ್ಲಿ ಎಲ್ಲೆಡೆಯಲ್ಲಿಯೂ ಕಂಡುಬರುವುದು. ವರ್ಗಸ್ತರ ವ್ಯವಸ್ಥೆಯು ಆರ್ಥಿಕ ಅಂತಸ್ತಿನ ಆಧಾರದ ಮೇಲೆ ಜನರನ್ನು ವಿಭಿನ್ನ

ಸಮೂಹಗಳಾಗಿ ವಿಂಗಡಿಸುವ ವ್ಯವಸ್ಥೆಯಾಗಿದ್ದರೂ ಇಲ್ಲಿ ಸಾಧನೆ ಅಥವಾ ಪ್ರತಿಭೆಯ ಆಧಾರದ ಮೇಲೆ ಒಂದು ಅಂತಸ್ತಿನಿಂದ ಇನ್ನೊಂದು ಅಂತಸ್ತಿಗೆ ಚಲಿಸಲು ಅವಕಾಶಗಳಿರುತ್ತವೆ. ಜಾತಿ ಅಥವಾ ಎಸ್ಟೇಟ್ಸ್‌ಗಳಂತೆ ಬಹಳ ಕಟ್ಟುನಿಟ್ಟಿನ ಗಡಿಗಳನ್ನು ಹೊಂದಿರದ ವರ್ಗ ವ್ಯವಸ್ಥೆಯು ಬಹಳ ಗತಿಶೀಲ ಸ್ವರೂಪದ್ದಾಗಿರುವುದು. ಚಲನೆಯ ಗತಿಯು ಬಹಳ ತೀವ್ರವಾಗಿರುವೆಡೆಗಳಲ್ಲಂತೂ ವ್ಯಕ್ತಿಗಳ ನಿರ್ದಿಷ್ಟ ವರ್ಗಸ್ಥಾನವನ್ನು ಗುರುತಿಸುವುದು ಕಠಿಣವಾಗುವುದು, ಇಲ್ಲಿ ವ್ಯಕ್ತಿಗಳ ಆರ್ಥಿಕತೆಗೆ ಹೆಚ್ಚು ಪ್ರಾಧ್ಯಾನ್ಯತೆ ನೀಡಲಾಗಿರುವುದರಿಂದ ವ್ಯಕ್ತಿಯ ಅಥವಾ ಆತನ ಕೌಟುಂಬಿಕ ಸಂಪತ್ತು ಅಥವಾ ಆದಾಯವು ಹೆಚ್ಚುವುದು ತಗ್ಗುವುದು ತೀರಾ ಸಾಮಾನ್ಯ. ಇಲ್ಲಿ ಸಾಧನೆಗೆ ಅಂದರೆ, ವ್ಯಕ್ತಿಯು ತನಗೆ ಲಭ್ಯವಾದ ಅಂತಸ್ತನ್ನು ಹೆಚ್ಚಿಸಿಕೊಳ್ಳಲು ಅವಕಾಶವಿದೆ ಆದ್ದರಿಂದ ಆತನಿಗೆ ಆತನ ಅಂತಸ್ತನ್ನು ನಿರ್ಧಾರ ಪರಿಸಿಕೊಳ್ಳುವ ನಿಯಂತ್ರಣ ಶಕ್ತಿ ಇದೆ ಎಂದೇ ಅರ್ಥ. ಮಕ್ಕಳಿಗೆ ತಮ್ಮ ತಂದೆ–ತಾಯಿಯರು ಎಂದೂ ಸದಸ್ಯರಾಗಿರದಂತಹ ವರ್ಗದ ಸದಸ್ಯರಾಗಲು ಯಾವ ವಿಶಿಷ್ಟವಾದ ಅಡೆತಡೆಗಳೂ ಇರುವುದಿಲ್ಲ.

ಸಾಮಾಜಿಕ ವರ್ಗದ ಬೆಳವಣಿಗೆಯ ಆದ್ಯತೆಯು ಸಮಾಜದ ಸಾಮಾನ್ಯ ರಚನೆ ಮತ್ತು ಸಂಸ್ಕೃತಿಯ ಪ್ರಮುಖ ಲಕ್ಷಣವಾಗಿದ್ದು, ಜನರ ಭಾಷೆಯ ಬಳಕೆ, ನೂತನ ಸಂಘಟನೆಗಳು ಹಾಗೂ ಕಾನೂನುಗಳ ಮೂಲಕ ಪ್ರತಿಫಲಿಸುತ್ತದೆ. ಇಂದು ವರ್ಗ–ವಿಧಾನಗಳು ಜೀವನದ ಎಲ್ಲಾ ಕ್ಷೇತ್ರಗಳಲ್ಲಿ ಹೆಚ್ಚಿನ ಮಹತ್ವದವಾಗಿರುವು. ಅಧಿಕಾರದ ರೀತಿಯವುಗಳಿಗಿಂತಲೂ ಹೆಚ್ಚಿನವುಗಳಾಗಿವೆ, ಸಮೂಹವಾಗುವಿಕೆಯ ಅನೇಕ ಸಂಘಟನೆಗಳು ಹಾಗೂ ಇತರ ವಿಧಗಳನ್ನುಂಟುಮಾಡುತ್ತವೆ. ತನ್ಮೂಲಕ ಒಂದೇ ರೀತಿ ವರ್ತಿಸುವಂತೆ ಇಲ್ಲವೇ ಜೊತೆಗೂಡಿ ವರ್ತಿಸುವಂತೆ ಪ್ರಭಾವ ಬೀರುತ್ತವೆ. ಅವು ಸಮಾನ ಆಸಕ್ತಿ ಮತ್ತು ತದ್ರೂಪವಾದ ಸಾಂಸ್ಕೃತಿಕ ನಮೂನೆಗಳನ್ನು ಹಂಚಿಕೊಂಡಿರುವಂತೆ ತಮ್ಮಷ್ಟಕ್ಕೆ ತಾವೇ ಭಾವಿಸುತ್ತವೆ. ಇಲ್ಲಿ ಮುಖ್ಯವಾಗಿ ಜಾತಿಯು ವರ್ಗವಾಗಿ ಮುಂದುವರೆಯುತ್ತಿರುವುದನ್ನು ಇಂದಿನ ವಾಸ್ತವಾದ ಕಾಲಘಟ್ಟದಲ್ಲಿ ನೋಡಬಹುದಾಗಿದೆ. ಕೇವಲ ವರ್ಗ–ವರ್ಗವೇ ಮಾತ್ರ ಸಾಮಾಜಿಕ ಸಂಬಂಧಗಳನ್ನು ಬೆಳೆಸಲು ಮುಂಚೂಣಿಯಲ್ಲಿ ನಿಂತಿದೆ ಎನ್ನಬಹುದು.

'ಅಂಬೇಡ್ಕರ್ ಅವರ ಪ್ರಕಾರ ಭಾರತ ಭೂ ಖಂಡದ ಒಂದು ಕಡೆಯಿಂದ ಇನ್ನೊಂದು ಕಡೆಯವರೆಗೆ ಜನರು ಸಾಂಸ್ಕೃತಿಕ ಏಕತೆಯಿಂದ ಒಂದುಗೂಡಿದ್ದಾರೆ. ಜಾತಿಯ ಬಗ್ಗೆ ಇರುವ ವಿವಿಧ ಅಧಿಕೃತ ಸಿದ್ಧಾಂತಗಳನ್ನು ಪರಿಶೀಲಿಸಿದ ನಂತರ, ಜಾತಿ ಸಮೂಹಗಳ ರಚನೆಗೆ ಭಿನ್ನಗೋತ್ರ ವಿವಾಹ ಪದ್ಧತಿಯ ಮೇಲೆ ಸ್ವಗೋತ್ರ ವಿವಾಹದ ಬಗ್ಗೆ ಹೇಳತ್ತಾ ಅವರು 'ಸತಿ' ಪದ್ಧತಿ ಕಡ್ಡಾಯ ವಿಧವಾ ಪದ್ಧತಿ ಮತ್ತು ಬಾಲ್ಯ ವಿವಾಹಗಳು ಈ ಸ್ವಗೋತ್ರ ವಿವಾಹ ಪದ್ಧತಿಯ ಪರಿಣಾಮಗಳಾಗಿವೆ. ಸಮಾಜದಲ್ಲಿ ಗುಂಪುಗಳ ರಚನೆ ಒಂದು ಸ್ವಾಭಾವಿಕ ಪ್ರಕ್ರಿಯೆಯಾಗಿದ್ದು ಈ ಗುಂಪುಗಳು ಬಹಿಷ್ಕಾರ ಮತ್ತು ಅನುಕರಣೆಯ ಮೂಲಕ ಕ್ರಮೇಣ ಜಾತಿಗಳಾಗಿ ಪರಿವರ್ತಿತಗೊಂಡಿವೆ' ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. 'ಇವರ ಪ್ರಕಾರ ಭಾರತದಲ್ಲಿನ ಜಾತಿ ಉಗಮದ ವಿಚಾರದಲ್ಲಿ ಐಕ್ಯ ಲಕ್ಷಣ

ಸ್ವಜಾತಿ ವಿವಾಹಪದ್ಧತಿಯಾಗಿದೆ'*(ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, ಸಂ-೧, ಕನ್ನಡ ಸಂಸ್ಕೃತಿ ಇಲಾಖೆ, ಪುಟ-೧೭, ೨೦೦೯).*

ಹಿಂದೂ ಸಮಾಜದಲ್ಲಿ ಜಾತಿ ವ್ಯವಸ್ಥೆಯು ಶಾಸ್ತ್ರ ಸಮ್ಮತಿಯಿಂದ ಪ್ರಜ್ಞಾ ಪೂರ್ವಕವಾಗಿ ಸೃಷ್ಟಿಯಾಗಿದೆಯೆಂದು ಸಂಪ್ರದಾಯ ನಿಷ್ಠರಾದ ಹಿಂದೂಗಳ ಮನಸ್ಸಿನಲ್ಲಿ ಬಲವಾದ ಒಂದು ನಂಬಿಕೆಯಿದೆ. ಈ ನಂಬಿಕೆ ಇರುವುದುಷ್ಟೆ ಅಲ್ಲ, ಶಾಸ್ತ್ರಗಳು ತಪ್ಪಾಗಿರಲು ಸಾಧ್ಯವಿಲ್ಲದ್ದರಿಂದ ಜಾತಿಪದ್ಧತಿ ಒಳ್ಳೆಯದೇ ಹೊರತು ಮತ್ತೇನೂ ಅಲ್ಲವೆಂಬ ಆಧಾರಗಳನ್ನಿತ್ತು ಈ ನಂಬಿಕೆಯನ್ನು ಸಮರ್ಥಿಸಲಾಗುತ್ತಿದೆ. ಈ ಧೋರಣೆಯ ಪ್ರತಿಕೂಲ ವಿಚಾರ ಕುರಿತು ನಾನು ಸಾಕಷ್ಟು ವಾದಿಸಿರುವುದು ಇಲ್ಲಿ ನೀಡಲಾದ ಧಾರ್ಮಿಕ ಪರವಾನಿಗೆಯನ್ನು ವೈಜ್ಞಾನಿಕ ಪಾತಳಿಯ ವಾದದ ವಿರದ್ಧವಾಗಿ ಬೋಧಿಸುತ್ತಿರುವ ಸುಧಾರಣಾ ವಾದಿಗಳಿಗೆ ನೆರವಾಗಲಿ ಎಂಬುದಾಗಲು ಅಲ್ಲ ಎಂದದ್ದಾರೆ.

ಪಾಶ್ಚಾತ್ಯ ವಿದ್ವಾಂಸರು ಭಾರತದಲ್ಲಿ ಜಾತಿಗಳ ಪ್ರಸಾರದ ಒಗಟನ್ನು ಬಿಡಿಸುವುದರಲ್ಲಿ ಬೇರೆ ಬೇರೆ ಅರ್ಥವಿವರಣೆ ಕೊಡಲೆತ್ನಿಸಿದ್ದಾರೆ ಅವರ ಪ್ರಕಾರ ಭಾರತದಲ್ಲಿ ವಿವಿಧಜಾತಿಗಳು 'ರೂಪಿತ' ವಾಗಿರುವ ಕೇಂದ್ರ ಬಿಂದುಗಳೆಂದರೆ: ೧. ಕಸುಬು, ೨. ಬುಡಕಟ್ಟು ವ್ಯವಸ್ಥೆಯ ಪಳೆಯುಳಿಕೆಗಳು, ೩. ಹೊಸನಂಬಿಕೆಯ ಉದಯ, ೪. ಅಂತರ್ಜಾತಿಯ ಸಂತಾನ, ಮತ್ತು ೫. ವಲಸೆ.*(ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, ಸಂ-೧, ಕನ್ನಡ ಸಂಸ್ಕೃತಿ ಇಲಾಖೆ, ಪುಟ-೨೦, ೨೦೦೯).*

'ಭಾರತಲ್ಲಿ ಇಡೀ ಜಾತಿವ್ಯವಸ್ಥೆ ರಚನೆಯಾಗಿರುವುದು ಅದು ನಿರ್ವಹಿಸುವ ಕಾರ್ಯದ ಮೇಲೆ ಮಾತ್ರ' ಎಂದು ನೆಸ್‌ಫೀಲ್ಡರು ಹೇಳುತ್ತಾರೆ*(ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, ಸಂ-೧, ಕನ್ನಡ ಸಂಸ್ಕೃತಿ ಇಲಾಖೆ, ಪುಟ-೨೦, ೨೦೦೯).* ಹಿಂದೂ ಸಮಾಜವು ಇತರ ಸಮಾಜಗಳ ರೀತಿಯಲ್ಲಿಯೇ ವರ್ಗಗಳಿಂದ ಕೂಡಿದ್ದಾಗಿತ್ತು. ಎಂಬುದನ್ನು ಪ್ರಾರಂಭದಲ್ಲೇ ನೆನೆಪಿಗೆ ತಂದುಕೊಳ್ಳುವುದು ಒಳ್ಳೆಯದು ನಮಗೆ ತಿಳಿದು ಬಂದಿರುವ ಪ್ರಾರಂಭದ ವರ್ಗಗಳು; ೧. ಬ್ರಾಹಣರು ಅಥವಾ ಪುರೋಹಿತ ವರ್ಗ, ೨. ಕ್ಷತ್ರಿಯರು ಅಥವಾ ಸೈನಿಕ ವರ್ಗ, ೩. ವೈಶ್ಯರು ಅಥವಾ ವರ್ತಕ ವರ್ಗ, ೪. ಶೂದ್ರರು ಅಥವಾ ಕುಶಲಕರ್ಮಿಗಳು ಹಾಗೂ ದಾಸವೃತ್ತಿಯವರು*(ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, ಸಂ-೧, ಕನ್ನಡ ಸಂಸ್ಕೃತಿ ಇಲಾಖೆ, ಪುಟ-೨೧, ೨೦೦೯).* ನಂಬಿಕೆಯ ಮೇಲೆ ಜಾತಿ ನಿಂತಿರುವುದೆಂಬುದು ನಿಜ, ಆದರೆ ನಂಬಿಕೆಯು ಒಂದು ಸಾಮಾಜಿಕ ಏರ್ಪಾಡಿನ ಬುನಾದಿಯಾಗುವುದಕ್ಕಿಂತಲೂ ಮುಂಚೆ ಸ್ವತಃ ಆ ಏರ್ಪಾಡೇ ಶಾಶ್ವತವಾಗಿರುವ ಮತ್ತು ಬಲಯುತವಾಗಿರುವ ಇಚ್ಛೆಯನ್ನು ಹೊಂದಿರುತ್ತದೆ*(ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, ಸಂ-೧, ಕನ್ನಡ ಸಂಸ್ಕೃತಿ ಇಲಾಖೆ, ಪುಟ-೨೬, ೨೦೦೯).*

ಮಹಾತ್ಮ ಗಾಂಧಿ ಪ್ರಕಾರ ಪರಂಪರಾಗತವಾದ ಕುಲವೃತ್ತಿಯನ್ನೇ ಅನುಸರಿಸಬೇಕೆಂಬುದು ಮಹಾತ್ಮರ ವರ್ಣಕ್ಕಿರುವ ಮುಖ್ಯ ತತ್ವ*(ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು*

*ಮತ್ತು ಭಾಷಣಗಳು, ಸಂ-೧, ಕನ್ನಡ ಸಂಸ್ಕೃತಿ ಇಲಾಖೆ, ಪುಟ-೧೦೩, ೨೦೦೯).* ವರ್ಣ ಮತ್ತು ಜಾತಿ ಎರಡೂ ಸಂಪೂರ್ಣವಾಗಿ ಭಿನ್ನ ಪರಿಕಲ್ಪನೆಗಳು ವರ್ಣವು ವ್ಯಕ್ತಿಯ ಯೋಗ್ಯತೆಯನ್ನು ಆಧಾರವಾಗಿಟ್ಟು ಕೊಳ್ಳತ್ತದೆ. ಜಾತಿಯು ವ್ಯಕ್ತಿಯ ಜನ್ಮವನ್ನು ಆಧರಿಸುತ್ತದೆ ಎಂದು ತಿಳಿಸಿದ್ದಾರೆ.

ಜಾತಿ ಅಥವಾ ಲಿಂಗ ಅಥವಾ ಜನಾಂಗೀಯ ಅಥವಾ ವರ್ಗ ಆಧರಿಸಿರುವ ವಿಶ್ಲೇಷಣಾ ಮಾರ್ಗವನ್ನೇ ಹೆಚ್ಚಿನ ಸಂಖ್ಯೆಯ ಚಿಂತಕರು ಆಯ್ದುಕೊಂಡಿದ್ದಾರೆ. ಆದರೆ ರಾಮಮನೋಹರ ಲೋಹಿಯಾ ಅಂತರ್ವರ್ಗೀಯ ವಿಶ್ಲೇಷಣೆಯ ಮೂಲಕ ಅಸಮಾನತೆ, ಹೊರರದೂಡುವಿಕೆ ಮತ್ತು ಶೋಷಣೆಗಳನ್ನು ಸಮಕಾಲಿನ ಭಾರತದ ಸಂದರ್ಭದಲ್ಲಿ ಅರ್ಥೈಸಿಕೊಳ್ಳುವಲ್ಲಿ ಕೊಟ್ಟಿರುವ ಕೊಡುಗೆ ಗಣನೀಯವಾದದ್ದು. "ವರ್ಗವನ್ನು ಬುನಾದಿ ಎಂದೂ, ಜಾತಿ, ಲಿಂಗ, ಭಾಷೆ ಮತ್ತು ಧರ್ಮಗಳನ್ನು ಸಾಂಸ್ಕೃತಿಕ ಮೇಲ್ ರಚನೆಗಳೆಂದೂ ಪರಿಗಣಿಸುವುದು ಭಾರತದ ಮಾರ್ಕ್ಸವಾದಿ ಚಿಂತಕರ ಸ್ಪಷ್ಟ ನಿಲುವಾಗಿತ್ತು"*(ಪ್ರಭಾಕರ ಎ ಎಸ್,ಶ್ರೀಪಾದ ಶೆಟ್ಟಿ, (ಸಂ), ಲೋಹಿಯಾ: ವರ್ತಮಾನದ ಮುಖಾಮುಖಿ, ಪುಟ-೧೫೨, ೨೦೧೨).* "ಜಾತಿ ವ್ಯವಸ್ಥೆಯ ವಿರೋಧಿಯಾದ ಶಕ್ತಿಯುತ ಭಾರತಿಯ ಪರಂಪರೆಯನ್ನು ಅಲ್ಲಗಳೆಯಲು ಲೋಹಿಯಾ ಸಿದ್ದರಿರಲಿಲ್ಲ"*(ಪ್ರಭಾಕರ ಎ ಎಸ್,ಶ್ರೀಪಾದ ಶೆಟ್ಟಿ, (ಸಂ), ಲೋಹಿಯಾ: ವರ್ತಮಾನದ ಮುಖಾಮುಖಿ ಸಂ-೩, ಪುಟ-೧೫೩, ೨೦೧೨).*

ಸಾಮಾಜಿಕ ಅಸಮಾನತೆಗಳನ್ನು ಕೇವಲ ಒಂದು ದೃಷ್ಟಿಯಿಂದ ನೋಡುವ ಕ್ರಮವನ್ನು ವಿಮರ್ಶಾತ್ಮಕವಾಗಿ ಪರಿಶಿಲಿಸಿರುವುದು ಲೋಹಿಯಾ ಚಿಂತನೆಯ ವೈಶಿಷ್ಟ್ಯ. ಸಮಾಜದಲ್ಲಿ ಅಂತರ್ಗತವಾಗಿರುವಂಥವು ಲಿಂಗ, ಜಾತಿ ಮತ್ತು ಜನಾಂಗ. ಇವರ ಪ್ರಕಾರ ವರ್ಗ ಸಮಾನತೆಯ ಕಡೆಗಿನ ತುಡಿತ; ಜಾತಿ ನ್ಯಾಯದ ಕಡೆಗಿನ ತುಡಿತ. ವ್ಯಕ್ತಿಯನ್ನು ಒಂದೇ ಜಾತಿಗೆ ಕಟ್ಟಿಹಾಕುವ ಜಾತಿ ಸಂಬಂಧಗಳು, ತನ್ನಜಾತಿಯನ್ನು ಬಿಟ್ಟು ಮೇಲ್ಜಾತಿಯನ್ನು ಸೇರಿಕೊಳ್ಳಲಾಗದ ಅಥವಾ ಒಂದು ಸಮುದಾಯವೇ ತನ್ನ ಸಾಮಾಜಿಕ ಅಂತಸ್ತನ್ನು ಹೆಚ್ಚಿಸಿಕೊಳ್ಳಲಾಗದ ಸ್ಥಿತಿ, ಇವು ಜಾತಿಯನ್ನು ವರ್ಗದಿಂದ ಬೇರ್ಪಡಿಸುವ ಅಂಶಗಳು. "ಬಡತನ ಮತ್ತು ಜಾತಿ ಹಾಗೂ ಲಿಂಗ ತಾರತಮ್ಯಗಳು ಒಂದನ್ನೊಂದು ಬಳಸಿಕೊಂಡು ಬದುಕುತ್ತವೆ' ಎನ್ನುವುದು ಲೋಹಿಯಾರವರ ಅಭಿಪ್ರಾಯವಾಗಿದೆ" *(ಪ್ರಭಾಕರ ಎ ಎಸ್,ಶ್ರೀಪಾದ ಶೆಟ್ಟಿ, (ಸಂ), ಲೋಹಿಯಾ: ವರ್ತಮಾನದ ಮುಖಾಮುಖಿ, ಪುಟ-೧೫೯, ೨೦೧೨).*

ಜಾತಿಯು ಗುಣ , ಕರ್ಮದೊಂದಿಗೆ ಸಂಬಂಧ ಹೊಂದಿಲ್ಲ, ವರ್ಗವು ಜಡವಾದಾಗ ಅದು ಜಾತಿಯ ಗುಣಗಳನ್ನು ಅವಾಹಿಸಿಕೊಳ್ಳತ್ತದೆ. ಸಂಪತ್ತು, ಬುದ್ಧಿ, ಪದವಿಯ, ಆಧಾರಗಳ ಮೇಲೆ ಸಮಾಜದಲ್ಲಿ ಗುಂಪುಗಳಾಗುತ್ತವೆ ಕ್ರಮೇಣ ಇವೇ ವರ್ಗಗಳಾಗುತ್ತವೆ*(ನಟರಾಜ ಹುಳಿಯಾರ್ ಕಾಳೇಗೌಡ ನಾಗವಾರ, (ಸಂ), ರಾಮಮನೋಹರ ಲೋಹಿಯಾ ಬರಹಗಳು ಸಂ-೨, ಉತ್ತರ ದಕ್ಷಿಣ,ಪುಟ-೧೩೦,೨೦೧೭).* ಗತಿಶೀಲವಾದ ಜಾತಿಯನ್ನು ವರ್ಗ ಮತ್ತು ಜಡವಾದ ವರ್ಗವನ್ನು ಜಾತಿ ಎಂದು ಕರೆಯುತ್ತೇವೆ. ಚರಿತ್ರೆಯ ಒಂದು ಸಾಮಾನ್ಯ ನಿಯಮವೆಂದರೆ ವರ್ಗ ಮತ್ತು ಜಾತಿಗಳು ಏರಿಳಿತಕ್ಕೆ ಒಳಗಾಗುತ್ತಿರುತ್ತವೆ. "ಬ್ರಾಹ್ಮಣರನ್ನು ಬಿಟ್ಟು ಉಳಿದೆಲ್ಲ ಜಾತಿಗಳನ್ನು

ವ್ಯಕ್ತಿತ್ವಹೀನಗೊಳಿಸಲಾಗಿದೆ. ಭಾರತೀಯ ಸಮಾಜ ವ್ಯವಸ್ಥೆಯಲ್ಲಿ ಹರಡಿರುವ ಜಾತಿವಾದದ ಕೂಪ ಈ ಹೀನಸ್ಥಿತಿಗೆ ಕಾರಣವಾಗಿದೆ"*(ಪ್ರಭಾಕರ ಎ ಎಸ್, ಶ್ರೀಪಾದ ಶೆಟ್ಟಿ, (ಸಂ), ಲೋಹಿಯಾ: ವರ್ತಮಾನದ ಮುಖಾಮುಖಿ ಸಂ-೩, ಪುಟ-೧೩೮, ೨೦೧೨).*

"ಪೆರಿಯಾರ್ ರಾಮಸ್ವಾಮಿಯವರು ವನ್ನಿಯಕುಲ ಕ್ಷತ್ರಿಯ ಸಮಾಜದ ಸಮ್ಮೇಳನವನ್ನು ಉದ್ಘಾಟಿಸಿದಾಗ ಮಾಡಿದ ಭಾಷಣದಿಂದ ಆಯ್ದ ಸಾರಾಂಶ ಇಲ್ಲಿದೆ ನಾಯುಡು ಜಾತಿಯವರು ನಿಮ್ಮೆರಡೂ ಜಾತಿಯವರನ್ನು ಕ್ಷತ್ರಿಯರಲ್ಲಿ ಎಂದು ಹೇಳುವುದಲ್ಲದೆ"*(ರಂಗಸ್ವಾಮಿ ಬಿ ಆರ್, (ಸಂ), ಪೆರಿಯಾರ್ ಇ ವೆಂ ರಾಮಸ್ವಾಮಿ ಬರಹ ಮತ್ತು ಭಾಷಣಗಳ ಸಂಗ್ರಹ, ಸಂ-೦೩, ಪುಟ-೧೩೫, ೨೦೧೭).* ತಾವೇ ಕ್ಷತ್ರಿಯರೆಂದು ಹೇಳಿಕೊಳ್ಳುತ್ತಿರುವ ಕ್ಷತ್ರಿಯರಲ್ಲಿ 'ರಾಜಾ' ಎಂಬ ಮತ್ತೊಂದು ಜಾತಿಯವರು, ನೀವು ಮೂರು ಜನವೂ ಕ್ಷತ್ರಿಯರಲ್ಲ; ನಾವೇ ಕ್ಷತ್ರಿಯರು ಎನ್ನುತ್ತಿರುವರು. "ಸಿಂಗ್ ಮರಾಠಿಯವರು ನೀವು ನಾಲ್ವರೂ ಕ್ಷತ್ರಿಯರಲ್ಲ; ನಾವು ಮಾತ್ರವೇ ಕ್ಷತ್ರಿಯರು ಎಂದು ಹೇಳುತ್ತಿರುವರು. ಇದರಂತೆಯೇ ಕೊಡಗು ಕ್ಷತ್ರಿಯರು ಹೇಳುತ್ತಿರುವರು. ಹೀಗಾಗಿ ಇಷ್ಟೊಂದು ಜನರು ಕ್ಷತ್ರಿಯ ಪಟ್ಟಕ್ಕೆ ಪೈಪೋಟಿ ಮಾಡುತ್ತಿರುವ; ಜಗಳವಾಡುತ್ತಿರುವರು"*(ರಂಗಸ್ವಾಮಿ ಬಿ ಆರ್, (ಸಂ), ಪೆರಿಯಾರ್ ಇ ವೆಂ ರಾಮಸ್ವಾಮಿ ಬರಹ ಮತ್ತು ಭಾಷಣಗಳ ಸಂಗ್ರಹ, ಸಂ-೦೩, ಪುಟ-೧೩೫, ೨೦೧೭).*

ಪೆರಿಯಾರ್ ರವರು ಕ್ಷತ್ರಿಯರು ಎಂಬ ಪದಕ್ಕೂ ನಮಗೂ ಸಂಬಂಧವೇವಿದೆ? ಆ ಹೆಸರನ್ನು ನಾವು ಇಟ್ಟುಕೊಳ್ಳುವುದರಿಂದ ಲಾಭವೇನಿದೆ? ಕ್ಷತ್ರಿಯ ಪಟ್ಟದಿಂದ ನಮಗೇನು ಉನ್ನತಿಯಾಗಿದೆ? ಯಾವ ದೇಶವನ್ನು ನಾವು ವಶಪಡಿಸಿಕೊಂಡಿದ್ದೇವೆ? ಈ ಜಾತಿ ಹಿರಿದೆಂದು ಯಾರ ಹತ್ತಿರ ತೋರಿ ಒರೆ ಇಟ್ಟು ನೋಡಿಕೊಂಡಿದ್ದೇವೆ? ಕೆಲ ಅಲ್ಪಸಂಖ್ಯಾತರು ಜನಿವಾರ ಹಾಕಿಕೊಂಡಿದ್ದಾರೆ ಅಷ್ಟೇ ಅಲ್ಲದೆ ಬೇರೆ ಯಾವ ಬದಲಾವಣೆಯೂ ಆಗಲಿಲ್ಲ. ಇನ್ನೂ ಹೇಳಬೇಕಾದರೆ ನೂರಕ್ಕೆ ತೊಂಬತ್ತು ಜನರು ಕೂಲಿಗಳಾಗಿಯೇ ಇರುವೆವು ಎಂದು ಅಭಿಪ್ರಾಯ ಪಡುತ್ತಾರೆ*(ರಂಗಸ್ವಾಮಿ ಬಿ ಆರ್, (ಸಂ), ಪೆರಿಯಾರ್ ಇ ವೆಂ ರಾಮಸ್ವಾಮಿ ಬರಹ ಮತ್ತು ಭಾಷಣಗಳ ಸಂಗ್ರಹ, ಸಂ-೦೩, ಪುಟ-೧೩೭, ೨೦೧೭).* ಆದುದರಿಂದ ಜಾತಿಯನ್ನು ದೂರಹಾಕಿ, ಪ್ರಗತಿಪರರಾಗಿರಿ ಎಂದು ಹೇಳುತ್ತಾರೆ.

'ಘೂರ್ಯೆ ಅವರು ಬರೆದಿರುವಂತೆ ಶುದ್ಧತೆಯ ವಿಚಾರವು, ಅದು ವೃತ್ತಿಪರವಾಗಿರಲಿ, ಅಥವಾ ಶ್ರಾದ್ಧ ಕರ್ಮದ್ದಾಗಿರಲಿ, ಜಾತಿಯ ಮೂಲದಿಂದ ಹುಟ್ಟಿದ ಕಾರಕಗಳೆಂದು ತಿಳಿಸಿದ್ದಾರೆ. ಶ್ರೀ ನಾರಾಯಣಗುರು(೧೮೫೪-೧೯೩೮)ಅವರು ೧೯೦೨ ರಲ್ಲಿ ಯೋಗಂ ಎಂಬಲ್ಲಿ 'ಒಂದು ಜಾತಿ ಒಂದು ಧರ್ಮ ಒಬ್ಬ ದೇವರು' ಎಂಬ ದೃಢೋಕ್ತಿಗಳೊಡನೆ ಎಸ್.ಎನ್.ಡಿ.ಪಿ.ಯನ್ನು ಸ್ಥಾಪಿಸಿದರು*(ಶರ್ಮ ಎ ಅರ್, ಸಾಮಾಜಿಕ ಬದಲಾವಣೆ ಮತ್ತು ಚಳುವಳಿ, ಪುಟ-೯೯, ೧೯೯೯).* ನಾರಾಯಣಗುರುಗಳು ಏಜಾವಾಸರನ್ನು ಕೇರಳದ ಅಸ್ಪೃಶ್ಯ ವರ್ಗದಿಂದ ಪರಿವರ್ತಿಸಿದ ಮೂವತ್ತು ವರ್ಷದ ಅಲ್ಪಾವಧಿಯೊಳಗಾಗಿ 'ಹಿಂದುಳಿದ ಜಾತಿ' ಸಮುದಾಯವನ್ನಾಗಿ ಪರಿವರ್ತಿಸಿದರು. ಎರವರ ಸಮುದಾಯಕ್ಕೆ ಸಹ ದೇವಸ್ಥಾನದ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟರು. ಇತರ "ಹಿಂದುಳಿದ

ವರ್ಗಗಳಲ್ಲಿ ಸೇರಸಲಾಗಿರುವ ಕೆಲವಾರು ಜಾತಿಗಳು ಮುಂದುವರಿದ ಜಾತಿಗಳಲ್ಲಿರುವಂತೆ ಅವರಲ್ಲಿ ಹೆಚ್ಚಿನವರು ಒಳ್ಳೆಯ ವಿದ್ಯಾವಂತರಾಗಿಲ್ಲದೆ, ಇದ್ದರೂ ಕೂಡ ಆರ್ಥಿಕ, ಸಾಮಾಜಿಕ, ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಅತ್ಯಂತ ಶಕ್ತಿಶಾಲಿಗಳಾಗಿದ್ದರು ಅವರಿಗೆ ಸರ್ಕಾರಿ ಉದ್ಯೋಗಗಳಲ್ಲಿ ಒಳ್ಳೆಯ ಪ್ರಾತಿನಿಧ್ಯವೂ ಇರಲಿಲ್ಲ"*(ಶರ್ಮ ಎ ಆರ್, ಸಾಮಾಜಿಕ ಬದಲಾವಣೆ ಮತ್ತು ಚಳುವಳಿ, ಪುಟ-೯೮, ೧೯೯೯).* ಸಮಾಜವು ಎದುರಿಸುತ್ತಿರುವ ಒಂದು ದೊಡ್ಡ ಸಮಸ್ಯೆಯೆಂದರೆ ಈ ಪ್ರಬಲ್ಯ ಜಾತಿಗಳು ಹಿಂದುಳಿದ ಜಾತಿಯವರಾಗಿಯೇ ಉಳಿಯುವ ಪಟ್ಟಭದ್ರ ಹಿತಾಸಕ್ತಿಯನ್ನು ಬೆಳೆಸಿಕೊಂಡಿರುತ್ತಾರೆ.

ಕರ್ನಾಟಕದಲ್ಲಿರುವ ಕ್ಷತ್ರಿಯರ ಜನಜೀವನವು ತುಂಬ ಸರಳತೆಯಿಂದ ಕೂಡಿದೆ. ಆದರೆ ಇವರು ತಮ್ಮ ಪೂರ್ವಜರು ನಡೆಸಿಕೊಂಡು ಬಂದ ಸಂಪ್ರದಾಯ ಮತ್ತು ರೀತಿ ರೀವಾಜಗಳನ್ನು ಹಾಗೇ ಮುಂದುವರಿಸಿತ್ತಿರುವುದನ್ನು ಗಮನಿಸುವಂತಹ ವಿಷಯವಾಗಿದೆ. ಇಲ್ಲಿ ಕ್ಷತ್ರಿಯರು ತಮ್ಮದೇ ಅದ ಆಚಾರ-ವಿಚಾರಗಳು ತುಂಬ ವಿಶ್ವಾಸರ್ಹ ನಂಬರ್ಲವಾದ ಸಂಗತಿಗಳಾಗಿವೆ. ಈ ಕ್ಷತ್ರಿಯ ರಾಜಮನೆತನಗಳು ತಮ್ಮದೆ ಆದ ಪ್ರಭುತ್ವ ಸಾಧಿಸಿಕೊಂಡಿದ್ದರು ಸಮಾಜದಲ್ಲಿ ಇವರಿಗೆ ಬ್ರಾಹ್ಮಣರ ನಂತರದ ಗೌರವಯುತವಾದ ಪೂಜ್ಯಸ್ಥಾನವನ್ನು ಅಲಂಕಾರಿಸಿದ್ದಾರೆ. ಹಾಗೇ ಇವರು ಆಡಳಿತದ ವ್ಯವಸ್ಥೆಯನ್ನು ನೆಡೆಸಲು ಸಮರ್ಥವಾಗಿದ್ದರು. ಪ್ರಾಚೀನ ಕಾಲದಿಂದ ಹಿಡಿದು ಮಧ್ಯಕಾಲ ಮತ್ತು ಆಧುನಿಕ ಕಾಲದಲ್ಲಿ ಇವರು ನಡೆಸಿದಂತಹ ಆಡಳಿತ ವ್ಯವಸ್ಥೆಯು ಇಂದು ಸಹ ತುಂಬ ಉಪಯುಕ್ತವಾಗಿದೆ. ಆದರೆ ಕ್ಷತ್ರಿಯರು ವರ್ಣವ್ಯವಸ್ಥೆಯಲ್ಲಿ ಕಂಡಂತೆ ಪ್ರಸ್ತುತ ಸಮಾಜದಲ್ಲಿ ಇವರು ಇರುವಿಕೆಯು ಇರುವುದು ಗೋಚರಿಸುವುದು.

ಕ್ಷತ್ರಿಯರು ಹಲವಾರು ಸಮುದಾಯಗಳಾಗಿ ಪರಿವರ್ತನೆಗೊಂಡಿದ್ದಾರೆ. ಮಧ್ಯಕಾಲಿನಿಂದ ಆಧುನಿಕ ಸಮಾಜದಲ್ಲಿ ಪರಿವರ್ತನೆಗೊಂಡು ತಮ್ಮದೇ ಒಂದು ಜಾತಿಯ ಹೆಸರನ್ನು ಗುರುತಿಸಿಕೊಂಡು ಅದರ ಮುಂದೆ ಕ್ಷತ್ರಿಯರು ಎಂಬುದನ್ನು ತುಂಬ ಗೌರವರ್ಥ ಸೂಚಕವಾಗಿ ಇಟ್ಟುಕೊಂಡಿರುವುದನ್ನು ನೋಡಬಹುದು. ಕ್ಷತ್ರಿಯರು ಯಾವುದೇ ರೀತಿಯಾದ ಮೇಲಸ್ಥರಕ್ಕೆ ಸೇರದೆ ಇಂದು ಅದು ಹಿಂದುಳಿದ ವರ್ಗದಲ್ಲಿ ರಾರಾಜೀಸುತ್ತಲಿದೆ. ಹಾಗೇ ಈ ಸಮುದಾಯವು ಇಂದು ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಮತ್ತು ಆರ್ಥಿಕವಾಗಿ, ಇವೆ ಮುಂತಾದ ಕ್ಷೇತ್ರದಲ್ಲಿ ಕೆಳಮಟ್ಟದಲ್ಲಿದ್ದಾರೆ. ಕೆಲವೂಂದು ಕ್ಷತ್ರಿಯ ಸಮುದಾಯಗಳು ಯಾವ ಕ್ಷತ್ರಿಯರು ಎಂದು ಗುರುತಿಸಿಕೊಳ್ಳವುದೇ ಕಷ್ಟಕರವಾದ ವಿಷಯವಾಗಿದೆ. ಕಾರಣವೆಂದರೆ ಅಂದಿನ ಬ್ರಿಟೀಷ ಸರ್ಕಾರವು ಭಾರತದಲ್ಲಿ ಜಾತಿ ಸಮೀಕ್ಷೆ ಮಾಡಿಸಿ ಅದನ್ನು ಭಾರತದಲ್ಲಿ ಸಂವಿಧಾನಬದ್ಧವಾಗಿ ಗುರುತಿಸಲು ಪ್ರಾರಂಭಿಸಿತು. ಅಂದು ನಡೆಸಿದ ಜಾತಿ ಸಮೀಕ್ಷೆಯು ಇಂದು ಸಹ ಅದೇ ಮುಂದೆವರಿದಿದೆ. ಸಂವಿಧಾನ ಬದ್ಧವಾಗಿ ಸೂಚಿಸಿದ ಜಾತಿಗಳಲ್ಲಿ ಮಾತ್ರ ಗುರುತಿಸಿಕೊಳ್ಳ ಬೇಕಾಗಿರುತ್ತದೆ. ಆದ್ದರಿಂದ ಕೆಲವು ಕ್ಷತ್ರಿಯ ಸಮುದಾಯಗಳು ಯಾವ ಕ್ಷತ್ರಿಯಸಮುದಾಯಕ್ಕೆ ಸೇರಬೇಕು ವಿಚಾರದಲ್ಲಿ ದ್ವಂದ್ವತೆಯಿಂದ ಕೊಡಿದೆ.

ಮೀಸಲಾತಿಯ ದೂರದೃಷ್ಟಿಯ ಗುರಿ ಸಹಸ್ರಾರು ವರ್ಷಗಳಿಂದ ಹುಟ್ಟಿನಿಂದ ನಿರ್ಲಕ್ಷ್ಯಕ್ಕೆ ಒಳಗಾದ ಪರಿಶಿಷ್ಟ ಜಾತಿಯ ಜನರು ಇತರರಂತೆಯೇ ಮುಕ್ತ ಅವಕಾಶಗಳನ್ನು ಪಡೆದು ಮುಂದೆ

ಬರಬೇಕೆನ್ನುವುದಾಗಿದೆ. ಆದರೆ ಸಂವಿಧಾನದ ಈ ಮೂಲ ಆಶಯ ಜಾತಿ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ಅಥವಾ ಅದನ್ನು ಪೋಷಿಸುವ ಉದ್ದೇಶವನ್ನು ಖಂಡಿತ ಹೊಂದಿಲ್ಲ. ದುರದೃಷ್ಟಕರ ಸಂಗತಿ ಎಂದರೆ ಜಾತಿಯ ಶ್ರೇಣೀಕೃತ ವ್ಯವಸ್ಥೆಯಲ್ಲಿನ ಕೆಲವೆ ಜನರು ಸಮಾಜ ಮತ್ತು ಸರ್ಕಾರದಲ್ಲಿ ಎಲ್ಲ ಅವಕಾಶಗಳನ್ನು ಮತ್ತು ಸೌಲಭ್ಯಗಳನ್ನು ಪಡೆಯುತ್ತಾ ಬಂದದ್ದು ಬೆಳಕಿನಷ್ಟೇ ಸತ್ಯ. ಹೀಗಾಗಿ ನಿರ್ಲಕ್ಷ್ಯಕ್ಕೆ ಒಳಗಾದ ಉಳಿದ ಜಾತಿಗಳ ಜನರನ್ನು ಸಮಾಜದ ಮುಖ್ಯವಾಹಿನಿಗೆ ತರುವುದಕ್ಕಾಗಿ ಸೃಷ್ಟಿಸಲಾದ ಸಾಮಾಜಿಕ ನ್ಯಾಯದ ಪರಿಕಲ್ಪನೆಗೆ ಈಗ ಸಾಂವಿಧಾನಿಕ ಮನ್ನಣೆ ದೊರೆಯುತ್ತಿದೆ. ಇದರ ಪರಿಣಾಮವಾಗಿ ಪ್ರತಿಯೊಂದು ಜಾತಿಯ ಜನರ ಸಂಖ್ಯೆಯ ಆಧಾರದ ಮೇಲೆ ಅವಕಾಶ ಮತ್ತು ಸರ್ಕಾರದ ಸೌಲಭ್ಯ ನೀಡುವ ದಿಕ್ಕಿನಲ್ಲಿ ಮೀಸಲಾತಿಯ ವಿಸ್ತರಣೆ ಬೆಳೆಯುತ್ತಾ ಹೋಗಿದೆ. ಇದರಿಂದ ಸರ್ಕಾರದ ಮಟ್ಟದಲ್ಲಿಯೇ ಜಾತಿ ವ್ಯವಸ್ಥೆ ಅಕ್ಷರಶಃ ವಾಸ್ತವ ಎನ್ನುವ ಸತ್ಯವನ್ನು ಒಪ್ಪಿಕೊಳ್ಳಲಾಗಿದೆ. ಹೀಗಾಗಿ ಪ್ರತಿಯೊಂದು ಜಾತಿ ತಮ್ಮ ಜನಸಂಖ್ಯೆಗೆ ಅನುಗುಣವಾಗಿ ಆಡಳಿತದಲ್ಲಿ ಮತ್ತು ಅವಕಾಶಗಳಲ್ಲಿ ಪಾಲು ಕೇಳುತ್ತದೆ. ಈ ಹಕ್ಕೊತ್ತಾಯವನ್ನು ಸುಲಭವಾಗಿ ವಿವೇಚನಾ ರಹಿತವಾಗಿ ತಳ್ಳಿ ಹಾಕಲಾಗದು. ಜನತಂತ್ರ ವ್ಯವಸ್ಥೆಯಲ್ಲಿ ಈ ಪಾಲುಗಾರಿಕೆ ನ್ಯಾಯಸಮ್ಮತ ಎನ್ನುವ ಸಾಮಾಜಿಕ ಸಮಾನತೆಯ ಈ ದಿನದಲ್ಲಿ ಹೊಸ ಆಯಾಮವನ್ನು ನಿಶಿಸಿದೆ. ಅದರಲ್ಲಿ ಈ ಕ್ಷತ್ರಿಯ ಜಾತಿಯು ತನ್ನದೇ ಪಾಲುಗಾರಿಕೆಯಲ್ಲಿ ಕನಸು ಕಾಣಲಿದೆ.

ನಾವು ಇವತ್ತು ಅತ್ಯಂತ ಸಂಕೀರ್ಣವಾದ ಸ್ಥಿತ್ಯಂತರ ಸ್ಥಿತಿಯಲ್ಲಿ ಬದುಕುತ್ತಿದ್ದೇವೆ. ನಮ್ಮ ಮೇಲಿನ ಒತ್ತಡಗಳು ದಿನೇ ದಿನೇ ಹೆಚ್ಚಾಗುತ್ತಿವೆ. ಈ ಒತ್ತಡಗಳು ಅವೇನು ಕೇವಲ ಜಾಗತೀಕರಣದ ಹೆಸರಿನಲ್ಲಿ ಹೊರಗಿನಿಂದ ಬಂದ ಒತ್ತಡಗಳಷ್ಟೇ ಅಲ್ಲ, ನಮ್ಮನ್ನು ಆಳುವ ರಾಜಕಾರಣದ ಅನೇಕ ವಿಪರೀತ ನೀತಿಯ ಒತ್ತಡಗಳೂ ಸಹ ನಮ್ಮನ್ನು, ನಮ್ಮ ಸಂಸ್ಕೃತಿಯನ್ನು ನಮ್ಮ ಬದುಕನ್ನು ಇಕ್ಕಟ್ಟಿಗೆ ಸಿಕ್ಕಿಸುತ್ತಿವೆ. ಈ ಇಕಟ್ಟಿಗೆ ಸಿಕ್ಕಿಸುವ ಸಂದರ್ಭದಲ್ಲಿ ಆಧುನಿಕ ಸಂದರ್ಭದಲ್ಲಿ ನಾವು ನಮ್ಮ ಸಮುದಾಯಗಳ ಬದುಕನ್ನು ವರ್ತಮಾನ ಕಾಲದಲ್ಲಿ ಹೇಗೆ ಸಹ್ಯವಾಗಿಸಿಕೊಳ್ಳಬೇಕು ಎನ್ನುವ ನೆಲೆಯಲ್ಲಿ ಆಲೋಚನೆ ಮಾಡಬೇಕಾಗಿದೆ. ಹೀಗೆ ಆಲೋಚನೆ ಮಾಡುವಾಗ ಕೇವಲ ವರ್ತಮಾನವನ್ನು ಅಷ್ಟೇ ಗಮನದಲ್ಲಿ ಇಟ್ಟುಕೊಳ್ಳುವುದಲ್ಲ, ನಮ್ಮ ಚರಿತ್ರೆಯನ್ನು ನಮ್ಮ ಸಂಸ್ಕೃತಿ ಬೆಳೆದು ಬಂದ ಬಗೆಯನ್ನು ಗಮನಿಸಬೇಕು.

ಭಾರತದ ಸಂದರ್ಭದಲ್ಲಿ ಬಹಳ ಪ್ರಮುಖವಾದುದೆಂದರೆ ಜಾತಿ ಸಮಾಜ. ಈ ಜಾತಿ ಸಮಾಜ ಇತರ ಸಮುದಾಯಗಳ ಜೊತೆ ನಿರಂತರ ಮುಖಾಮುಖಿ ಹೊಂದುತ್ತಿರುವುದನ್ನು ಚರಿತ್ರೆಯಲ್ಲಿ ನೋಡಬಹುದು. ಚಾರ್ವಾಕ ಬೌದ್ಧ, ಜೈನ, ವೀರಶೈವ ಸಮುದಾಯಗಳಲ್ಲೂ ಹೀಗೆ ಇವೆಲ್ಲವೂ ಮುಖಾಮುಖಿಯಾದ ನೆಲೆಗಳು ಸ್ಥಳೀಯ ಮಟ್ಟದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಸಮುದಾಯಗಳು ಮುಖಾಮುಖಿಯಾಗುತ್ತಲೇ ಬಂದಿವೆ. ತನ್ನೊಂದಿಗೆ ಸಂಘರ್ಷಿಸುವ ಎಲ್ಲವನ್ನು ವಿಲೀನ ಮಾಡಿಕೊಳ್ಳುವ ಪ್ರಕ್ರಿಯೆಯನ್ನು ವೈದಿಕ ಸಮುದಾಯಗಳು ನಿರಂತರವಾಗಿ ಇತಿಹಾಸದುದ್ದಕ್ಕೂ ನಡೆಸುತ್ತಲೇ ಬಂದಿವೆ. ಜೈನ ಧರ್ಮವನ್ನು ಆ ಪೋಷಣೆ ತೆಗೆದುಕೊಂಡ ಈ ಸಮುದಾಯದ

ಹಿಡಿತದ ತಪ್ಪಿಸಿಕೊಂಡು ಬೌದ್ಧ ಧರ್ಮ ಬೇರೆ ದೇಶಗಳಲ್ಲಿ ತನ್ನ ಅಸ್ತಿತ್ವವನ್ನು ಗುರುತಿಸಿಕೊಂಡಿದೆ. ಚಾರ್ವಕವಂತೂ ಪ್ರತಿಸಂಸ್ಕೃತಿಯಾಗಿ ಬೆಳೆದು ನಿಂತು ಸದಾ ಸೆಡ್ಡು ಹೊಡೆಯುತ್ತಲೇ ಇದೆ. ವೈದಿಕತ್ವದ ಪ್ರಭಾವಳಿ ಮತ್ತು ಪ್ರಭುತ್ವದ ಬೆಂಬಲವನ್ನು ಕಿತ್ತು ಹಾಕುವ ಸಲುವಾಗಿ ನಿರಂತರ ಹೋರಾಟ ನಡೆಸಿದ ವೀಲಿನ ಸಮುದಾಯಗಳನ್ನೆಲ್ಲಾ ತುಳಿದು ಸುಲಿಯುವ ಘೋರ ಆರ್ಥಿಕ, ರಾಜಕೀಯ ಕ್ರಮದ ಮೇಲೆ ಸ್ಥಿರವಾಗಿ ಬೆಳೆದುಬಂದದ್ದು, ಈ ನಾಡಿನ ಏಕಾಕಾರಿ ಸಂಸ್ಕೃತಿ. ಬೌದ್ಧ ಮತ್ತು ಜೈನ ಧರ್ಮಗಳನ್ನು ಈ ನಾಡಿನಲ್ಲಿ ಬೆಳೆಯಲು ಬಿಡಲಿಲ್ಲ. ಬೌದ್ಧ ಧರ್ಮ ಹೊರ ನಾಡಿನಲ್ಲಿ ನೆಲೆಕಂಡುಕೊಂಡರೆ, ಜೈನಧರ್ಮಕ್ಕೆ ಕೊನೆಗೆ ಎಲ್ಲಿಯೂ ತಾವಿಲ್ಲದೆ ಕಡೆಗೆ ಜಾತಿಯಾಗಿ ಪರಿಣಮಿಸಿ ಹೇಳಿಕೆಯ ಮಟ್ಟದಲ್ಲಿಷ್ಟೇ ಉಳಿದುಕೊಂಡಿತು.

ಈ ಸ್ಥಿರ ಸಮುದಾಯ ಮತ್ತು ಕ್ಷತ್ರಿಯ ಸಮುದಾಯಗಳ ನಡುವೆ ನಡೆಯುವ ಮುಖಾಮುಖಿಗಳು, ಜನಸಮುದಾಯ ಸಂಘರ್ಷವಾಗಿರಬಹುದು. ಶಿಷ್ಟ ಪರಿಶಿಷ್ಟ ಸಂಘರ್ಷವಾಗಿರಬಹುದು. ಇಲ್ಲವೇ ಜಾತಿಯ ಅಧಿಕಾರ ಸಂಘರ್ಷವಿರಬಹುದು. ಈ ಸಂಘರ್ಷಗಳ ನಡುವೆ ಯಾವಾಗಲೂ ಸ್ಥಿರ ಸಮುದಾಯಗಳು ಕ್ಷತ್ರಿಯ ಸಮುದಾಯಗಳನ್ನು ತಮ್ಮ ಅಂತರಂಗಕ್ಕೆ ವಿಶ್ವಾಸಕ್ಕೆ ತೆಗೆದುಕೊಂಡಿಲ್ಲ. ಸದಾ ಅಪನಂಬಿಕೆ, ಸಂಶಯದಿಂದಲೇ ನಡೆಸಿಕೊಂಡು ಬಂದಿವೆ. ಇದರ ಜೊತೆ ಒಡನಾಟದ ನಿಯಂತ್ರಣವನ್ನು ಹೇರಿಕೊಂಡಿವೆ. ನೈಸರ್ಗಿಕ ತೊಂದರೆಗಳು ಸ್ಥಿರ ಸಮುದಾಯಗಳ ನಿರ್ಲಕ್ಷ್ಯ ತಿರಸ್ಕಾರ ಪಟ್ಟಭದ್ರ ಹಿತಾಸಕ್ತಿಗಳ ಕಿರುಕುಳಗಳ ನಡುವೆಯೂ ತಮ್ಮ ಸಾಮಾಜಿಕ, ಸಾಂಸ್ಕೃತಿಕ ಬದುಕನ್ನು ಕಾಪಾಡಿಕೊಂಡು ಬಂದಿರುವ ಈ ಸಮುದಾಯಗಳಲ್ಲಿನ ಪ್ರತಿಯೊಂದು ಗುಂಪಿಗೂ ಪೌರಾಣಿಕ ಹಿನ್ನೆಲೆ ಎನ್ನುವುದು ಇದ್ದೇ ಇದೆ. ಆದಿಮ ಪುರಾಣ ಶಿಷ್ಟ ಪುರಾಣಗಳಿವೆ. ಇವು ಆಯಾ ಸಮುದಾಯಗಳ ಪ್ರಾಚೀನತೆಗಳು ಚಲಿಸುತ್ತವೆ. ಇವರ ಕುಲಗೋತ್ರಗಳು ಹತ್ತುಹಲವು ಪುರಾಣ ವ್ಯಕ್ತಿಗಳೊಂದಿಗೆ ತಳುಕು ಹಾಕಿಕೊಂಡಿವೆ. ಕುಲಚಿಹ್ನೆಗಳು, ದೇವತೆಗಳು, ಇವರದೇ ಆಚರಣೆಗೆ, ವಿಧಿನಿಷೇಧಗಳಿವೆ. ಇವರ ಸ್ಥಳಾವರಣ ಭೌಗೋಳೀಕತೆ, ಬ್ರಹ್ಮಾಂಡ, ಎಲ್ಲವೂ ತಾವು ಇರುವ ಸ್ಥಳದಲ್ಲಿಯೇ ದೈವ ಹುಟ್ಟು ಬದುಕು, ಸಾವಿನ ಸೂತಕಕ್ಕೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸಿಕೊಂಡುಬಂದಿವೆ. ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಘಟನೆಗಳ ಕ್ರಿಯಾ ವಿಧಿಗಳನ್ನು ನೆರವೇರಿಸುತ್ತಲೇ ಇದೆ. ವಂಶಾವಳಿಯ ಬೆಡಗುಗಳು ಬಳಿಗಳು ಗೋತ್ರಗಳನ್ನು ಅನುಸರಿಸುತ್ತಲೇ ಬಂದಿವೆ. ಸ್ಥಿರ ಸಮುದಾಯಗಳಲ್ಲಿರುವಂತೆ, ಕ್ಷತ್ರಿಯ ಸಮುದಾಯಗಳಲ್ಲಿ ಕೌಟುಂಬಿಕ ಬೆಡಗುಗಳನ್ನು ಗುರುತಿಸಬಹುದು. ಕೊಡುಕೊಳ್ಳುವಿಕೆಯ ವಿಚಾರದಲ್ಲಿ ಈ ಬೆಡಗುಗಳು ಇಲ್ಲವೆ ಬಳಿಗಳು ಗಮನಾರ್ಹ ಪಾತ್ರವಹಿಸುತ್ತವೆ. ಕ್ಷತ್ರಿಯ ಸಮುದಾಯಗಳಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಮತ್ತು ಅವಿಭಕ್ತ ಕುಟುಂಬ ಪದ್ಧತಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಸಹ ಕಾಣಬಹುದು.

ಒಟ್ಟು ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಧಾನ ನೆಲೆಯ ತಿರಸ್ಕಾರಕ್ಕೆ ಕಾರಣವಾಗಿದ್ದ, ಈ ಸಮುದಾಯಗಳ ಅಧ್ಯಯನ ಎಂಬುದು ಅಕ್ಷರ ಪರಂಪರೆಗೆ ದಾಖಲು ಮಾಡುವುದರ ಮುಖಾಂತರ ಸಾಮಾಜಿಕ ನ್ಯಾಯವನ್ನು ಒದಗಿಸಿಕೊಡುವಂತಹುದಾಗಿದೆ. ಸಾಂಸ್ಕೃತಿಕ ವಿನಾಶದ ಕಡೆಗೆ ಸಾಗುತ್ತಿರುವ ವರ್ತಮಾನ

ಜಗತ್ತು ನಮ್ಮ ನಡುವೆಯಲ್ಲಿಯೇ ಸಾಂಸ್ಕೃತಿಕ ಗುರುತನ್ನು ಉಳಿಸಿಕೊಂಡು ಬಂದಿರುವ ಕ್ಷತ್ರಿಯ ಸಮುದಾಯಗಳ ವೈವಿಧ್ಯಮಯ ಹಾಗೂ ವೈಶಿಷ್ಟ್ಯಪೂರ್ಣ ಸಾಂಸ್ಕೃತಿಕ ವಿವರಗಳನ್ನು ದಾಖಲಿಸುವುದು ಮತ್ತು ಅಧ್ಯಯನ ಮಾಡುವುದರ ಮೂಕಾಂತರ ಕ್ಷತ್ರಿಯ ಸಮುದಾಯಗಳ ಕೊಂಡಿಗಳನ್ನು ಉಳಿಸಿಕೊಳ್ಳುವುದು, ಅವರ ಸಾಮಾಜಿಕ ಬದುಕು ಸಹ್ಯವಾಗುವಂತೆ ನೋಡಿಕೊಳ್ಳಬೇಕಾದಾದುದು ಇವತ್ತಿನ ಅಧ್ಯಯನಕಾರರ ಮತ್ತು ಸಮಾಜದ ಜವಾಬ್ದಾರಿಯಾಗಿದೆ. ಯಾವ ಬದುಕನ್ನೂ ದಾಖಲು ಮಾಡಲು ನಿರಾಕರಿಸಿದ್ದರೂ ಆ ಬದುಕಿನ ಒಳಗಿನಿಂದಲೇ ಸಾಮಗ್ರಿ–ವಿಚಾರ ಎರಡನ್ನು ಎತ್ತಿಕೊಂಡು ಹೊಸದಾಗಿ ಚರಿತ್ರೆಯನ್ನು ಕಟ್ಟುವ ಅಗತ್ಯವಿದೆ. ಹಾಗೆಯೇ ಬಹುಮುಖ ಸಂಸ್ಕೃತಿಯನ್ನು ಕಟ್ಟುವ ಮೂಲಕ ಭಾರತೀಯ ಸಂಸ್ಕೃತಿಗೆ ಇಂತಹ ನಿರ್ಲಕ್ಷಿತರು ಇತಿಹಾಸದುದ್ದಕ್ಕೂ ನೀಡಿರುವ ಕೊಡುಗೆಯ ಗಟ್ಟಿತನ ಏನೆಂಬುವುದನ್ನು ಪರಿಚಯಿಸಬೇಕಾಗಿದೆ. ಈ ನಿಟ್ಟಿನಲ್ಲಿ ಕ್ಷತ್ರಿಯ ಸಮುದಾಯಗಳ ಅಧ್ಯಯನವನ್ನು ಮಾಡಲಾಗಿದೆ. ಕೇವಲ ಲಿಖಿತ ದಾಖಲೆಗಳಾಗಿ ಉಳಿಯದೆ ಕ್ಷತ್ರಿಯ ಸಮುದಾಯಗಳ ದೇಶೀ ಜ್ಞಾನ ಪರಂಪರೆ ಎಲ್ಲವನ್ನು ನಾವು ನಮ್ಮದನ್ನಾಗಿಸಿಕೊಂಡು ನಮ್ಮ ಅಧ್ಯಯನದ ಕ್ರಮಗಳನ್ನು ಬದಲಾಯಿಸಿಕೊಂಡು ನಮ್ಮೆಲ್ಲರ ವಿಸ್ಮೃತಿಯನ್ನು ಮತ್ತು ಸಾಂಸ್ಕೃತಿಕವಾದ ಹಿಂಜರಿಕೆಗಳನ್ನು ನಾವು ಇವತ್ತು ಮೀರಬೇಕಾಗಿದೆ.

ನಮ್ಮ ಸಂವಿಧಾನ ದೇಶದ ಪ್ರತಿಯೊಬ್ಬ ಪ್ರಜೆಗೂ ಸಮಾನ ಅವಕಾಶಗಳನ್ನು ನೀಡಿದೆ. ಅಲ್ಲದೆ ಸ್ವಾಭಿಮಾನ ಮತ್ತು ಗೌರವದಿಂದ ಬಾಳುವ ಅವಕಾಶವನ್ನು ಕಲ್ಪಿಸಿದೆ. ಜಾತ್ಯಾತೀತ ರಾಷ್ಟ್ರ ಎಂಬ ಘೋಷ ವಾಕ್ಯವನ್ನು ಸಂವಿಧಾನದಲ್ಲೂ ಅಳವಡಿಸಲಾಗಿದೆ. ಹೀಗಿದ್ದೂ, ನಿರ್ಲಕ್ಷ್ಯಕ್ಕೆ ಒಳಗಾಗಿ, ಸಂವಿಧಾನ ಅಸ್ತಿತ್ವಕ್ಕೆ ಬರುವ ಮೊದಲಿನಿಂದಲೂ ಅಸ್ಪೃಶ್ಯರೆನಿಸಿಕೊಂಡು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅವಕಾಶಗಳಿಂದ ವಂಚಿತರಾದ ಪರಿಶಿಷ್ಟ ಜಾತಿಯ ಜನರಿಗೆ ಸಮಾಜದ ಎಲ್ಲ ಸ್ತರಗಳಲ್ಲಿ ಮುಕ್ತ ಅವಕಾಶ ಕಲ್ಪಿಸುವುದಕ್ಕಾಗಿ ಜಾತಿ ಆಧಾರಿತ ಮೀಸಲಾತಿಯನ್ನು ಒದಗಿಸುವುದೂ ಅನಿವಾರ್ಯವಾದದ್ದು ಈಗ ಇತಿಹಾಸ. ಈ ಹಿನ್ನೆಲೆಯಲ್ಲಿ ಭಾರತದ ಕುರಿತ ಬ್ರಿಟೀಷ್ ವಸಾಹತುಶಾಹಿಗಳು ನೀಡಿರುವ ಜಾತಿವ್ಯವಸ್ಥೆಯ ವಿವರಣೆಗಳು ಸಾಂಪ್ರದಾಯಿಕವಾದವುಗಳಾಗಿವೆ. ಇವರು ಮಧ್ಯಕಾಲಿನ ಯೂರೋಪಿನಲ್ಲಿ ಅಸ್ಥಿತ್ವದಲ್ಲಿದ್ದ ಸಂಸ್ಕೃತಿ, ಧರ್ಮ, ಸಾಮಾಜಿಕ ವ್ಯವಸ್ಥೆಗಳನ್ನು ಆಧಾರವಾಗಿಟ್ಟುಕೊಂಡು ಭಾರತೀಯ ಸಮಾಜವನ್ನು ವಿಶ್ಲೇಷಿಸಿದ್ದಾರೆ. ನಂತರ ಈ ಚೌಕಟ್ಟಿನಡಿಯಲ್ಲೇ ಭಾರತೀಯ ಚಿಂತಕರೂ ಸಹ ಸಾಮಾಜಿಕ ವ್ಯವಸ್ಥೆಯನ್ನು ಮೌಲ್ಯಮಾಪನ ಮಾಡಿದ್ದಾರೆ. ಅಂತಯೇ ವಸಾಹತುಶಾಹಿ ಸಂದರ್ಭದಲ್ಲಿ ನೀಡಿರುವ ವಿವರಣೆಗಳನ್ನು ಅಂದರೆ ಎಲ್ಲಾ ಜಾತಿಗಳು ಯಾವುದಾದರೊಂದು ವರ್ಗದಲ್ಲಿ ಸೇರುತ್ತವೆ. ಪ್ರತಿಯೊಂದು ಜಾತಿಯು ತಮ್ಮನ್ನು ಒಂದೊಂದು ವರ್ಣದೊಳಗೆ ಗುರುತಿಸಿಕೊಂಡಿದೆ, ಮತ್ತು ಬ್ರಾಹ್ಮಣರು ಉಳಿದೆಲ್ಲಾ ಜಾತಿಗಳಿಗಿಂತ ಶ್ರೇಷ್ಠರು ಎಂಬಿತ್ಯಾದಿ ಗ್ರಹಿಕೆಗಳನ್ನು ಎಲ್ಲರೂ ಒಪ್ಪಿದ್ದಾರೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಕ್ಷತ್ರಿಯ ಸಮುದಾಯವನ್ನು ಸಾಂಪ್ರದಾಯಿಕ ಜಾತಿವ್ಯವಸ್ಥೆಯ ಚೌಕಟ್ಟಿನಲ್ಲಿ ಗ್ರಹಿಸಿದರೆ ಆ ಕೆಲವೊಂದು ಅಂಶಗಳು ಕಡ್ಡಾಯವಾಗಿ ಇರಲೇಬೇಕಾಗಿದ್ದು ಅವುಗಳನ್ನು ಈ ಕೆಳಗಿನಂತೆ ಗ್ರಹಿಸಬಹುದು.

೧. ಭಾರತದಲ್ಲಿ ಹಿಂದೂ ಧರ್ಮವು ಅಸ್ಥಿತ್ವದಲ್ಲಿದ್ದು, ಭಾರತದ ಎಲ್ಲಾ ಜಾತಿಗಳು ಅದರ ಭಾಗ ಎಂದಾದರೆ, ಕ್ಷತ್ರಿಯ ಸಮುದಾಯವರಿಗೆ ಹಿಂದೂಧರ್ಮ ಅಸ್ಥಿತ್ವದ ಕುರಿತಂತೆ ಮಾಹಿತಿ ಇರಬೇಕು.

೨. ಜಾತಿವ್ಯವಸ್ಥೆಗೆ ವೇದಗಳು, ಮಹಾಕಾವ್ಯಗಳು, ಇವೆ ಮುಂತಾದ ಗ್ರಂಥಗಳು ಆಧಾರವಾಗಿದ್ದದಾರೆ ಆ ವ್ಯವಸ್ಥೆಯ ಭಾಗವಾಗಿರುವ ಕ್ಷತ್ರಿಯರಿಗೆ ಅವುಗಳ ಕುರಿತಂತೆ ಮಾಹಿತಿ ಇರಬೇಕು.

೩. ಭಾರತ ಸಮಾಜದಲ್ಲಿನ ಜಾತಿಗಳ ನಡುವಣ ಕೊಡು–ಕೊರ್ಳಳುವಿಕೆಯನ್ನು ಜಾತಿಪದ್ಧತಿ ನಿಯಂತ್ರಿಸುತ್ತದೆ ಎಂದಾದರೆ, ಕ್ಷತ್ರಿಯರಗೆ ಜಾತಿಪದ್ದತಿ ಕುರಿತಂತೆ ಮಾಹಿತಿ ಇರಬೇಕು.

೪. ಸಮಾಜದಲ್ಲಿ ದೈನಂದಿನ ಜೀವನ ನಡೆಸುತ್ತಿರುವ ಜಾತಿಗಳ ನಡುವಿನ ಶ್ರೇಣೀಕರಣವನ್ನು ವರ್ಣವ್ಯವಸ್ಥೆ ನಿಯಂತ್ರಿಸುತ್ತದೆ ಎಂದಾದರೆ, ವರ್ಣಪದ್ಧತಿಯ ಕುರಿತಂತೆ ಕ್ಷತ್ರಿಯ ಸಮುದಾಯವರಿಗೆ ಮಾಹಿತಿ ಇರಬೇಕಾಗುತ್ತದೆ.

ಈ ಮೇಲಿನ ಅಂಶಗಳನ್ನು ನೋಡಿದಾಗ ಭಾರತದಲ್ಲಿರುವ ಜಾತಿ ವ್ಯವಸ್ಥೆಯನ್ನು ದೇಶವೇ ಜಾತಿಯ ಬುನಾದಿಯ ಮೇಲೆ ಆಧಾರ ಪಟ್ಟಿರುವಂತೆ ಕಾಣಿಸುತ್ತದೆ.

ಸಮುದಾಯಗಳು ಎಂದು ಗುರುತಿಸುವಲ್ಲಿ ಅವುಗಳಿಗೆ ವಿಶಿಷ್ಟವಾದ ಲಕ್ಷಣಗಳಿರುತ್ತವೆ. ಅವು ನಿರ್ದಿಷ್ಟ ಕಾರಣಕ್ಕಾಗಿ ಒಂದು ಗುಂಪಿಗೆ ಸೇರುತ್ತವೆ. ನಿರ್ದಿಷ್ಟ ಉದ್ದೇಶದ ಕಾರಣಕ್ಕೆ ಒಂದೆಂದು ಗುರುತಿಸಲಾಗುವ ಅಂದರೆ, ವೃತ್ತಿ, ನಂಬಿಕೆ, ಜಾತಿ, ಭಕ್ತಿ, ಜೀವನ ವಿಧಾನ, ಆರ್ಥಿಕ ಸ್ಥಿತಿಗತಿ, ಇತ್ಯಾದಿಗಳ ಕಾರಣಕ್ಕೆ ಜನರನ್ನು ಒಂದು ಸಮುದಾಯ ಎಂದು ಗುರುತಿಸಿಕೊಳ್ಳಬಹುದು. ಹೀಗೆ ಗುರುತಿಸಲಾಗದ ಸಮುದಾಯಗಳು ತಾವು ನೆಲನಿಂತ ಪ್ರದೇಶದ ಇತರೆ ಸಮುದಾಯಗಳಿಗಿಂತ ಬೇರೆಯೇ ಉಳಿದುಬದುಕುತ್ತಿರುತ್ತವೆ. ಹಾಗಾಗಿ ಸಮಾಜದ ಒಳಗೆ ವಿಭಿನ್ನ ಸಮುದಾಯಗಳು ಸೃಷ್ಟಿಯಾಗಿ ಸಾಂಸ್ಕೃತಿಕ ವೈವಿಧ್ಯಗಳಿಗೆ ಕಾರಣವಾಗುತ್ತದೆ. ಜೊತೆಗೆ ಸಮುದಾಯಗಳು ತಮ್ಮ ಅಸ್ತಿತ್ವವನ್ನು ಗಟ್ಟಿಕೊಳಿಸುವ ಲಕ್ಷಣಗಳನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಿರುತ್ತವೆ. ಆಗೆಲ್ಲ ಸಮುದಾಯಗಳಿಗೆ ಪರಂಪರಾಗತವಾಗಿ ರೂಢಿಸಿಕೊಂಡು ಬಂದ ಸಂಪ್ರದಾಯಗಳು ಒಂದಲ್ಲ ಒಂದು ವಿಧದಲ್ಲಿ ಬಿಟ್ಟಿರಲಾಗದ ಅನನ್ಯ ಸಂಗತಿಗಳಾಗುತ್ತವೆ. ಅವು ಇತರೆ ಸಮುದಾಯಗಳಿಗಿಲ್ಲದ ತಮ್ಮ ಸಮುದಾಯದ ಸಂಪತ್ತು ಎಂಬ ಕಾರಣಕ್ಕೆ ಅವುಗಳ ಬಗೆಗಿನ ಪ್ರತಿ ತಲೆಮಾರಿನಿಂದ ತಲೆಮಾರಿಗೆ ನಿರಂತರವಾಗಿ ಮುಂದುವರಿಯುತ್ತಿರುತ್ತದೆ. ಸಮುದಾಯಗಳು ಸೃಷ್ಟಿಸಿದ ಪರಂಪರಾಗತ ವಿಚಾರಗಳ ಪ್ರೀತಿಯ ಕಾರಣಕ್ಕೆ ಉಳಿಸಿಕೊಂಡು ಬಂದ ಸಂಗತಿಗಳೇ ಆಯಾ ಸಮುದಾಯದ ಸಂಸ್ಕೃತಿ ಎನಿಸುತ್ತದೆ. ಸಂಸ್ಕೃತಿಯು ಅನಾವರಣಗೊಳ್ಳುವುದೆಂದರೆ, ಸಮುದಾಯಗಳು ನಿರ್ದಿಷ್ಟ ಸೈದ್ಧಾಂತಿಕ ನಂಬಿಕೆ ಅಥವಾ ತಿಳುವಳಿಕೆಯ ಆವರಣದಲ್ಲಿ ಬದುಕುವುದೇ ಆಗಿದೆ. ಇಂತಹ ಆವರಣಗಳು ಕಾಳದ ಅಗತ್ಯಕ್ಕೆ ಅನುಗುಣವಾಗಿ ವಿನೂತನವಾಗಿ ವಿಸ್ತಾರಗೊಳ್ಳುತ್ತಿರುತ್ತವೆ. ನಂಬಿಕೆಯ ಆವರಣಗಳು ಸಮುದಾಯದ ಬದುಕಿನ ವಿಭಿನ್ನ ಸಂದರ್ಭಗಳಲ್ಲಿ ಅರ್ಥವತ್ತಾಗುತ್ತವೆ, ಮತ್ತೆ ಹೊಸ ಅರ್ಥವನ್ನು ಪಡೆಯುತ್ತಲೂ ಮುಂದುವರಿಯುತ್ತವೆ. ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ

ಸರ್/ಅಡ್ಡ ಹೆಸರುಗಳಿವೆ. ಬಿಳಗೀಕರ್, ಬುಜಕೂಕರ್, ಚೆಂಡೂಕರ್, ಗೋವಿಂದ್‌ಕರ್, ಪರ್‌ಬುಕರ್, ಮತ್ತು ರಾಜಪುರೆ, ಸೂರ್ಯವಂಶಿ ಲಾಡರು ಮುಖ್ಯವಾಗಿ ಬಿಜಾಪುರ, ಧಾರವಾಡ, ಹುಬ್ಬಳ್ಳಿ, ಬೆಳಗಾವಿ, ಮತ್ತು ಬಳ್ಳಾರಿ, ಗದಗ, ಹಾವೇರಿ, ಮುಂತಾದ ಕಡೆ ನೆಲೆಸಿದ್ದಾರೆ. ಇವರ ಮುಖ್ಯ ಕಸುಬು ಕುರಿ, ಮೇಕೆಗಳು ಕತ್ತರಿಸಿ ಅವುಗಳ ಮಾಂಸ ಮಾರಾಟ ಮಾಡುವ ಕಟುಕ ವೃತ್ತಿಯಲ್ಲಿದ್ದಾರೆ. ಪರಬುಕರ್, ಕಲೋಲ್ ಮುಂತಾದವರು ಮದ್ಯಪಾನ ಮಾರಾಟ ಹಾಗೂ ಜಮೀನ್ದಾರಿ ವೃತ್ತಿಯಲ್ಲೂ ತೊಡಗಿದ್ದಾರೆ*(ಜಯಪ್ರಕಾಶ್ ಎನ್ ಡಿ ಲಾಡ್, ಲಾಡ ಜನಾಂಗದನೆಲೆ ಹಾಗೂ ಸಂಸ್ಕೃತಿ, ಪುಟ-೯೮, ೨೦೦೯).*

ಸೂರ್ಯವಂಶದ ರಾಜರಲ್ಲಿ ಪ್ರಮುಖರೆಂದರೆ, ಭೋಸಲೆ, ಸುರ್ವೆ, ಕಾಳಮುಖ, ಕ್ಷೀರಸಾಗರ, ಕದಮ, ಸುಧನ್ವ, ನಿಕ್ಕಮ, ಹಂಸಧ್ವಜ, ಧೀಟಕ, ಹಂಸಕೇತು, ಶೇಲಾರ, ಪ್ರೋಕ್ತಟ, ಮುಂತಾದವರು. ಇವರಲ್ಲಿ "ಭೋಸಲೆ" ಎಂಬ ಉಪನಾಮದವ ಚಿತೋರ್ ರಾಣಾ ವಂಶಸ್ಥರಲ್ಲಿ ಮುಧೋಳದ ಜಹಗೀರಿ ಪಡೆದಿದ್ದ (ಕ್ರಿ.ಶ.೧೪೬೮) ಬಹಿರೋಜಿಗೆ, ಬಹೀರ್‌ಜೀ ಅಥವಾ ಭೋಸಾಜಿಯಿಂದ ಈ ವಂಶಕ್ಕೆ ಭೋಸಲೆ ಎಂಬ ಉಪನಾಮ ಪ್ರಾಪ್ತವಾಗಿರಬೇಕು ಎಂದು ಹಲವು ಇತಿಹಾಸಕರರ ಅಭಿಮತವಾಗಿದೆ. ಇವರಲ್ಲಿ ಘೋರ್ಪಡೆ ಮನೆತನದವರಿಗೆ 'ಘೋರ್‌ಪಡ' ಎಂದರೆ 'ಉಡದ' ಸಹಾಯದಿಂದ ಖೇಳಸಾ ಕೋಟೆಯನ್ನು ಗೆದ್ದುದರಿಂದ ರಾಜ ಘೋರ್ಪಡೆ ಬಹಾದ್ದೂರ ಎಂಬ ಗೌರವ ಯುತ ಪದವಿಯ ಪರಿಣಾಮವಾಗಿ ಭೋಸಲೆಯವರ ಈ ಒಂದು ಶಾಖೆ ಘೋರ್ಪಡೆಯಾಯಿತು *(ಜಯಪ್ರಕಾಶ್ ಎನ್ ಡಿ ಲಾಡ್, ಲಾಡ ಜನಾಂಗದನೆಲೆ ಹಾಗೂ ಸಂಸ್ಕೃತಿ, ಪುಟ-೯೮, ೨೦೦೯).*

ಸೂರ್ಯವಂಶದವರಲ್ಲಿ ಅನೇಕ ಕುಳಿಗಳಿವೆ, ಅವುಗಳಲ್ಲಿ ಪ್ರಮುಖವಾದವರು ಭೋಸಲೆ, ಘೋರ್ಪಡೆಯಲ್ಲಿದೆ. ನಕಾಸೆ, ನಾಯಿಕ ರಾವುತ, ರಾವುಳ, ಗೋರೆ, ಕ್ಷೀರಸಾಗರ, ಲೋಖಂಡೆ, ಗಾಯಕವಾಡ, ಖಡಹೆ, ಕದಮ, ಪಾಟಕ, ರಾಣಿ, ಡೋಂಗರೆ, ನಿಕ್ಕಮ, ಘೋಡಕೆ, ಘಾಟಿಗೆ, ಮಡೀಕರ, ಮಧುಕರ, ಶಿಸೋದೆ, ಕಾಲೇಕರಪತ್ರೆ, ಢೋಲೆ, ಹಾಗೂ ಪ್ರತಿಹಾರ ಇತ್ಯಾದಿ*(ಜಯಪ್ರಕಾಶ್ ಎನ್ ಡಿ ಲಾಡ್, ಲಾಡ ಜನಾಂಗದನೆಲೆ ಹಾಗೂ ಸಂಸ್ಕೃತಿ, ಪುಟ-೯೮, ೨೦೦೯).* ಸೂರ್ಯವಂಶೀಯರು ಸೂರ್ಯ ಗಾಯತ್ರಿ ವೇದ ಮಂತ್ರಗಳಿಂದ ವಿಷ್ಣು, ಸರ್ಯಾದಿ ಉಪಾಸನ ಮಾಡಬೇಕು. ಸೂರ್ಯವಂಶಿಗಳಲ್ಲಿ ಹನ್ನೆರಡು ಕುಲದೇವತೆಗಳು – ಪ್ರಭಾವತಿ, ಕಾಳಿಕಾ, ದುರ್ಗಾ, ಯೋಗೇಶ್ವರಿ, ಮಹಾಲಕ್ಷ್ಮೀ, ಇಂದ್ರಾಣಿ, ಚಂಡಿಕಾ, ತ್ವರಿತಾ, ಕಾಮಾಕ್ಷಿ, ಏಕವೀರಾ, ಅಂಬಿಕಾ ಹಾಗೂ ಮಹೇಶ್ವರಿ, ಆದರೆ ಕರ್ನಾಟಕದಲ್ಲಿ ಇವರು ತಮ್ಮ ಸ್ಥಳೀಯ ದೇವ-ದೇವತೆಗಳನ್ನು ತಮ್ಮ ಮನೆತನದ ದೇವರುಗಳನ್ನಾಗಿ ಪೂಜಿಸುತ್ತಾರೆ. ಅವುಗಳಲ್ಲಿ ದುರ್ಗವ್ವ, ದ್ಯಾಮವ್ವ, ಹುಲಗವ್ವ, ಮಾರುತಿ, ಸಿದ್ರಾಮ, ಯಲ್ಲವ್ವ, ಮುಂತಾದವು ಸೂರ್ಯ ಇವರೆಲ್ಲರ ವಂಶವಾಹಿನಿಯ ಅವಾಹಕ ಹಾಗಾಗಿ ಸೂರ್ಯೋದಿಪಾಸನೆ ಇವರ ಅತಿಮುಖ್ಯ ಧ್ಯಾನ ಪೂಜೆ ಹಾಗೂ ಮುಕ್ತಿ ಎನಿಸಿದೆ. ತುಳಸಿಗಿರಿಯಲ್ಲಿನ ಮಾರುತಿ ಗುಡಿ. ಪರಸಗಡದ ಯಲ್ಲವ್ವ ತಾಯಿ ಹಾಗೂ ಬಿಜಾಪುರದ ಸಿದ್ರಾಯ ಸ್ವಾಮಿ ಸೇವೆಗೆ ಇವರು ತಪ್ಪದೆ ಯಾತ್ರೆ ನಡೆಸುತ್ತಾರೆ.

ತಾವೆಲ್ಲ ಸೂರ್ಯವಂಶಕ್ಕೆ ಸೇರಿದವರೆಂದು ಅವರು ಅತ್ಯಂತ ಅಭಿಮಾನದಿಂದ ಹೇಳಿಕೊಳ್ಳುತ್ತಾರೆ. ಸೂರ್ಯವಂಶಿ ಲಾಡರ ಮತ್ತೊಂದು ವಿಶೇಷ ಪದ್ಧತಿಯೆಂದರೆ, ಇವರೆಲ್ಲ ಧಾರವಾಡ ಜಿಲ್ಲೆಯ ನವಲಗುಂದದಲ್ಲಿನ ಮುಸ್ಲಿಂ ಸಂತನೊಬ್ಬನಾದ ದರಗಾ ಪವಲ್‌ಮಲ್ಲಿಕಾ ಸಮಾಧಿಗೆ ಪೂಜಿಸಲು ಹೋಗುತ್ತಾರೆ. ಹಿಂದೂಗಳ ಎಲ್ಲ ಹಬ್ಬ ಆಚರಣೆಗಳನ್ನು ಅವರು ಪಾಲಿಸುತ್ತಾರೆ. ವಿವಾಹ ಕಾರ್ಯಕ್ಕೆ ವಿವಾಹ ಕಾಯಕ್ಕೆ ಬ್ರಾಹ್ಮಣ ಪುರೋಹಿತರನ್ನು ನೇಮಕ ಮಾಡಿಕೊಳ್ಳುತ್ತಾರೆ.

**೩.೨. ಲಾಡ್/ಕ್ಷತ್ರಿಯಲಾಡ್/ಸುಗಂಧಿಲಾಡ್:** ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಗಳಲ್ಲಿ ಪ್ರವರ್ಗ-೧ ಕ್ರಮಸಂಖ್ಯೆ ೩೪ರ ಪ್ರಕಾರ (ಎ) ಲಾಡರು/ಲಾಡರ/ಲಾಡರ್, (ಬಿ), ಲಾಡ್/ಕ್ಷತ್ರಿಯಲಾಡ್/ಸುಗಂಧಿಲಾಡ್, (ಸಿ), ಎಲೆಗಾರ್‌ಎಂಬುದಾಗಿ ಗುರುತಿಸಲಾಗಿದೆ*(ಭಾಗ-೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨. ಪುಟ-೧೦೦೭).* "ಲಾಟ ರಾಜ್ಯವು ಕ್ಷತ್ರಿಯರಿಂದ ಆಳಲ್ಪಡುತ್ತಿತ್ತು. ಲಾಟದ ದೊರೆ ಸೋಮವಂಶದ ಕ್ಷತ್ರಿಯ ರಾಜ. ಅವನ ತಕ್ಕಗಾದಿ ಕಾಠೇವಾಡ. ಕಚ್ಛ ಸಿಂಧ ಈ ಪ್ರದೇಶಗಳು ಲಾಟದ ಭಾಗಗಳಾಗಿದ್ದವು. ರಾಜರು ಬಹು ಪರಾಕ್ರಮಿಗಳಾಗಿದ್ದರು. ಕ್ಷಾತ್ರ ಧರ್ಮ ಪಾಲಿಸುತ್ತಿದ್ದರು, ದೊರೆಯ ನಿಶಾನೆ ಬಿಳಿ ನಿಶಾನೆಯಾಗಿತ್ತು. ಬಿಳಿ ಛತ್ರ, ಚಾಮರಗಳನ್ನು ಹೊಂದಿರುತ್ತಿದ್ದನು. ಅವನು ಸದಾ ಬಿಳಿ ಕುದುರೆಯನ್ನೇರಿ ಪ್ರಯಾಣಿಸುತ್ತಿದ್ದನು. ಅವನ ಗುರುಗೋತ್ರ ವಶಿಷ್ಠ, ತ್ರಿಪುರ ಯಜುರ್ವೇದ ಮಧ್ಯಾನ್ದಿನಿಶಾಖೆ ಪಾರಸ್ಕ ಸೂತ್ರ, ಲಾಟ ಸಾಮ್ರಾಜ್ಯದ ಕುಲದೈವ ಭವಾನಿ ಮಾತೆ, ಅಗೋಚರ ಮುದ್ರಾ ಮತ್ತು ಯಾವಾಗಲೂ ವಿಜಯ ಶಾಸ್ತ್ರಕ್ಕೆ ತಲವಾರ, ಲಗ್ನ ಕಾರ್ಯಕ್ಕೆ ದೇವಕ ವಸುಂಧಿಬಳ್ಳಿ ಸೋಮವಂಶ ಕ್ಷತ್ರಿಯ ರಾಜನದು ಲಾಡ-ಕುಳಿ-ಲಾಡ ಎನ್ನುವುದು ಒಂದೇ ಕುಳಿ. ಇವರು ಲಾಟ ದೇಶದಲ್ಲಿದ್ದದ್ದರಿಂದ ಇವರ ಕುಳಿ 'ಲಾಟ' ಎಂದೇ ಪ್ರಸಿದ್ಧಿಯಾಗಿದೆ. ನಂದಿಪುರ ಲಾಟರ ರಾಜಧಾನಿಯಾಗಿತ್ತು" *(ಜಯಪ್ರಕಾಶ್‌ಎನ್ ಡಿ ಲಾಡ್, ಲಾಡ ಜನಾಂಗದನೆಲೆ ಹಾಗೂ ಸಂಸ್ಕೃತಿ, ಪುಟ-೧೪, ೨೦೦೯).*

ಕ್ಷತ್ರಿಯರು ಸಾಮಾನ್ಯವಾಗಿ ಮಾಂಸಾಹಾರಿಗಳಾಗಿದ್ದುದರಿಂದ ಬ್ರಾಹ್ಮಣ ಮತ್ತು ಕ್ಷತ್ರಿಯರ ನಡುವೆ ಅಂತರ ಭೋಜನ ಅಸಂಭವವಾಗಿದ್ದಿತ್ತು. ಕ್ಷತ್ರಿಯರ ಸ್ಥಾನಮಾನ ರಾಜಕೀಯ ಶಕ್ತಿ ಮತ್ತು ಅಧಿಕಾರವನ್ನು ಅವಲಂಬಿಸಿತ್ತು. ಸೈನಿಕವರ್ಗ ಇದರಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಿತ್ತು. ಕ್ಷತ್ರಿಯರು ಪುರೋಹಿತ ವರ್ಗದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿರುತ್ತಿದ್ದರು. ಏಕೆಂದರೆ, ಪುರೋಹಿತರು ಕ್ಷತ್ರಿಯರ ಅಧಿಕಾರವನ್ನು ಶಾಸನಬದ್ಧಗೊಳಿಸುತ್ತಿದ್ದರು. ಕ್ಷತ್ರಿಯ ಸ್ಥಾನಮಾನವನ್ನು ಪಡೆಯಲು ಶಾಸನಬದ್ಧಗೊಳ್ಳುವುದು, ಅವಶ್ಯಕವಾಗಿತ್ತು. ಹುಟ್ಟಿನಿಂದ ಕ್ಷತ್ರಿಯರಾಗಿಲ್ಲದ ಉನ್ನತ ವ್ಯಕ್ತಿಗಳನ್ನು ಅವರ ಪರಾಕ್ರಮ ಮತ್ತು ದಕ್ಷತೆಗಳನ್ನೇ ಆಧಾರವನ್ನಾಗಿಟ್ಟುಕೊಂಡು ಕ್ಷತ್ರಿಯವರ್ಗಕ್ಕೆ ಸೇರಿಸಲಾಗುತ್ತಿತ್ತು. ಕ್ಷತ್ರಿಯರು ತಮ್ಮನ್ನು ಪೌರಾಣೀಕ ಮೂಲಗಳಿಂದ ಗುರುತಿಸಿಕೊಳ್ಳಲು ತಾವು ಸೂರ್ಯವಂಶ ಮತ್ತು ಚಂದ್ರವಂಶಗಳಿಗೆ ಸೇರಿದವರೆಂದು ಹೇಳಿಕೊಳ್ಳುತ್ತಿದ್ದರು.

ಲಾಟರಲ್ಲಿ ಉಡುಪು ವಿಶೇಷವಾಗಿತ್ತು. ಉದ್ದವಾದ ನಿಲುವಂಗಿ, ಕಚ್ಚೆ ಪಂಚೆ, ತಲೆಗೆ ಪೇಟ ವಿಶಿಷ್ಟವೆನಿಸಿತ್ತು. ಕಚ್ಛ, ಕಾಠೇವಾಡದಿಂದ ಸೂರತವರಗೆ ತಲೆಯ ರುಮಾಲಿನ ವಿನ್ಯಾಸ ಕೆಲವೆಡೆ ಬದಲಾಗುತ್ತಿತ್ತು. ಪುರುಷರು ತಲೆಗೆ ಧರಿಸುತ್ತಿದ್ದ ಮುಂಡಾಸು ವಿವಿಧ ರೀತಿಯ ನೆರಿಗೆಗಳಿಂದ ಕೂಡಿ ಆಕರ್ಷಣೀಯವಾಗಿದ್ದಿತು. ಇತ್ತೀಚಿನವರೆಗೂ ವಿವಾಹ ಉತ್ಸವ ಸಂದರ್ಭಗಳಲ್ಲಿ ಈ ರೀತಿಯ ಮುಂಡಾಸು ಧರಿಸುವುದು ಪದ್ಧತಿಯಾಗಿತ್ತು. ಕಚ್ಚೆಹಾಕಿ ಧೋತ್ರವನ್ನು ಕಾಲು ಮಂಡಿಯವರೆಗೆ ಅಥವಾ ಪಾದದವರೆಗೆ ಬರುವಂತೆ ಬಿಡಲಾಗುತ್ತಿತ್ತು. 'ಕೂದಲನ್ನು ಬಾಚಿ ನೆತ್ತಿಯ ಮೇಲೆ ಗಂಟು ಬರುವಂತೆ ಮಾಡಿ ಅದನ್ನು ಸಣ್ಣ ಮಣಿಸರದಿಂದ ಕಟ್ಟಲಾಗುತ್ತಿತ್ತು. ಕಿವಿಗೆ ಹತ್ತಕಡಕ ಧರಿಸುವುದು ಸಾಮಾನ್ಯವಾಗಿತ್ತು. ಇಂದಿಗೂ ಲಾಡ ಸೌಧಾಗರ ಕ್ಷತ್ರಿಯರಲ್ಲಿನ ವಿವಾಹಗಳಲ್ಲಿ ಈ ರೀತಿ ನಿಲುವಂಗಿ ಪೋಷಾಕು ಹಾಗೂ ಪೇಟಾ ಪ್ರಧಾನ ಉಡುಪೆನಿಸಿದೆ. ಸ್ತ್ರೀಯರಲ್ಲೂ ಸಹ ಉಡುಪು ವಿಶೇಷವೆನಿಸಿತ್ತು. ತಲೆಯ ಮೇಲೆ ಸರಗು ಹೊದ್ದು, ಉಡುತ್ತಿದ್ದ ಕಚ್ಚೆ ಸೀರೆ, ಕುಪ್ಪಸ ತೊಡುವುದು ಸಾಮಾನ್ಯವೆನಿಸಿತ್ತು. ಸುಮಂಗಲಿಯರು ಹಣೆಗೆ ಸಿಂಧೂರ ಚಿಕ್ಕ ವಯಸ್ಸಿನ ಹೆಣ್ಣು ಮಕ್ಕಳು ತಿಲಕ ಬೊಟ್ಟು ಇಟ್ಟುಕೊಳ್ಳುತ್ತಿದ್ದರು. ವಿಧವೆಯರು ಹಣೆಗೆ ಕಪ್ಪು 'ಬುಕ್ಕ' ಎಂಬ ಪುಡಿ ಹಚ್ಚಿಕೊಳ್ಳುತ್ತಿದ್ದರು'*(ಜಯಪ್ರಕಾಶ್‌ಎನ್ ಡಿ ಲಾಡ್, ಲಾಡ ಜನಾಂಗದನೆಲೆ ಹಾಗೂ ಸಂಸ್ಕೃತಿ, ಪುಟ-೧೯, ೨೦೦೯).*

'ಲಾಡ ರಾಹುತರಿಗೆ ಕುದುರೆಗಳನ್ನು ಸಾಕುವುದು ಅವುಗಳನ್ನು ತರಬೇತಿಗೊಳಿಸುವುದು ಮತ್ತು ಅವುಗಳನ್ನು ರಾಜರುಗಳಿಗೆ ಸರಬರಾಜು ಮಾಡುವುದು ಲಾಡ ರಾಹುತರ ಮುಖ್ಯ ಕಸುಬಾಗಿತ್ತು'. *(ಜಯಪ್ರಕಾಶ್‌ಎನ್ ಡಿ ಲಾಡ್, ಲಾಡ ಜನಾಂಗದನೆಲೆ ಹಾಗೂ ಸಂಸ್ಕೃತಿ, ಪುಟ-೨೨, ೨೦೦೯)* ಲಾಟ ಸೋಮವಂಶದ ಕ್ಷತ್ರಿಯರು ರುದ್ರ ಗಾಯಿತ್ರಿ ಬೀಜಾಕ್ಷತಿ ಸಹಿತ ಜಪ ಮಾಡುತ್ತಾರೆ. ಸೂರ್ಯವಂಶದ ಕ್ಷತ್ರಿಯರು ಸೂರ್ಯ ಗಾಯಿತ್ರಿ ವೇದ ಮಂತ್ರಗಳಿಂದ ವಿಷ್ಣು, ಸೂರ್ಯಾದಿ ಉಪಾಸನ ಮಾಡಬೇಕು. ಬ್ರಹ್ಮವಂಶ ಕ್ಷತ್ರಿಯರು ದೇವಿ ಗಾಯಿತ್ರಿ ಮಂತ್ರದಿಂದ ದೇವಿ ಉಪಾಸನೆ ಮಾಡಬೇಕು. ಶೇಷವಂಶದ ಕ್ಷತ್ರಿಯರು ಗಣೇಶ ಗಾಯಿತ್ರಿ ಮಂತ್ರದಿಂದ ಗಣಪತಿ ಉಪಾಸನೆ ಮಾಡಬೇಕು. ಈ ನಾಲ್ಕೂ ಪ್ರಕಾರ ವಂಶದವರು ತಮ್ಮ ಕುಲಧರ್ಮದಂತೆ ಹತ್ತು ವರ್ಷದೊಳಗಿನ ಗಂಡು ಮಕ್ಕಳಿಗೆ ಮುಂಜ ಮುಂಡನಾದಿಗಳನ್ನು ಮಾಡಿಸಿ ಇಪ್ಪತ್ತೈದು ವರ್ಷಗಳ ಪರ್ಯಂತದ ವಿದ್ಯಾ ಮತ್ತು ವೇದ, ಧನುರ್ವೇದ ಇತ್ಯಾದಿಗಳಲ್ಲಿ ನಿಪುಣರನ್ನು ಮಾಡಬೇಕು. ಕ್ಷತ್ರಿಯ ಸ್ತ್ರೀಯರು ರಜಸ್ವಲಾವಸ್ಥೆಯಲ್ಲಿ ಮೂರು ದಿವಸಗಳ ಪರ್ಯಂತರ ಅಸ್ಪೃಶ್ಯ ಧರ್ಮವನ್ನು ಪಾಲನೆ ಮಾಡಬೇಕು. ಸಮಸ್ತ ಕ್ಷತ್ರಿಯರ ಮನೆಗಳಲ್ಲಿ ವಿಜಯದಶಮಿಯ ದಿವಸ ಶಾಸ್ತ್ರಗಳನ್ನು ಪೂಜಿಸಬೇಕು. ಹೀಗಾಗಿ ಲಾಟದಲ್ಲಿ ಹಿಂದೂ ದೇವರುಗಳಾದ ಶಿವ, ವಿಷ್ಣು, ಲಕ್ಷ್ಮಿ, ಭವಾನಿ, ಮಾರುತಿ, ಹಾಗೂ ಸೂರ್ಯ ದೇವನನ್ನು ಆರಾಧಿಸುತ್ತಿದ್ದರು. ಶೈವ, ವೈಷ್ಣವ ಪಂಥಗಳಲ್ಲದೆ ಜೈನ, ಬೌದ್ಧ ಧರ್ಮಗಳೂ ಸಹ ಅಸ್ತಿತ್ವದಲ್ಲಿದ್ದವು.

ಲಾಡ ಎಂಬುದು ಒಂದು ಜಾತಿ ಸೂಚಕ ಪದವಲ್ಲ, ಲಾಟ ದೇಶದಲ್ಲಿ ನೆಲೆಸಿದ್ದವರೆಲ್ಲರೂ ಲಾಟ ಅಥವಾ ಲಾಡರು ಎಂದು ಕರೆಯಲ್ಪಟ್ಟಿದ್ದಾರೆ. ಅವರಲ್ಲಿ ಚಾತುರ್ವರ್ಣ ಪದ್ಧತಿ ಕಾಣಬಹುದು.

ಲಾಡ ಬ್ರಾಹ್ಮಣರು ಕೇವಲ ಮಹಾರಾಷ್ಟ್ರ ಮಧ್ಯಪ್ರದೇಶ ಹಾಗೂ ಬಂಗಾಳದ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಲಾಡ ಕ್ಷತ್ರಿಯರಲ್ಲಿ-ಸೌಧಾಗರ್ ಕ್ಷತ್ರಿಯ, ಸುಗಂಧಿ, ಎಲಿಗಾರ್, ಮರಾಠ ಕ್ಷತ್ರಿಯ, ಬ್ರಹ್ಮ ಕ್ಷತ್ರಿಯ, ಸೂರ್ಯವಂಶಿ ಕ್ಷತ್ರಿಯ ಹಾಗೂ ಲಾಡ ಕ್ಷತ್ರಿಯ ಎಂಬ ಏಳು ಪಂಗಡಗಳಿವೆ. ಈ ಎಲ್ಲಾ ಕ್ಷತ್ರಿಯ ಪಂಗಡಗಳೂ ಮಹಾರಾಷ್ಟ್ರ ಹಾಗೂ ಕರ್ನಾಟಕಗಳಲ್ಲಿ ನೆಲೆಸಿದ್ದಾರೆ. ಇವರೆಲ್ಲರು ದೊರೆಗಳಲ್ಲಿ ಕ್ಷತ್ರಿಯ ಸೈನಿಕರಾಗಿ ಮತ್ತು ಸರಕು ಸರಂಜಾಮುಗಳನ್ನು ರಾಜರ ಆಸ್ಥಾನಗಳಿಗೆ ಸರಬರಾಜು ಮಾಡುವ ಉದ್ಯೋಗದಲ್ಲಿದ್ದರು. ಈಗ ಮುಖ್ಯವಾಗಿ ವ್ಯಾಪಾರೀ ವೃತ್ತಿಯನ್ನು ಕೈಗೊಂಡಿದ್ದಾರೆ. ಕರ್ನಾಟಕದಲ್ಲಿ ಬೀದರ್, ಕಲ್ಲುಬುರಿಗಿ(ಗುಲ್ಬರ್ಗಾ), ವಿಜಯಪುರ(ಬಿಜಾಪುರ), ಬೆಳಗಾವಿ(ಬೆಳಗಾಂ), ಹುಬ್ಬಳ್ಳಿ-ಧಾರವಾಡ, ಚಿತ್ರದುರ್ಗ, ತುಮಕೂರು, ಬೆಂಗಳೂರು, ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಇವರ ಒಟ್ಟು ಜನಸಂಖ್ಯೆ ಅಂದಾಜು ಹದಿನೈದು ಸಾವಿರದಿಂದ ಇಪ್ಪತ್ತು ಸಾವಿರ ಮಾತ್ರ. ಇವರಲ್ಲಿ ೨೦೦೦-೩೦೦೦ ಸಂಖ್ಯೆಯಷ್ಟು ಜನ ತಮ್ಮ ಮೂಲ ಭಾಷೆ ಚೌರಾಸಿ ಯನ್ನು ಮಾತನಾಡುತ್ತಾರೆ ಆದರೆ ಮಹಾರಷ್ಟ್ರದಲ್ಲಿ ನೆಲೆಸಿರುವ ಕ್ಷತ್ರಿಯರು ಕೇವಲ ಮರಾಠಿ ಭಾಷೆಯನ್ನು ಮಾತ್ರ ಮಾತನಾಡುತ್ತಾರೆ. ಹಾಗೇ ಕರ್ನಾಟಕದಲ್ಲಿ ಕನ್ನಡವನ್ನು ಸುಲಲಿತವಾಗಿ ಮಾತನಾಡುತ್ತಾರೆ.

ಲಾಡ ಕ್ಷತ್ರಿಯರ ಮತ್ತೊಂದು ಮುಖ್ಯ ಕ್ಷತ್ರಿಯ ಪಂಗಡವೆಂದರೆ, ಕ್ಷತ್ರಿಯ ಲಾಡರು ಆಗಿದ್ದಾರೆ. ಲಾಡ ಕ್ಷತ್ರಿಯರು ಕರ್ನಾಟಕ ಹಾಗೂ ಮಹಾರಾಷ್ಟ್ರ ರಾಜ್ಯಗಳಲ್ಲಿ ಹರಡಿದ್ದಾರೆ. ಲಾಡ ಕ್ಷತ್ರಿಯರಲ್ಲಿ ಅನೇಕ ಉಪ ಪಂಗಡಗಳಿವೆ. ಈ ಉಪ ಪಂಗಡಗಳು ಪ್ರತಿಯೊಂದು ತನ್ನದೇ ಆದ ಪ್ರತ್ಯೇಕ ಆಚಾರ-ವಿಚಾರಗಳನ್ನು ಹೊಂದಿವೆ. ಲಾಡ ಕ್ಷತ್ರಿಯರಲ್ಲಿ ಅನೇಕ ಉಪ ಪಂಗಡಗಳಿವೆ. ಈ ಉಪಪಂಗಡಗಳು ಪ್ರತಿಯೊಂದು ತನ್ನದೇ ಆದ ಪ್ರತ್ಯೇಕ ಆಚಾರ-ವಿಚಾರಗಳನ್ನು ಹೊಂದಿವೆ. ಹೀಗೆ ವಿಸ್ತರಿಸಿರುವ ಸಮುದಾಯಗಳ ಮುಖ್ಯ ಉಪಪಂಗಡಗಳೆಂದರೆ, ೦೧. ಸೌಧಾಘರ್ ಕ್ಷತ್ರಿಯ, ರಾಹುತ್‌ಲಾಡರು. ೦೨. ಮರಾಠಾ ಕ್ಷತ್ರಿಯ ಲಾಡ್, ೦೩. ಸುಗಂಧಿ ಲಾಡ್, ೦೪. ಎಲಿಗಾರ್ ಲಾಡ್ ಕ್ಷತ್ರಿಯ, ೦೫. ಕ್ಷತ್ರಿಯ ಲಾಡರು, ೦೬. ಸೂರ್ಯವಂಶಿ ಲಾಡ್ ಕ್ಷತ್ರಿಯ, ೦೭. ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯ, ೦೮. ಲಾಡ್ ಸಿಂಧಿ ಲೋಹಾಣಾ, ೦೯. ಭಾವಸಾರ್ ಕ್ಷತ್ರಿಯ ಲಾಡ್, ೧೦ ಪಾಲಕಾ ಲಾಡ್/ಹಳೇ ಮಕ್ಕಳು, ಎಂಬುದಾಗಿ, ಗುರುತಿಸಲಾಗಿದೆ*(ಜಯಪ್ರಕಾಶ್ ಎನ್ ಡಿ ಲಾಡ್, ಲಾಡ ಜನಾಂಗದನೆಲೆ ಹಾಗೂ ಸಂಸ್ಕೃತಿ, ಪುಟ-೮೫, ೨೦೦೯).*

**೩.೩. ಸೋಮವಂಶ ಆರ್ಯ ಕ್ಷತ್ರಿಯ**

ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಗಳಲ್ಲಿ ಪ್ರವರ್ಗ-೧ ಕ್ರಮಸಂಖ್ಯೆ ೪೯ರಪ್ರಕಾರ (a) ಸೋಮವಂಶ ಆರ್ಯ ಕ್ಷತ್ರಿಯ, (b) ಚಿತಾರ, (c) ಚಿತ್ರಗಾರ, (d) ದಿಗ್ವಾನ್, (e) ಜೀರಗಾರ, (f) ನಾಜಬಂದ್, (g) ನಾಲಬಂದ್, (h) ತಾಂಬಟ್ *(ಭಾಗ-೧ ಕರ್ನಾಟಕ*

*ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ಪುಟ-೧೦೦೭, ೨೦೦೨).* ಈ ರೀತಿಯಾದ ಪಟ್ಟಿಯನ್ನು ನೋಡಬಹುದಾಗಿದೆ. ಸೋಮವಂಶ ಕ್ಷತ್ರಿಯ, ಪಟ್ಟೇಗಾರರು, ಸೋಮವಂಶೀಯ ಸಹಸ್ರಾರ್ಜುನ ಕ್ಷತ್ರಿಯ, ಸಾವಜಿ ಮುಂತಾದ ಹೆಸರಗಳಿಂದ ಪರಿಚಿತರಾಗಿದ್ದಾರೆ. ಇವರು ಸುಮಾರು ೨೦೦ ವರ್ಷಗಳ ಹಿಂದೆ ಕೆಲಸವನ್ನು ಹುಡುಕಿಕೊಂಡು ಮಹಾರಾಷ್ಟ್ರದಿಂದ ಬಂದವರೆಂದು ಹೇಳಲಾಗುತ್ತದೆ. ಇವರು ಹೆಚ್ಚಾಗಿ ಬೆಂಗಳೂರು, ಹಾಸನ, ಮಂಡ್ಯ, ಧಾರವಾಡ, ಬೆಳಗಾವಿ, ಚಿತ್ರದುರ್ಗ, ಬಳ್ಳಾರಿ, ಬಾಗಲಕೋಟೆ, ಬಿಜಾಪುರ, ಶಿವಮೊಗ್ಗ, ಚಿಕ್ಕಮಗಳೂರು ದಾವಣಗೆರೆ ಮುಂತಾದ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಇಂಡೋ ಆರ್ಯನ್ ಭಾಷಾ ಕುಟುಂಬಕ್ಕೆ ಸೇರಿದ ಮರಾಠಿ ಭಾಷೆಯನ್ನು ಆಂತರಿಕವಾಗಿ ಬಳಸುತ್ತಾರೆ. ಸಮುದಾಯದ ಇತರರೊಡನೆ ಕನ್ನಡವನ್ನು ಮಾತನಾಡಿ ಕನ್ನಡ ಲಿಪಿಯನ್ನು ಬಳಸುತ್ತಾರೆ. ಈ ಸಮುದಾಯವು ಅನೇಕ ಹೊರಬಾಂಧವ್ಯ ವಿವಾಹ ಗೋತ್ರಗಳಾಗಿ ವಿಭಾಗಿಸಲ್ಪಟ್ಟಿವೆ. ಅಗಸ್ತ್ಯ ದಧೀಚಿ ಗಾರ್ಗೇಯ, ಜಮದಗ್ನಿ ಮಾರ್ಕಂಡೇಯ ಅವರ ಕೆಲವು ಗೋತ್ರಗಳಾಗಿವೆ. ನಂಜುಂಡಯ್ಯ ಮತ್ತು ಅಯ್ಯರ್ ಇವರುಗಳು ಪಟ್ಟೇಗಾರರಲ್ಲಿ ಇಪ್ಪತ್ತೊಂದು ಗೋತ್ರಗಳನ್ನು ಉಲ್ಲೇಖಿಸಿದ್ದಾರೆ. ಅಗಸ್ತ್ಯ (ನಂದಿಹೂವು), ಅತ್ತ್ರೇಯ (ಸಂಪಿಗೆ ಹೂವು), ಭಾರದ್ವಾಜ (ಮುಳ್ಳುಸೇವಂತಿಗೆ), ದಧೀಜಿ (ಕನಿಕರಹೂವು), ದೂರ್ವಾಸ (ಪುನಗುಪುಷ್ಪ), ಗಾಲವ (ಕಮಲ ಪುಷ್ಪ), ಗಾರ್ಗೇಯ (ಬಕುಳದಹೂವು), ಗೌತಮ (ಬಿಳಿಸೇವಂತಿಗೆ), ಹರಿತಾಪಿ (ಅಗನಿ ಹೂವು), ಔಬಾಲ್ (ಜಾಜಿ ಹೂವು), ಜಮದಗ್ನಿ (ಕೆಂಪುದಾಸವಾಳ), ಕಶ್ಯಪ (ಕಪ್ಪು ಕಮಲ), ಕೌಂಡಿನ್ಯ ಕಾವನರ್ಷಿ ಮಾರ್ಕಂಡೇಯ (ದೇಲಿಯರ ಹೂವು), (ಭದ್ರಾಪುಷ್ಪ), ಪರಾಶರ (ಭೌಂಧಿವನಸುಮ), ಪೌಲಾಸ್ತ್ಯ (ಮಾಲತಿ ಪುಷ್ಪ), ಪೌಂಗ್ಯ (ಮಾಲತೀ ಪುಷ್ಪ) ವಸಿಷ್ಠ, (ಮಲ್ಲಿಗೆ) ವಿಶ್ವಾಮಿತ್ರ (ದಾಸವಾಳ ಹೂ), ಇತ್ಯಾದಿ. ಇವರು ತಮ್ಮ ಅಂಕಿತ ನಾಮದ ಮುಂದೆ ಗೌರವಾರ್ಥಕವಾಗಿ 'ಸಾ ಎಂಬ ಪದವನ್ನು ಬಳಸುತ್ತಾರೆ. ಉದಾಹರಣೆಗೆ ಈಶ್ವರ ಸಾ ರಾಮುಸಾ ಇತ್ಯಾದಿ ಸೋದರ ಸಂಬಂಧ ವಿವಾಹಗಳು ಇವರಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಇವರ ಸಾಂಪ್ರದಾಯಿಕ ವೃತ್ತಿ ನೇಕಾರಿಕೆ ಇವರಲ್ಲಿ ಕೆಲವರು ಕೆತ್ತನೆಯನ್ನು ಮಾಡುವವರು ಇರುವರು. ಹೆಚ್ಚಿನವರು ಆಧುನಿಕ ವೃತ್ತಿಯಲ್ಲಿ ತೊಡಗಿದ್ದಾರೆ. ಇವರ ಧಾರ್ಮಿಕ ಆಚರಣೆಗಳಿಗೆ ಪೂಜಾರಿಯಾಗಿ ಬ್ರಾಹ್ಮಣನಿದ್ದರೂ ಇವರ ಸಮುದಾಯದಲ್ಲೆ ಕೆಲವು ಧಾರ್ಮಿಕ ವಿಶೇಷತಜ್ಞರಿದ್ದಾರೆ. ಆಧುನಿಕ ಶಿಕ್ಷಣ ಹಾಗೂ ಇತರೆ ಆಧುನಿಕ ಸಾಮಾಜಿಕ ವ್ಯವಸ್ಥೆಗಳಲ್ಲಿ ಕೆಲವೊಂದು ಸಂಘ ಸಂಸ್ಥೆಗಳನ್ನು ಮಾಡಿಕೊಂಡು ಅವರು ಸಹಜೀವನ ನಡೆಸುತ್ತಿದ್ದಾರೆ *(ಪ್ರಶಾಂತ್ ಹೆಚ್.ಡಿ. (ಸಂ),ಕರ್ನಾಟಕ ರಾಜ್ಯಕೋಶ-೪, ಜನಸಮುದಾಯ ಸಂಪುಟ, ಪುಟ-೬೪, ೨೦೦೦).*

ಇವರು ತಮ್ಮನ್ನು ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯರೆಂದೂ ಕರೆದುಕೊಳ್ಳುತ್ತಾರೆ. ಕರ್ನಾಟಕದ ಎರಡನೆಯ ಹಿಂದುಳಿದ ವರ್ಗಗಳ ಆಯೋಗದ ಪ್ರಕಾರ ೧೯೮೪-೧೦,೨೪೮ ಜನಸಂಖ್ಯೆ ಇತ್ತು ಎಂದು ಅಂದಾಜು ಮಾಡಲಾಗಿದೆ. ರೇಷ್ಮೆ, ನೇಕಾರಿಕೆ ಹಾಗೂ ರೇಷ್ಮೆ ನೂಲಿಗೆ ಬಣ್ಣ ಹಾಕುವುದು ಇವರ ಸಾಂಪ್ರದಾಯಿಕ ಉದ್ಯೋಗವಾಗಿದ್ದು ಇತ್ತೀಚಿನ ದಿನಗಳಲ್ಲಿ ಇವರು ಬಟ್ಟೆ ಹಾಗೂ ಮರದ

ವ್ಯಾಪಾರ ಹಾಗೂ ಮತ್ತಿತರ ಉದ್ಯೋಗಗಳನ್ನು ತೊಡಗಿರುತ್ತಾರೆ. ಇವರಲ್ಲಿ ಅನೇಕ ಗೋತ್ರಗಳಿದ್ದು ಸಗೋತ್ರ ವಿವಾಹ ಸಂಬಂಧವು ಏರ್ಪಡುವುದಿಲ್ಲ ಇವರಲ್ಲಿ ಜನಿವಾರ ಹಾಕುವ ಪದ್ಧತಿಯಿದೆ. ಮರಾಠಿ ಗುಜರಾತಿ ಮಿಶ್ರಿತ ಅಹರಾಶಿ ಭಾಷೆ ಮಾತನಾಡುತ್ತಾರೆ. ಇವರು ದೇವಾಲಯಗಳಲ್ಲಿ ಇವರ ಜಾತಿಯವರೇ ಪೂಜಾರಿಗಳಿರುತ್ತಾರೆ. ಹಬೀಚ್ ಪೂಜಾರಿ ಕಾಟವೆ ಲದವಾ ಖೋಡೆ ನಿರಂಜನ ಮುಂತಾದ ಮನೆತನದ ಹೆಸರುಗಳು ಇವರಲ್ಲಿವೆ. ಇವರು ಅಂಬಾ ಭವಾನಿ, ತುಳಜಾ ಭವಾನಿ, ಯಲ್ಲಮ್ಮ ಮುಂತಾದ ಶಕ್ತಿ ದೇವತೆಗಳನ್ನು ಆರಾಧಿಸುತ್ತಾರೆ. ನೂಲು ಹುಣ್ಣಿಮೆ, ದುರ್ಗಾಷ್ಠಮಿ, ಮಹಾನವಮಿ, ದೀಪಾವಳಿ ಈ ಮೊದಲಾದವು ಇವರು ಆಚರಿಸುವ ಕೆಲವು ಪ್ರಮುಖ ಹಬ್ಬಗಳಾಗಿವೆ. ಇವರು ಮಾಂಸಾಹಾರವನ್ನು ಸೇವಿಸುತ್ತಾರೆ. ಇವರಲ್ಲಿ ಶವವನ್ನು ದಹನ ಮಾಡುವ ಪದ್ಧತಿಯಿದೆ. ಇವರು ಪಂಚರ ಸಮ್ಮುಖದಲ್ಲಿ ಎಲ್ಲಾ ಸಾಮಾಜಿಕ ನಿರ್ಣಯಗಳನ್ನು ತೆಗೆದುಕೊಳ್ಳಲಾಗುತ್ತದೆ. ಸಾಮೂಹಿಕ ವಿವಾಹ ಇವರಲ್ಲಿ ಇತ್ತೀಚೆಗೆ ಹೆಚ್ಚಾಗಿ ನಡೆಯುತ್ತದೆ*(ಸೂರ್ಯನಾಥ ಯು ಕಾಮತ್, (ಸಂ), ಭಾರತದ ಗ್ಯಾಸೆಟಿಯರ್, ಧಾರವಾಡ ಜಿಲ್ಲೆ, ೨೦೧೦).*

### ೩.೪. ನಯನಜ ಕ್ಷತ್ರಿಯ

ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಯ ಅನುಸಾರವಾಗಿ ಪ್ರವರ್ಗ-೨(ಎ) ಕ್ರಮಸಂಖ್ಯೆ ೮ರ ಪ್ರಕಾರ (a) ನಾಯಿಂದ, (b) ಪರಿಯಾಳ(ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆ), (c) ಅಂಬಟ್ಟನ್, (d) ಬಜಂತ್ರಿ, (e) ಬಂಡಾರಿ, (f) ಚೌರಿಯ, (g) ಹಡಪದ, (h) ಹಜಾಮ, (i) ಕವುಟಿಯನ್, (j) ಕೆಲಸಿ, (k) ಕ್ಷೌರಿಕ, (l) ಕ್ಷೌರದ್, (m) ಮಹಾಲೆ, (n) ಮಂಗಳ, (o) ಮೇಲಗಾರ, (p) ನಾಡಿಗ, (q) ನಾಪಿತ, (r) ನವಲಿಗ್, (s) ನಾವಿ, (t) ನಯನಜ ಕ್ಷತ್ರಿಯ, (u) ನ್ಹಾವಿ, (v) ವಾಜಾಂತ್ರಿ (ಉತ್ತರ ಕನ್ನಡ ಜಿಲ್ಲೆ), (w) ಸವಿತ, (x) ನಯನಜ ಕ್ಷತ್ರಿ, (y) ನಾಡಿಗ್, (z) ಕ್ಷೌರಿಕ್, (aa) ಕ್ಷೌರಿಕ,*(ಭಾಗ-೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨. ಪುಟ-೧೦೧೦).* ನಯನಜ ಕ್ಷತ್ರಿಯ ಸಮುದಾಯವನ್ನು ನಾಯಿಂದರು ಕ್ಷೌರಿಕ ಸಮುದಾಯಕ್ಕೆ ಸೇರಿದವರು ಎಂದು ಗುರುತಿಸಲ್ಪಡುತ್ತಾರೆ. ಕರ್ನಾಟಕದಲ್ಲಿ ಭಾಗಗಳಲ್ಲೂ ಕಂಡುಬರುತ್ತಾರೆ. ಭಂಡಾರಿ, ಕೆಲಸಿಗ ಮಹಾಕ್, ಪರಿಯಲಿಗ, ಕ್ಷೌರಿಕ, ಭಜಂತ್ರಿ, ಕ್ಷತ್ರಿಯ, ನಾವಟಿಗ, ಹಡಪದ, ಕೋಡಿಯ, ಅಂಬಟ್ಟನ್, ಮಂಗಳಿ ಮತ್ತು ನಯನಜ ಕ್ಷತ್ರಿಯ, ನಯನಜ ಕ್ಷತ್ರಿ, ಮತ್ತು ನಾಪಿಕರೆಂದು ಹಲವು ಹೆಸರುಗಳಿಂದ ಪರಿಚಿತರಾಗಿದ್ದಾರೆ. ಉತ್ತರ ಕರ್ನಾಟಕದಲ್ಲಿ ನಾಯಿಂದ ಸಮಾಜ ಹನ್ನೆರಡನೆ ಶತಮಾನದ ಹಡಪದ ಅಪ್ಪಣನ ವಂಶದವರೆಂದು ಗುರುತಿಸಿಕೊಳ್ಳುತ್ತಾರೆ. ಮಾತನಾಡುವ ಭಾಷೆಯು ಆಧಾರದ ಮೇಲೆ ಇವರು ಅನೇಕ ಉಪ ಜಾತಿಗಳನ್ನು ಹೊಂದಿದ್ದಾರೆ. (ಥರ್ಸ್ಟನ್ ೧೯೦೯) ಇವರು ದೇವ ದೇವತೆಗಳ ಕ್ಷೌರಿಕನಾದ 'ಸವಿತ ಬ್ರಹ್ಮಶ್ರೀ'ಯ ಮೂಲದವರೆಂದು ಹೇಳಿಕೊಳ್ಳುತ್ತಾರೆ. ಇವರಲ್ಲಿ ತೋಲಾರ ಗುಜ್ಜಾರನ್ನತೆ, ಕುಂದಾರನ, ಸಲಿವನ ಇತ್ಯಾದಿ ಹೊರಬಾಂಧವ್ಯ ವಿವಾಹ ಪದ್ಧತಿಯ ಬಳ್ಳಿಗಳು ಇವೆ.

ನಾಯಿಂದರಲ್ಲಿ ನಂಜುಂಡಯ್ಯ ಮತ್ತು ಐಯ್ಯರ್ (೧೯೩೧) ಮೊರಸು, ಉಪ್ಪಿನ, ಮತ್ತು ಶೀಲವಂತರೆಂಬ ಮೂರು ಉಪ ಪಂಗಡಗಳನ್ನು ಗುರುತಿಸಿದ್ದಾರೆ. ಜೊತೆಗೆ ಮುವತ್ತಾರು ಹೊರ ಬಾಂಧವ್ಯದ ಬೆಡಗಳನ್ನು ಕೂಡ ಗುರುತಿಸಿದ್ದಾರೆ. ಚಿಟ್ಲು, ಗರ್ದಮ, ಜಂಬು, ಕನ್ನಾಗಲುಕರು, ಮಲ್ಲೇಳ ಮುತ್ಯಾಲ, ನವಿಲು ಪಾಲು, ಸಾಮಾನ್ವಿ, ಉತ್ತರುನಾಸ, ಪುಸ್ತಾ ಅಪ, ಪ್ರಹ್ರಾನ, ವಸ್ತುಕಾ, ಸಸ್ವರ, ರುಚಿದತ್ತಾ, ಲೋಖೇತು, ಇಂದ್ರಸೇನ, ಭದ್ರ, ರಾಜಧರ್ಮ, ಕೌಸಲಿ, ಸಹಸ್ರಭೀರು, ವಸುಧಮರ, ವ್ಯಂಜಕ, ಭುಕ್ತಾವ್ಯಯ, ಶನಿಭಾಸ, ದೇಶಕ ಮಾಸು, ವಜ್ರಚೇತ, ಪ್ರೂಭೂತವಾನು, ಯಜ್ಯಮಂತೆ, ಒಳಬಾಂಧವ್ಯ ವಿವಾಹವು ಉಪ ಪಂಗಡದ ಮಟ್ಟದಲ್ಲಿ ಹಾಗೂ ಹೊರಬಾಂಧವ್ಯ ವಿವಾಹವು ಬೆಡಗುಗಳ ಮಟ್ಟದಲ್ಲೂ ರೂಢಿಯಲ್ಲಿವೆ. ವಿಧವೆ, ವಿದುರ ಹಾಗೂ ವಿಚ್ಛೇದಿತರಿಗೆ ವಿವಾಹಕ್ಕೆ ಅವಕಾಶವಿದೆ. ಉತ್ತರಾಧಿಕಾರವು ತಂದೆಯ ನಂತರ ಕುಟುಂಬದ ಹಿರಿಯ ಮಗನಿಗೆ ದೊರೆಯುತ್ತದೆ. ವಿಶೇಷವೆಂದರೆ, "ದಕ್ಷಿಣ ಕರ್ನಾಟಕದ ನಾಯಿಂದರಿಗೂ ಉತ್ತರ ಕರ್ನಾಟಕದ ಹಡಪದರಿಗೆ ಕೆಲವು ಸಾಮಾಜಿಕ ವ್ಯತ್ಯಾಸವಿದೆ" *(ಪ್ರಶಾಂತ್ ಹೆಚ್.ಡಿ. (ಸಂ), ಕರ್ನಾಟಕ ರಾಜ್ಯಕೋಶ-೪, ಜನಸಮುದಾಯ ಸಂಪುಟ, ಪುಟ-೬೩, ೨೦೦೦).*

ನಾಯಿಂದರ ಸಾಂಪ್ರದಾಯಕ ವೃತ್ತಿ ಕ್ಷೌರ ಮಾಡುವುದರ ಜೊತೆಗೆ ಇತರೆ ಅನ್ಯ ವೃತ್ತಿಗಳಲ್ಲಿಯೂ ಸಹತೊಡಗಿದ್ದಾರೆ. ಇವರು 'ಸವಿತ ಸಮಾಜ' ಎಂಬ ಸಮುದಾಯ ಸಂಘಟನೆಯನ್ನು ಹೊಂದಿದ್ದಾರೆ. ಸಾಂಪ್ರದಾಯಿಕವಾಗಿ ಧಾರ್ಮಿಕ ಸಮಾರಂಭಗಳಲ್ಲಿ ಸಂಗೀತ ವಾದ್ಯಗಳನ್ನು ನುಡಿಸಿ ಪಂಜನ್ನು ಹಿಡಿಯುತ್ತಾರೆ. ಇವರು ಶೈಕ್ಷಣಿಕ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ತಮ್ಮ ಸಮುದಾಯದ ವರ್ಗದವರಿಗೆ ರಾಜಕೀಯ ಶೈಕ್ಷಣಿಕ, ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವಲ್ಲಿ ತನ್ನದೇ ಆದ ಪಾತ್ರವನ್ನು ನಿರ್ವಹಿಸಲಿದೆ.

**೩.೫. ವನ್ನಿಕುಲಕ್ಷತ್ರಿಯ**

ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಯ ಅನುಸಾರವಾಗಿ ಪ್ರವರ್ಗ-೨(ಎ) ಕ್ರಮಸಂಖ್ಯೆ ೧೧೦ರ ಪ್ರಕಾರ (a) ತಿಗಲ, (b) ಅಗ್ನಿವಂಶ, (c) ಅಗ್ನಿವನ್ನಿ, (d) ಅಗ್ನಿಕುಲಕ್ಷತ್ರಿಯ, (e)ಧರ್ಮರಾಜ ಕಾಪು, (f) ಪಳ್ಳಿ, (g) ಶಂಭುಕುಲ ಕ್ಷತ್ರಿಯ, (h) ತಿಗಳ, (i) ವನ್ನಿಯರ್, (j) ವನ್ನಿಕುಲಕ್ಷತ್ರಿಯ, (k) ತಿಗ್ಲರ್, (l) ಕುರೋವನ್, *(ಭಾಗ-೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨. ಪುಟ-೧೦೧೨).* ಈ ರೀತಿಯಾದ ಪಟ್ಟಿಯನ್ನು ನೋಡಬಹುದಾಗಿದೆ. ವನ್ನಿಕುಲ ಕ್ಷತ್ರಿಯರನ್ನು ಶಂಭಕುಲ ಕ್ಷತ್ರಿಯ, ತಿಗಳ, ಅಗ್ನಿವಂಶ, ಅಗ್ನಿವನ್ನಿ, ಅಗ್ನಿಕುಲಕ್ಷತ್ರಿಯ, ಧರ್ಮರಾಜಕಾಪು, ತಿಗಳರ್, ಎಂಬುದಾಗಿಯು ಗುರುತಿಸಲಾಗಿದೆ. ಇವರು ಹೆಚ್ಚಿನದಾಗಿ ಹೇಳಿಕೊಳ್ಳುವುದು ಅಗ್ನಿಕುಲ ಕ್ಷತ್ರಿಯ ವನ್ನಿಕುಲಕ್ಷತ್ರಿಯರೆಂದೂ ಹೇಳಿಕೊಳ್ಳುತ್ತಾರೆ. ಇವರು ತಮಿಳುನಾಡಿನಿಂದ ಬಹಳ ಹಿಂದೆ ವಲಸೆ ಬಂದರು ಎಂದು ತಿಳಿಯಬಹುದು. ಇವರು ಬೆಂಗಳೂರು,

ಕೋಲಾರ ಮತ್ತು ತುಮಕೂರು, ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಹಾಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿಯೂ ಹೆಚ್ಚಿನದಾಗಿ ನೆಲೆಸಿದ್ದಾರೆ. ತಮಿಳನ್ನು ಮಾತನಾಡುವ ಇವರು ಕನ್ನಡವನ್ನು ಮಾತನಾಡಿ, ಕನ್ನಡ ಲಿಪಿಯನ್ನು ಬಳಸುತ್ತಾರೆ. ನಂಜುಂಡಯ್ಯ ಮತ್ತು ಐಯ್ಯರ್ (೧೯೩೦) ಹೇಳುವಂತೆ ತಿಗಳರು ಬೇಸಾಯಗಾರರಾಗಿ ತೋಟಗಳಲ್ಲಿ ವೀಳ್ಯದೆಲೆಯ ಬಳ್ಳಿಯನ್ನು ಬೆಳೆಸುತ್ತಿದ್ದರು. ಹಾಗೇ ಹೂವುಗಳನ್ನು ಸಹ ಬೆಳೆಯವರಾಗಿದ್ದಾರೆ. ಇವರು ಉಳ್ಳಿ ಕನ್ನಡ ತಿಗಳರು, ಆರ್ವತಿಗಳ ಧರ್ಮರಾಯನ ಒಕ್ಕಲುಗಳೆಂಬ ಒಳಬಾಂಧವ್ಯ ವಿವಾಹ ಉಪಪಂಗಡಗಳನ್ನು ಹೊಂದಿದ್ದಾರೆ.

ತಿಗಳ ಕ್ಷತ್ರಿಯರಲ್ಲಿ ತಮ್ಮದೇ ಆಚಾರ–ವಿಚಾರಗಳಿವೆ. ಇವರು ಬೆಂಗಳೂರಿನ ದ್ರೌಪದಿ ಅಮ್ಮನ ಕರಗವನ್ನು ತುಂಬ ಅದ್ದೂರಿಯಾಗಿ ಆಚರಣೆ ಮಾಡುತ್ತಾರೆ. ಇವರಲ್ಲಿ ದ್ರೌಪದಿ ಅಮ್ಮನ ಕರಗವನ್ನು ಆಚರಿಸುವ ಸಂಪ್ರದಾಯದಸ್ಥರು ಮೂಲತಃ ಪೂಜಾರಿಯಾಗಿರುತ್ತಾರೆ. ಹಾಗೇ ಈ ಹಬ್ಬವು ಬೆಂಗಳೂರಿನಲ್ಲಿ ಒಂದು ಇತಿಹಾಸವನ್ನೇ ಹುಟ್ಟಿಹಾಕಿದೆ. ಈ ಕರಗವು ಹೂವಿನ ಕರಗವೆಂದೇ ಪ್ರಸಿದ್ಧಿಯಾಗಿದೆ. ತಿಗಳರು ಲಕ್ಷಮ್ಮ ದೇವರು. ದೊಡ್ಡ ನರಸಯ್ಯ, ದೊಡ್ಡನಂಜಪ್ಪ, ಎಲ್ಲಮ್ಮ ನರಸಯ್ಯ ಮತ್ತು ಮುದ್ದಣಗಳೆಂಬ ಅನೇಕ ಪಂಗಡಗಳಾಗಿ ವಿಂಗಡನೆಯಾಗಿದ್ದಾರೆ. ಈ ಸಮುದಾಯದಲ್ಲಿ ಬರಿ ಎನ್ನುವ ಹೊರ ಬಾಂಧವ್ಯ ಬೆಡಗುಗಳು ಇವೆ. ಸೋದರ ಸಂಬಂಧಿ ವಿವಾಹಗಳಿಗೆ ಅವಕಾಶವಿದೆ. 'ಇವರ ಪಾರಂಪರಿಕ ಉದ್ಯೋಗ ಕೃಷಿ ಮತ್ತು ಕೃಷಿ ಕೂಲಿಗಳು ಕರ್ನಾಟಕ ರಾಜ್ಯ ವಹ್ನಿಕುಲ ಕ್ಷತ್ರಿಯ ತಿಗಳರ ಶ್ರೀ ಕರಗ ಮಹಾಶಕ್ತಿ ಸೇವಾ ವೇದಿಕೆ (ರಿ) ಬೆಂಗಳೂರು ಮತ್ತು ವಹ್ನಿಕುಲ ಕ್ಷತ್ರಿಯರ ತಿಗಳ ಯವಶಕ್ತಿ(ರಿ), ತಿಗಳರ ಕ್ಷೇಮಾಭಿವೃದ್ಧಿ ಸಂಘ(ರಿ), ಅಗ್ನಿಸಂಶ ಕ್ಷತ್ರಿಯ ತಿಗಳರ ಪತ್ತಿನ ಸಹಕಾರ ಸಂಘ(ರಿ) ಇನ್ನು ಅನೇಕ ವಿದ್ಯಾರ್ಥಿ ಸಂಘಗಳನ್ನು ಸ್ಥಾಪಿಸಿಕೊಂಡು ಉತ್ತಮವಾದ ಸಂಬಂಧವನ್ನು ತಮ್ಮ ಸಮುದಾಯಗಳೊಂದಿಗೆ ಇಟ್ಟುಕೊಂಡಿದೆ'*(ಪ್ರಶಾಂತ್ ಹೆಚ್.ಡಿ. (ಸಂ), ಕರ್ನಾಟಕ ರಾಜ್ಯಕೋಶ–೪, ಜನಸಮುದಾಯ ಸಂಪುಟ, ಪುಟ–೫೫, ೨೦೦೦).*

ಕರ್ನಾಟಕ ರಾಜ್ಯದ ಪೌರಾಣಿಕ ಐತಿಹಾಸಿಕ ಇತಿಹಾಸದ ಪುಟಗಳಲ್ಲಿ ತಿಗಳ ಕ್ಷತ್ರಿಯ ಸಮಾಜದ ಆಳ್ವಿಕೆಯು ಆಡಳಿತ ಯುದ್ಧ ಹೋರಾಟ ತ್ಯಾಗಬಲಿದಾನಗಳು ಅಪೂರ್ವವಾದದು. ಆದರೆ ರಾಜಕೀಯವಾಗಿ ಹಂತಹಂತವಾಗಿ ತಿಗಳ ಕ್ಷತ್ರಿಯರು ಇಂದು ಸಹ ಮಣ್ಣಿನ ಮಕ್ಕಳಾಗಿ ದುಡಿವ ಶ್ರಮಿಕ ವರ್ಗವೇ ಹೆಚ್ಚಾಗಿದೆ. ಸಮಾಜದಲ್ಲಿ ಇತರೆ ಜಾತಿವರ್ಗಗಳಂತೆ ಸಂಘ–ಸಂಸ್ಥೆಗಳನ್ನು ಕಟ್ಟಿ ತಿಗಳ ಸಮುದಾಯದ ಅಭಿವೃದ್ಧಿಗಾಗಿ ಶ್ರಮಿಸುತ್ತಲಿದೆ. ವನ್ನಿಯಕುಲಕ್ಷತ್ರಿಯ ಅಗ್ನಿವಂಶಕ್ಷತ್ರಿಯ ಅಗ್ನಿವನ್ನಿಧರ್ಮರಾಜಕಾಪುಪಲ್ಲಿ ಶಂಭುಕುಲಕ್ಷತ್ರಿಯ ವನ್ನಿಯಾರ್ ಮೊದಲಾದ ಹೆಸರುಗಳೂ ಇರುವ ತಿಗಳರು ಕಾರ್ಕಳ ಪರಿಸರದಲ್ಲಿ ವಿಶೇಷವಾಗಿ ಕಾಣಬರುತ್ತಾರೆ. ಟಿಪ್ಪುವಿನ ಸೈನ್ಯದಲ್ಲಿದ್ದ ಇವರ ಪೂರ್ವಿಕರ ಬಳಿಕ ಕಾರ್ಕಳದ ಕೋಟೆಯ ಉಸ್ತುವಾರಿಗಾಗಿ ಇಲ್ಲಿ ನೆಲೆನಿಂತರೆಂದು ತಿಳಿದುಬರುತ್ತದೆ. ಕನ್ನಡ ಮನೆಮಾತಾದ ಇವರು ಪಿತೃಪ್ರಧಾನ ಪದ್ಧತಿಯ ಮಕ್ಕಳ ಕಟ್ಟು ಪದ್ಧತಿಯವರಾಗಿದ್ದಾರೆ. ತಮ್ಮದು ಜಂಬು ಮಹರ್ಷಿ ಗೋತ್ರವೆಂದೂ ಸಗೋತ್ರ ವಿವಾಹ ರೂಢಿಯಲ್ಲಿದೆ ಎಂದೂ ಹೇಳುತ್ತಾರೆ.

ಮದುವೆಯ ಸಂದರ್ಭದಲ್ಲಿ ವರನಿಗೆ ಉಪನಯನ ನಡೆಸಿ ಯಜ್ಞೋಪವೀಸ ಧಾರಣೆ ಮಾಡುವ ಸಂಪ್ರದಾಯ ಅನುಸರಿಸುತ್ತಾರೆ. ಮನ್ನಾರ ದೇವರನ್ನು (ದ್ರೌಪದಿ) ಕುಲದೇವತೆ ಎಂದು ಪೂಜಿಸುವ ಇವರು ಕರಗ ಉತ್ಸವ ನವರಾತ್ರಿ ಆಚರಣೆ ಇತ್ಯಾದಿಗಳನ್ನು ನಡೆಸುತ್ತಾರೆ. ಬ್ರಾಹ್ಮಣ ಕುಲಪುರೋಹಿತರು ಇವರ ವಿವಾಹಾದಿ ಸಂಪ್ರದಾಯಗಳನ್ನು ನಡೆಸಿಕೊಡುತ್ತಾರೆ'*(ಜಿಲಾನಿ ಎಸ್ ಎ, ಭಾರತದ ಗ್ಯಾಸೆಟಿಯರ್ ಉಡುಪಿ ಜಿಲ್ಲೆ, ಪುಟ-೧೫೦, ೨೦೧೦).*

**೩.೬. ಭಾವಸಾರ ಕ್ಷತ್ರಿಯ**

ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಯ ಅನುಸಾರವಾಗಿ ಪ್ರವರ್ಗ-೨(ಎ) ಕ್ರಮಸಂಖ್ಯೆ ೭೪ರ ಪ್ರಕಾರ (a) ದರ್ಜಿ, (b) ಭಾವಸಾರ ಕ್ಷತ್ರಿಯ, (c) ಚಿಪ್ಪಿ, (d) ಚಿಪ್ಪಿಗ, (e) ಸಿಂಪಿ, (f) ಶಿಂಪಿ, (g) ಸಾಯಿ, (h) ಮಿರಾಲ್, (i) ರಂಗಾರಿ, (j) ರಂಗ್ರೇಜ್, (k) ನಿಲಾರಿ, (l) ನಾಮದೇವ, (m) ನಾಮದೇವ ಸಿಂಪಿ, (n) ರಂಗಾರೆ, (o) ನೀಲಗಾರ್, *(ಭಾಗ-೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨. ಪುಟ-೧೦೧೪).* ಈ ರೀತಿಯಾದ ಪಟ್ಟಿಯನ್ನು ನೋಡಬಹುದಾಗಿದೆ. ಭಾರತವು ಹಲವಾರು ಬುಡಕಟ್ಟು ಸಮುದಾಯಗಳನ್ನು ಹೊಂದಿರುವ ದೇಶವಾಗಿದೆ. ಒಂದು ಸಮುದಾಯದಿಂದ ಮತ್ತೊಂದು ಸಮುದಾಯವು ಸಂಪ್ರದಾಯ ಆಚರಣೆ, ನಂಬಿಕೆ ಉಟೋಪಚಾರ ರೂಢಿನಿಯಮ, ಉಡುಗೆ-ತೊಡಗೆ, ಮುಂತಾದ ಅಂಶಗಳೊಂದಿಗೆ, ವಿಭಿನ್ನತೆಯನ್ನು ಕಾಣಬಹುದು. ತ್ರೇತ್ರಾಯುಗದಲ್ಲಿ ಕಾರ್ತವೀರಾಜ್ಯರ್ಜನ ಎಂಬ ರಾಜನ ಸಾಮ್ರಾಜ್ಯದಲ್ಲಿ ಜಮದಗ್ನಿ ಎಂಬ ಮಹರ್ಷಿಯು ತನ್ನ ಆಶ್ರಮದಲ್ಲಿ ಕಾಮಧೇನು ಎಂಬ ಹಸುವನ್ನು ದೇವರ ಅನುಗ್ರಹದಿಂದ ಪಡೆದು ಸಲಹುತ್ತಿರುತ್ತಾನೆ. ಆ ಹಸುವನ್ನು ಪಡೆಯಲು ರಾಜನಾದ ಕಾರ್ತವೀರಾಜ್ಯರ್ಜುನು ಜಮದಗ್ನಿಯಲ್ಲಿ ವಿಚಾರಿಸಲಾಗಿ, ಮಹರ್ಷಿಯು ಅದನ್ನು ಕೊಡಲೊಪ್ಪದಿಂದ್ದಾಗ, ರಾಜನು ಬಲಪ್ರದರ್ಶನದಿಂದ ಹಸುವನ್ನು ತೆಗೆದುಕೊಂಡು ಹೋಗಲು ಪ್ರಯತ್ನಿಸಿದಾಗ, ಮಹರ್ಷಿಯು ತನ್ನ ಪುತ್ರನಾದ ಪರಶುರಾಮನನ್ನು ನೆನೆಯುತ್ತಾನೆ. ಪರಶುರಾಮನು ಆಶ್ರಮಕ್ಕೆ ಬಂದು ರಾಜನ ದೌರ್ಜನ್ಯವನ್ನು ಕಂಡು ಕ್ಷತ್ರಿಯರ ವಂಶವನ್ನೇ ನಾಶಮಾಡುವ ಪ್ರತಿಜ್ಞೆಯುತ್ತಾನೆ. ನಂತರ ತನ್ನ ಪ್ರತಿಜ್ಞೆಯನ್ನು ಪೂರೈಸುವ ಸಲುವಾಗಿ ಇಡೀ ಭೂಮಂಡಲವನ್ನು ಪ್ರದಕ್ಷಿಣೆ ಮಾಡಿ ಕ್ಷತ್ರಿಯರನ್ನು ಸಂಹಾರ ಮಾಡುತ್ತಿರುತ್ತಾನೆ. ಹೀಗೆ ಕ್ಷತ್ರಿಯರನ್ನು ಹುಡುಕಿಕೊಂಡು ಬರುವಂತಹ ಸಂದರ್ಭದಲ್ಲಿ ಭಾಗದಲ್ಲಿರುವಂತಹ ಜನ (ಈಗ ನಮ್ಮ ದೇಶದಲ್ಲಿಲ್ಲ, ಅದು ಪಾಕಿಸ್ತಾನದಲ್ಲಿದೆ.) ಕ್ಷತ್ರಿಯ ಕುಲದವರಾದ ಭಾವಸಿಂಗ್, ಸಾರಸಿಂಗ್, ಎಂಬವರು ಪರಶುರಾಮರಿಂದ ರಕ್ಷಣೆಗಾಗಿ ಆ ಪ್ರದೇಶದಲ್ಲಿದ್ದ ಹಿಂಗುಲಾಂಬ ದೇವಿಯ ಮೊರೆ ಹೋಗಲಿಕ್ಕೆ ಆ ದೇವಿಯಲ್ಲಿ ಪ್ರಾರ್ಥಿಸಿಕೊಂಡು ನಮಗೆ ನೆರವು ಕೊಡೆಂದು ಅಲ್ಲಿ ಬಚ್ಚಿಟ್ಟುಕೊಳ್ಳುತ್ತಾರೆ. ಆಗ ಪರುಶರಾಮ ತನ್ನ ದಿವ್ಯಜ್ಞಾನದಿಂದ ಅವರನ್ನು ಗುರುತಿಸಿ ಪ್ರತ್ಯಕ್ಷಳಾಗಿ ಪರಶುರಾಮನನ್ನು ಕಂಡು ಅವರಿಬ್ಬರ ಜಾತಿಯನ್ನು

ತಿಳಿಹೇಳುತ್ತಾಳೆ. ಅದರಂತೆ ಇವರಿಬ್ಬರೂ ಕ್ಷತ್ರಿಯರಲ್ಲ ಒಬ್ಬ ನನ್ನ ಬಟ್ಟೆ ಹೊಲೆಯುವ ಸಿಂಪಿಗೆ, ಮತ್ತೊಬ್ಬ ನನ್ನ ಬಟ್ಟೆಗೆ ಬಣ್ಣ ಹಾಕುವ ರಂಗಾರೆ, ಜಾತಿಯವರು ಎಂದು ಅವರ ಜಾತಿಯನ್ನು ತಿಳಿಹೇಳಿದಾಗ ಪರಶುರಾಮನು ಅಲ್ಲಿಂದ ಹಿಂತಿರುಗುತ್ತಾನೆ. (ಭಾವಸಾರದಲ್ಲಿ ಸಿಂಗ್ ಎಂದರೆ ಕ್ಷತ್ರಿಯ) ದೇವಿಯಿಂದ ರಕ್ಷಿತರಾದ ಅವರು ದೇವಿಯ ಭಕ್ತರಾದರು. ಅಂತಹ ಸಮುದಾಯಕ್ಕೆ ಸೇರಿದವರೆಂದು ಮುಂದಿನ ಪೀಳಿಗೆ ನಮ್ಮನ್ನು ಭಾವಸಾರಕ್ಷತ್ರಿಯ ಎಂದು ಗುರುತಿಸಿದರು.

ಕರ್ನಾಟಕ ರಾಜ್ಯದ ವಿವಿದೆಡೆ ಭಾವಸಾರ ಕ್ಷತ್ರಿಯ ಸಮುದಾಯದವರು ಸುಮಾರು ೩೫ ಲಕ್ಷ ಜನರಿದ್ದಾರೆ. ಕರ್ನಾಟಕದಲ್ಲಿ ನೆಲೆಸಿರುವ ಜನಾಂಗದವರ ಮುಖ್ಯ ಕಸುಬು ಬಟ್ಟೆ ಹೊಲಿಯುವುದಾಗಿದೆ. ಹಾಗೂ ಬಟ್ಟೆ ವ್ಯಾಪಾರವನ್ನು ಮಾಡುವಂತವರು ಬಾಹುಸಾರ ಕ್ಷತ್ರಿಯರ ಸಮುದಾಯದವರು ವಿಠಲನನ್ನೇ ಆರಾಧ್ಯ ದೈವವನ್ನಾಗಿ ಆರಾಧಿಸುತ್ತಾರೆ. ವಾರಕರೀ ಪಂಥವನ್ನು ಮಾಡುವರು. ಅಂದರೆ, ವಿಠಲನ ಸೇವೆಗಾಗಿ ಪಂಢರಪುರಕ್ಕೆ ಆಷಾಡ, ಕಾರ್ತೀಕ ಶುದ್ಧ, ಏಕಾದಶಿಯ ವಾರಿಗಾಗಿ ಹೋಗಿಬರಲು ಗುರುಗಳಿಂದ ದೀಕ್ಷೆ ಪಡೆದ ಭಕ್ತರಿಗೆ ವಾರಕರಿ ಎನ್ನುವರು. ಕರ್ನಾಟಕದ ಎಲ್ಲಾ ಕಡೆಗಳಲ್ಲಿ ಈ ಮತಪಂಥಗಳ ಜನರು ವಾಸವಾಗಿದ್ದಾರೆ. ಬಾಹುಸಾರ ಕ್ಷತ್ರಿಯ ಸಮುದಾಯವು ಅವಿಭಕ್ತ ಕುಟುಂಬ ಪದ್ಧತಿಯು ಹೆಚ್ಚಿನ ಪ್ರಮಾಣದಲ್ಲಿ ಇರುವುದು ಕಂಡುಬರುತ್ತದೆ. ವಿವಾಹ ಒಂದು ಸಂಸ್ಕಾರ ವಿಧಿ ಇದನ್ನು ವಿಧಿವತ್ತಾಗಿ ನಡೆಸಿಕೊಂಡು ಬಂದಿದ್ದಾರೆ. ಇಲ್ಲಿ ಕುಟುಂಬ ವ್ಯವಸ್ಥೆಯ ಅಡಿಯಲ್ಲಿ ಬರುವ ವೈವಾಹಿಕ ಪದ್ಧತಿಯಲ್ಲಿ ಇಂದಿಗೂ ಸೋದರ ಸಂಬಂಧಿ ಮದುವೆಗಳು ಬಹು ಆಸಕ್ತಿದಾಯಕವಾಗಿ ನಡೆಯುತ್ತವೆ. ಬಾಹುಸಾರ ಕ್ಷತ್ರಿಯರಲ್ಲಿ ಹೆಣ್ಣಿಗೆ ತೆರವುಕೊಡುವ ಪದ್ಧತಿಯು ಇದೆ. ಗೋತ್ರಗಳು ಮತ್ತು ಬೆಡಗುಗಳಿಂದ ನೆಂಟಸ್ತಿಕೆಯನ್ನು ಮಾಡುತ್ತಾರೆ. ಬಾಹುಸಾರ ಕ್ಷತ್ರಿಯರು ಕೃಷಿ ಪಶುಪಾಲನೆ ಬಟ್ಟೆಗೆ ಬಣ್ಣ ಹಾಡುವುದು, ಬಟ್ಟೆಯನ್ನು ಹೊಲಿಯುವುದು ಜೊತೆಗೆ ಮೌಖಿಕ ಪರಂಪರೆಯ ಬಳಕೆ ಇಲ್ಲದಿದ್ದರು ಆಚರಣೆಯ ಒಂದು ಭಾಗವಾಗಿ ಹಬ್ಬ ಹರಿದಿನಗಳಲ್ಲಿ ದಿಂಡಿ ಉತ್ಸವ, ಜಯಂತೋತ್ಸವ ಇತ್ಯಾದಿ ಸಂದರ್ಭಗಳಲ್ಲಿ ಬಳಸಬಹುದಾದಂತಹ ಪರಿಕರಗಳು ಉಡುಗೆ–ತೊಡುಗೆಗಳು ಆಹಾರ ಪದ್ಧತಿ ಆಚರಣೆ ನಂಬಿಕೆ ಮೂಲಕ ಸಮಗ್ರ ಸಂಸ್ಕೃತಿಯನ್ನು ರಚಿಸಲು ಸಾಧ್ಯ.

ದರ್ಜಿಯರನ್ನು ಭಾವಸಾರ ಕ್ಷತ್ರಿಯ ನಾಮದೇವ ಶಿಂಪಿ, ಶಿಂಪಿಗ ಎಂದೂ ಕರೆಯುತ್ತಾರೆ. ಇವರು ಮನೆಯಲ್ಲಿ ಹಾಗೂ ಸಂಬಂಧಿಕರೊಡನೆ ಮರಾಠಿಯನ್ನು ಮಾತನಾಡುತ್ತಾರೆ. ಇತರರೊಂದಿಗೆ ಕನ್ನಡದಲ್ಲಿ ಮಾತನಾಡಿ ಕನ್ನಡ ಲಿಪಿಯನ್ನು ಬಳಸುತ್ತಾರೆ. ಈ ಸಮುದಾಯದ ಜನರು ಸಾಮಾನ್ಯವಾಗಿ ಕರ್ನಾಟಕದ ನಗರ ಹಾಗೂ ಪಟ್ಟಣ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಇವರಲ್ಲಿ ಮೂರು ಭಿನ್ನಕುಲಗಳನ್ನು ಹೆಸರಿಸಲಾಗಿದೆ. ದೇವಲ, ಕುಂದಲ ಹಾಗೂ ಹರಿದಾಸ ಇವರಲ್ಲಿ ಹೊರಬಾಂಧವ್ಯದ ಬಳ್ಳಿಗಳೂ ಕೂಡ ಇವೆ. ಅವೆಂದರೆ ಪಿಸ್ಸೆ, ವಾಡೆ, ಕಾಕಡೆ, ಇತ್ಯಾದಿಗಳು, ಸೋದರ ಸಂಬಂಧಿ ವಿವಾಹಗಳಿಗೆ ಇವರಲ್ಲಿ ಅವಕಾಶವಿದೆ. ವರದಕ್ಷಣೆಯನ್ನು ಹಣ ಅಥವಾ ಇನ್ನಾವುದೇ ರೂಪದಲ್ಲಿ ಕೊಡುತ್ತಾರೆ. ಜನಿವಾರವನ್ನು ಧರಿಸುತ್ತಾರೆ. ಸಾಂಪ್ರದಾಯಿಕವಾಗಿ ದರ್ಜಿಗಳು ಬಟ್ಟೆ ಹೊಲಿಯುವ ಸಮುದಾಯ ಇವರಲ್ಲಿ ಕೆಲವರು ಸರ್ಕಾರಿ ಹಾಗೂ ಖಾಸಗಿ ಸಂಸ್ಥೆಗಳಲ್ಲಿ ನೌಕರಿಯಲ್ಲಿದ್ದಾರೆ. ಈ ಸಮುದಾಯದವರಿಗೆ

ತಮ್ಮದೇ ಜಾತಿಯ ಸಂಘಟನೆಯಿದೆ. ಇವರು ಶಿವ, ವಿಷ್ಣು, ಭವಾನಿ ಇತರೆ ದೇವರುಗಳನ್ನು ಪೂಜಿಸುತ್ತಾರೆ. ಬ್ರಾಹ್ಮಣ ಪುರೋಹಿತರ ಇವರ ಧಾರ್ಮಿಕ ವಿಧಿಗಳನ್ನು ಪೂರೈಸುತ್ತಾರೆ. ಯುಗಾದಿ ಗಣೇಶ ಚತುರ್ಥಿ, ದಸರಾ, ಹಾಗೂ ದೀಪಾವಳಿ ಇವರು ಆಚರಿಸುವ ಕೆಲವು ಮುಖ್ಯ ಹಬ್ಬಗಳು. ಈ ಸಮುದಾಯದಲ್ಲಿ ಕೆಲವರು ಆಧುನಿಕ ವೃತ್ತಿಗಳಲ್ಲಿದ್ದಾರೆ. ಆಧುನಿಕ ಸಾಮಾಜಿಕ ಸೌಲಭ್ಯಗಳನ್ನು ಉಪಯೋಗಿಸಿಕೊಂಡು ಆರ್ಥಿಕ, ಸಾಮಾಜಿಕ ಬದಲಾವಣೆಯನ್ನು ಹೊಂದುತ್ತಿದ್ದಾರೆ *(ಪ್ರಶಾಂತ್ ಹೆಚ್.ಡಿ. (ಸಂ), ಕರ್ನಾಟಕ ರಾಜ್ಯಕೋಶ-೪, ಜನಸಮುದಾಯ ಸಂಪುಟ, ಪುಟ-೫೬, ೨೦೦೦).*

'ಶಿಷ್ಟ ಸಂಸ್ಕೃತಿಯೊಂದು ದಟ್ಟವಾಗಿ ಬೆಳೆದ ಮೇಲೂ ಜನರ ಸಂಸ್ಕೃತಿಯೂ ಯಾವುದೇ ರೀತಿಯಲ್ಲಿ ಸೊರಗಿಲ್ಲ. ಬದಲಾಗಿ ಶಿಷ್ಟ ಸಂಸ್ಕೃತಿಯನ್ನು ಪೋಷಿಸುತ್ತಾ ತನ್ನ ಪ್ರಭಾವವನ್ನು ಉಳಿಸಿಕೊಂಡು ಬರುವಲ್ಲಿ ಯಾವ ಜನಪದವು ಹಿಂದೆ ಬಿದ್ದಿಲ್ಲ. ಜೊತೆಗೆ ತಮ್ಮ ರೀತಿ ನೀತಿಗಳಲ್ಲಿ ಆಚರಣೆಗಳಲ್ಲಿ ಸಂಪ್ರದಾಯಗಳಲ್ಲಿ ಇಂದಿಗೂ ಆಳವಾಗಿ ಬೇರು ಬಿಟ್ಟು ಬದುಕಿನೊಡನೆ ಅರ್ಥಪೂರ್ಣವಾದ ಸಂಬಂಧವನ್ನು ಇಟ್ಟುಕೊಂಡೇ ಬಾಹುಸಾರ ಕ್ಷತ್ರಿಯ ಸಮುದಾಯವು ಮುಂದೆ ಸಾಗುತ್ತಿದೆ. ಬಾಹುಸಾರ ಕ್ಷತ್ರಿಯ ಸಮುದಾಯವು ತನ್ನದೇ ಭೌಗೋಳಿಕ ಹಿನ್ನೆಲೆ, ವಸತಿ, ಕುಟುಂಬ, ವಿವಾಹ, ನ್ಯಾಯ, ಆಹಾರ, ಉಡುಗೆ-ತೊಡುಗೆ, ವೃತ್ತಿ, ಕ್ರೀಡಾ ಆಟಗಳು, ವೈದ್ಯವಿಶ್ಯ, ಕಲೆ, ಕಲಾವಿದರು, ಧರ್ಮ, ವಾರ್ಷಿಕಾವರ್ತನದ ಆಚರಣೆಗಳು, ಜೀವನಾವರ್ತನದ ಆಚರಣೆಗಳು ನಂಬಿಕೆ-ವಿಧಿ-ನಿಷೇಧಗಳು, ಹರಕೆಗಳು, ಜನಪದ ಸಾಹಿತ್ಯ, ಭಾಷೆ, ಶೈಕ್ಷಣಿಕ, ರಾಜಕೀಯ, ಆರ್ಥಿಕ ಸ್ಥಿತಿಗತಿ ಜನಸಂಖ್ಯಾ ಪ್ರಮಾಣ ಇವೆಲ್ಲವು ಅವರು ಇದ್ದ ಪುರಾವೆಗಳು ತಿಳಿಸುತ್ತವೆ'*(ಸೂರ್ಯನಾಥ ಯು ಕಾಮತ್, (ಸಂ), ಭಾರತದ ಗ್ಯಾಸೆಟಿಯರ್, ಧಾರವಾಡ ಜಿಲ್ಲೆ, ೨೦೧೦).*

**೩.೭.ತೊಗಟ/ತೊಗಟರು/ತೊಗಟವೀರ/ತೊಗಟಗೇರ/ತೊಗಟವೀರಕ್ಷತ್ರಿಯ/ತೊಗಜಪುಷ್ಪಾಂಜಲಿ**

ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಯ ಅನುಸಾರವಾಗಿ ಪ್ರವರ್ಗ-೨(ಎ) ಕ್ರಮಸಂಖ್ಯೆ ೭೬ರಪ್ರಕಾರ (a) ನೇಯ್ಗಿ, (b) ಕುರುಹಿನ ಶೆಟ್ಟಿ, (c) ಕುರ್ನಿ, (d) ಬಿಳಿಮಗ್ಗ, (e) ತೊಗಟ/ ತೊಗಟರು/ ತೊಗಟವೀರ/ತೊಗಟಗೇರ/ತೊಗಟವೀರಕ್ಷತ್ರಿಯ/ತೊಗಜಪುಷ್ಪಾಂಜಲಿ, (f) ಸೋಣಿಗ, (g) ಜಂಖಾನ, (h) ಐರಿ, (i) ಅವಿರ್, (j) ಸಾಲೆ/ಪಟ್ಟಸಾಲೆ, (k) ಪದ್ಮಸಾಲೆ/ ಪದ್ಮಶಾಲಿ/ ಪದ್ಮಸಾಲಿ, (l) ಸಾಲಿ/ ಪಟ್ಟಸಾಲಿ, (m) ಕೈಕೋಳನ್/ ಸೆಂಗುಂದರ್, (n) ನೇಯ್ಕಾರ್, (o) ಜಾಡರ್, (p) ಜಾಂದ್ರ, (q) ಸ್ವಕುಳಸಾಳಿ / ಸ್ವಕುಳಸಾಳೆ, *(ಭಾಗ-೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨. ಪುಟ-೧೦೧೫).* ತೊಗಟ ವೀರ ಕ್ಷತ್ರಿಯರನ್ನು ಹಲವಾರು ಹೆಸರುಗಳಿಂದ ಗುರುತಿಸಲಾಗಿದೆ. ಕುರುಹಿನ ಶೆಟ್ಟಿ, ತೊಗಟ, ತೊಗಟರು, ತೊಗಟಿಗ, ತೊಗಟವೀರ, ತೊಗಟ ಗೇರ, ತೊಗಜ ಪುಷ್ಪಾಂಜಲಿ, ನೆಯ್ಗಿ, ಬಿಳಿಮಗ್ಗ ಎಂದೂ ಕರೆಯುತ್ತಾರೆ. ಕುರುಹಿನಶೆಟ್ಟಿ ಸಮುದಾಯದ ಮೂಲ ಪುರುಷ ಒಂದು ಕುರುಹು ಮಾಡಿದ್ದರಿಂದ ಇವರಿಗೆ ಕುರುಹಿನಶೆಟ್ಟಿ

ಎಂದು ಕರೆಯುತ್ತಾರೆ. ಇವರು ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಎಲ್ಲ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತಾರೆ. ಆಂಧ್ರಪ್ರದೇಶದಲ್ಲಿ ಇವರನ್ನು 'ಕುರನಿ' ಎಂದು ಕರೆಯುತ್ತಾರೆ. ಥರ್ಸ್ಟನ್ ೧೯೦೧ರ ಜನಗತಿಯನ್ನು ಆಧರಿಸಿ ಹೀಗೆ ಹೇಳುತ್ತಾರೆ. 'ಕುರನಿ' ಎನ್ನುವ ಪದವು ಕುರಿ ಎನ್ನುವ ಪದದ ಹಾಗೂ 'ವನ್ನಿ' ಉಣ್ಣೆ ಎನ್ನುವ ಪದಗಳ ವಿಸ್ತೃತ ರೂಪ, ಈ ಸಮುದಾಯದವರು ಸಾಂಪ್ರದಾಯಿಕವಾಗಿ ಉಣ್ಣೆಯಿಂದ ನೇಯುವವರಾಗಿದ್ದರಿಂದ ಈ ಹೆಸರು ಪಡೆದಿರಬಹುದು. ಈ ಸಮುದಾಯದ ಹೆಸರು ಹೈದ್ರಾಬಾದ್ ಕರ್ನಾಟಕದ ಭಾಗದಲ್ಲಿ 'ಕುರುಹಿನ ಶೆಟ್ಟಿ ವೀರಶೈವ' ಎಂದಿತ್ತು ಎಂದು ಥರ್ಸ್ಟನ್ ಹೇಳುತ್ತಾರೆ. "ಉತ್ತರ ಕರ್ನಾಟಕದಲ್ಲಿ ಲಿಂಗಾಯತರ ಮತ್ತು ಕ್ಷತ್ರಿಯರ ಉಪಜಾತಿಯಾಗಿ ಕುರುಹಿನ ಶೆಟ್ಟಿಗಳು ಗುರುತಿಸಿಕೊಳ್ಳುತ್ತಾರೆ" *(ಪ್ರಶಾಂತ್ ಹೆಚ್.ಡಿ. (ಸಂ), ಕರ್ನಾಟಕ ರಾಜ್ಯಕೋಶ-೪, ಜನಸಮುದಾಯ ಸಂಪುಟ, ಪುಟ-೨೫, ೨೦೦೦).*

ಕರ್ನಾಟಕದಲ್ಲಿ ಇವರು ಬೆಂಗಳೂರು, ಮೈಸೂರು, ಬಳ್ಳಾರಿ, ರಾಯಚೂರು, ಕೊಪ್ಪಳ, ತುಮಕೂರು, ಚಿತ್ರದುರ್ಗ, ಬಿಜಾಪುರ, ಧಾರವಾಡ, ಕೊಲಾರ ಮತ್ತು ಹಾಸನ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ತೆಲಗು ಮತ್ತು ಕನ್ನಡ ಮಾತನಾಡುತ್ತಾರೆ. ಕನ್ನಡ ಲಿಪಿಯನ್ನು ಬಳಸುತ್ತಾರೆ. ಇವರಲ್ಲಿ ಅರವತ್ತಾರು ಬೆಡಗುಗಳಿವೆ. ಬನ್ನಿಕರ್ರೆ, ಅನಂತ, ಸೂರ್ಯ, ಹಂಚಿ, ನೆಲ್ಲಿ ಇವರ ಬೆಡಗುಗಳಲ್ಲಿ ಕೆಲವು ಸಮುದಾಯ ಮಟ್ಟದಲ್ಲಿ ಒಳಬಾಂಧವ್ಯ ಹಾಗೂ ಬೆಡಗುಗಳ ಮಟ್ಟದ ಹೊರಬಾಂಧವ್ಯ ವಿವಾಹ ಪದ್ಧತಿಯನ್ನು ಅನುಸರಿಸುತ್ತಾರೆ. ಸಹೋದರ ಸಂಬಂಧಿ ವಿವಾಹಗಳಿಗೆ ಅವಕಾಶವಿದೆ. ವಿವಾಹ ವಿಚ್ಛೇದನೆಗೆ ಅವಕಾಶವಿದ್ದರೂ ಅಂತಹ ಉದಾಹರಣೆಗಳು ಕಡಿಮೆ. ಹೆಚ್ಚಿನದಾಗಿ ವಧುವಿನ ಮನೆಯಲ್ಲಿ ವಿವಾಹ ನಡೆಯುತ್ತವೆ. ಗಂಡು ಮಗುವನ್ನು ವಂಶೋದ್ಧಾರಕನೆಂದು ತಿಳಿಯುತ್ತಾರೆ. ಸೀಮಂತ, ಎನ್ನುವ ಕಾರ್ಯವನ್ನು ಗರ್ಭಿಣಿಯಾದ ಐದನೆಯ ಅಥವಾ ಏಳನೆಯ ತಿಂಗಳಲ್ಲಿ ಮಾಡುತ್ತಾರೆ. ಜನನ ಸೂತಕವು ಹನ್ನೊಂದು ದಿನಗಳವರೆಗೆ ಇರುತ್ತದೆ. ನಾಮಕರಣ ಹಾಗೂ ಜವಳ ಕಾರ್ಯಗಳನ್ನು ಗಂಡು ಹಾಗೂ ಹೆಣ್ಣು ಮಕ್ಕಳಿಬ್ಬರಿಗೂ ಆಚರಿಸುತ್ತಾರೆ. ಸತ್ತವರನ್ನು ಹೂಳುವ ಹಾಗೂ ಸುಡುವ ಎರಡೂ ಪದ್ಧತಿಗಳು ಆಚರಣೆಯಲ್ಲಿವೆ. ಸಾವಿನ ಸೂತಕ ಹತ್ತು ದಿನಗಳವರೆಗೆ ಇರುತ್ತದೆ. ಹನ್ನೊಂದನೇಯ ದಿನ ಧಾರ್ಮಿಕ ಕಾರ್ಯವನ್ನು ಮಾಡುತ್ತಾರೆ.

ಇವರ ಸಾಂಪ್ರದಾಯಿಕ ವೃತ್ತಿಯೆಂದರೆ, ಬಟ್ಟೆಯನ್ನು ನೇಯುವುದು. ಆದರೆ ಈಗ ಇವರ ಸಾಂಪ್ರದಾಯಿಕ ವೃತ್ತಿ ಇಳಿಮುಖವಾಗಿದೆ. ಜಮೀನು ಇರುವ ಕೆಲವರು ಉಳುಮೆ ಮಾಡುತ್ತಿದ್ದಾರೆ. ಕೆಲವರು ಸರ್ಕಾರಿ ಹಾಗೂ ಖಾಸಗಿ ಸಂಸ್ಥೆಗಳಲ್ಲಿ ನೌಕರಿ ಹಾಗೂ ಸ್ವಯಂ ಉದ್ಯೋಗವನ್ನು ಮಾಡಿಕೊಂಡಿದ್ದಾರೆ. ರಾಜ್ಯಮಟ್ಟದಲ್ಲಿ 'ಕುರುಹಿನ ಶೆಟ್ಟಿ ಸಂಘ' ಮತ್ತು ತೊಗಟವೀರ ಕ್ಷತ್ರಿಯಸಂಘ ಎಂಬುದಾಗಿದೆ ಸಮುದಾಯದ ಸಂಘಟನೆಯು ಜಿಲ್ಲೆ ಹಾಗೂ ತಾಲೂಕು ಮಟ್ಟದಲ್ಲಿಯೂ ಅಲ್ಲದೇ ರಾಜ್ಯ ಮಟ್ಟದಲ್ಲಿ ಇವೆ. ದೊಡ್ಡ ಬಳ್ಳಾಪುರದಲ್ಲಿ ಇವರ ಸಮುದಾಯದಕ್ಕೆ ಸಂಬಂಧಿಸಿದಂತೆ ಗುರುಗಳ ಇರುವುದು ಕಂಡುಬಂದಿದೆ. ಈ ಸಂಘಟನೆಗಳು ಇವರ ಸಾಮಾಜಿಕ ಹಾಗೂ ಆರ್ಥಿಕ ಅಭಿವೃದ್ಧಿಗಾಗಿ ದುಡಿಯುತ್ತಿವೆ. ಇವರಲ್ಲಿ ಕೆಲವರು ಇತ್ತೀಚೆಗೆ ಆಧುನಿಕ ವೃತ್ತಿಗಳಲ್ಲಿ ತೊಡಗಿದ್ದಾರೆ.

ವಿದ್ಯಾಭ್ಯಾಸದ ಬಗ್ಗೆ ಇವರಿಗೆ ಒಲವಿದೆ. ಆಧುನಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಉಪಯೋಗಿಸಿಕೊಳ್ಳುತ್ತಾರೆ.

**೩.೮. ರಾಮರಾಜ ಕ್ಷತ್ರಿಯರು**

ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಯ ಅನುಸಾರವಾಗಿ ಪ್ರವರ್ಗ-೨(ಎ) ಕ್ರಮಸಂಖ್ಯೆ ೯೩ರ ಪ್ರಕಾರ (a) ಕೋಟೆಗಾರ, (b) ಕೋಟೆಯಾರ, (c) ಕೊಥಾಟಿ, (d) ಕೊಟ್ಟೇಗಾರ, (e) ಕೊಟ್ಟೇಯಾರ, (f) ಕುಮಾರ ಕ್ಷತ್ರಿಯ, (g) ಕುಮಾರ ಪಂಥ/ ಕೊಮಾರ್ ಪಚಿತ್/ ಕೋಮಾರ್ ಪೈಕ್/ ಕ್ಷತ್ರಿಯ ಕೋಮಾರ್ ಪಂತ, (h) ರಾಮ ಕ್ಷತ್ರಿಯ, (i) ರಾಮರಾಜ ಕ್ಷತ್ರಿಯ, (j) ಸೇರುಗಾರ (ಉತ್ತರ ಕನ್ನಡ), (k) ಸರ್ವ್‌ಗಾರ್ (ದಕ್ಷಿಣ ಕನ್ನಡ), (l) ಕೋಟೆ ಕ್ಷತ್ರಿಯ, *(ಭಾಗ-೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨. ಪುಟ-೧೦೧೬).* ಈ ರೀತಿಯಾದ ಪಟ್ಟಿಯನ್ನು ನೋಡಬಹುದಾಗಿದೆ. ಕೋಟೆಯವರು ಅಥವಾ ರಾಮರಾಜ ಕ್ಷತ್ರಿಯರು ಎಂದು ಗುರುತಿಸಲಾಗುವ ಸಮುದಾಯದ ಜನರು ಮೂಲತಃ ಇಂದು ಮಹಾರಾಷ್ಟ್ರಂತರ್ಗತವಾದ ರತ್ನಗಿರಿ ಜಿಲ್ಲೆಯ ವಿಜಯದುರ್ಗ ಎಂಬ ರೇವು ಪಟ್ಟಣದವರು ಎಂದು ಇತಿಹಾಸಕಾರರ ಅಭಿಪ್ರಾಯ. ವಿಜಯ ದುರ್ಗವು ಹಿಂದೆ ಕನ್ನಡನಾಡಿಗ ಭಾಗವೇ ಆಗಿತ್ತು. ಇದು ಮುಂಬೈಯಿಂದ ಸುಮಾರು ೧೭೦ ಮೈಲು ದೂರದಲ್ಲಿದೆ. ಕ್ಷತ್ರಿಯರು ರಾಮಕ್ಷತ್ರಿಯರು, ಕೋಟೆಗಾರರು, ಸೇರೆಗಾರರು, ಸೇರ್ವೆಗಾರರು ಎಂಬ ಹೆಸರುಗಳಿಂದ ಕರೆಯಲಾಗುವ ರಾಮರಾಜ ಕ್ಷತ್ರಿಯರು ಉತ್ತರ ಗೋವಾ ಭಾಗದ ಕೊಂಕಣ ಮರಾಠ ವಂಶಸ್ಥರು, ಕೆಳದಿಯ ಲಿಂಗಾಯಿತ ಅರಸರ ಆಮಂತ್ರಣದ ಮೇರೆಗೆ ಆಗಮಿಸಿದ ಇವರನ್ನು ಕೋಟೆ ಪಾಲಕರನ್ನಾಗಿ ನೇಮಿಸಲಾಯಿತು *(ನಿತ್ಯಾನಂದಬೈಂದೂರು, ಎನ್. ಬಿನ್ನವತ್ತಳೆ, ಪುಟ-೫೦).*

ರಾಮರಾಜಕ್ಷತ್ರಿಯರ ಮೂಲ ಸ್ಥಾನವೆನ್ನಲಾದ ವಿಜಯದುರ್ಗವನ್ನು ಬಿಜಾಪುರದ ಸುಲ್ತಾನನು ದೊಡ್ಡದಾಗಿ ಕಟ್ಟಿಸಿದನು. ನಂತರ ೧೭ನೇಯ ಶತಮಾನದ ಮಧ್ಯಭಾಗದಲ್ಲಿ ಛತ್ರಪತಿ ಶಿವಾಜಿಯು ಮತ್ತಷ್ಟು ಭವ್ಯವೂ, ಭದ್ರವೂ ಆಗಿ ನಿರ್ಮಿಸಿದನು. ಹೀಗೆ ಬಹಳ ಹಿಂದಿನಿಂದಲೇ ಐತಿಹಾಸಿಕ ಮಹತ್ವವನ್ನು ಪಡೆದ ವಿಜಯ ದುರ್ಗವು ಕದಂಬರು, ರಾಷ್ಟ್ರಕೂಟರು, ಬಾದಾಮಿ ಮತ್ತು ಕಲ್ಯಾಣಿ ಚಾಲುಕ್ಯರು, ಯಾದವರು, ಹೊಯ್ಸಳರು, ವಿಜಯನಗರದ ಅರಸರು, ಕೆಳದಿನಾಯಕರು, ಹೀಗೆ ಪ್ರಸಿದ್ಧ ಅರಸು ಮನೆತನಗಳು ಆಳ್ವಿಕೆಗೊಳಪಟ್ಟಿತ್ತು. ವಿಜಯದುರ್ಗವು ದೊಡ್ಡ ದಂಡಿನ ಠಾಣೆಯೂ ಆಗಿತ್ತು. ವಿಜಯದುರ್ಗದಲ್ಲಿ ಕ್ಷತ್ರಿಯರು ಸೇನಾವೃತ್ತಿಯನ್ನು ಮಾಡಿ ಪರಿಶ್ರಮದಿಂದ ರಾಜಾನುಗ್ರಹವನ್ನು ಪಡೆಯುತ್ತಿದ್ದರು. ಇಲ್ಲಿ ವಿಶೇಷ ಪ್ರಯತ್ನದಿಂದ ಸೇನೆಯಲ್ಲಿ ಸೇರಿಕೊಂಡು ಕ್ಷತ್ರಿಯರಾಗಿ ಗುರುತಿಸಿಕೊಳ್ಳಲು ಜನ ಹೆಮ್ಮೆ ಪಡುತ್ತಿದ್ದರು. ಇಲ್ಲಿ ಕ್ಷತ್ರಿಯರಿಗೆ ದೊರೆಯುತ್ತಿದ್ದ ಸ್ಥಾನಮಾನಗಳ ಕಾರಣಕ್ಕೆ ತಮ್ಮ ಜನರನ್ನು ಕ್ಷತ್ರಿಯರೆಂಬ ಉಪನಾಮವನ್ನು ಬಳಸಿಕೊಂಡೇ ಕರೆದುಕೊಂಡಿರಬಹುದು. ಈ ಹಿನ್ನೆಲೆಯಲ್ಲಿ

ಯೋಧರಾದ ಈ ಜನರು ರಾಮರಾಜ ಕ್ಷತ್ರಿಯರು, ರಾಮಕ್ಷತ್ರಿಯರು ಎಂದು ತಮ್ಮನ್ನು ಕರೆದುಕೊಂಡಿರಬಹುದು. ಕೆಳದಿಯ ಇಕ್ಕೇರಿ ನಾಯಕರು, ತುಳುನಾಡಿನ ಕಡೆ ತಮ್ಮ ರಾಜ್ಯವನ್ನು ವಿಸ್ತರಿಸಿ ಕೋಟೆಗಳನ್ನನು ಕಟ್ಟಿಸಿ ಭದ್ರತೆಗಾಗಿ ಈ ಜನರನ್ನು ತಂದು ನೆಲೆಗೊಳಿಸಿದರು. ಕೋಟೆಯ ಭದ್ರತೆಗಾಗಿಯೇ ಕರೆತಂದು ನೇಮಿಸಿದ ಜನ ಆದ ಕಾರಣಕ್ಕೆ ಇವರನ್ನು ಕೋಟೆಯವರೆಂದು ಕೋಟೆ ಕ್ಷತ್ರಿಯರೆಂದೂ ಕರೆದರು. ಹಿಂದೆ ಈ ಕ್ಷತ್ರಿಯ ಸಮುದಾಯದ ಹಿರಿಯರು ನಾಯಕ ಎಂಬ ಉಪನಾಮವನ್ನು ತಮ್ಮ ಹೆಸರಿನೊಡನೆ ಸೇರಿಸಿಕೊಳ್ಳುತ್ತಿದ್ದರು.

ಇವರು ಇಕ್ಕೇರಿ ನಾಯಕರು ಕಟ್ಟಿಸಿದ ಚಂದ್ರಗಿರಿ, ಕಾಸರಗೋಡು, ಕುಂಬಳೆ, ಮೂಳಲಿ, ಬೇಕಲ, ಬಂದಡ್ಕ ಕೋಟೆಗಳ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಇದು ಇವರಿಗೂ ಕೋಟೆಗೂ ಇರುವ ಅವಿನಾಭಾವ ಸಂಬಂಧವನ್ನು ಸೂಚಿಸುತ್ತದೆ. ಇಕ್ಕೇರಿ ಅರಸರು ಕೋಟೆಗಳ ಸಂರಕ್ಷಣೆಗಾಗಿ ಉಂಬಳಿಗಳನ್ನು ನೀಡಿ ಕ್ಷತ್ರಿಯ ಜನರನ್ನು ಇಲ್ಲಿ ನೆಲೆಗೊಳಿಸಿದರು. ಕೋಟೆಯ ಉಸ್ತುವಾರಿ ನೋಡಿಕೊಂಡಿದ್ದ ಇವರನ್ನು ಕೋಟೆಯವರು ಎಂದು ಕರೆಯಲಾಗುತ್ತದೆ. ಈ ಪ್ರದೇಶದಲ್ಲಿ ರಾಮರಾಜ ಕ್ಷತ್ರಿಯರು ಎಂದು ಕೋಟೆಯವರನ್ನು ಕರೆಯಲು ಇರುವ ಕಾರಣವನ್ನು ಊಹಿಸಲು ಅವಕಾಶವಿದೆ. ಚಂದಾವರದಲ್ಲಿ ನಮಗೆ ಸಮಸ್ತರಿಗೆ ಆದಿಸ್ಥಳವು ಎಂಬ ಹೇಳಿಕೆಯನ್ನು ಈ ಸಮುದಾಯದ ಜನರು ಕ್ರಿ.ಶ. ೧೬೩೩ರಲ್ಲಿ ಶೃಂಗೇರಿ ಮಠಕ್ಕೆ ಬರೆದುಕೊಟ್ಟ ಬಿನ್ನವತ್ತಳೆಯಲ್ಲಿ (ಈ ಬಿನ್ನವತ್ತಳೆಯ ವಿವರವದ ಪ್ರತಿಯನ್ನು ಅನುಬಂಧ –೭.೪.೧ ನೋಡಬಹದು)ದಾಖಲಿಸಿದ್ದಾರೆ. ಇದು ಈ ಜನರು ಚಂದಾವರದ ಮೂಲವನ್ನು ಪರಂಪರಾಗತವಾಗಿ ಒಪ್ಪಿಕೊಂಡು ಬಂದುದರ ಸ್ಪಷ್ಟ ಸೂಚನೆಯಾಗಿದೆ.

ರಾಮಕ್ಷತ್ರಿಯ, ಕೋಟೆ ಕ್ಷತ್ರಿಯ ಅಥವಾ ಕೋಟೆಯವರು ಕೋಟೆಯರ ಕೋಟೆಗಾರ ಕೋಟೆ ಶೇರುಗಾರ, ಸರ್ವೆಗಾರ ಶೇರುಗಾರ, ಶಿರೋಗಾರ ಮತ್ತು ಶೆರೆಗಾರ, ಎಂಬ ಹಲವು ಹೆಸರುಗಳಿಂದ ಕರೆಯಲಾಗುತ್ತದೆ. ಇತ್ತೀಚಿನ ವರ್ಷಗಳಲ್ಲಿ ಇವರು ರಾಮಕ್ಷತ್ರಿಯ ಎಂಬುದು ಅಳವಡಿಸಿಕೊಂಡ ಹೆಸರಾಗಿದೆ. ಥರ್ಸ್ಟನ್ (೧೯೦೯) ಇವರನ್ನು ಸರ್ವೆಣಾರರೆಂದು ಕರೆದರೆ, ಎಂಥೋವನ್ (೧೯೨೨) ಇವರನ್ನು ಶೋರೆಗಾರರು ಅಂದರೆ, ಓಲೆಕಾರರು, ಕೊಂಕಣ ವಾಲೆಕಾರರೆಂದು, ಕರ್ನಾಟಕದ ವಾಲೆಕಾರರು ಎಂದು ಕರೆಯುತ್ತಿದ್ದರು. (ಓಲೆ ಸಂದೇಶವನ್ನು ಬರೆಯುವ ತಾಳೆ ಎಲೆ) ಎಂದು ವಿವರಿಸುತ್ತಾರೆ. ಗೋವಾದಿಂದ ಬಂದ ಇವರು ಕೊಂಕಣೆ ಮರಾಠರ ಗುಂಪನ್ನು ಪ್ರತಿನಿಧಿಸುತ್ತಾರೆಂದು ಹೇಳಲಾಗಿದೆ. ಕನ್ನಡದಲ್ಲಿ ಕೋಟೆ ಪದ ಇವರ ಕೋಟೆಯರ್, ಕೋಟೆಗಾರ ಹೆಸರುಗಳಿಗೆ ಹತ್ತಿರಬರುವಂತಹ ಅರ್ಥಕೊಡುತ್ತದೆ. ರಾಮಕ್ಷತ್ರಿಯರು ಉತ್ತರ ಕನ್ನಡ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕೇರಳ ಕಾಸರಗೋಡು ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇವರು ಮುಖ್ಯವಾಗಿ ಚಂದ್ರವಂಶ ವಿಭಾಗಕ್ಕೆ ಸೇರಿದರೂ ವಿಶ್ವಾಮಿತ್ರ, ಭಾರದ್ವಾಜ, ಜಮದಗ್ನಿ, ಗೌತಮ, ಕೌಂಡಿನ್ಯ, ವೈಶಂಪಾಯನ, ಅತ್ರಿ, ಇತ್ಯಾದಿ ಹನ್ನೆರಡು ಗೋತ್ರಗಳಿಗೆ ಸೇರಿದವರೆಂದು ಹೇಳಿಕೊಳ್ಳುತ್ತಾರೆ. ಗೋತ್ರಗಳಿಗೆ ಸಂಬಂಧಿಸಿದಂತೆ ಮನೆತನದ ಹೆಸರು ಗ್ರಾಮ ಮತ್ತು ಕುಟುಂಬ ದೇವತೆ (ಕುಲದೇವತೆ) ಆಧಾರದ ಮೇಲೆ ಪಂಗಡಗಳನ್ನು ಹೊಂದಿದ್ದಾರೆ. ಸಮುದಾಯದ ಮಟ್ಟದಲ್ಲಿ ಒಳಬಾಂಧವ್ಯ ವಿವಾಹ ಪದ್ಧತಿ,

ಗೋತ್ರಮಟ್ಟದಲ್ಲಿ ಹೊರಬಾಂಧವ್ಯ ವಿವಾಹ ಪದ್ಧತಿಯನ್ನು ಅನುಸರಿಸುತ್ತಾರೆ. "ಸಹೋದರ ಸಂಬಂಧಿ ವಿವಾಹಕ್ಕೆ ಅವಕಾಶವಿದೆ. ತಂದೆಯ ನಂತರ ಹಿರಿಯ ಮಗ ಕುಟುಂಬದ ಉತ್ತರಾಧಿಕಾರವನ್ನು ಪಡೆಯುತ್ತಾನೆ. ಕೆಲವರು ಸರ್ಕಾರಿ ಖಾಸಗಿ, ಸಂಸ್ಥೆಗಳಲ್ಲಿ ನೌಕರರಾಗಿದ್ದು, ಬೀಡಿಗಳನ್ನು ಸುತ್ತುತ್ತಾರೆ. ಹಿಂದೂಗಳಾದ ಇವರ ಕುಟುಂಬ ದೈವಗಳು-ಮಲ್ಲಿಕಾರ್ಜುನ, ಮಹಾದೇವ, ಶ್ರೀರಾಮಚಂದ್ರ, ಮಾರುತಿ ಇತ್ಯಾದಿ"*(ಪ್ರಶಾಂತ್ ಹೆಚ್.ಡಿ. (ಸಂ), ಕರ್ನಾಟಕರಾಜ್ಯಕೋಶ-೪, ಜನಸಮುದಾಯ ಸಂಪುಟ, ಪುಟ-೧೦೫, ೨೦೦೦).*

ಕುಮಾರ ಕ್ಷತ್ರಿಯರು ಹೊಸದುರ್ಗ ಮತ್ತು ಕಾಸರಗೋಡು ಪ್ರದೇಶದಲ್ಲಿ ನೆಲೆಸಿದ್ದಾರೆ. ಇವರನ್ನು ಹಳೆ ಪೈಕದವರು ಎಂಬ ಹೆಸರಿನಿಂದಲೂ ಗುರುತಿಸಲಾಗುತ್ತದೆ. ಕೋಟೆಗಾರ ಎಂತಲೂ ಹೇಳುವುದಿದೆ. ಸ್ಥಳೀಯವಾಗಿ ಇವರನ್ನು ಚೇರಿಕಾರ, ಸೇರೆಗಾರ ಎಂದೇ ಕರೆಯುತ್ತಾರೆ. ಇವರು ಮೂಲತಃ ವಿಜಯನಗರದವರು, ವಿಜಯನಗರ ಅರಸರಿಂದ ಜಹಗೀರ ಪಡೆದು ಅವರ ಸೈನ್ಯದ ಕಾಲ್ದಳದ ಘಟಕವಾಗಿ ಸೇವೆ ಸಲ್ಲಿಸುತ್ತಿದ್ದರು. ಕೆಲವರು ಪಾಳೆಯಗಾರರಾಗಿ ವಿಜಯನಗರಕ್ಕೆ ಕಪ್ಪಕಾಣಿಕೆಗಳನ್ನು ನೀಡುತ್ತಿದ್ದರು. ವಿಜಯನಗರದ ತರುವಾಯ ಇಕ್ಕೇರಿ ಅರಸರೊಡನೆ ಸೇರಿಕೊಂಡು ಸೇನೆಯ ಸುಬೇದಾರರಾಗಿ ಕೆಲಸ ನಿರ್ವಹಿಸುವರು. ಇಕ್ಕೇರಿಯ ಹಿರಿಯ ವೆಂಕಟಪ್ಪ ನಾಯಕನು ಕ್ರಿ.ಶ. ೧೬೧೭ರಲ್ಲಿ ಚಂದ್ರಗಿರಿಯವರೆಗೆ ಸೈನ್ಯವನ್ನು ತಂದು ಇಲ್ಲಿನ ತುಂಡರಸರನ್ನು ಬಗ್ಗುಬಡಿದನು. ತನ್ನ ಜೊತೆ ತಂದಿದ್ದ ಸೈನ್ಯವನ್ನು ಇಲ್ಲಿಯೇ ಇರಿಸಿ ಮರಳಿದನು. ತರುವಾಯ ಕ್ರಿ.ಶ. ೧೬೫೨ರಲ್ಲಿ ಕರಾವಳಿಯಲ್ಲಿ ಕಿರುಕುಳ ನೀಡುತ್ತಿದ್ದ ಪೋರ್ಚುಗೀಸರನ್ನು ತುಳುನಾಡಿಗೂ ಹಾಗೂ ಕೊಡಗನ್ನು ಇಕ್ಕೇರಿಯ ಶಿವಪ್ಪ ನಾಯಕನು ಸೇನೆಯ ಮೂಲಕ ಸದ್ದಡಗಿಸಿದನು. ಕೇರಳದ ನೀಲೇಶ್ವರದಲ್ಲಿ ತೊಲಗದ ಕಂಬವನ್ನು ನಿಲ್ಲಿಸಿದನು. ಚಂದ್ರಗಿರಿಯಲ್ಲಿ ಕೋಟೆಯನ್ನು ಕಟ್ಟಿಸಿ ರಕ್ಷಣೆಗೆ ಸೇನೆಯ ದಂಡನಾಯಕನಾದ ಸುಬೇದಾರ ಕೆಂಚಪ್ಪನನ್ನು ನೇಮಿಸಿದನು. ಈ ವಂಶದಲ್ಲಿ ಕೊನೆಯ ಪಾಳೆಯಗಾರನಾದ ಶ್ರೀ ಕುಮಾರ ಭರಮಪ್ಪ ನಾಯಕನ ಸವಿನೆನಪಿಗಾಗಿ ಹಾಗೂ ಮೂಲಕ್ಷೇತ್ರವಾದ ಕುಮಾರ ಕ್ಷೇತ್ರದ ನೆನಪಿಗಾಗಿ ಕುಮಾರ ಕ್ಷತ್ರಿಯರೆಂದು ಹೆಸರಿಸಿಕೊಂಡರು. ಇದಲ್ಲದೆ ಇಲ್ಲಿನ ಕೋಟೆಗಳ ಸಮೀಪ ನೆಲೆಸಿರುವ ಕುಮಾರ ಕ್ಷತ್ರಿಯರಲ್ಲಿ ಸುಬೇದಾರ ಅಲ್ಲದೆ ಜಮೇದಾರ ಹವಾಲ್ದಾರ ಕುಟುಂಬಗಳು ಇವೆ.

'ಹಳೆಪೈಕ ಪದಕ್ಕೆ ಹಳೆಯ ಸಿಪಾಯಿ (ಹಳೆ+ಪೈಕ) ಎಂದೂ ಹೇಳಲಾಗುತ್ತದೆ. ಪೈಕ ಎನ್ನುವುದು ಪಾಯಕದ ಅಪಭ್ರಂಶರೂಪ, ಪಾಯಕ>ಪಯಿಕ>ಪೈಕ ಎಂದರೆ, ಕಾಲಾಳು ಎಂದೇ ಅರ್ಥ. ಹಳೆ ಪೈಕರು ವೀರ ಯೋಧರೆಂದು ಉತ್ತಮ ದಂಡಾಳುಗಳೆಂದು, ಕೋಟೆಯುದ್ಧ ತಂತ್ರಗಾರಿಕೆಯಲ್ಲಿ ಪ್ರವೀಣರೆಂದು ತುರುವಂ, ಕೊಂಡೊಯ್ವ ಕಾಯಕದಲ್ಲಿ ನಿಪುಣರೆಂದು ಖ್ಯಾತಿ ಪಡೆದಿದ್ದಾರೆ. ಅಳುಪರು, ವಿಜಯನಗರದ ಅರಸರು, ಹೈದರಾಲಿ ಮತ್ತು ಟಿಪ್ಪುಸುಲ್ತಾನ, ಕೆಳದಿಯ ದೊರೆಗಳು ಮೊದಲಾದವರ ಸೈನ್ಯಗಳಲ್ಲಿ ಸೇವೆ ಸಲ್ಲಿಸಿ ಕೀರ್ತಿ ಪಡೆದ ಯೋಧರಿವರು ವಿಜಯನಗರ ಸಾಮ್ರಾಜ್ಯದ ಪ್ರಸಿದ್ಧ ದೊರೆ ಕೃಷ್ಣದೇವರಾಯನ ತಂದೆಯೂ ಹಳೆಪೈಕದ ಜಾತಿಗೆ ಸೇರಿದವನೆಂದೂ ಹೇಳಲಾಗುತ್ತದೆ'

*(ಮೋಹನ್‌ಕುಂಟಾರ್ ಎ, ಸಮುದಾಯಗಳ ಕನ್ನಡ ಪರಂಪರೆ, ಪುಟ-೨೦, ೨೦೧೨).* ಆಂಧ್ರದಲ್ಲಿ ಹಣವಂತರಿಗೆ ಪೈಕದವರು ಎಂದು ಹೇಳಲಾಗುತ್ತದೆ. ಕೃಷಿ ನಿರತರಾಗಿದ್ದ ಇವರನ್ನು 'ಹಲಾಪೈಕ' ಎಂದು ಕರೆಯುತ್ತಾರೆ. ಹಲಾ ಎಂದರೆ, ನೇಗಿಲು ಎಂದರ್ಥ. ಹಲಾವನ್ನು ಆಶ್ರಯಿಸಿದವರೇ 'ಹಲಾಪೈಕರು' ಅದು ರೂಢಿಯಲ್ಲಿ ಹಳೆ ಪೈಕವಾಗಿ ಬದಲಾಯಿತು ಎಂಬ ಅಭಿಪ್ರಾಯವಿದೆ. ನೇಗಿಲಿಗೆ ಹಲಾ ಎಂಬ ಸಂಸ್ಕೃತ ಪದ ಬಳಕೆಯಲ್ಲಿರುವ ಬಗೆಗೆ ಮಾಹಿತಿಯಿಲ್ಲ, ಹಾಗಾಗಿ ಇದು ವಾಸ್ತವ ದೂರವಾದ ವಿವರಣೆಯನಿಸುತ್ತದೆ.

ಸೇರೆಗಾರರು ಎಂದರೆ, ಕ್ಷತ್ರಿಯರು ನಿರ್ದಿಷ್ಟ ಹುದ್ದೆಯನ್ನೊ ಅಥವಾ ಜವಾಬ್ದಾರಿಯನ್ನೊ ನಿರ್ದೇಶಿಸುತ್ತದೆ. ಸೇರೆಗಾರ, ಎಂದರೆ, ಮೇಲ್ವಿಚಾರಕ ಎಂದರ್ಥ. ಕೋಟೆ ಅಥವಾ ಸೈನ್ಯದ ಮೇಲ್ವಿಚಾರಕರಾಗಿ ಕೆಲಸ ನಿರ್ವಹಿಸುತ್ತಿದ್ದುದರಿಂದ ಈ ಹೆಸರಿನಿಂದ ಕರೆದುದರಲ್ಲಿ ಅವಾಸ್ತವವೇನಿಲ್ಲ. ಕೋಟೆಗಳನ್ನು ತಮ್ಮ ಸ್ವಾಧೀನ ಪಡಿಸಿಕೊಂಡ ಬಳಿಕ ಕ್ಷತ್ರಿಯ ಸಮುದಾಯಗಳ ಜನರನ್ನು ಅಲ್ಲಿನ ಮೇಲ್ವಿಚಾರಕರನ್ನಾಗಿ ನೇಮಿಸಿದರು. ಅವರು ಸ್ಥಳೀಯ ಆಡಳಿತದ ಮೇಲ್ವಿಚಾರಣೆಯನ್ನು ಮಾಡುತ್ತ ಆಡಳಿತಕ್ಕೆ ಸಲ್ಲಿಸಬೇಕಾದ ಕಪ್ಪ, ಕಂದಾಯಗಳನ್ನು ಸಲ್ಲಿಸುವ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದುದರಿಂದ ಅವರನ್ನು 'ಸೇರಗಾರ' ಎಂಬ ಅನ್ವರ್ಥನಾಮದಿಂದ ಕರೆದಿರಬೇಕು. ಏಕೆಂದರೆ, ಈ ಹೆಸರು ಸ್ಪಷ್ಟವಾಗಿ ಕ್ಷತ್ರಿಯ ವೃತ್ತಿಯಲ್ಲಿ ನಿರತರಾದವರಿಗೆ ಮಾತ್ರ ಸೀಮಿತವಾಗಿದೆ. ನಿಘಂಟುಗಳಲ್ಲಿ ಹೇಳಿದ ಅರ್ಥದಂತೆ ಮುಂದಾಳುಗಳು ಆಗಿರಬಹುದು. ಬೇಕಲ ರಾಮನಾಯಕರು ಅರ್ಥೈಸುವಂತೆ ಸರ್-ಸರ, ಪೌಜುಕಚೇರಿ ಹಿಂದೆ ಕೋಟೆ ಠಾಣೆಗಳಲ್ಲಿ ಹುಜೂರು ಕಛೇರಿಯಂತೆ ಠಾಣೆ ಕಛೇರಿಗಳಾಗಿದ್ದವು. ಠಾಣೆದಾರ ಅಥವಾ ಫೌಜುದಾರಿಯು ಆಯಾ ತುಕಡಿಯ ಅಧಿಕಾರಿಯಾಗಿರುತ್ತಿದ್ದನು. ತುಕಡಿಯ ಆಡಳಿತವೂ ಆತನಿಗೇ ಸೇರಿದ್ದು, ಹೀಗೆ ಸರ+ಗಾರ ಎಂದರೆ, ಫೌಜು ಕಛೇರಿಯ ಹುದ್ದೆಗಾರ ಎಂದಾಗುತ್ತದೆ. ಈ ಕ್ಷತ್ರಿಯ ಸಮುದಾಯದ ಹಿರಿಯ ಅನೇಕರು. ಈ ಹುದ್ದೆಯನ್ನು ನಿರ್ವಹಿಸುತ್ತಾ ಬಂದವರೂ ಆಗಿದ್ದಾರೆ. ಹಾಗಾಗಿ ಸರ+ಗಾರ ಪದವು ಜನರ ಬಾಯಲ್ಲಿ ಸೆರೆಗಾರ, ಸೇರೆಗಾರ ಆಗಿರಬಹುದು ಎಂಬುದು ಸುತ್ತು ಬಳಸಿದ ವಿವರಣೆಯಂತೆ ತೋರುತ್ತದೆ *(ಮೋಹನ್‌ಕುಂಟಾರ್ ಎ, ಸಮುದಾಯಗಳ ಕನ್ನಡ ಪರಂಪರೆ, ಪುಟ-೨೫, ೨೦೧೨).*

ಕೊಮಾರ ಪಂತರನ್ನು, ಕೊಮಾರ ಪೈಕಿ, ಹಾಗೂ ಕ್ಷತ್ರಿಯ ಕೊಮಾರ ಪಂತ, ಎಂದು ಕರೆಯುತ್ತಾರೆ. ಇವರು ಕರ್ನಾಟಕದಲ್ಲಿ ಕಾರವಾರ, ಅಂಕೋಲ ಹಾಗೂ ಕುಮಟಾ ತಾಲ್ಲೂಕುಗಳಲ್ಲಿ ಕಂಡುಬರುತ್ತಾರೆ. ಇವರು ತಮ್ಮ ಹೆಸರಿನ ಜೊತೆ ನಾಯಕ ಹಾಗೂ ಮೆರ್ವಿ ಎಂದು ಸೇರಿಸಿಕೊಳ್ಳುತ್ತಾರೆ. ಕೊಮಾರ ಪಂಥ ಎನ್ನುವ ಹೆಸರು ಇವರು 'ಕುಮಾರ ರಾಮನ ಅನುಯಾಯಿಗಳು ಎನ್ನುವುದನ್ನು ಹೇಳುತ್ತದೆ. ಇವರು ಕನ್ನಡ ಕೊಂಕಣೆ ಹಾಗೂ ಹಿಂದಿ ಭಾಷೆಗಳನ್ನು ಮಾತನಾಡಿ ಕನ್ನಡ ಲಿಪಿಯ ಜೊತೆ ದೇವನಾಗರಿ ಲಿಪಿಯನ್ನು ಬಳಸುತ್ತಾರೆ. ಇವರಲ್ಲಿ ಹದಿನೆಂಟು ಹೊರ ಬಾಂಧವ್ಯ ಬಳ್ಳಿಗಳಿವೆ. ಕೊನಕರ್, ಘೂಂಡೇಕರ್, ತಲ್‌ಪನೇಕರ್, ಮಹಲ್ಸೆಕರ್, ಬಡಕರ್, ನಂದನ್‌ಕರ್, ಗಡ್ಡೇಕಾರ್, ಇತ್ಯಾದಿ*(ಪ್ರಶಾಂತ್ ಹೆಚ್.ಡಿ. (ಸಂ), ಕರ್ನಾಟಕ ರಾಜ್ಯಕೋಶ-೪, ಜನಸಮುದಾಯ ಸಂಪುಟ, ಪುಟ-೩೦, ೨೦೦೦).* ಬಳಿಗಳ ಹೆಸರುಗಳನ್ನು ಮನೆತನದ ಹೆಸರುಗಳಾಗಿಯೂ ಬಳಸುತ್ತಾರೆ.

ಮದುವೆಯು ಸೋದರ ಸಂಬಂಧಗಳಲ್ಲಿ ಹೆಚ್ಚಾಗಿ ನಡೆಯುತ್ತವೆ. ಮದುವೆಗಳು ಮಾತುಕತೆಗಳ ಮೂಲಕ ನಡೆಯುತ್ತವೆ. ಏಕಪತ್ನಿತ್ವ/ಏಕಪತಿತ್ವ ಇವರ ವಿವಾಹ ಪದ್ಧತಿಯಾಗಿದೆ. ಮದುವೆಯು ವಧುವಿನ ಮನೆಯಲ್ಲಿ ಜರಗುತ್ತದೆ. ವಧುವನ್ನು ಕರೆತಂದು ವರನ ಮುಂದೆ ಕೂಡಿಸುತ್ತಾರೆ. ಅವರ ನಡುವೆ ಒಂದು ಬಟ್ಟೆಯನ್ನು ಅಡ್ಡ ಹಿಡಿಯುತ್ತಾರೆ. ಮಂತ್ರೋಚ್ಚಾರಣೆ ಜರುಗಿದ ನಂತರ ಬಟ್ಟೆಯನ್ನು ತೆಗೆಯುತ್ತಾರೆ. ಆಗ ಮಧೂವರರು ಹಾರ ಬದಲಾಯಿಸುತ್ತಾರೆ. ನಂತರ ಧಾರೆ ಮುಹೂರ್ತ ಇರುತ್ತದೆ. ಗಂಡು ಮಕ್ಕಳು ಆಸ್ತಿಯಲ್ಲಿ ಸಮಪಾಲು ಪಡೆಯುತ್ತಾರೆ. ತಂದೆಯ ನಂತರ ಹಿರಿಯ ಮಗ ಮನೆಯ ವಾರಸುದಾರನಾಗುತ್ತಾನೆ. ಜನನದ ಸೂತಕವು ಹತ್ತು ದಿನಗಳವರೆಗೆ ಇರುತ್ತದೆ. ಹನ್ನೊಂದನೇ ದಿನ ನಾಮಕರಣ ಮಾಡುತ್ತಾರೆ. ಮುಂಡನ ಕಾರ್ಯವು ಮೂರು ವರ್ಷದ ಒಳಗೆ ಕೇವಲ ಬಾಲಕರಿಗೆ ಮಾತ್ರ ನಡೆಯುತ್ತದೆ. ಕಿವಿ ಚುಚ್ಚಿಸುವ ಕಾರ್ಯವನ್ನು ಬಾಲಕ, ಬಾಲಕಿಯರಿಬ್ಬರಿಗೂ ಮಾಡುತ್ತಾರೆ. ಶವವನ್ನು ಸುಡುತ್ತಾರೆ, ಸಾವಿನ ಸೂತಕವು ಹತ್ತು ದಿನಗಳವರೆಗೆ ಇರುತ್ತದೆ. ಕೆಲವು ಜನರಿಗೆ ಮಾತ್ರ ಸ್ವಂತ ಭೂಮಿಯಿದೆ.

ಈ ಪ್ರದೇಶಕ್ಕೆ ಮೊದಲು ಇವರು ಸೈನಿಕರಾಗಿ ಬಂದರು. ಇತ್ತೀಚಿಗೆ ಕೂಲಿ, ನಾರಿನ ಕೆಲಸ, ಉಳುಮೆ ಮಾಡುವುದು ಕಾರ್ಮಿಕರಾಗಿ ಗಣಿಗಾರಿಕೆ ಬಡಗಿಗಳಾಗಿ ಇತರೆ ಕರ ಕುಶಲಕಲೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕೆಲವರು ಸರ್ಕಾರಿ ಹಾಗೂ ಖಾಸಗಿ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇವರಲ್ಲಿ ನೆಲ ಹಾಗೂ ಗೋಡೆಯ ಮೇಲೆ ಚಿತ್ರಗಳನ್ನು ಬರೆಯುವ ವಿಶಿಷ್ಟಕಲೆ ಇದೆ. ಜಾನಪದ ನೃತ್ಯಗಳಾದ ಸುಗ್ಗಿಕುಣಿತ ಮತ್ತು ಕೋಲಾಟಗಳನ್ನು ಜಾನಪದ ಹಾಡುಗಳ ಜೊತೆ ಮಾಡುತ್ತಾರೆ. ಇವರಿಗೆ ಆಧುನಿಕ ಶಿಕ್ಷಣದ ಬಗ್ಗೆ ಆಸಕ್ತಿ ಇದೆ. ಸಾಂಪ್ರದಾಯಿಕ ಹಾಗೂ ಆಧುನಿಕ ವೈದ್ಯಕೀಯ ಪದ್ಧತಿಗಳೆರಡನ್ನೂ ಪ್ರೋತ್ಸಾಹಿಸುತ್ತಾರೆ. ಇವರಲ್ಲಿ ಕೆಲವರು ಸ್ವಯಂ ಉದ್ಯೋಗ ಯೋಜನೆಗಳು ಹಾಗೂ ಬ್ಯಾಂಕಿನ ಸಾಲಸೌಲಭ್ಯಗಳನ್ನು ಬಳಸುತ್ತಿದ್ದಾರೆ.

**೩.೯. ಕ್ಷತ್ರಿಯ/ ಕ್ಷತ್ರಿ:** ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಯ ಅನುಸಾರವಾಗಿ ಪ್ರವರ್ಗ–೨(ಎ) ಕ್ರಮಸಂಖ್ಯೆ ೯೪ರ ಪ್ರಕಾರ ಕ್ಷತ್ರಿಯ/ಕ್ಷತ್ರಿ (ಭಾಗ–೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨. ಪುಟ–೧೧೦೬). ಈ ಸಮುದಾಯದ ಬಗ್ಗೆ ೬ನೇಯ ಅಧ್ಯಯದಲ್ಲಿ ಕ್ಷೇತ್ರ ಕಾರ್ಯಕೈಗೊಂಡ ವಿವರಿಸಲಾಗಿದೆ.

**೩.೧೦. ರಾಜು ಕ್ಷತ್ರಿಯ**

ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಯ ಅನುಸಾರವಾಗಿ ಪ್ರವರ್ಗ–೨(ಎ) ಕ್ರಮಸಂಖ್ಯೆ ೯೮ರ ಪ್ರಕಾರ (a) ರಾಜು ಕ್ಷತ್ರಿಯ, (b) ರಾಜು – ರಾಜು, (c) ರಾಜುವರ್/

ರಾಜುವರ್/ ರಾಚೇವರ್, *(ಭಾಗ-೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨. ಪುಟ-೧೦೧೬).* ಈಗಾಗಲೇ ಹಿಂದುಳಿದ ವರ್ಗದ ಪ್ರವರ್ಗ-೨(ಎ) ಕ್ರಮ ಸಂಖ್ಯೆ: ೯೮(ಎ), (ಬಿ), (ಸಿ) ಯಲ್ಲಿರುವ 'ಅರಸು' ಜಾತಿಯ ಸಮಾನ ಜಾತಿಯೆಂದು ಹೇಳಲಾದ "ರಾಜು ಕ್ಷತ್ರಿಯ, ರಾಜು-ರಾಜು, ರಾಜುವಾರ್ / ರಾಜವಾರ್, ರಾಚೇವಾರ್" ಎಂದು ಕರೆಯಲಾಗುವ ಸಮುದಾಯವು ಈಗಾಗಲೇ ಹಿಂದುಳಿದ ವರ್ಗದ ಎಲ್ಲಾ ಮೀಸಲಾತಿ ಸವಲತ್ತುಗಳನ್ನು ಪಡೆದುಕೊಳ್ಳುತ್ತಿದೆ. ದಿನಾಂಕ: ೧೫.೦೫.೨೦೦೨ ರಲ್ಲಿ "ರಾಜು ಕ್ಷತ್ರಿಯ" ಜನಾಂಗದ ಶ್ರೀ ಭರತರಾಜ್ ಅರಸ್ ರವರು ಆಯೋಗಕ್ಕೆ ಪತ್ರವೊಂದನ್ನು ಬರೆದು "ರಾಜು ಕ್ಷತ್ರಿಯ" ಜಾತಿಗೆ ಸೇರಿದವರು ರಾಜ್ಯದ ಕೆಲವು ಭಾಗಗಳಲ್ಲಿ ಅಂದರೆ ಬೆಂಗಳೂರು, ಮೈಸೂರು, ಚಿಕ್ಕಮಗಳೂರು, ಶಿವಮೊಗ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ತಮ್ಮ ಹೆಸರಿನ ಮುಂದೆ 'ಅರಸು' (ಉದಾಹರಣೆಗೆ ರಾಮರಾಜ ಅರಸು ಎಂದು ಇಟ್ಟುಕೊಳ್ಳುತ್ತಾರೆಂದು, "ಅರಸು" ಎಂಬ ಉಪಜಾತಿಯು ಪ್ರವರ್ಗ-೨(ಎ) ನಲ್ಲಿ ಸೇರಿಲ್ಲದ್ದರಿಂದ, ಜಾತಿ ಪ್ರಮಾಣ ಪತ್ರ ಪಡೆಯಲು ತೊಂದರೆಯಾಗುತ್ತದೆಂದು, "ರಾಜು ಕ್ಷತ್ರಿಯ" ಹಾಗೂ "ಅರಸು" ಜಾತಿಗಳು ಒಂದೇ ಆಗಿದ್ದು "ಅರಸು" ಜಾತಿಯನ್ನು ರಾಜು ಕ್ಷತ್ರಿಯದೊಂದಿಗೆ ಪ್ರವರ್ಗ-೨(ಎ) ನಲ್ಲಿ ಸೇರಿಸಬೇಕೆಂದು ಕೋರಿರುತ್ತಾರೆ.

ಅರಸುರನ್ನು ರಾಜ್ಯವಾಳುವ ಸಮುದಾಯವೆಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ. ಹಾಗೆ ನೋಡಿದರೆ ಕರ್ನಾಟಕದ ಅನೇಕ ಜಾತಿ ಸಮುದಾಯಗಳಿಂದ ಬಂದವರು ಈ ರಾಜ್ಯವನ್ನು ಆಳಿದ ದಾಖಲೆಗಳಿದೆಯೇ ಹೊರತು ಇಡೀ ಸಮುದಾಯ ಆಳಿದ ದಾಖಲೆಯು ಎಲ್ಲಿಯೂ ಲಭ್ಯವಾಗುವುದಿಲ್ಲ. ಆದರೆ, ಈ ಎಲ್ಲ ಸಮುದಾಯಗಳು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿದೆ. ಆದಕಾರಣ, 'ಅರಸು' ಸಮುದಾಯವು ಕೇವಲ ಹಿಂದುಳಿದ ವರ್ಗವಾಗಿಯೇ ಉಳಿಯಿತೇ ಹೊರತು ಅವರಲ್ಲಿನ ಒಡೆಯರ್ ಮನೆತನ ಮಾತ್ರ ರಾಜ್ಯವಾಳಿದ್ದು ನಿಜ. ಅದರಲ್ಲೂ ನಾಲ್ವಡಿ ಕೃಷ್ಣರಾಜ ಒಡೆಯರ್‌ರಂತಹವರು ಇಡೀ ಹಿಂದುಳಿದ ವರ್ಗದವರಿಗಾಗಿ ಮಾಡಲಾದ ಕಾಯ್ದೆ, ಸವಲತ್ತುಗಳನ್ನು ಸ್ಮರಿಸುವ ದೃಷ್ಟಿಯಿಂದ ಇಷ್ಟೆಲ್ಲಾ ವಿವರವಾಗಿ ಹೇಳಬೇಕಾಯಿತು.

ಅಂತೆಯೇ, 'ಅರಸು' ಸಮುದಾಯದಿಂದ ಬಂದ ಶ್ರೀ ದೇವರಾಜ ಅರಸು ಕರ್ನಾಟಕದ ಮುಖ್ಯಮಂತ್ರಿಗಳಾಗಿ ಆಯ್ಕೆಯಾದರು. ಆದರೆ ಇವರು ಜಾತಿ ಹಿನ್ನೆಲೆಯಿಂದ ಬಂದವರಲ್ಲ. ಜಾತಿಯ ಬೆಂಬಲ ಪಡೆದು ಮುಂದೆ ಬಂದವರಲ್ಲ. ವೈಯಕ್ತಿಕ ನೆಲೆಯಲ್ಲಿ ರಾಜಕಾರಣ ಮಾಡಿ ಪ್ರವರ್ಧಮಾನಕ್ಕೆ ಬಂದವರು. ಯಾವ ಕಾರಣಕ್ಕೂ ಇವರು ತಮ್ಮ ಜಾತಿಯ ಹಿನ್ನೆಲೆಯಲ್ಲಿ ಬಳಸಿಕೊಳ್ಳಲಿಲ್ಲ. ಅರಸರು ಕೂಡ ಶ್ರೀ ಕೃಷರಾಜ ಒಡೆಯರ್‌ರವರಂತೆ ಸಾಮಾಜಿಕ ನ್ಯಾಯ ಪರಿಕಲ್ಪನೆಯಲ್ಲಿ ರಾಜ್ಯವನ್ನು ಆಳಲು ಆರಂಭಿಸಿದವರು.

'ಅರಸು' ಸಮುದಾಯವು ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮುಂದುವರೆದಂತೆ ಕಾಣುತ್ತಿಲ್ಲ. ಹಿಂದುಳಿದ ಸಮುದಾಯಗಳಿಗೆ ಹೋಲಿಸಿದರೆ 'ಅರಸು' ಸಮುದಾಯವು ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿರುವುದನ್ನು ಪುರಾವೆಗಳು ಸ್ಪಷ್ಟಪಡಿಸುತ್ತದೆ. ಅನೇಕ ವರ್ಷಗಳಿಂದ ಈ

'ಅರಸು' ಸಮುದಾಯವನ್ನು ೧೯೭೭ ರಲ್ಲೇ ಹಿಂದುಳಿದ ವರ್ಗಗಳ ಪಟ್ಟಿಯಿಂದ ತೆಗೆದು ಮುಂದುವರಿದ ಸಮುದಾಯಗಳೊಂದಿಗೆ ಇಟ್ಟ ಕಾರಣ ಈ ಸಮುದಾಯಕ್ಕೆ ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಯಾವುದೇ ಮೀಸಲಾತಿ ಅಥವಾ ಸವಲತ್ತುಗಳು ದೊರಕಿರುವುದಿಲ್ಲ ಎನ್ನುವುದು ಕ್ಷೇತ್ರ ಕಾರ್ಯದಿಂದ ದೃಢಪಟ್ಟಿದೆ.

ಇಡೀ ಹೊಂಗನೂರು ಗ್ರಾಮ ಅರಸು ಸಮುದಾಯದಿಂದ ಕೂಡಿದೆ. ಬೆಂಗಳೂರಿಗೆ ಕೇವಲ ೫೦-೬೦ ಕಿ.ಮೀ ದೂರದಲ್ಲಿರಬಹುದಾದ ಈ ಗ್ರಾಮ ಅತ್ಯಂತ ಹಿಂದುಳಿದ ಗ್ರಾಮವೆಂದು ಮೇಲ್ನೋಟಕ್ಕೆ ಕಾಣಬಹುದು. ಇಡೀ ಗ್ರಾಮದ ಎಲ್ಲಾ ಜನರು ಅರಸು ಸಮುದಾಯದವರೇ ಆಗಿದ್ದಾರೆ. ಇಡೀ ಗ್ರಾಮದ ಮನೆಗಳು ಹೆಂಚಿನ ಮತ್ತು ಹುಲ್ಲಿನ ಮನೆಗಳಾಗಿದ್ದು, ಅರಸು ಸಮುದಾಯದ ನಿಜ ಸ್ವರೂಪದ ದರ್ಶನವಾಯಿತು. ಹೆಸರುಗಳ ಪಕ್ಕದಲ್ಲಿ 'ಅರಸ್' ಎಂಬುದು ಜಾತಿ ಸೂಚಕವೆಂಬಂತೆ ಬಂದರೂ ಕೂಡ ಇವರು ಅರಸರಂತೆ ಕಾಣದೇ ಆಳುಗಳಿಗಿಂತ ಕಡೆಯಾಗಿ ಕಂಡು ಬಂದರು.

ಈ ಎಲ್ಲದರ ಹಿನ್ನೆಲೆಯಲ್ಲಿ ಕಂಡಾಗ ದೇಶದ ಹಾಗೂ ಪಾಶ್ಚಾತ್ಯ ಮಾನವ ಶಾಸ್ತ್ರಜ್ಞರು ಕಂಡುಕೊಂಡಂತೆ 'ಅರಸು' ಸಮುದಾಯವನ್ನು ಕೇವಲ ಆಳುವ ರಾಜರ ಸಮುದಾಯವೆಂದೇ ಗುರುತಿಸಲ್ಪಟ್ಟರೂ ನಮಗೆ ಲಭ್ಯವಿರುವ ದಾಖಲೆಗಳ ಪ್ರಕಾರ ಕಣ್ಣ ಮುಂದಿನ ವಾಸ್ತವಗಳ ಆಧಾರದಲ್ಲಿ ಈ 'ಅರಸು' ಸಮುದಾಯದಲ್ಲಿ 'ಒಡೆಯರ್' ರನ್ನು ಬಿಟ್ಟರೆ ಮಿಕ್ಕವರಾರು ರಾಜ ಮಹಾರಾಜರಾಗಿ ಆಳಲಿಲ್ಲ. ಈ ಸಮುದಾಯದ ಹೊಂಗನೂರು, ಕೂಡ್ಲೂರು ನಂತಹ ಚನ್ನಪಟ್ಟಣ ತಾಲ್ಲೂಕಿನ ಜನವಸತಿ ಪ್ರದೇಶಗಳನ್ನು ಹಾಗೂ ಮೈಸೂರು, ಮಂಡ್ಯ, ಚಾಮರಾಜನಗರ, ಚಿಕ್ಕಮಗಳೂರು, ಶಿವಮೊಗ್ಗ, ದಾವಣಗೆರೆ, ಹಾವೇರಿ ಹಾಗೂ ತುಮಕೂರು ನಂತಹ ಕಡೆಗಳಲ್ಲಿ ಅತ್ಯಂತ ವಿರಳವಾಗಿ ಕಾಣಿಸುವ ಅರಸುರು ಸಾಮಾಜಿಕವಾಗಿ ರಾಜಕೀಯವಾಗಿ ಹಾಗೂ ಶೈಕ್ಷಣಿಕವಾಗಿ ತೀರಾ ಹಿಂದುಳಿದಿರುವುದು ಕಂಡು ಬರುತ್ತದೆ.

### ೩.೧೧. ಕ್ಷತ್ರಿಯ ಮರಾಠ

ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕನೆಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಯ ಅನುಸಾರವಾಗಿ ಪ್ರವರ್ಗ-೩(ಬಿ) ಕ್ರಮಸಂಖ್ಯೆ ೨ರ ಪ್ರಕಾರ (a) ಮರಾಠ, ಮರಾಟ, (b) ಅರೆ ಕ್ಷತ್ರಿ, ಅರೆ ಮರಾಠ, ಆರ್ಯಮರಾಠ, (c) ಅರ್ಯ, ಆರ್ಯರು, (d) ಕೊಂಕಣ ಮರಾಠ, (e) ಕ್ಷತ್ರಿಯ ಮರಾಠ, (f) ಕುಳವಾಡಿ, *(ಭಾಗ-೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨, ಪುಟ-೧೦೧೮).* ಈ ರೀತಿಯಾದ ಪಟ್ಟಿಯನ್ನು ನೋಡಬಹುದಾಗಿದೆ. ಮರಾಠ ಕ್ಷತ್ರಿಯರು ಮೂಲತಃ ಮರಾಠ ವಂಶಸ್ಥರು. ಸರಿಸುಮಾರು ರಾಮರಾಜ ಕ್ಷತ್ರಿಯರ ಜೊತೆ ಜೊತೆಯಾಗಿ ತುಳುನಾಡಿಗೆ ಬಂದು ನೆಲೆಸಿದ ಯೋಧ ಜನರಿವರು. ಇವರ ಉಪನಾಮಗಳಲ್ಲಿ ಮರಾಠ ಕುರುಹುಗಳು ಇಂದಿಗೂ ಇವೆ. ಇವರೂ ಸಹ ರಾಮರಾಜ ಕ್ಷತ್ರಿಯರಂತೆ ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ವಿಜಯದುರ್ಗದ ದಂಡಿನ ಠಾಣೆಯಲ್ಲಿ ಪಳಗಿದವರಿರಬೇಕು. ಕೆಳದಿಯ ಇಕ್ಕೇರಿ ನಾಯಕರು ಇವರನ್ನು ತಮ್ಮ ಸೈನ್ಯಗಳಲ್ಲಿ ವಿವಿಧ ಹುದ್ದೆಗಳಲ್ಲಿ ನೇಮಿಸಿದರು. ಇಕ್ಕೇರಿ ನಾಯಕರು ರಾಜ್ಯ ವಿಸ್ತರಿಸಿ ತುಳುನಾಡಿನತ್ತ ಬಂದಾಗ ಅವರ ದಂಡಿನಲ್ಲಿ ಆರ್ಯ ಮರಾಠ ಕ್ಷತ್ರಿಯರೂ ಇದ್ದರು. ಇಲ್ಲಿನ ಸ್ಥಳಿಯ ರಾಜರನ್ನು ಸೋಲಿಸಿ

ಅವರು ಮತ್ತೆ ತಿರುಗಿ ಹೋದಂತೆ, ತಾವು ಕರೆತಂದ ಮರಾಠ ಕ್ಷತ್ರಿಯರನ್ನು ಇಲ್ಲಿ ಪಾಳೆಯಗಾರನಾಗಿ ನೇಮಿಸಿದರು. ಪಾಳೆಯಗಾರರಲ್ಲದೆ, ಸೈನ್ಯದಲ್ಲಿ ವಿವಿಧ ಹುದ್ದೆಗಳನ್ನು ಈ ಜನರು ನಿರ್ವಹಿಸಿ ತಮ್ಮ ಕರ್ತವ್ಯವನ್ನು ಮಾಡಿದರು. ವಿಜಯದುರ್ಗದ ದಂಡಿನ ಠಾಣೆಯಲ್ಲಿ ಪರಿಶ್ರಮಿಸಿದ ಜನವರ್ಗ ಎಂಬ ಕಾರಣಕ್ಕೆ ತಾವು ಸಹ ಆರ್ಯ ಮರಾಠ ಕ್ಷತ್ರಿಯರು ಎಂದು ಕರೆದುಕೊಂಡಿರಬಹುದು.

ಕಾಸರಗೂಡಿಗೆ ಬಂದು ನೆಲೆಸಿದ ಈ ಜನರು ಇಂದಿಗೂ ಮರಾಠರ ಉಪನಾಮವನ್ನೇ ಉಳಿಸಿಕೊಂಡಿದ್ದಾರೆ. ಹೆಸರುಗಳಲ್ಲಿ ಓಜಿಯಿಂದ ಕೊನೆಯಾಗುವುದು, ಈ ಜನರ ಅನನ್ಯತೆಗಳಲ್ಲೊಂದು ಹಾಗೆಯೇ ಅವರ ಮನೆತನದ ಹೆಸರುಗಳಾದ ಜಾದವ್, ಜಗತಾಪ್, ಸಿಂಧ್ಯಾ, ಪಾಟೀಲ, ಮೋರೆ, ಲಾಡ್, ಬಹುಮಾನ್, ವಾಗ್ಮಾನ್, ಪವಾರ್, ಇತ್ಯಾದಿಗಳು ಸೇರಿಕೊಳ್ಳುತ್ತವೆ. ಉದಾಹರಣೆಗೆ ಇವರ ಗಂಡಸರ ಹೆಸರುಗಳು ರಾಮೋಜಿರಾವ್, ಜಾದವ್, ಮನ್ನೋಜಿರಾವ್, ಕದಂ, ಸಿಂಧ್ಯಾ ಹೀಗೆ ಇರುತ್ತವೆ. ಇವರ ಹೆಸರು 'ಓಜಿ' ಪ್ರತ್ಯಯದಿಂದ ಕೊನೆಯಾಗುವ ಕಾರಣಕ್ಕೆ ಇವರನ್ನು 'ಓಜಿ' ಗಳು ಎಂದು ಗುರುತಿಸುವುದೂ ಇದೆ. 'ಓಜಿ' ಎಂಬುದು ಗೌರವ ಸೂಚಕಪದ. ಓವಜ (ನಾಡಿನಗುರು) ದಿಂದ ಓಜ–ಓಜಿ ಬಂದಿರಬಹುದು. ಇವರಲ್ಲಿ ಹೆಂಗಸರ ಹೆಸರುಗಳು ರಮಾಬಾಯಿ, ರಾಧಾಬಾಯಿ, ಭಾವಾನಿಬಾಯಿ ಹೀಗೆ ಮರಾಠರ ಹೆಸರುಗಳನ್ನು ನೆನಪಿಸುವಂತಿವೆ. ಇವರು ಆಚಾರ–ವಿಚಾರಗಳಲ್ಲಿ ಮರಾಠ ಸಂಸ್ಕೃತಿಯನ್ನು ಹೆಚ್ಚಾಗಿ ಅನುಸರಿಸುತ್ತಾರೆ. ಆದರೆ ಕನ್ನಡವನ್ನು ಮನೆ ಭಾಷೆಯನ್ನಾಗಿ ಸ್ವೀಕರಿಸಿದ್ದಾರೆ. ಸ್ಥಳೀಯವಾಗಿ ಇವರನ್ನು 'ಕನ್ನಡರು' ಎಂದೂ ಕರೆಯುತ್ತಾರೆ. 'ಮಹಾರಾಷ್ಟ್ರದಿಂದ ಕರ್ನಾಟಕದ ಇಕ್ಕೇರಿ ಸಂಸ್ಥಾನದಲ್ಲಿ ನೆಲೆನಿಂತ ಕಾರಣಕ್ಕೆ ಅಲ್ಲಿಂದ ಕನ್ನಡವನ್ನು ಇವರು ಸ್ವೀಕರಿಸಿರಬೇಕು. ಹಾಗಾಗಿ ಸಾಂಸ್ಕೃತಿಕವಾಗಿ ಇವರು ಮರಾಠರಿಗೆ ಸಾಮೀಪ್ಯದಿದ್ದರೂ ಭಾಷಿಕವಾಗಿ ಕನ್ನಡದ ಭಾಗವೇ ಆಗಿದ್ದಾರೆ ಎಂಬುದು ಗಮನಾರ್ಹ' *(ಮೋಹನ್‌ಕುಂಟಾರ್ ಎ,:೨೦೧೨:ಪು–೨೩).*

ಮರಾಠ ಎಂಬ ಪದವು ಅನೇಕ ಮರಾಠಿ ಅಬ್ರಾಹ್ಮಣ ಜಾತಿಗಳನ್ನು ಸೂಚಿಸುತ್ತದೆ. ಇವರು ಸೈನಿಕರಾಗಿಯೋ ಅಥವಾ ಮರಾಠಿ ದಾಳಿಕೋರ ದಂಡಿನ ಹಿಂಬಾಲಕರಾಗಿಯೋ ದಕ್ಷಿಣಕ್ಕೆ ಬಂದರು (ಥರ್ಸ್ಟನ್:೧೯೦೯) ದಕ್ಷಿಣ ಹಾಗೂ ಉತ್ತರ ಕನ್ನಡ ಜಿಲ್ಲೆಯಲ್ಲಿ ಇವರನ್ನು ಪರಿಶಿಷ್ಟ ಪಂಗಡವೆಂದೂ ಕೊಡಗಿನಲ್ಲಿ ಮರಾಠರೆಂದೂ ಗುರುತಿಸಿದ್ದಾರೆ. ಇವರು ಮರಾಠಿ ಭಾಷೆ ಮಾತನಾಡುವುದರಿಂದ ಮರಾಠಿಯರು ಎಂದು ಕರೆಯಲಾಯಿತು. ತಮ್ಮಲ್ಲಿ ಮರಾಠಿಯನ್ನು ಮಾತನಾಡುವ ಇವರು ತುಳು ಹಾಗೂ ಕನ್ನಡವನ್ನು ಮಾತನಾಡಬಲ್ಲರು. ಈ ಸಮುದಾಯವು ರಾಜ್ಯದ ಎಲ್ಲಡೆಗಳಲ್ಲೂ ಹಂಚಿ ಹರಿದು ಹೋಗಿರುವುದು ಕಾಣಬಹುದು. ಇವರಲ್ಲಿ ಸೋದರ ಮಾವ ಮತ್ತು ಸೋದರತ್ತೆಯ ಮಗಳೊಂದಿಗೆ ವಿವಾಹಕ್ಕೆ ಸಮ್ಮತಿ ಇದೆ. ಮೊದಲಿಗೆ ಇವರಲ್ಲಿ ಬಾಲ್ಯವಿವಾಹ ಅಸ್ತಿತ್ವದಲ್ಲಿದ್ದರೂ ಈಗ ಕಾಣಬರುವುದಿಲ್ಲ. ಇವರಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚು ಇವೆ. ಎಲ್ಲಾ ಗಂಡು ಮಕ್ಕಳಿಗೂ ಆಸ್ತಿಯಲ್ಲಿ ಹಕ್ಕಿರುತ್ತದೆ. ಹಿರಿಯ ಮಗನು ತಂದೆಯ ನಂತರ ಕುಟುಂಬದ ಉತ್ತರಾಧಿಕಾರವನ್ನು ಪಡೆಯುವನು. ಈ ಸಮುದಾಯದಲ್ಲಿ ಜಮೀನು ಇದ್ದವರೂ ಹಾಗೂ ಇಲ್ಲದವರೂ ಇದ್ದಾರೆ. ಪ್ರಸ್ತುತ ಇವರು ಉಳುಮೆ, ವ್ಯಾಪಾರ, ಕೈಗಾರಿಕಾ ಕೆಲಸ, ಬೀಡಿ ಸುತ್ತುವುದು ಸರ್ಕಾರಿ ಮತ್ತು ಖಾಸಗಿ ಉದ್ಯೋಗ, ಸ್ವಯಂ ಉದ್ಯೋಗಗಳಲ್ಲಿದ್ದಾರೆ. ಇವರು ಆರ್ಯಕ್ಷತ್ರಿಯರ ಮರಾಠ ಎಂಬ ತಮ್ಮ ಸಮುದಾಯದ ಸಂಘವನ್ನು ಹೊಂದಿದ್ದಾರೆ. ಇದು ಇವರ ಸಮುದಾಯದ ಅಭಿವೃದ್ಧಿಗಾಗಿ ಕೆಲಸಮಾಡುತ್ತಿದೆ. ಇವರಲ್ಲಿ ಶೈಕ್ಷಣಿಕ ಮಟ್ಟ ಸ್ವಲ್ಪ ಸುಧಾರಿಸಿದೆ. ಇವರು ಆಧುನಿಕ ಸಾಮಾಜಿಕ ಸಂಪರ್ಕ ಹಾಗೂ ಅವುಗಳ ಪ್ರಯೋಜನವನ್ನು ಪಡೆಯುತ್ತಿದ್ದಾರೆ*(ಪ್ರಶಾಂತ್ ಹೆಚ್ ಡಿ (ಸಂ): ೨೦೦೦:ಪುಟ–೮೮).*

ಈಗಾಗಲೇ ನಮಗೆ ತಿಳಿದಿರುವಂತೆ ಸಾಂಪ್ರದಾಯಿಕ ಜಾತಿ ವ್ಯವಸ್ಥೆಯ ರಚನೆಯಲ್ಲಿ ನಗರ ಪ್ರದೇಶದಲ್ಲಿನ ಜಾತಿ ವ್ಯವಸ್ಥೆಗಿಂತಲೂ, ಗ್ರಾಮೀಣ ಪ್ರದೇಶಗಳಲ್ಲಿ ಇರುವ ಜಾತಿ ವ್ಯವಸ್ಥೆಯಲ್ಲಿನ ಭೇದವನ್ನು ಸ್ಪುಟವಾಗಿ ಗುರುತಿಸಬಹುದು. ನಗರ ಪ್ರದೇಶದಲ್ಲಿ ಜನರು ತುಂಬಾ ನಾಜೂಕಿನಿಂದ ತಮ್ಮ ಜಾತಿಯನ್ನು ಗುರುತಿಸಿಕೊಂಡು ಆಧುನಿಕ ಸಂಘಸಂಸ್ಥೆಗಳಲ್ಲಿ ವ್ಯವಸ್ಥಿತವಾದ ಸಂಘಟನೆಗಳನ್ನು ಮಾಡಿಕೊಂಡಿದ್ದಾರೆ. ನಗರ ಪ್ರದೇಶದಲ್ಲಿ ಜಾತಿ ಸಂಘರ್ಷಗಳ ಪ್ರಖರತೆಯು ಹೆಚ್ಚಾಗಿ ಕಂಡುಬರದೆ ಕೇವಲ ಧರ್ಮ ಸಂಘರ್ಷ ಇರುತ್ತದೆ. ಆದರೆ ಜಾತಿ ಸಂಘರ್ಷದ ವಿಚಾರದಲ್ಲಿ ಆಧುನಿಕ ವ್ಯವಸ್ಥೆಗೆ ಹೊಂದಿಕೊಂಡಿವೆ. ಇಲ್ಲಿ ವ್ಯವಸ್ಥಿತವಾದ ರಾಜಕೀಯಗಳನ್ನು ಜಾತಿಯ ಸಂಘಟನೆಗಳು ಮಾಡುತ್ತಿರುವುದನ್ನು ಗುರುತಿಸಬಹುದು. ಉದಾಹರಣೆಗೆ ಸಮುದಾಯದ ಹೆಸರಿನ ಶೈಕ್ಷಣಿಕ ಸಂಸ್ಥೆಗಳು, ಸಮುದಾಯ, ಸಂಘಗಳು ಇತ್ಯಾದಿ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ಸಮಕಾಲೀನ ಸಂದರ್ಭದಲ್ಲಿ ಜಾತಿ ವ್ಯವಸ್ಥೆಯು ತನ್ನದೇ ಆದ ಪ್ರಬಲತೆಯನ್ನು ಹೊಂದಿದೆ. ಗ್ರಾಮೀಣ ಪ್ರದೇಶಗಳಲ್ಲಿ ಇನ್ನೂ ಸಹ ಅಸ್ಪೃಶ್ಯತೆ ಆಚರಣೆಯಲ್ಲಿ ಇರುವುದು ಹೆಚ್ಚಿರುವ ಜಾತಿ ಸಂಘಗಳು ಗ್ರಾಮದ ಧಾರ್ಮಿಕ ಆಚರಣೆಗಳಲ್ಲಿ ಪ್ರಬಲ ಜಾತಿಗೆ ಹೆಚ್ಚಿನ ಪ್ರಾಮುಖ್ಯತೆ ಇದೆ.

ಶ್ರೀ ಎಲ್.ಜಿ. ಹಾವನೂರರ ನಾಯಕತ್ವದ ಹಿಂದುಳಿದ ವರ್ಗಗಳ ಆಯೋಗ ನೀಡಿದ ವರದಿಯನ್ನು ಯಥಾವತ್ತಾಗಿ ಜಾರಿಗೆ ತಂದದ್ದು. ಈ ಕೀರ್ತಿಗೆ ಭಾಜನರಾದ ಅರಸು ಭಾರತದ ಚರಿತ್ರೆಯಲ್ಲಿಯೇ ಒಂದು ರೀತಿಯ ಪವಾಡವನ್ನೇ ಮಾಡಿದರು ಎಂದು ಹೇಳಿದರೆ ತಪ್ಪಾಗಲಾರದು. ಹಿಂದುಳಿದ ವರ್ಗಗಳಿಗೆ ಹುದ್ದೆಗಳಲ್ಲಿ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಮೀಸಲಿರಿಸಬೇಕೆಂಬ ವಾದ ೧೯೫೩ ರಲ್ಲಿಯೇ ರಾಷ್ಟ್ರಮಟ್ಟದಲ್ಲಿ ಕಾಲೇಕ್ಕರ್ ಆಯೋಗ ರಚಿಸುವುದರ ಮೂಲಕ ಸಾಕಾರಗೊಂಡಿತು. ಶ್ರೇಣೀಕೃತ ಸಮಾಜವ್ಯವಸ್ಥೆಯಲ್ಲಿ ಜಾತಿ ಎಂಬುದು ಅಸಮಾನತೆಯ ಕೇಂದ್ರವಾಗಿದೆ. ಎಲ್ಲಾ ಕ್ಷೇತ್ರದ ಹಿಂದುಳಿದಿರುವಿಕೆಗೆ ಜಾತಿಯೇ ಮುಖ್ಯ ಕಾರಣ ಎಂಬುದನ್ನು ಪರಿಗಣಿಸದೆ ಇನ್ನಾವುದೇ ಮಾನದಂಡವನ್ನು ಅನುರಿಸಿದರೂ ನ್ಯಾಯ ಒದಗಿಸಿದಂತಾಗುವುದಿಲ್ಲ. ಕಾಲೇಕ್ಕರ್ ಅವರು ತಮ್ಮ ವರದಿಯನ್ನು ಮುಕ್ತಾಯಗೊಳಿಸುವಾಗ 'ವ್ಯಕ್ತಿಯ ಆದಾಯ' ವನ್ನು ಮೀಸಲಾತಿಗೆ ಆಧಾರವಾಗಿಟ್ಟು ಕೊಳ್ಳಬೇಕೆಂಬುದನ್ನು ಸೂಚಿಸಿದರು. ಇದರಿಂದ ಹಲವಾರು ಗೊಂದಲಗಳಿಗೆ ಕಾರಣವಾಗಿ ಕಾಲೇಕ್ಕರ್ ವರದಿ ಕಸದಬುಟ್ಟಿ ಸೇರಿತು. ಆದರೆ ಇದಕ್ಕೆ ಹಾವನೂರರ ವರದಿಯ ಮೂಲಕ ವೈಜ್ಞಾನಿಕವಾದ ಅರ್ಥ ಮೂಡಿಸುವ ಪ್ರಯತ್ನಗಳು ಜರುಗಿದವು. ಭಾರತದ ಸಂದರ್ಭದಲ್ಲಿ ಜಾತಿ ಮತ್ತು ವರ್ಗ ಎಂಥ ಕೆಲಸ ಮಾಡುತ್ತದೆ ಎಂಬುದನ್ನು ಹಾವನೂರರು ತಮ್ಮ ವರದಿಯಲ್ಲಿ ಉಲ್ಲೇಖಿಸಿ ಸಮರ್ಥಿಸಿದ್ದಾರೆ. ಜೊತೆಗೆ ಅವರು ಮೀಸಲಾತಿಯನ್ನು ಅರ್ಥೈಸಿರುವ ರೀತಿ ಭಾರತದ ಸಾಮಾಜಿಕ ಸಂದರ್ಭದಲ್ಲಿ ತೀರಾ ಅರ್ಥಪೂರ್ಣವಾದದ್ದು. ಹಾವನೂರರು ತಮ್ಮ ವರದಿಯನ್ನು ಅರಸು ಅವರಿಗೆ ಒಪ್ಪಿಸುವ ಸಂದರ್ಭದಲ್ಲಿ ಹೇಳಿರುವ ಮಾತುಗಳು ಗಮನಾರ್ಹವಾದವು. "ಜಾತಿ, ಬುಡಕಟ್ಟು ಹಾಗೂ ಕೋಮುಗಳ ಹಿಂದುಳಿದಿರುವಿಕೆಯನ್ನು 'ಜಾತಿ' ಆಧಾರಿತ ನಿರ್ಧರಿಸಿರುವುದನ್ನು ಕೆಲವು ಮುಂದುವರಿದ ಜಾತಿಗಳು ವಿರೋಧಿಸುತ್ತಲೇ ಬಂದಿವೆ. ಇವರು ಎಷ್ಟರಮಟ್ಟಿಗೆ ಹಿಂದುಳಿದವರಿಗೆ ನೈಜ ಭಾವನೆಯನ್ನು ಹುಟ್ಟು ಹಾಕಿದ್ದಾರೆಂದರೆ ತಾವು ಒಳ್ಳೆ ಅವಕಾಶಗಳನ್ನು ಪಡೆದು ಮೇಲ್ಮುಖವಾಗಿ ಚಲಿಸುವುದು ಒಂದು ನೀತಿಯುತವಾದದ್ದು ಎಂದು ಭಾವಿಸಿಕೊಂಡಿವೆ" – ಹೀಗೆ ನಮ್ಮ ದೇಶದ ಹೀನಾಯ ಸ್ಥಿತಿಯನ್ನು ವ್ಯಕ್ತಪಡಿಸಿದ್ದಾರೆ.

ಹಿಂದುಳಿದ ವರ್ಗದವರು ಎಂದೂ ಜಾತಿ ಹೆಸರಿನಲ್ಲಿ ಸಂಘಟಿತರಾಗಲಿಲ್ಲ. ಹಾಗಾಗಿ, ಕೆಳಜಾತಿಗಳಲ್ಲಿ 'ಜಾತಿ ಪ್ರಜ್ಞೆ' ಎಂಬುದು ಮೂಡಲು ಸಾಧ್ಯವಾಗಲೇ ಇಲ್ಲ. 'ಜಾತಿಪ್ರಜ್ಞೆ' ಇಲ್ಲದ

ಕೆಳಜಾತಿಗಳ ಈ ದೌರ್ಬಲ್ಯ ಮೇಲ್ಜಾತಿಗಳಿಗೆ ಒಂದು ರೀತಿಯಲ್ಲಿ 'ಅನುಕೂಲಕರ'ವಾಗಿ ಪರಿಣಮಿಸಿತು. ಈ ಆಶಯವನ್ನು ಸಹ ಹಾವನೂರರು ಅತ್ಯಂತ ಸಂಕಟದಿಂದಲೇ ತೋಡಿಕೊಂಡಿದ್ದಾರೆ. ಅದೇನೆ ಇರಲಿ, ಅರಸು ಕಾಲದಲ್ಲಿ ಜಾರಿಗೆ ಬಂದ ಹಾವನೂರರ ವರದಿ ಹಿಂದುಳಿದವರ ಕಲ್ಯಾಣಕ್ಕೆ ಮಾಡಿದ ಯತ್ನವಾಯಿತು. ಉತ್ತಮ ಜಾತಿಯವರು ಶೂದ್ರರಾಗಲು ಹವಣಿಸತೊಡಗಿದರು, ಅಷ್ಟರಮಟ್ಟಿಗೆ ಇದು ಮಹತ್ವವನ್ನು ಪಡೆಯಿತು. ನಂತರದ ಮಂಡಲ್ ವರದಿಗೂ ಇದು ಸ್ಫೂರ್ತಿ ನೀಡಿತು. ಈ ವರದಿಯೂ ಸಹ ಹಾವನೂರರ ವರದಿಯ ಜಾಡಿನಲ್ಲೇ ಸಾಗಿ ಜಾತಿ ಆಧಾರಿತ ಮೀಸಲಾತಿಯನ್ನು ಎತ್ತಿಹಿಡಿಯಿತು. ಮೊದಲಾದ ರೀತಿಗಳಲ್ಲಿ ಸಮುದಾಯಗಳು ತಮ್ಮ ಸಾಂಪ್ರದಾಯಿಕ ಪಾರಂಪರಿಕ ವೃತ್ತಿಗಳನ್ನು ಸಾಂಸ್ಕೃತಿಕ ರೀತಿಯಲ್ಲಿ ಇನ್ನೂ ಅಸ್ತಿತ್ವದಲ್ಲಿ ಇಟ್ಟುಕೊಂಡಿವೆ. ಇನ್ನೂ ಕೆಲವು ಸಾಂಪ್ರದಾಯಿಕ ಪಾರಂಪರಿಕ, ಧಾರ್ಮಿಕ, ಆಚಾರ, ವಿಚಾರಗಳಲ್ಲಿ ಸಮುದಾಯಗಳು ಯಾವುದೇ ರೀತಿಯ ಒಪ್ಪಂದ ಮಾಡಿಕೊಂಡಿರುವಂತೆ ಕಂಡುಬರುವುದಿಲ್ಲ. ತನ್ನ ಸಾಂಪ್ರದಾಯಿಕ ವ್ಯವಸ್ಥೆಯನ್ನು ನಮ್ಮ ಸಮಾಜ ಕಾಯ್ದುಕೊಂಡಿರುವುದು ಅಧ್ಯಯನದಿಂದ ನೋಡಬಹುದು.

**ಆಧಾರ ಸಾಹಿತ್ಯಗಳು**


ಕರ್ನಾಟಕ ರಾಜ್ಯಪತ್ರ, ಭಾಗ–೧, ಗುರುವಾರ ಏಪ್ರಿಲ್ ೧೧, ೨೦೦೨.

ಜಯಪ್ರಕಾಶ ಎನ್ ಡಿ ಲಾಡ್, *ಲಾಡ ಜನಾಂಗದ ನೆಲೆ ಹಾಗೂ ಸಂಸ್ಕೃತಿ*, ಕನ್ನಡ ಪುಸ್ತಕ ಪ್ರಧಿಕಾರ, ಬೆಂಗಳೂರು, ೨೦೦೯.

ಜಿಲಾನಿ ಎಸ್ ಎ, *ಭಾರತದ ಗೆಜೆಟಿಯರ್ ಕರ್ನಾಟಕ ರಾಜ್ಯ ಉಡುಪಿ ಜಿಲ್ಲೆ*, ಬೆಂಗಳೂರು: ಕರ್ನಾಟಕ ರಾಜ್ಯ ಸರಕಾರ, ೨೦೧೦.

ನಟರಾಜ ಹುಳಿಯಾರ್ ಕಾಳೇಗೌಡ ನಾಗವಾರ (ಸಂ), *ರಾಮಮನೋಹರ ಲೋಹಿಯಾ ಬರಹಗಳು ಸಂ–೨, ಉತ್ತರ ದಕ್ಷಿಣ*, ೨೦೧೭.

ನಿತ್ಯಾನಂದಬೈಂದೂರು, ಎನ್. ಬಿನ್ನವತ್ತಳೆ, ಮಾಸಪತ್ರಿಕೆ.

ಪ್ರಭಾಕರ ಎ ಎಸ್, ಶ್ರೀಪಾದ ಶೆಟ್ಟಿ, (ಸಂ), ಲೋಹಿಯಾ: ವರ್ತಮಾನದ ಮುಖಾಮುಖಿ ಸಂ–೩, ೨೦೧೨.

ಪ್ರಶಾಂತ್ ಹೆಚ್ ಡಿ (ಸಂ), ಕರ್ನಾಟಕ ರಾಜ್ಯಕೋಶ–೪, ಜನಸಮುದಾಯ ಸಂಪುಟ, ೨೦೦೦.

ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, ಸಂ–೧, ಕನ್ನಡ ಸಂಸ್ಕೃತಿ ಇಲಾಖೆ, ೨೦೦೯.

ಬೊಜ್ಜಾ ತಾರಕಂ, ಸುಜ್ಞಾನಮೂರ್ತಿ ಬಿ (ಕಅ), ಜಾತಿ ವಿನಾಶ ವರ್ಗವಿನಾಶ, ೨೦೧೨.

ಮೋಹನ ಕುಂಟಾರ್ ಎ, ಸಮುದಾಯಗಳ ಕನ್ನಡ ಪರಂಪರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬೆಂಗಳೂರು, ೨೦೧೨.

ರಂಗಸ್ವಾಮಿ ಬಿ ಆರ್, (ಸಂ), ಪೆರಿಯಾರ್ ಇ ವೆಂ ರಾಮಸ್ವಾಮಿ ಬರಹ ಮತ್ತು ಭಾಷಣಗಳ ಸಂಗ್ರಹ, ಸಂ–೦೩, ೨೦೧೭.

ಶರ್ಮ ಎ ಆರ್, ಸಾಮಾಜಿಕ ಬದಲಾವಣೆ ಮತ್ತು ಚಳುವಳಿ, ಪ್ರಕಾಶಕರು ಅಖಿಲಾ ಏಜೆನ್ಸೀಸ್, ಮೈಸೂರು, ೧೯೯೯.

ಹಿರೆಮಠ ಬಿ ಆರ್ (ಸಂ), ಸಮಗ್ರ ವಚನ ಸಂಪುಟ–೮, ಕನ್ನಡ ಮಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೧.

ಸೂರ್ಯನಾಥ ಯು ಕಾಮತ್, (ಸಂ), ಭಾರತದ ಗ್ಯಾಸೆಟಿಯರ್, ಧಾರವಾಡ ಜಿಲ್ಲೆ, ೨೦೧೦.

# ಅಧ್ಯಾಯ: ನಾಲ್ಕು

## ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನ

# ಅಧ್ಯಾಯ: ನಾಲ್ಕು

# ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನ

**ಪೀಠಿಕೆ**

ಮೂಲತಃ ಅಲೆಮಾರಿಯಾಗಿದ್ದ ಮಾನವನು ಆದಿ ಶಿಲಾಯುಗದಿಂದ ೨೧ನೇ ಶತಮಾನದವರೆಗೆ ಒಂದಲ್ಲ ಒಂದು ರೀತಿಯ ಬೆಳವಣಿಗೆಯನ್ನು ಹೊಂದುತ್ತಾ ಬಂದಿರುವುದನ್ನು ನಾವು ಇತಿಹಾಸದ ಪುಟಗಳಲ್ಲಿ ಕಾಣುತ್ತೇವೆ. ವಿಶಾಲವಾದ ಅರ್ಥದಲ್ಲಿ ಮನುಷ್ಯರು ತಮ್ಮ ಜೀವನಾವಶ್ಯಕ ಸಂಗತಿಗಳಿಗಾಗಿ ಕೂಡಿಬಾಳುವುದನ್ನು 'ಸಮಾಜ' ಎನ್ನುತ್ತೇವೆ. ಹಾಗೆಯೇ ಸಮಾಜ ಎನ್ನುವುದನ್ನು ಸೀಮಿತವಾದ ಅರ್ಥದಲ್ಲಿ ಒಂದು ಗುಂಪು ಅಥವಾ ಸಮೂಹ ಎಂದೂ ಸಹ ಕರೆಯಲಾಗುತ್ತದೆ. ಸಮಾಜವು ಕ್ರಿಯಾತ್ಮಕವಾದ ಪರಸ್ಪರ ಅವಲಂಬನೆಯ ಕಾರಣಕ್ಕಾಗಿ ತನ್ನದೇ ಆದ ರೂಪು–ರೇಷೆಗಳನ್ನು ಒಳಗೊಂಡ ಒಂದು ಸಮೂಹ ಅಥವಾ ಒಂದು ಗುಂಪಾಗಿರುತ್ತದೆ. ಇಂತಹ ಪ್ರತಿಯೊಂದು ಸಮಾಜಗಳೂ ಅನೇಕ ಭಿನ್ನತೆಗಳ ನಡುವೆಯೂ ಒಂದು ಸಾಂಸ್ಕೃತಿಕ ಐಕ್ಯತೆ ಮತ್ತು ಅನನ್ಯತೆಯನ್ನು ಒಳಗೊಂಡಿರುತ್ತದೆ.

ಸಾಮಾಜಿಕ ರಚನೆಯಲ್ಲಿ ಕುಟುಂಬ ಒಂದು ಪ್ರಮುಖ ಘಟಕ. ಕುಟುಂಬದ ರಚನೆ ಅಪಾರ ವೈವಿಧ್ಯವನ್ನು ಹೊಂದಿದ್ದು, ಯಾವುದೇ ಸರಳೀಕೃತ ವ್ಯಾಖ್ಯಾನದಿಂದ ಅರ್ಥೈಸಿಕೊಳ್ಳಲು ಸಾದ್ಯವಾಗುವುದಿಲ್ಲ. ಕುಟುಂಬದ ವ್ಯಾಪ್ತಿಯೊಳಗೆ ಬರುವ ಪ್ರಮುಖ ವಿಚಾರಗಳೆಂದರೆ, ಕುಟುಂಬದ ಗಾತ್ರ, ಕುಟುಂಬದ ಯಜಮಾನಿಕೆ, ಆರ್ಥಿಕ ಮತ್ತು ಸಾಮಾಜಿಕ ವ್ಯವಹಾರಗಳು, ಮಹಿಳೆಯರ ಸ್ಥಾನ, ವಿವಾಹ ಪದ್ಧತಿ, ಮುಂತಾದವು, ಸಾಮಾನ್ಯರ್ಥದಲ್ಲಿ ಕುಟುಂಬವನ್ನು ಈ ರೀತಿಯ ಅರ್ಥೈಸಿಕೊಳ್ಳಬಹುದಾಗಿದೆ. ಅದು ಸಾರ್ವತ್ರಿಕವಾದ ಖಾಯಂ ಆದ, ವ್ಯಾಪಕವಾದ ವ್ಯವಸ್ಥೆ, ಸಾಮಾಜಿಕವಾಗಿ ಅಂಗೀಕೃತವಾದ ಲೈಂಗಿಕ ಸಂಪರ್ಕ, ಸಂತಾನಕ್ರಿಯೆ, ಸಮಾನ ವಸತಿ, ಕೌಟುಂಬಿಕ ಕಾರ್ಯಗಳು, ಆರ್ಥಿಕ ಸಹಕಾರ ಈ ಮುಂತಾದ ಲಕ್ಷಣಗಳನ್ನು ಒಳಗೊಂಡಿರುತ್ತದೆ. ಅಧ್ಯಯನದ ಈ ಕಾಲಾವಧಿಯಲ್ಲಿ ಕುಟುಂಬ ವ್ಯವಸ್ಥೆ ಬಹುಮಟ್ಟಿಗೆ ಸಾಂಪ್ರದಾಯಿಕ ವಿಧಿಗಳನ್ನು ಆಧರಿಸಿತ್ತು

ಎನ್ನುವುದು, ಶಾಸನಗಳಿಂದ ತಿಳಿದುಬರುತ್ತದೆ. ಪಿತೃ ಪ್ರಧಾನ ವ್ಯವಸ್ಥೆ, ಬಹುಪತ್ನಿತ್ವ, ಸತಿಪದ್ಧತಿ, ಮುಂತಾದವು ಸಮಾಜದ ಪ್ರಧಾನ ಲಕ್ಷಣಗಳಾಗಿದ್ದವು.

ಹಿಂದೂ ಧರ್ಮದ ಪರಧಿಯಲ್ಲಿ ಬರುವ ಕ್ಷತ್ರಿಯರು ಚದುರಿದಂತೆ ಇಡೀ ಕರ್ನಾಟಕದಾದ್ಯಂತ ಕಂಡುಬರುತ್ತಾರೆ. ಇಲ್ಲಿ ಪ್ರತಿಯೊಂದು ಜಾತಿ ಉಪಜಾತಿಗಳಿಗೂ ತನ್ನದೇ ಆದ ರೀತಿ-ರಿವಾಜುಗಳಿರುವಂತೆ ಕ್ಷತ್ರಿಯ ಜಾತಿಗೂ ಅದರದೇ ಆದ ಕಟ್ಟು ಕಟ್ಟಳೇ, ನಂಬಿಕೆ, ಆಚರಣೆ, ಸಂಪ್ರದಾಯ, ಆಹಾರ ಪದ್ಧತಿ, ಉಡುಗೆ-ತೊಡುಗೆ, ವೇಷ-ಭೂಷಣಗಳಿವೆ. ಮನುಷ್ಯ ಬದುಕುತ್ತಿರುವ ಭೌಗೋಳಿಕ ಪರಿಸರವನ್ನೂ ಒಳಗೊಂಡಂತೆ ಆತನ ಜೀವನ ವಿಧಾನದಲ್ಲಿ ಮುಖ್ಯವೆನಿಸುವ ಎಲ್ಲ ಸಂಗತಿಗಳೂ ಈ ಸಮಾಜದ ಅಧ್ಯಯನದಲ್ಲಿ ಒಳಗೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ಕ್ಷತ್ರಿಯ, ಅಥವಾ ಕ್ಷತ್ರಿಯ:ಕ್ಷತ್ರಿ, (ಹಿಂದೂ ಕ್ಷತ್ರಿಯ) ಕೋಟೆ ಕ್ಷತ್ರಿಯ, ಸಮಾಜದ ಜೀವನ ವಿಧಾನವನ್ನು ಅರಿಯುವ ಉದ್ದೇಶವನ್ನು ಹೊಂದಲಾಗಿದ್ದು, ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಇವರ ಭೌತಿಕ ಸಂಸ್ಕೃತಿಗೆ ಸಂಬಂಧಪಟ್ಟಂತಹ ವಸತಿ, ಅಡುಗೆ ಪದ್ಧತಿ, ಉಡುಗೆ-ತೊಡುಗೆ, ಮನೆ ಬಳಕೆಯ ವಸ್ತುಗಳು, ವ್ಯವಸಾಯ ಮತ್ತು ವ್ಯವಸಾಯಕ್ಕೆ ಸಂಬಂಧ ಪಟ್ಟಂತಾಹ ಉಪಕರಣಗಳು, ಪಶುಪಾಲನೆಗೆ ಸಂಬಂಧಪಟ್ಟ ವಿಚಾರಗಳು ಮತ್ತು ಅವರ ನ್ಯಾಯಪದ್ಧತಿಯನ್ನು, ಜನಪದ ವೈದ್ಯಪದ್ಧತಿಯನ್ನು, ಅಧ್ಯಯನದಲ್ಲಿ ಕೈಗೆತ್ತಿಕೊಳ್ಳಲಾಗಿದೆ.

### ೪.೧. ಬೇಟೆ

ಆದಿಮಾನವ ಜೀವನೋಪಾಯ ಮತ್ತು ಮೂಲ ವೃತ್ತಿ ಬೇಟೆಯ ಜೀವನನೊಂದಿಗೆ ಹೊಂದಿಕೊಂಡು ಬಂದ ಸಹಜ ಕ್ರಿಯೆಯಾಗಿದೆ. ಬದುಕಿಗಾಗಿ ಕೈಗೊಂಡ ವೃತ್ತಿಗಳಲ್ಲಿ ಬೇಟೆ ಮೊದಲನೆಯಾದಾಗಿದೆ. ವನವಾಸಿಯಾದ ಇವನಿಗೆ ಆಹಾರವೆಂದರೆ, ಗೆಡ್ಡೆ-ಹೆಣಸು, ಹಣ್ಣು-ಹಂಪಲು ಆಗಿರುತ್ತದೆ. ಇದು ಸಿಗದಿದ್ದಾಗ ಹಸಿವಾದಗ ತಿನ್ನಲು ಅವನು ಪ್ರಾಣಿ ಪಕ್ಷಿಗಳ ಕಡೆ ಮುಖಮಾಡಿದ. ಅದು ಅನಿವಾರ್ಯವಾಗಿ ಆ ಬೇಟೆ ಎಂಬ ವೃತ್ತಿಗೆ ಸಹಜವಾಗಿಯೇ ಹೊಂದಿಕೊಳ್ಳುತ್ತಾನೆ. ಆದಿಮಾನವ ಕಾಲದಲ್ಲಿ ಪ್ರಚಲಿತವಿದ್ದ ಬೇಟೆಯು ಅನೇಕ ಬದಲಾವಣೆಗಳನ್ನು ಹೊಂದುತ್ತಾ ಆಧುನಿಕ ಯುಗದಲ್ಲಿಯೂ ಜೀವಂತವಾಗಿರುವುದನ್ನು ಕಾಣಬಹುದಾಗಿದೆ. ಆದರೆ ಬೇಟೆಯ ಸ್ವರೂಪ ಮತ್ತು ವಿಧಾನಗಳು ಆಯಾ ಪ್ರದೇಶದ ಭೌಗೋಳಿಕತೆ ಮತ್ತು ಅಲ್ಲಿನ ವಾಸಿಸುವ ಪ್ರಾಣಿಗಳಿಗೆ ಅನುಗುಣವಾಗಿ ಬೇರೆ ಬೇರೆಯಾಗಿರುತ್ತದೆ. ಇಲ್ಲಿ ಮುಖ್ಯವಾಗಿ ಪಕ್ಷಿ ಬೇಟೆ, ಪ್ರಾಣಿ ಬೇಟೆ, ಜಲಚರಗಳ ಬೇಟೆಯಾಡುತ್ತಿದ್ದರು.

ರಾಜರ ಅಂಕಿತದಲ್ಲಿ ಹಲವು ವೃತ್ತಿಗಳನ್ನು ಅವಲಂಬಿಸಿ ಬದುಕುತ್ತಿದ್ದ ಕ್ಷತ್ರಿಯರು ಬೇಟೆಯನ್ನು ಉಪಕಸುಬಾಗಿ ರೂಢಿಸಿಕೊಂಡಿದ್ದರು. ತಮ್ಮ ಕ್ಷತ್ರಿಯ ವೃತ್ತಿಗೆ ಬೇಟೆ ಅವಶ್ಯವೆಂದು ತಿಳಿದು ರಾಜರು ಕರೆದಾಗ ಯೋಧರೊಂದಿಗೆ ಹೋಗುತ್ತಿದ್ದರು. ಮನರಂಜನೆಯ ಅಂಗವಾಗಿ ರಾಜರಿಗೆ ಬೇಟೆ ಅಗತ್ಯವಾಗಿದ್ದರಿಂದಲೂ ಕಾಡು ಪ್ರಾಣಿಗಳಿಂದ ಬೆಳೆ ಮತ್ತು ಪಶು ಸಂಪತ್ತಿನ ಸಂರಕ್ಷಣೆಗಾಗಿ

ಬೇಟೆಯಾಡುವುದು ಸಾಮಾಜ್ಯವಾಗಿತ್ತು. ರಾಜರು ತಮ್ಮ ಶಕ್ತಿ ಸಾಮರ್ಥ್ಯಗಳ ದೃಷ್ಟಿಯಿಂದಲೂ ಬೇಟೆಯನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಕಾಡುಹಂದಿ, ಜಿಂಕೆ, ಸಾರಂಗ, ಮೊಲ, ಮಾಂಸಕ್ಕಾಗಿ ಬೇಟೆಯಾಡಿದರೆ, ಆನೆ, ಹುಲಿ, ಕಾಡುಕೋಣಾದಿಗಳು ಸಂರಕ್ಷಣೆಯ ದೃಷ್ಟಿಯಿಂದ ಬೇಟೆಯಾಡುತ್ತಿದ್ದರು. ಹುಲಿಯ ಬೇಟೆ ರಾಜರ ಶೌರ್ಯ ಸಾಹಸಕ್ಕೆ ದ್ಯೋತಕವಾದರೆ, ಹವ್ಯಾಸ ವೃತ್ತಿಯು ಆಗಿತ್ತು. ಪ್ರಜೆಗಳು ರಾಜರ ಬೇಟೆಯನ್ನು ಬೆಂಬಲಿಸುತ್ತಿದ್ದರು. ಬೆಟ್ಟ ಗುಡ್ಡ ಪ್ರದೇಶಗಳಿಗೆ ಬಿಲ್ಲು, ಬಾಣ, ಮದ್ದು–ಗುಂಡು, ಬಲೆ, ತಮಟೆ, ಕೊಂಬು ಮೊದಲಾದ ಸಾಧನ ಸಲಕರಣೆಗಳ ಮೂಲಕ ಬೇಟೆಗೆ ಹೊರಡುತ್ತಿದ್ದರು. ಆದರೆ ಇಂದು ಬೇಟೆ ನಿಷಿದ್ಧವಾದರಿಂದ ಕಡಿಮೆಗೊಳಿಸಿದ್ದಾರೆ. ಮಾಂಸಾಹಾರಕ್ಕಾಗಿ ಮೀನು, ಕೋಳಿ, ಕುರಿ, ಅವಲಂಬಿಸಿದ್ದಾರೆ. ದೃಢವಾದ ಮೈಕಟ್ಟು ಪ್ರಾಣದ ಹಂಗು ತೊರೆದು ಹೋರಾಟ ಮಾಡುವ ಪ್ರವೃತ್ತಿ ಇವರಿಗೆ ಇದ್ದುದರಿಂದ ಒಂದು ಮುಖ್ಯ ಪ್ರಬಲ ಬೇಟೆಗಾರರೇ ಆಗಿದ್ದಾರೆ.

ನದಿ ಮುಖಜ ಭಾಗದಲ್ಲಿ ಕೋಟೆಯ ಸಂರಕ್ಷಣೆಯಲ್ಲಿ ತೋಡಗಿರುವ ಇವರು ತಮ್ಮ ಬಿಡುವಿನ ಅವಧಿಯಲ್ಲಿ ಪಕ್ಕದಲ್ಲೆ ಇರುವ ಹಳ್ಳ ನದಿಗಳಿಗೆ ಗಾಳ ಬಲೆ ಮೂಲಕ ಮೀನನ್ನು ಬೇಟೆಯಾಡುತ್ತಿದ್ದರು. ಮೀನನ್ನು ತಮ್ಮ ಅಡುಗೆಗೂ ಆಹಾರವಾಗಿ ಉಪಯೋಗಿಸುತ್ತಿದ್ದರು. ಪ್ರಸ್ತುತ ನದಿ ಮುಖಜ ಭೂಮಿ ಪ್ರದೇಶದಲ್ಲಿ ವಾಸಿಸುವ ಜನರು ಕೈಗಾಳ ಬಲೆ ಮತ್ತು ರಾತ್ರಿಯ ಹೊತ್ತಿನಲ್ಲಿ ಸೂಡಿಯನ್ನು ಕಟ್ಟಿಕೊಂಡು ಗ್ಯಾಸಲೈಟನ್ನು ಹೊತ್ತಿಸಿಕೊಂಡು ನದಿಯಲ್ಲಿ ಹೋಗಿ ಎರಕುಳಿಯಿಂದ ಕತ್ತಿಯ ಮೂಲಕ ಏಡಿ ಮೀನನ್ನು ಬೇಟೆಯಾಡುವುದು ಇವರ ಉಪಕಸುಬುವೆನ್ನಿಸಿದೆ.

**೪.೨. ಪಶುಪಾಲನೆ**

ಮೊದಲಿಗೆ ಪಶುಪಾಲನೆ ಪ್ರಾರಂಭವಾಗಿ ಅನಂತರ ಕೃಷಿ ಚಟುವಟಿಕೆಗಳು ನಡೆದವು. ಆಹಾರ ಸಂಗ್ರಹಕರು ಹಾಗೂ ಬೇಟೆಗಾರರಾಗಿದ್ದ ಮಾನವರು ಆಹಾರ ಬೆಳೆಯುವವರು ಅಥವಾ ಆಹಾರೋತ್ಪಾದಕರಾದರು, ಹಿಮಯುಗದಂತಹ ಪ್ರತಿಕೂಲ ವಾಯುಗುಣದ ಪ್ರಭಾವವನ್ನು ಪಶುಪಾಲನೆ ಮತ್ತು ಕೃಷಿ ಚಟುವಟಿಕೆಗಳಿಂದ ಎದುರಿಸಿದರು ಪಶುಪಾಲನೆಯಿಂದಾಗಿ ಆಹಾರವು ಸದಾ ಅವರೊಂದಿಗಿತ್ತು.

ನಾಯಿಯು ಮಾನವರಿಂದ ಪಳಗಿಸಲ್ಪಟ್ಟ ಮೊದಲ ಪ್ರಾಣಿ ಎಂದು ನಂಬಲಾಗಿದೆ. ನಾಯಿಯೂ ಬೇಟೆಗಾರನಾಗಿದ್ದು, ಮಾನವನ ಆಶ್ರಯತಾಣಗಳ ಬಳಿ ಮೂಳೆ ಮತ್ತು ಮಾಂಸದ ತುಣುಕುಗಳಿಗಾಗಿ ಸುಳಿಯಲಾರಂಭಿಸಿತು. ಇಬ್ಬರ ನಡುವೆ ಅನುಬಂಧ ಏರ್ಪಟ್ಟಿತು, ಹೀಗೆ ನಾಯಿಯು ಪಳಗಿಸಲ್ಪಟ್ಟಿತು. ಆ ನಂತರ ಕುರಿ, ಮೇಕೆ, ಹಸು, ಬೆಕ್ಕು, ಒಂಟೆ, ಮತ್ತು ಕುದುರೆಗಳು ಪಳಗಿಸಲ್ಪಟ್ಟವು. ನಾಯಿಗಳು ಮಾನವರಿಗೆ ಬೇಟೆಯಲ್ಲಿ ಸಹಾಯ ಮಾಡಲು ಮತ್ತು ಆಶ್ರಯ ತಾಣಗಳನ್ನು ಕಾಯಲು ಆರಂಭಿಸಿದವು. ಪಶುಪಾಲನೆಯು ಮಾನವರನ್ನು ಅಲೆಮಾರಿಗಳನ್ನಾಗಿಸಿತು. ಪಶುಗಳಿಗೆ ಆಹಾರ ಮತ್ತು ನೀರನ್ನು ಅರಸಿ ಬಹುದೂರ ಕ್ರಮಿಸಲಾರಂಭಿಸಿದರು. ಮಾನವ ವಿಕಾಸದ ಇತಿಹಾಸದಲ್ಲಿ ಕೃಷಿ ಚಟುವಟಿಕೆಯ

ಆರಂಭವನ್ನು ಕ್ರಾಂತಿಕ್ರಾರಿ ಬದಲಾವಣೆ ಎಂದು ಅಭಿಪ್ರಾಯ ಪಡಲಾಗಿದೆ. ಇದು ನವಶಿಲಾಯುಗದ ಪ್ರಮುಖ ಅಂಶವಾಗಿದೆ. ಗೋಧಿ, ಅಕ್ಕಿ, ಸಿರಿಧಾನ್ಯಗಳು ಮುಂತಾದ ಬೆಳೆಗಳನ್ನು ಬೆಳೆಯಲಾರಂಭಿಸಿದರು. ಮಾನವನನ್ನು ಕೃಷಿ ಭೂಮಿಯ ಬಳಿ ನೆಲೆಸುವಂತೆ ಮಾಡಿತು. ಈ ನೆಲಸುವಿಕೆ ಗ್ರಾಮಗಳ ಉದಯಕ್ಕೆ ಕಾರಣವಾಯಿತು. ಈ ಗ್ರಾಮ ಹಾಗೂ ನಗರಗಳು ನಾಗರಿಕತೆಗಳ ತಳಪಾಯಗಳಾದವು.

ಪಶುಪಾಲನೆ ಮಾನವನ ಎರಡನೇಯ ಕಸುಬಾಯಿತು. ಪಶುಪಾಲನೆಯಲ್ಲಿ ಮೇಷಪಾಲನೆ, ಮೇಕೆಪಾಲನೆ ದನಕರುಗಳ ಪಾಲನೆಯತ್ತ ಮುಂದುವರೆದು ವಿಸ್ತಾರಗೊಂಡಿತು. ಕುರಿ ಮತ್ತು ಮೇಕೆಪಾಲನೆಗಿಂತ ಎಮ್ಮೆ, ದನಗಳ ಪಾಲನೆ ಸ್ವಲ್ಪ ಸರಳ ಹಾಗೂ ಹೆಚ್ಚಿನ ಲಾಭದಾಯಕವಾಗಿತ್ತು *(ಮೈತ್ರಿ ಕೆ ಎಂ, ಬುಡಕಟ್ಟು ಕುಲ ಕಸುಬುಗಳು, ಪುಟ-೧೫, ೨೦೦೨).* ಅಂದರೆ ಪಶುಪಾಲನೆ ಕ್ರಮೇಣ ದೊಡ್ಡದಾಗುತ್ತಾ ಬಂದು ಆಸ್ತಿ ಎಂಬ ಪರಿಗಣನೆಗೆ ಬಂದ ಮೇಲೆ ಪಶುಗಳ ಆಧಾರದ ಮೇಲೆ ಆ ಜನಾಂಗದ ಶ್ರೀಮಂತಿಕೆಯನ್ನು ಅಳೆಯಲಾಗುತ್ತಿತ್ತು. ಹಾಗಾಗಿ ಪಶುಪಾಲನೆಯೂ ಕೂಡಾ ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿತ್ತೆಂದು ಹೇಳಬಹುದು.

ವ್ಯವಸಾಯದಂತೆ ಪಶುಪಾಲನೆಯೂ ಜಿಲ್ಲೆಯ ಗ್ರಾಮೀಣ ಭಾಗದ ಕ್ಷತ್ರಿಯರ ಅವಿಭಾಜ್ಯ ಅಂಗವಾಗಿದೆ. ಆದರೆ ಪಶುಪಾಲನೆಯು ಇವರ ಮುಖ್ಯ ವೃತ್ತಿಯಲ್ಲ, ಬದಲಾಗಿ ಕೃಷಿಗೆ ಪೂರಕವಾದ ಉಪವೃತ್ತಿಯಂತೆ ಪಶುಪಾಲನೆಯನ್ನು ಕ್ಷತ್ರಿಯರು ಮಾಡಿಕೊಂಡುಬಂದಿದ್ದಾರೆ. ಹಾಗಾಗಿ ಇವರ ಆರ್ಥಿಕ ಭದ್ರತೆಗೆ ಜೀವನೋಪಾಯಕ್ಕೆ ಪಶುಪಾಲನೆಯು ಸಹ ಕಾರಣವಾಗಿದೆ.ಗೋವು ನಮ್ಮ ಭಾರತೀಯ ಸಂಸ್ಕೃತಿಯ ಅವಿಭಾಜ್ಯ ಅಂಗ. ರೈತ ದೇಶದ ಬೆನ್ನೆಲುಬು. ಆದರೆ ಗೋವು ರೈತನ ಬೆನ್ನೆಲುಬು, ಭಾರತೀಯ ಕೃಷಿ ಸಂಪತ್ತಿನ ಮೂಲ ರೈತನ ಜೀವನದ ಜೀವ ಗ್ರಾಮಗಳಲ್ಲಿ ಅವಿಭಕ್ತ ಕುಟುಂಬಗಳು ಕಂಡುಬರುತ್ತವೆ. ಮನೆಯ ಎಲ್ಲಾ ಸದಸ್ಯರ ಜೊತೆ ಪಶುಸಂಪತ್ತು ಸಹ ವಾಸಿಸುತ್ತವೆ. ಪಶುಗಳನ್ನು ತಮ್ಮ ಒಡನಾಡಿ ಮಾಡಿಕೊಂಡಿದ್ದಾರೆ. ಪ್ರಾಚೀನ ಕಾಲದಿಂದಲೂ ಭಾರತೀಯ ಹಿಂದೂ ಸಂಸ್ಕೃತಿಯಲ್ಲಿ ಗೋವುಗಳಿಗೆ ಅತ್ಯಂತ ಪೂಜ್ಯನೀಯ ಸ್ಥಾನವಿದೆ. ಗೋವು ಮಾನವ ಕುಲಕ್ಕೆ ಮಾತ್ರವಲ್ಲದೆ, ಸಮಸ್ತ ವಿಶ್ವದ ಜೀವಿಗಳಿಗೆಲ್ಲ ತಾಯಿಯಾಗಿದ್ದಾಳೆ. ಗೋಮಾತೆಯ ಪೂಜೆಯಿಂದ ಅದರ ದೇಹದಲ್ಲಿ ನೆಲೆಸಿರುವ ೩೩ ಕೋಟಿ ದೇವತೆಗಳನ್ನು ಪೂಜೆ ಮಾಡಿದಂತಾಗುತ್ತದೆ ಎಂಬ ನಂಬಿಕೆ ಇವರಲ್ಲಿದೆ.

ಕ್ಷತ್ರಿಯರು ತಮ್ಮ ಅಂತಸ್ತು ಅಗತ್ಯಕ್ಕೆ ಅನುಗುಣವಾಗಿ ಜಾನುವಾರುಗಳನ್ನು ಸಾಕಿಕೊಳ್ಳುತ್ತಿದ್ದರು. ಈ ಜಾನುವಾರುಗಳಿಗೆ ಪ್ರತ್ಯೇಕವಾದ ದನದ ಮನೆ/ಕೊಟ್ಟಿಗೆ ಮನೆಯಲ್ಲಿ ಸಾಕುವುದು ಸಾಮಾನ್ಯವಾಗಿತ್ತಾದರೂ ಅವುಗಳ ಪಾಲನೆ ಪೋಷಣೆಯು ತುಂಬ ಕಾಳಜಿಯುವಾಗಿರುತ್ತಿತ್ತು. ವ್ಯವಸಾಯಕ್ಕೆ ಮುಖ್ಯವಾಗಿ ಕೇವಲ ಬಸವ/ಎತ್ತುಗಳನ್ನು ಮಾತ್ರ ಉಪಯೋಗಿಸುತ್ತಾರೆ. ಆಕಳುಗಳನ್ನು ಕರವು/ಹಾಲಿನ ಉತ್ಪಾದನೆಗೆ ಉಪಯೋಗಿಸುತ್ತಿದ್ದರು. ಪ್ರತಿ ಸೋಮವಾರ ಎಲ್ಲ ದನಕರುಗಳನ್ನು ಸ್ನಾನ ಮಾಡಿ ಪೂಜೆಮಾಡುತ್ತಿದ್ದರು. ಅಂದು ಹೊಲದಲ್ಲಿ ಯಾವುದೇ ರೀತಿಯಾಗಿ ಎತ್ತುಗಳನ್ನು ಉಳುಮೆ ಮಾಡಲು ಬಳಸುವುದಿಲ್ಲ. ಈ ದನಕರುಗಳನ್ನು ಮೇಯಿಸಲು ತಾವೇ ಸ್ವತಃ ಹೊಲಕ್ಕೆ

ಅಥವಾ ಕೆರೆ ಅಂಗಳಗಳಲ್ಲಿ ಮೇಯಿಸಲು ಹೋಗುತ್ತಿದ್ದರು. ಅತೀ ಹೆಚ್ಚಾಗಿ ಪಶುಸಂಪತ್ತು ಇದ್ದರೆ, ಇದಕ್ಕಾಗಿ ಒಬ್ಬ ದನಗಾಯಿಯನ್ನು ನೇಮಕ ಮಾಡಿಕೊಂಡು ಅವನಿಗೆ ದನ ಮೇಯಿಸುವ ಜವಾಬ್ದಾರಿ ನೀಡುತ್ತಿದ್ದರು. ಹಾಗೆಯೇ ಕ್ಷತ್ರಿಯರು ತಮ್ಮ ಜಮೀನನ ಉಳುಮೆ, ಮಾಡಲು ಎತ್ತುಗಳು ಬೇಕಾದರೆ, ಬೇರೆಯವರಿಂದ ಖರೀದಿಮಾಡುತ್ತಿದ್ದರು. ಎತ್ತು ಖರೀದಿಸುವಾಗ ಕೆಲವೊಂದು ನಿಯಮಗಳನ್ನು ಚಾಚುತಪ್ಪದೇ ಪಾಲಿಸುತ್ತಿದ್ದರು. ಎತ್ತುಗಳ ಬಣ್ಣ, ಕಾಲು, ಹಲ್ಲು, ಸುಳಿ, ಮುಖ್ಯವಾಗಿ ಗಮನಿಸಿಕೊಂಡು ಅವರಿಗೆ ಈ ಎಲ್ಲಾ ವಿಚಾರದಲ್ಲಿ ಸರಿ ಅನ್ನಿಸದ ಮೇಲೆ ಎತ್ತುಗಳ ಖರಿದೀಯು ನಡೆಯುತ್ತಿತ್ತು. ಈ ರೀತಿಯಾಗಿ ಕ್ಷತ್ರಿಯರು ಪಶುಸಂಪತ್ತಿಗೆ ಹೆಚ್ಚಿನ ಆದ್ಯತೆ ನೀಡುತ್ತಿದ್ದರು. ಹಾಗೇ ಈ ಪಶುಸಂಪತ್ತಿನಿಂದ ಎಷ್ಟು ಜನ ಶ್ರೀಮಂತನಾದ ಬದುಕು ನಡೆಸುತ್ತಿದ್ದಾರೆ.

**೪.೩. ಕೃಷಿ**

ಕೃಷಿಯೇ ಪ್ರಧಾನ ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಒಣ ಬೇಸಾಯ ಮತ್ತು ನೀರಾವರಿ ಮಿಶ್ರಿತ ಬೇಸಾಯ ಇವರ ಕಸುಬು ಆಗಿದೆ. 'ಚರಿತ್ರೆಯ ಬೆಳವಣಿಗೆ ನಿಶ್ಚಿತರೂಪದಲ್ಲಿ ಆರಂಭಗೊಂಡಿರುವುದೇ ಮಾನವ ಉತ್ಪಾದನೆಯಲ್ಲಿ ಪಾಲ್ಗೊಂಡಾಗ ಅಥವಾ ಉತ್ಪಾದನೆಯನ್ನು ಆರಂಭಿಸಿದಾಗ ಬುಡಕಟ್ಟು ವ್ಯವಸ್ಥೆ ಕೃಷಿ ವ್ಯವಸ್ಥೆಯಾಗಿ ಪರಿವರ್ತನೆಗೊಂಡಿರುವುದು ಚರಿತ್ರೆಯ ಬೆಳವಣಿಗೆಯ ಮೊದಲನೆಯ ಘಟ್ಟ. ಈ ಪರಿವರ್ತನೆಯು ಅನೇಕ ಬದಲಾವಣೆಗಳಿಗೆ ದಾರಿ ಮಾಡಿಕೊಟ್ಟಿತು' *(ಮೋಹನ್‌ಕೃಷ್ಣರೈ, ಪ್ರಭುತ್ವ ಮತ್ತು ಜನತೆ, ಪುಟ-೧೭, ೨೦೦೪).* ವಸ್ತುಗಳನ್ನು ಸಂಗ್ರಹಿಸುತ್ತಾ ಅಲೆಮಾರಿ ಜೀವನ ನಡೆಸುತ್ತಿದ್ದ ಮಾನವ ಒಂದೇ ಕಡೆ ನೆಲೆನಿಂತು ತನಗೆ ಬೇಕಾದ ವಸ್ತುಗಳನ್ನು ತಾನೇ ಉತ್ಪಾದನೆ ಮಾಡಿಕೊಳ್ಳಲು ಆರಂಭಿಸಿರುವುದು ಆತನ ಭೌತಿಕ ಅವಶ್ಯಕತೆಗಳ ಈಡೇರಿಕೆಗೆ ಸಹಕಾರಿಯಾಯಿತು. ಅನ್ನ, ಬಟ್ಟೆ, ವಸತಿ, ಮುಂತಾದವುಗಳನ್ನು ತಾನೇ ನಿರ್ವಹಿಸಿಕೊಂಡು ಅದೇ ಚರಿತ್ರೆಗೆ ತಳಹದಿಯಾಗುವಂತೆ ಮಾಡಿದೆ. ವಸ್ತುಗಳ ಉತ್ಪಾದನೆಯು ಮಾನವನ ಬದುಕಿಗೆ ತಳಹದಿ ಮಾತ್ರವಲ್ಲದೆ ಆತನ ಸಂಬಂಧಗಳನ್ನು ನಿರ್ಣಯಿಸುವ ಅಂಶವೂ ಆಗಿದೆ. ಕೃಷಿ ವ್ಯವಸ್ಥೆ ರೂಪುಗೊಂಡು ಮಾನವನ ಬದುಕು ವ್ಯವಸ್ಥಿತವಾಗಿ ಬೆಳೆದುದ್ದನ್ನು ಅರ್ಥೈಸಿಕೊಳ್ಳಬೇಕಾದರೆ, ಚಾರಿತ್ರಿಕ ವಸ್ತುವಾದದ ವಿಧಾನವನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಆದರೆ 'ಅರಸಕೇಂದ್ರಿತ ಚರಿತ್ರೆಯಲ್ಲಿ ಕೃಷಿ ವ್ಯವಸ್ಥೆ ತಂದ ಪರಿವರ್ತನೆಯಾಗಲೀ ದುಡಿಯುವ ವರ್ಗವಾಗಲಿ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುವುದೇ ಇಲ್ಲ, ರಾಜ್ಯದ ಒಟ್ಟು ಆರ್ಥಿಕತೆ ಕೃಷಿ ಮತ್ತು ಅದರ ಉತ್ಪಾದನೆಯನ್ನು ಅವಲಂಬಿಸಿರುತ್ತಿತ್ತು. ಆದರೆ ಕೃಷಿಕಾರ್ಮಿಕರು ಸಮಾಜದ ಅತ್ಯಂತ ಕೆಳಸ್ತರದ ಅಥವಾ ಅಲಕ್ಷಿತವರ್ಗಕ್ಕೆ ಸೇರಿದ್ದರು. ರಾಜ್ಯದ ಅರ್ಥ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದ ಹಾಗೂ ಆ ಮೂಲಕ ಚರಿತ್ರೆಯ ನಿರ್ಮಾಣಕ್ಕೆ ಕಾರಣನಾದ ಕೃಷಿಕನನ್ನು ಚರಿತ್ರೆಹೀನನನ್ನಾಗಿ ಮಾಡುವ ಪ್ರಕ್ರಿಯೆಗಳು ಅರಸಕೇಂದ್ರಿತ ಚರಿತ್ರೆಯಲ್ಲಿ ಕಾಣಿಸಿಕೊಂಡವು. ಇದು ವರ್ಣ/ಜಾತಿ ಆಧಾರಿತ ಸಮಾಜದ ತೀರ್ಮಾನವೂ ಆಗಿದೆ. ಕ್ರಿ.ಶ.೮ನೇಯ ಶತಮಾನದ ವೇಳೆಗೆ ಕರ್ನಾಟಕದಲ್ಲಿ ಕೃಷಿ ವ್ಯವಸ್ಥೆ ರೂಪುಗೊಳ್ಳಲಾರಂಭಿಸಿತ್ತು. ಮತ್ತು ಅದಕ್ಕೆ ಹೊಸ ಚಾಲನೆ ದೊರಕ್ಕಿತ್ತು ಎನ್ನುವ ಅಂಶವನ್ನು ದೃಢೀಕರಿಸುವ ಅನೇಕ ಆಕರಗಳುಸಿಗುತ್ತವೆ' *(ಮೋಹನ್‌ಕೃಷ್ಣರೈ, ಪ್ರಭುತ್ವ ಮತ್ತು ಜನತೆ, ಪುಟ-೧೭, ೨೦೦೪).*

ಕೃಷಿ ಭೂಮಿಯ ವಿಸ್ತರಣೆಯಿಂದಾಗಿ ನಿರ್ಮಾಣಗೊಂಡ ಹೊಸ ಜನವಸತಿಗಳಲ್ಲಿ ಕೆರೆ ಮತ್ತು ದೇವಾಲಯಗಳನ್ನು ನಿರ್ಮಿಸಲಾಗುತ್ತಿತ್ತು ಎನ್ನುವ ಮಾಹಿತಿ ಅನೇಕ ಶಾಸನಗಳಲ್ಲಿ ಸಿಗುತ್ತದೆ. ನೀರಾವರಿ ಉದ್ದೇಶಕ್ಕಾಗಿ ಕೆರೆಯ ನಿರ್ಮಾಣ ಅಲ್ಲಿನ ಅವಶ್ಯಕತೆಯಾಗಿತ್ತು. ದೇವಾಲಯಗಳ ನಿರ್ಮಾಣವು ಅಂದಿನ ಧಾರ್ಮಿಕ ಮನೋಭಾವ ಹಾಗೂ ಕೃಷಿ ವ್ಯವಸ್ಥೆಯಲ್ಲಿ ದೇವಾಲಯಗಳು ಹೊಂದಿರುತ್ತಿದ್ದ ಸ್ಥಾನದ ಕುರಿತು ತಿಳಿಸುತ್ತದೆ. ಕೃಷಿಯ ವಿಸ್ತರಣೆ ಅಷ್ಟೊಂದು ಸುಲಭದ ಕೆಲಸವಾಗಿರಲಿಲ್ಲ. ಕಾಡುಗಳನ್ನು ಕಡಿದು ಭೂಮಿಯನ್ನು ಸಮತಟ್ಟುಗೊಳಿಸಿ ಕೃಷಿಯೋಗ್ಯ ಭೂಮಿಯನ್ನಾಗಿ ಮಾಡಬೇಕಾಗಿತ್ತು. ಈ ಕಾರಣಕ್ಕಾಗಿಯೇ ಕೃಷಿ ಭೂಮಿಯನ್ನು ವಿಸ್ತರಿಸುವ ಜನರಿಗೆ ರಾಜ್ಯವು ಸಹಾಯ ಸಹಕಾರಗಳನ್ನು ನೀಡುತ್ತಿತ್ತು. ಅಂಥ ವ್ಯಕ್ತಿಗಳಿಗೆ ಅಥವಾ ಸಮುದಾಯಗಳಿಗೆ ಭೂಮಿಯನ್ನು ದಾನ ನೀಡಲಾಗುತ್ತಿತ್ತು ಹಾಗೂ ತೆರಿಗೆ ವಿನಾಯಿತಿಯನ್ನು ನೀಡಲಾಗುತ್ತಿತ್ತು.

ಕ್ರಿ.ಶ. ೮–೧೪ನೇಯ ಶತಮಾನಗಳಲ್ಲಿ ಯಾವ ಬೆಳೆಗಳನ್ನು ಬೆಳೆಯಲಾಗುತ್ತಿತ್ತು ಎನ್ನುವುದನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದರೂ ವ್ಯಾಪಾರ–ವಾಣಿಜ್ಯ, ಬೆಳೆಗಳ ಕುರಿತು ಮಾಹಿತಿಸಿಗುತ್ತದೆ. ಕೆಲವೊಂದು ಶಾಸನಗಳು ಮತ್ತು ಸಾಹಿತ್ಯ ಕೃತಿಗಳಲ್ಲೂ ಬೆಳೆಗಳ ಕುರಿತಾದ ಉಲ್ಲೇಖಗಳಿವೆ. ಭತ್ತ ಪ್ರಮುಖ ಬೆಳೆಯಾಗಿದ್ದು, ಫಲವತ್ತಾದ ಭೂಮಿ ಹಾಗೂ ನೀರು ಪೂರೈಕೆ ಇರುವ ಪ್ರದೇಶಗಳಲ್ಲಿ ಬೆಳೆಯಲಾಗುತ್ತಿತ್ತು*(ಮೋಹನ್‌ಕೃಷ್ಣರೈ, ಪ್ರಭುತ್ವ ಮತ್ತು ಜನತೆ, ಪುಟ–೧೯, ೨೦೦೪).* ವಿವಿಧ ರೀತಿಯ ಭತ್ತವನ್ನು ಬೆಳೆಯಲಾಗುತ್ತಿದ್ದು, ಉತ್ತಮ ಭತ್ತವನ್ನು ಶ್ರೀಮಂತ ವರ್ಗದವರು ಬಳಸಿಕೊಳ್ಳುತ್ತಿದ್ದರು. ಇತರ ಪ್ರಮುಖ ಬೆಳಗಳೆಂದರೆ, ಜೋಳ, ರಾಗಿ, ಗೋಧಿ, ತೊಗರಿ, ಅವರೆ, ಹೆಸರು, ಉದ್ದು, ಇತ್ಯಾದಿ ಇದರೊಂದಿಗೆ ಸಾಂಬಾರು ಪದಾರ್ಥಗಳು, ಹಣ್ಣು ಹಂಪಲು, ತರಕಾರಿ, ಉತ್ತಮ ಜಾತಿಯ ಮರಗಳು ಮುಂತಾದವುಗಳನ್ನು ಬೆಳೆಯಲಾಗುತ್ತಿತ್ತು. ಕೃಷಿ ಉತ್ಪಾದನೆ ಮತ್ತು ಹೆಚ್ಚುವರಿ ಉತ್ಪಾದನೆಗೆ ಕೃಷಿಯೋತರ ಚಟುವಟಿಕೆಗಳ ಹುಟ್ಟಿಗೂ ಕಾರಣವಾಯಿತು. ಕೃಷಿಯ ಬೆಳವಣೆಗೆಯೆಂದರೆ, ಅದು ರಾಜ್ಯದ ಬೆಳವಣಿಗೆ ಎಂಬರ್ಥವನ್ನು ಪಡೆದುಕೊಂಡಿತು. ಕೃಷಿಯ ಪ್ರಾಮುಖ್ಯತೆಯನ್ನು ಅರಿತುಕೊಂಡು ಅರಸರು ಹಾಗೂ ಇತರ ಅಧಿಕಾರಿಗಳು ಕೃಷಿಯನ್ನು ಸುಧಾರಿಸುವ ಪ್ರಯತ್ನವನ್ನು ಮಾಡಿದರು. ಇದು ಕೃಷಿಯ ವಿಸ್ತರಣೆಗೆ ಕಾರಣವಾಗಿ ಉಳುಮೆಯ ವಿಧಾನದಲ್ಲೂ ಬದಲಾವಣೆಗಳು ಕಾಣಿಸಿಕೊಂಡವು. ಕೃಷಿಗೆ ಬಳಸುವ ಉಪಕರಣಗಳಲ್ಲಿ ಬದಲಾವಣೆಗಳಾಗಿ ಅದು ಕೃಷಿ ಉತ್ಪಾದನೆಯ ಮೇಲೆ ಮಹತ್ತರ ಪರಿಣಾಮಗಳನ್ನು ಬೀರಿತು. ಸಾಮಾಜಿಕ ಸಂಬಂಧಗಳು ಇದರಿಂದಾಗಿ ಹೊಸ ರೂಪವನ್ನು ಪಡೆದುಕೊಳ್ಳುವಂತಾಯಿತು.

ಭೂಮಿಯನ್ನು ಉಳುವುದು ಪ್ರಾಚೀನ ಕಾಲದಿಂದಲೂ ಬೆಳೆದುಬಂದ ಕೃಷಿ ವಿಧಾನ. ಆದರೆ ಉಳುಮೆಯ ವಿಧಾನದಲ್ಲಿ ಚರಿತ್ರೆಯ ಪ್ರತಿಯೊಂದು ಹಂತದಲ್ಲಿಯೂ ಬದಲಾವಣೆಗಳಾಗಿರುವುದು ಕಂಡುಬರುತ್ತವೆ. ಇದು ಬಳಸುವ ಉಪಕರಣಗಳಲ್ಲಾದ ಬದಲಾವಣೆಯಿಂದಾಗಿ ಸಾಧ್ಯವಾಯಿತು. ಮಧ್ಯಕಾಲೀನ ಸಂದರ್ಭದಲ್ಲಿ ಕೃಷಿ ಭೂಮಿಯನ್ನು ವಿಸ್ತಾರಗೊಳಿಸಿರುವುದು ಹೆಚ್ಚೆಚ್ಚು ಜನರನ್ನು ಕೃಷಿಯಲ್ಲಿ ತೊಡಗಿಸಿರುವುದು, ಗೊಬ್ಬರಗಳ ಬಳಕೆ, ಉತ್ತಮ ಬೀಜಗಳ ಆಯ್ಕೆ ಕೆರೆಗಳ ನಿರ್ಮಾಣ

ಮುಂತಾದ ವಿಚಾರಗಳ ಕುರಿತು ಮಾಹಿತಿ ಸಿಗುತ್ತದೆ. ಇವುಗಳ ಆಧಾರದ ಮೇಲೆ ಕೃಷಿಕ್ಷೇತ್ರದಲ್ಲಾದ ಬದಲಾವಣೆಗಳನ್ನು ಗುರುತಿಸಲುಸಾಧ್ಯ *(ಮೋಹನ್‌ಕೃಷ್ಣರೈ, ಪ್ರಭುತ್ವ ಮತ್ತು ಜನತೆ, ಪುಟ-೨೦, ೨೦೦೪)*. ಆದರೆ ವಸ್ತುಗಳ ಉತ್ಪಾದನೆಗಾಗಿ ಉಪಯೋಗಿಸುವ ಉಪಕರಣಗಳು, ಅವುಗಳನ್ನು ಉಪಯೋಗಿಸಿ ನಡೆಸುವ ಉತ್ಪಾದನಾಕ್ರಮ ಹಾಗೂ ಅವುಗಳಿಂದಾಗುವ ಸಾಮಾಜಿಕ ಸಂಬಂಧಗಳ ಮೇಲಣ ಬದಲಾವಣೆ. ಈ ಕುರಿತು ಮಧ್ಯಕಾಲೀನ ಕರ್ನಾಟಕಕ್ಕೆ ಸಂಬಂಧಿಸಿದಂತೆ ಅಧ್ಯಯನಗಳು ಆಗಿರುವುದು ಕಂಡುಬರುವುದಿಲ್ಲ. ಉಪಕರಣ ಮತ್ತು ಅದರಿಂದ ಉತ್ಪಾದಿಸಿದ ವಸ್ತು ಇವೆರಡನ್ನೂ ಆಧಾರವಾಗಿಟ್ಟುಕೊಂಡು ಆಯಾ ಕಾಲದ ಜನರ ಬದುಕನ್ನು ಅರ್ಥೈಸಿಕೊಳ್ಳಬಹುದು. ಇದನ್ನೇ ವಸ್ತುವಾದಿ ವಿಶ್ಲೇಷಣೆ ಎಂಬುದಾಗಿ ಕರೆಯಲಾಗಿದೆ.

ಅಧ್ಯಯನದ ಈ ಅವಧಿಯಲ್ಲಿ ಸಾಂಪ್ರದಾಯಿಕ ಉಳುಮೆ ಪದ್ಧತಿಯೇ ಇತ್ತು ಎಂಬುದಾಗಿ ತಿಳಿದುಬರುತ್ತದೆ. ವ್ಯವಸಾಯ ಕ್ರಮದ ಕುರಿತಂತೆ ಸ್ಪಷ್ಟವಾದ ಚಿತ್ರವನ್ನು ನೀಡುವ ಶಾಸನಗಳು ವಿರಳ. ಭೂಮಿಯನ್ನು ಸಾಗುವಳಿ (ಉಳುಮೆ) ಮಾಡಲು ಉಪಯೋಗಿಸುತ್ತಿದ್ದ ಉಪಕರಣಗಳೆಂದರೆ, ಎರಡು ಎತ್ತುಗಳು. ನೇಗಿಲು ಮತ್ತು ನೊಗ, ಹಗ್ಗ ಪಟ್ಟಕಾಣಿ, ಬಾರೀಕೋಲು, (ಇವುಗಳನ್ನು ಸತ್ತ ಪ್ರಾಣಿಗಳ ಚರ್ಮದಿಂದ ತಯಾರಿಸಿಕೊಡುತ್ತಿದ್ದವರು ಮಾದಿಗರು). ಇಲ್ಲಿ ಎತ್ತುಗಳು ಪ್ರಾಣಿಗಳಾಗಿದ್ದರೂ ಅವುಗಳನ್ನು ಉಪಕರಣಗಳ ಸಾಲಿಗೆ ಸೇರಿಸಲಾಗಿದೆ. ಈ ಕಾರಣಕ್ಕಾಗಿಯೇ ಕೃಷಿ ವ್ಯವಸ್ಥೆಯಲ್ಲಿ ಪಶುಸಂಗೋಪನೆ ಪ್ರಮುಖ ಸ್ಥಾನವನ್ನು ಪಡೆದಿತ್ತು. ಪ್ರಾಣಿಗಳನ್ನು ಕೃಷಿಯಲ್ಲಿ ಮಾತ್ರವಲ್ಲದೆ, ಸಾರಿಗೆ, ಯುದ್ಧದ ಸಂದರ್ಭಗಳಲ್ಲೂ ಬಳಸಲಾಗುತ್ತಿತ್ತು. ಸಾಂಪ್ರದಾಯಕ ಕೃಷಿಯಲ್ಲಿ ಕೃಷಿ ಕಾರ್ಮಿಕರನ್ನು ಇತರೆ ಕೃಷಿ ಉಪಕರಣಗಳ ರೀತಿಯಲ್ಲಿಯೇ ನೋಡಲಾಗುತ್ತಿತ್ತು. ಎರಡು ಎತ್ತುಗಳಿಗೆ ನೊಗ ಮತ್ತು ನೇಗಿಲು ಕಟ್ಟಿ ಅವುಗಳ ಸಹಾಯದಿಂದ ಒಬ್ಬ ವ್ಯಕ್ತಿ (ರೈತ) ಭೂಮಿಯನ್ನು ಉಳೂವುದು ಅಂದು ಮತ್ತು ಇಂದಿನ ವಿಧಾನ ಸಹ ಇದೇ ರೀತಿಯಾಗಿದೆ. ಭೂಮಿಯನ್ನು ಚೆನ್ನಾಗಿ ಮಾಗಿ ಮಾಡಿದ ನಂತರ ಬೀಜಗಳನ್ನು ಬಿತ್ತಲಾಗುತ್ತಿತ್ತು. ಸಗಣಿ ಗೊಬ್ಬರವನ್ನು ನೀಡುವ ವ್ಯವಸ್ಥೆ ಇತ್ತು ಭೂಮಿಯ ಉಳುಮೆ, ಬಿತ್ತನೆಯ ಬೀಜ, ಗೊಬ್ಬರ ನೀರು ಪೂರೈಕೆ ಮುಂತಾದವುಗಳಿಗೆ ಕೃಷಿಕರು ಪ್ರಧಾನ ಪ್ರಥಮ ಆದ್ಯತೆಯನ್ನು ನೀಡುತ್ತಿದ್ದರು. ಕಬ್ಬಿಣದ ಬಳಕೆ ಕೃಷಿಯಲ್ಲಿ ಪ್ರಗತಿಯನ್ನು ಸಾಧಿಸುವಂತೆ ಮಾಡಿತು. ಕೃಷಿಯಲ್ಲಿ ಹೊಸ ತಾಂತ್ರಿಕತೆಯ ಅಳವಡಿಕೆ ಹೆಚ್ಚುವರಿ ಉತ್ಪಾದನೆಗೆ ಕಾರಣವಾಯಿತು *(ಮೋಹನ್‌ಕೃಷ್ಣರೈ, ಪ್ರಭುತ್ವ ಮತ್ತು ಜನತೆ, ಪುಟ-೨೧, ೨೦೦೪)*.

ಕೃಷಿ ವ್ಯವಸ್ಥೆ ಜೀವಂತವಾಗಿರಬೇಕಾದರೆ, ಅದರ ಜೊತೆಗೆ ನೀರಾವರಿ ವ್ಯವಸ್ಥೆಯೂ ಇರಬೇಕು. ಕೃಷಿ ಸಂಪೂರ್ಣವಾಗಿ ಮಳೆಯನ್ನೇ ಅವಲಂಬಿಸಿರಲು ಸಾಧ್ಯವಿಲ್ಲ. ಆದ್ದರಿಂದ ಕೃಷಿಗೆ ಕೃತಕ ನೀರಿನ ವ್ಯವಸ್ಥೆ ಅನಿವಾರ್ಯ, ರಾಜ್ಯದ ಆರ್ಥಿಕತೆಯಲ್ಲಿ ಕೃಷಿ ಪ್ರಧಾನವಾಗಿದ್ದರಿಂದಾಗಿ ಎಲ್ಲಾ ಅರಸು ಮನೆತನಗಳು ನೀರಾವರಿಗೆ ಹೆಚ್ಚಿನ ಗಮನವನ್ನು ಕೊಡುವುದು ಅವಶ್ಯಕವಾಗಿತ್ತು. ಈ ಕಾರಣದಿಂದಾಗಿಯೇ ಕೃಷಿಯೋಗ್ಯ ಭೂಮಿಯನ್ನು ಎರಡು ರೀತಿಯಾಗಿ ವಿಂಗಡಿಸಲಾಗಿತ್ತು. ಅವುಗಳೆಂದರೆ, ಮೊದಲನೆಯದು ಸಂಪೂರ್ಣವಾದ ಮಳೆಯನ್ನೇ ಅವಲಂಬಿಸಿರುವ ಕೃಷಿ ಭೂಮಿ. ಎರಡನೆಯದು ನದಿ, ಕೆರೆ, ಬಾವಿಗಳನ್ನು ಅವಲಂಬಿಸಿರುವ ಕೃಷಿ ಭೂಮಿ.

ಮಳೆಯನ್ನು ಅವಲಂಬಿಸದೆ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ನೀರಾವರಿ ಸಂಪನ್ಮೂಗಳು ಅತ್ಯವಶ್ಯ. ಈ ನಿಟ್ಟಿನಲ್ಲಿ ಅರಸರು ಕೈಗೊಂಡ ಮಾದರಿಯನ್ನೇ ಸಾಮಂತರು ಮತ್ತು ಅಧಿಕಾರಿಗಳು ಅನುಸರಿಸಿದರು. ಅಂದಿನ ಸಂದರ್ಭದಲ್ಲಿ ನೀರಾವರಿ ವ್ಯವಸ್ಥೆಯನ್ನು ಧಾರ್ಮಿಕ ಹಿನ್ನೆಲೆಯಿಂದಲೂ ನೋಡಲಾಗಿತ್ತು. ಕರೆ, ಕಾಲುವೆ, ಬಾವಿಗಳ ನಿರ್ಮಾಣವನ್ನು ಶ್ರೇಷ್ಠವಾದ ಧರ್ಮಕಾರ್ಯವೆಂದು ತಿಳಿಯಲಾಗಿತ್ತು (ಮೋಹನ್‌ಕೃಷ್ಣರೈ, ಪ್ರಭುತ್ವ ಮತ್ತು ಜನತೆ, ಪುಟ-೨೧, ೨೦೦೪). ಇದು ಪುರೋಹಿತಶಾಹಿ ವ್ಯವಸ್ಥೆಯ ಪ್ರಭಾವ ಕೃಷಿಯ ಮೇಲೆ ಎಷ್ಟರಮಟ್ಟಿಗೆ ಆಗಿತ್ತು ಎನ್ನುವುದನ್ನು ಸೂಚಿಸುತ್ತದೆ. ನೀರಾವರಿ ಎಷ್ಟು ಮಹತ್ವದ್ದು ಎನ್ನುವುದನ್ನು ವಿಜ್ಞಾನೇಶ್ವರರು ತಮ್ಮ ಮಿತಾಕ್ಷರದಲ್ಲಿ ಈ ರೀತಿ ಹೇಳಿದ್ದಾರೆ. ನೀರಾವರಿ ಕೆಲಸಕಾರ್ಯಗಳು ರಾಜ್ಯದ ಮೊದಲ ಕೆಲಸವಾಗಿದೆ. ಅಣೆಕಟ್ಟಗಳನ್ನು ನಿರ್ಮಿಸುವುದರಿಂದ ಕೆಲವರಿಗೆ ಅನ್ಯಾಯವಾದರೂ ಹಲವಾರು ಜನರಿಗೆ ನ್ಯಾಯ ಸಿಗುತ್ತದೆ. ಅನುಕೂಲವಾಗುತ್ತದೆ. ಈ ಕಾರಣದಿಂದಾಗಿ ಅಣೆಕಟ್ಟು ನಿರ್ಮಾಣವನ್ನು ಯಾರೂ ವಿರೋಧಿಸಬಾರದು. ಕ್ರಿ.ಶ. ೮ ರಿಂದ ೧೪ ನೇಯ ಶತಮಾನಗಳ ನಡುವಣ ಅವಧಿಯಲ್ಲಿ ಕೃಷಿಗೆ ನೀರುಣಿಸಿದ ಪ್ರಮುಖ ನದಿಗಳೆಂದರೆ, ಕಾವೇರಿ, ಕಪಿಲಾ, ನೇತ್ರಾವತಿ, ತುಂಗಭದ್ರಾ, ವರದ, ಭೀಮ, ಗೋದಾವರಿ, ಕೃಷ್ಣ, ಯಗಚಿ, ಮುಂತಾದವು. ಈ ನದಿ ಕಣಿವೆಗಳಲ್ಲಿ ಮತ್ತು ಮುಖಜ ಭೂಮಿಗಳಲ್ಲಿ ಕೃಷಿ ಭೂಮಿಗೆ ಆ ನದಿಗಳಿಂದ ಕೋಡಿದ ಕಾಲುವೆ ಅಥವಾ ನಾಲೆಗಳ ಮೂಲಕ ನೀರು ಒದಗುತ್ತಿತ್ತು. ನಾಲೆ ಬೇಸಾಯದ ನಿದರ್ಶನಗಳು ಅನೇಕ ಶಾಸನಗಳಲ್ಲಿ ಸಿಗುತ್ತವೆ. ಬೆಟ್ಟದಿಂದ ಹರಿಯುವ ಒಂದು ತೊರೆಯ ನೀರಿನಿಂದ ಬೇಸಾಯ ಮಾಡಿ ಭತ್ತ ಮತ್ತು ಕಬ್ಬು ಬೆಳೆಯಲಾಗುತ್ತಿತ್ತು ಎನ್ನುವ ವಿವರಣೆ ಶಾಸನವೊಂದರಲ್ಲಿ ಸಿಗುತ್ತದೆ. ಯಗಚಿ ನದಿಯ ನೀರನ್ನು ಕಾಲುವೆಗಳ ಮೂಲಕ ದೋರಸಮುದ್ರಕ್ಕೆ ತರಲಾಗುತ್ತಿತ್ತು ಎನ್ನುವ ದಾಖಲೆಯೂ ಲಭ್ಯವಿದೆ. ಆದಿತ್ಯ ಭಟ್ಟ ಎನ್ನುವವನು ತುಂಗಭದ್ರಾ ನದಿಗೆ ಕಾಲುವೆಯನ್ನು ನಿರ್ಮಿಸಿದ ವಿಚಾರವೂ ಉಲ್ಲೇಖಿತವಾಗಿದೆ.

ನದಿಗಳು ಹರಿಯದೆ ಇರುವ ಪ್ರದೇಶಗಳಲ್ಲಿನ ಕೃಷಿಕರು ಕರೆ ಮತ್ತು ಬಾವಿಗಳನ್ನು ನೀರಾವರಿಗಾಗಿ ಅವಲಂಬಿಸಬೇಕಾಗಿತ್ತು. ಕೆರೆಗಳಲ್ಲಿ ಮಳೆಯ ನೀರನ್ನು ಸಂಗ್ರಹಿಸಲಾಗುತ್ತಿತ್ತು. ಕೆರೆಗಳನ್ನು ಅರಸರು ಹಾಗೂ ಇತರ ಖಾಸಗಿ ವ್ಯಕ್ತಿಗಳು ಕಟ್ಟಿಸುತ್ತಿದ್ದರು. ಪ್ರತಿಯೊಂದು ಹಳ್ಳಿಯಲ್ಲಿಯೂ ಅಲ್ಲಿನ ಬೇಸಾಯದ ಭೂಮಿಯ ವಿಸ್ತಾರ ಹಾಗೂ ಬೆಳೆಯುವ ಬೆಳೆ ಇವುಗಳನ್ನು ಅವಲಂಬಿಸಿಕೊಂಡು ಕೆರೆಗಳಿರುತ್ತಿದ್ದವು. ಪ್ರತಿಯೊಂದು ಕೆರೆಗೂ ಹೆಸರುಗಳಿರುತ್ತಿದ್ದವು. ಕೆರೆಗಳನ್ನು ಕಟ್ಟಿಸಿದವರ ಹೆಸರು ಅಥವಾ ಯಾರ ಗೌರವಾರ್ಥವಾಗಿ ಕಟ್ಟಿಸಲಾಗಿದೆಯೋ ಅವರ ಹೆಸರನ್ನು ಆಯಾ ಕೆರೆಗಳಿಗೆ ಇಡುವುದು ರೂಢಿಯಲ್ಲಿತ್ತು (ಮೋಹನ್‌ಕೃಷ್ಣರೈ, ಪ್ರಭುತ್ವ ಮತ್ತು ಜನತೆ, ಪುಟ-೨೨, ೨೦೦೪). ಕೆರೆ ಕಾಲುವೆಗಳನ್ನು ಪುರುಷರಷ್ಟೇ ಅಲ್ಲದೆ ಮಹಿಳೆಯರೂ ನಿರ್ಮಿಸುತ್ತಿದ್ದರು ಎನ್ನುವುದು ಶಾಸನಗಳಿಂದ ತಿಳಿದುಬರುತ್ತದೆ. ಹೆಚ್ಚುಚ್ಚು ಕೆರೆಗಳು ನಿರ್ಮಾಣಗೊಳ್ಳಬೇಕೆನ್ನುವ ಉದ್ದೇಶದಿಂದ ಕೆರೆಗಳನ್ನು ನಿರ್ಮಿಸುವವರಿಗೆ ಭೂದಾನಗಳು ಹಾಗೂ ತೆರಿಗೆಯಿಂದ ಪೂರ್ತಿ ಅಥವಾ ಭಾಗಶಃ ವಿನಾಯಿತಿ ನೀಡಲಾಗುತ್ತಿತ್ತು. ಕೆರೆಗಳು ನಿರ್ವಹಣೆಯ ವೆಚ್ಚವನ್ನು ಅರಸನಲ್ಲದೆ ಇತರ ವರ್ಗದವರೂ ಭಾದಿಸುತ್ತಿದ್ದರು. ದೇವಾಲಯಗಳು, ಮಠಗಳು,

ವರ್ತಕ ಸಂಘಗಳು, ಗ್ರಾಮಸಭೆ ಮುಂತಾದವು. ಈ ನಿರ್ಮಾಣ ಕಾರ್ಯದಲ್ಲಿ ಭಾಗವಹಿಸುತ್ತಿದ್ದವು. ಕೆರೆ ಕಾಲುವೆಗಳನ್ನು ಸುವ್ಯವಸ್ಥಿತ ರೀತಿಯಲ್ಲಿ ಕಾಪಾಡಿಕೊಂಡು ಬರಬೇಕು ಎನ್ನುವ ಕಾರಣಕ್ಕಾಗಿ ಕೆಲವೊಂದು ಎಚ್ಚರಿಕೆಯನ್ನು ತೆಗೆದುಕೊಳ್ಳಲಾಗಿತ್ತು.

ಬಾವಿ ನೀರಾವರಿಯು ಮಧ್ಯಕಾಲೀನ ಸಂದರ್ಭದಲ್ಲಿ ಇತ್ತು ಎನ್ನುವುದಕ್ಕೆ ಸಾಕಷ್ಟು ಆಧಾರಗಳು ಲಭ್ಯವಿದೆ. ತೋಟ ಗದ್ದೆಗಳಲ್ಲಿ ಬಾವಿಗಳಿರುತ್ತಿದ್ದವು. ಏತಗಳಿಂದ ಮತ್ತು ಘಟಿಯಂತ್ರಗಳಿಂದ ತೋಟಕ್ಕೆ ನೀರು ಹಾಯಿಸಲಾಗುತ್ತಿತ್ತು. ಏತದ ಮೂಲಕ ಬಾವಿಯಿಂದ ನೀರನ್ನು ಮೇಲೆತ್ತುವ ವಿಧಾನವನ್ನು ಏತ ನೀರಾವರಿ ಎಂಬುದಾಗಿ ಕರೆಯಲಾಗಿದೆ *(ಮೋಹನ್‌ಕೃಷ್ಣರೈ, ಪ್ರಭುತ್ವ ಮತ್ತು ಜನತೆ, ಪುಟ-೨೩, ೨೦೦೪).* ಎತ್ತುಗಳ ಸಹಾಯದಿಂದ ಇಲ್ಲವೇ ಮಾನವನ ದೈಹಿಕ ಶ್ರಮದಿಂದ ಬಾವಿಯಿಂದ ನೀರನ್ನು ಮೇಲಕ್ಕೆತ್ತಲಾಗುತ್ತಿತ್ತು. ಒಟ್ಟಾರೆಯಾಗಿ ಕೃಷಿ ಚಟುವಟಿಕೆಗಳು ಹೆಚ್ಚೆಚ್ಚು ಕಾಣಿಸಿಕೊಳ್ಳುತ್ತಿದ್ದ ಅಂದಿನ ಸಂದರ್ಭದಲ್ಲಿ ನೀರು ಪೂರೈಕೆ ಕೆಲಸ ಕಾರ್ಯಗಳೂ ಚುರುಕುಗೊಳ್ಳಲಾರಂಬಿಸಿದವು. ರಾಜರು ಮತ್ತು ಅಧಿಕಾರಿಗಳು ನೀರಾವರಿ ಕಾರ್ಯವನ್ನು ರಾಜ್ಯದ ವಿವಿಧ ಭಾಗಗಳಲ್ಲಿ ಅನುಷ್ಠಾನಗೊಳಿಸಲು ಪ್ರಯತ್ನ ಪಟ್ಟರು. ಕೆರೆ, ಕಾಲುವೆ, ಬಾವಿಗಳನ್ನು ನಿರ್ಮಿಸುವುದು ಪುಣ್ಯದ ಕೆಲಸ ಎನ್ನುವ ಧಾರ್ಮಿಕ ಕಟ್ಟುಕಟ್ಟಳೆಗಳನ್ನು ಜಾರಿಗೆ ತರಲಾಯಿತು.

ಬಹುತೇಕವಾಗಿ ಕೃಷಿಯು ಮುಂಗಾರು ಮತ್ತು ಹಿಂಗಾರು ಮಳೆಯನ್ನೇ ಅವಲಂಬಿಸಿದೆ. ಕೃಷಿಯನ್ನು 'ತರಿ' (ನೀರಾವರಿ) ಖುಷ್ಕಿ (ಬೆದ್ದಲು) ಮತ್ತು ಬಾಗಾಯ್ತು (ತೋಟ) ಎಂದು ಮೂರು ಭಾಗವಾಗಿ ವಿಂಗಡಿಸಬಹುದು. ಹಾಗೂ ಇಲ್ಲಿ ಬೆಳೆಯುವ ಬೆಳೆಗಳನ್ನು ಆಹಾರದ ಬೆಳೆಗಳು, ವಾಣಿಜ್ಯ ಬೆಳೆಗಳು ಎಂದು ವಿಂಗಡಿಸಿಕೊಳ್ಳಬಹುದು. ಮುಖ್ಯವಾಗಿ ಇಲ್ಲಿ ರಾಗಿ, ಜೋಳ, ಶೇಂಗಾ, ಸೂರ್ಯಕಾಂತಿ, ಈರುಳ್ಳಿ, ಭತ್ತ, ಹತ್ತಿ, ರೇಷ್ಮೆ ಮುಂತಾದವುಗಳನ್ನು ಪ್ರಧಾನ ಬೆಳೆಗಳಾಗಿ ಬೆಳೆಯುತ್ತಾರೆ. ಜೊತೆಗೆ ಕಬ್ಬು, ಗೋಧಿ, ತೊಗರಿ, ಅವರೆ, ಎಣ್ಣೆಕಾಳುಗಳು, ಹೊಗೆಸೊಪ್ಪು, ತೆಂಗು, ಅಡಿಕೆ ಮುಂತಾದ ಬೆಳೆಗಳನ್ನು ಸಹ ಬೆಳೆಯುತ್ತಾರೆ.

ಕೃಷಿಯು ಆರಂಭವಾಗುವುದೇ (ಆರಂಭ) ಎನ್ನುವ ಪದದಿಂದ ಇದನ್ನು ವ್ಯವಸಾಯವೆಂದು ಕರೆಯಲಾಗುತ್ತದೆ. ಮುಂಗಾರು ಮಳೆ ಬಿದ್ದ ಮೇಲೆ ಕೃಷಿ ಚಟುವಟಿಕೆಗಳು ಪ್ರಾರಂಭವಾಗುತ್ತವೆ. ಯುಗಾದಿ ಅಥವಾ ಉಗಾದಿ ಹಬ್ಬದಲ್ಲಿ ಮೊದಲ ಬೇಸಾಯ ಆರಂಭಿಸಿ ನಂತರ ಹೊಲಕ್ಕೆ ಚಕ್ಕಡಿಗಾಡಿಯಲ್ಲಿ ತಿಪ್ಪೆಗೊಬ್ಬರವನ್ನು ಹೇರಲು ಶುರುಮಾಡುತ್ತಾರೆ. ಮಳೆ ಬಿದ್ದ ತಕ್ಷಣ ಗೊಬ್ಬರವನ್ನುಹಂತಹಂತವಾಗಿ ಚರಗ ಹೊಡೆದು (ಹುಗ್ಗಿ) ನೇಗಿಲು ಹೊಡೆಯುತ್ತಾರೆ. ಇದಕ್ಕೆ ಉಕ್ಕೆ ಹೊಡೆಯುವುದು ಎನ್ನುತ್ತಾರೆ. ನಂತರದ ದಿನದಲ್ಲಿ ದೊಡ್ಡ ಕುಂಟೆಯಿಂದ ಹೊಲವನ್ನು ಮಾಗಿ ಮಾಡಿ ಬಿಡುತ್ತಾರೆ. ಹನ್ನೆರಡು ಮಾಸಗಳಲ್ಲಿ ಒಟ್ಟು ೭ ಮಳೆಗಳ ನಕ್ಷತ್ರ ಇರುತ್ತವೆ. ನಕ್ಷತ್ರ ಎಂದರೆ, ಚಂದ್ರಮ ೨೭ ದಿವಸಗಳಲ್ಲಿ ತನ್ನ ಪಥದಲ್ಲಿ ಭೂಮಿಯ ಸುತ್ತ ಒಮ್ಮೆ ಸುತ್ತುತ್ತಾನೆ. ಹೀಗೆ ಇರುವ ಆ ಪಥದ ೨೭ ವಿಭಾಗಗಳಿಗೆ ನಕ್ಷತ್ರಗಳೆಂದು ಹೆಸರು ಕೊಟ್ಟಿರುವರು. ಇಲ್ಲಿ ಹೇಳಲು ಹೊರಟ್ಟಿದ್ದೇವೆ ಎನ್ನುವುದಾರೆ, ರೈತನ ಆರಂಭ ಪ್ರಾರಂಭವಾಗುವುದೇ ಈ ಮಳೆ ನಕ್ಷತ್ರದಿಂದಾಗಿದೆ. ಕೃಷಿಯು

ಬಿತ್ತನೆಯು ಭರಣಿ ಮಳೆ ನಕ್ಷತ್ರದಿಂದ ಆರಂಭವಾಗುತ್ತದೆ. ಈ ಭರಣಿ ಮಳೆ ರೈತನ ಮುಖದಲ್ಲಿ ಮಂದಾಹಾಸವನ್ನು ಮೂಡಿಸುತ್ತದೆ.

ರೈತನು ಮಾಗಿ ಮಾಡಿ ಇಟ್ಟುಕೊಂಡ ಹೊಲದಲ್ಲಿ ಬಿತ್ತನೆ ಆರಂಭಿಸುತ್ತಾನೆ. ಈ ಬೀಜದ ಬಿತ್ತನೆಯನ್ನು ದೇವರ ಅನುಗ್ರಹದಿಂದಾಗಿ ಯಾವುದು ಒಲವುವಿದೆಯೋ ಆ ಬೀಜವನ್ನು ಬಿತ್ತನೆ ಮಾಡುತ್ತಾರೆ. ಹೆಚ್ಚಾಗಿ, ಭತ್ತ, ಶೇಂಗಾ, ಹತ್ತಿ, ಜೋಳ, ರಾಗಿ, ಮೆಕ್ಕೆಜೋಳ, ನವಣೆ, ಕುಸಿಬೆ, ತೊಗರಿ, ಅವರೆ, ಹುರಳಿ, ಎಳ್ಳು, ಹೆಸರು, ಸೂರ್ಯಪಾನ, ತಂಬಾಕು, ಬೀತ್ತನೆ ಮಾಡುತ್ತಾರೆ. ಕೃಷಿಯ ಚಟುವಟಿಕೆಯ ಸಲಕರಣೆಗಳು ಹೆಚ್ಚಾಗಿ ಮರದಿಂದ ಮಾಡಿದ ಸಲಕರಣೆಗಳಾಗಿದ್ದವು. ಆದರೆ ಇಂದು ಆ ಜಾಗದಲ್ಲಿ ಕಬ್ಬಿಣದ ಸಲಕರಣೆಗಳು ಲಗ್ಗೆಇಟ್ಟಿವೆ. ಹೆಚ್ಚಿನದಾಗಿ ಮಿಶ್ರ ಬೆಳೆಯನ್ನು ಮಾಡುತ್ತಾರೆ. ತೊಗರಿ, ಅವರೆ, ಎಳ್ಳು, ಕುರಿಷಣಿ, ಶುಂಠಿ, ಸಾಸಿವೆ, ಔಡಲು, ಹೆಸರು, ಹಲಸಂದೆ, ಇವುಗಳನ್ನು ಮಿಶ್ರ ಬೆಳೆಯಾಗಿ ಬೆಳೆಯುತ್ತಾರೆ. ಕೂರಿಗೆಯಲ್ಲಿ ಬಿತ್ತನೆ ಮಾಡಿದ ನಂತರ ಕೂರಿಗೆಯ ಸಾಲು ಮುಚ್ಚಲು ಕೊರಡನ್ನ ಹೊಡೆಯುತ್ತಾರೆ. ಪ್ರತಿಯೊಂದು ಬೆಳೆಗೆ ಅದರೇದ ಆದ ಬೀಜೋಪಾಚಾರ ವಿರುತ್ತದೆ. ಬಿತ್ತನೆ ಮಾಡಿ ಬೆಳೆಯು ಮೊಳಕೆ ಬಂದು ಹದಿನೈದು ಇಪ್ಪತ್ತು ದಿವಸಗಳಲ್ಲಿ ಎಡೆಕುಂಟೆ ಹೊಡೆಯುತ್ತಾರೆ. ಇದು ಬೆಳೆಗಳಲ್ಲಿರುವ ಕಸವನ್ನು ತೆಗೆಯುಲು ಮತ್ತು ಸಸಿಯು ಚೆನ್ನಾಗಿ ಬೆಳೆಯಲು ಸಹಕಾರಿಯಾಗಿರುತ್ತದೆ. ಎಲ್ಲಾ ಬೆಳೆಗಳಿಗೆ ಈ ಎಡೆಕುಂಟೆಯು ಅನಿವಾರ್ಯ ಇದರಿಂದಾಗಿ ಬೆಳೆಗಳು ಶೀಘ್ರವಾಗಿ ಬೆಳೆಯುತ್ತವೆ. ಮತ್ತು ಮಣ್ಣು ಸಡಿಲಗೊಂಡಂತೆ ಮಳೆಯ ನೀರು ಸೀದಾ ಬೆಳೆಯ ಬೇರಿಗೆ ಇಳಿಯುತ್ತದೆ. ಆಗಾ ಬೆಳೆಯು ಹೆಚ್ಚು ಹಸಿರಾಗಿ ಬೆಳೆಯುತ್ತದೆ. ಈ ಎಡೆಕುಂಟೆಯನ್ನು ಬೆಳೆಯ ಬಿತ್ತನೆಯನಂತರ ನಾಲ್ಕು ಬಾರಿ ಹಂತ ಹಂತವಾಗಿ ಹೊಡೆಯಬೇಕಾಗುತ್ತದೆ.

ಪೈರು ಹಸನಾಗಿ ಬೆಳೆಯಲು ಹಂತ ಹಂತವಾಗಿ ಅದಕ್ಕೆ ಸರಿಯಾದ ಉಪಚಾರವಿರಬೇಕಾಗುತ್ತದೆ. ಕಳೆ ತೆಗೆಸುವುದು, ಗೊಬ್ಬರ ಹಾಕುವುದು, ಔಷಧಿಸಿಂಪಡನೆ ಇವೆಲ್ಲ ಉಪಾಚಾರ ಮಾಡಬೇಕಾಗುತ್ತದೆ. ಹಾಗೇ ಮಳೆಯು ಸಹ ಸಮಯ ಸಂದರ್ಭಕ್ಕೆ ಬರುತ್ತಿರಬೇಕು. ಆಗ ಮಾತ್ರ ಹೊಲದಲ್ಲಿರುವ ಪೈರು ಹೆಚ್ಚು ಹಸಿರಾಗಿ ಬೆಳೆಯುತ್ತದೆ. ಬೆಳೆಗಳು ಕಾಳುಗಟ್ಟುವ ಸಂದರ್ಭದಲ್ಲಿ ಮಳೆಯು ಅತಿಯಾಗಿ ಬಂದರೆ, ಕೈಗೆ ಬಂದಿರುವ ಪೈರು ನೀರಪಾಲು ಅಗುವ ಸಂಭವ ಹೆಚ್ಚಾಗಿರುತ್ತದೆ. ಅದಕ್ಕೆ ರೈತರು ದೇವರ ಮೇಲೆ ಬಾರ ಹಾಕಿಕೊಂಡೇ ಯಾವುದೇ ಕೆಲಸ ಆರಂಭಿಸುತ್ತಾರೆ. ಬೆಳೆಕಟಾವಿಗೆ ಬರುತ್ತಿದ್ದಂತೆಯೇ ಕೊಯ್ಲಿಗೆ ಬೇಕಾದ ಸಲಕರಣೆಗಳನ್ನು ಸಿದ್ಧಮಾಡಿಕೊಂಡು ಮಳೆಬಿಡವು ಕೊಟ್ಟ ಸಂದರ್ಭವನ್ನು ನೋಡಿಕೊಂಡು ಕೊಯ್ಲುನ್ನು ಪ್ರಾರಂಭಿಸುತ್ತಾರೆ. ಕೊಯ್ಲು ಮಾಡುವಾಗ ಕೆಲವೊಂದು ನಿಯಮವನ್ನು ಅನುಸರಿಸುತ್ತಾರೆ. ಮೊದಲು ಪೂರ್ವದಿಕ್ಕಿನಿಂದ ಆರಂಭಿಸಿ ಮೂರು ಹಿಡಿಯ ಬೆಳೆಯನ್ನು ಕಟ್ಟಿ, ಅದಕ್ಕೆ ಹಾಲುತುಪ್ಪ ಎರೆದು ಪೂಜಿಸಿ ನಂತರ ಕೊಯ್ಲುನ್ನು ಆರಂಭಿಸುತ್ತಾರೆ. ಕೊಯ್ಲು ಮಾಡಿದ ನಂತರ ಎರಡು-ಮೂರು ದಿನ ಕೊಯ್ಲು ಮಾಡಿ ಇಟ್ಟ ಮೆದೆಯು ಒಣಗಿದ ನಂತರ ಸಿವುಡುಕಟ್ಟೆ ಹೊಲಗಳಲ್ಲಿ ಬಣವೆ ಹಾಕುತ್ತಾರೆ ಅಥವಾ ಗುಡೂ ನಿಲ್ಲಿಸಿ ಬರುತ್ತಾರೆ. ಸುಗ್ಗಿಯ ಕಾಲದಲ್ಲಿ ಒಕ್ಕಲು ಮಾಡುವ ಕೆಲಸವನ್ನು ಪ್ರಾರಂಭಿಸುತ್ತಾರೆ.

ಸುಗ್ಗಿಯು ರೈತಾಪಿ ಜನಕ್ಕೆ ಹಬ್ಬವಿದ್ದಂತೆ ಕಣದ ಸಿದ್ಧತೆಯನ್ನು ಮಾಡಿಕೊಳ್ಳುವುದರಿಂದ ಸುಗ್ಗಿಯ ಕೆಲಸ ಕಾರ್ಯಗಳು ಆರಂಭವಾಗುತ್ತವೆ (ಈಶ್ವರಪ್ಪಎಂ ಜಿ, ಚಿತ್ರದುರ್ಗ ಜಿಲ್ಲೆಯ ಜಾನಪದ, ಪುಟ-೧೪೪, ೧೯೯೫). ಕಣ ಸಿದ್ಧಗೊಂಡ ಬಳಿಕ ಒಕ್ಕಲು ಕೆಲಸವನ್ನು ಆರಂಭಿಸುತ್ತಾರೆ. ಹೊಲದಲ್ಲಿ ಹಾಕಿದ್ದ ಬಣವೆ ಅಥವಾ ಧಾನ್ಯದಗೊಡನ್ನು ಬಂಡಿಯಲ್ಲಿ ಕಣಕ್ಕೆ ಹೇರಿಕೊಂಡು ಇಲ್ಲಿ ಧಾನ್ಯಗಳನ್ನು ಬೇರ್ಪಡಿಸುತ್ತಾರೆ. ಇದಕ್ಕೆ ಎತ್ತು ಮತ್ತು ರೋಣಗಲ್ಲು ಹಾಗೂ ರೈತ ಮುಖ್ಯ ಪಾತ್ರನಿರ್ವಹಿಸುವರು. ಬೆಳೆಯನ್ನು ಅವುಗಳ ರಚನೆಗೆ ತಕ್ಕಂತೆ ಅದನ್ನು ಬೇರ್ಪಡಿಸುವ ಕಾರ್ಯ ಮಾಡುತ್ತಾರೆ. ಅಂದರೆ, ಬಡಿಯುವುದು, ಉದ್ದುವುದು, ಎತ್ತುಗಳ ಕಾಲಿನಿಂದ ತುಳಿಸುವುದು ಮತ್ತು ರೋಣಗಳಲ್ಲಿನಿಂದ ಒಕ್ಕುವುದು ಇದನ್ನು ಹೆಣೆ ಹಾಕುವುದು ಎನ್ನುತ್ತಾರೆ. ಕಾಳುಗಳು ತೆನೆಯಿಂದ ಬೇರ್ಪಟ್ಟಾಗ ಅದನ್ನು ಮೇರೆಕೋಲುನಿಂದ, ಕೈ ಹಲುಬೆಯಿಂದ ಬೇರ್ಪಡಿಸುತ್ತಾರೆ. ಕಾಳನ್ನು ಬೇರೆ ರಾಶಿ ಮಾಡಿ ಅದನ್ನು ಯಲ್ಲಿ ತೂರುತ್ತಾರೆ ಇಲ್ಲಿ ಗಟ್ಟಿಕಾಳುಗಳು ಉಳಿದು ಜೊಳ್ಳು ಕಾಳುಗಳು ಬೇರ್ಪಡುತ್ತವೆ. ಹಾಗೆ ಕಸಕಡ್ಡಿಗಳು ಹೋಗುವಂತೆ ಸ್ವಚ್ಚಮಾಡುತ್ತಾರೆ. ನಂತರ  ಹುಲ್ಲನ್ನು ಬಣವೆ ಹಾಕುತ್ತಾರೆ. ಕಾಳನ್ನು ರಾಶಿ ಮಾಡಿ ರಾಶಿಯಸುತ್ತ ಮೆರೆಕೋಲಿನಿಂದ ರಾಶಿಯ ಅಂಚಿನ ಸುತ್ತ ಗೆರೆ ಹಾಕುತ್ತಾರೆ. ಮೆರೆಕೋಲು, ಕೈ ಹಲುಬೆ ಗ್ವಾರೆಗಳನ್ನು ರಾಶಿಯ ನಡುವೆ ಸಿಕ್ಕಿಸಿ ರಾಶಿಯ ಪಕ್ಕದಲ್ಲಿ ಬಳಕೆಯಾದ ಎಲ್ಲ ಉಪಕರಣಗಳನ್ನು ಇಟ್ಟು ರಾಶಿ ಪೂಜೆ ಮಾಡುತ್ತಾರೆ. ಹಾಗೆ ಅಲ್ಲಿ ನೆರೆದಿದ್ದರಿಗೆಲ್ಲ ಮಂಡಕ್ಕಿ ಕಾಯಿ ಫಲಾರವನ್ನು ಹಂಚುತ್ತಾರೆ.

ರಾಶಿಯನ್ನು ಮಾಡುವಾಗ ಗಟ್ಟಿಕಾಳಿನ ಒಂದು ರಾಶಿ, ಜರಗು ಒಂದು ರಾಶಿ ಮತ್ತು ದಾನಧರ್ಮಕ್ಕೆ ಒಂದು ರಾಶಿ ಎಂಬುದಾಗಿ ಮಾಡುತ್ತಾರೆ. ಅಲ್ಲಿಗೆ ಬಂದ ಊರಿನ ಪೂಜಾರಿಗೆ ಮತ್ತು ಬಡವರಿಗೆ ಹಾಗೂ ದೇವರ ಕಾರ್ಯವನ್ನು ಮಾಡುವರಿಗೆ ಮನೆಯ ಮಾದಿಗರಿಗೆ ದಾನ ಮಾಡುವ ಪದ್ಧತಿ ಇದೆ. ಅಲ್ಲದೆ ಹಳ್ಳಿಗಳಲ್ಲಿ ಆಯಾಗಾರರು ಇರುತ್ತಾರೆ. ಅಂದರೆ, ಬಡಗಿ, ಕಮ್ಮಾರ, ಕ್ಷೌರಿಕ ಇವರಿಗೂ ಸಹ ರಾಶಿಯ ಸ್ಥಳದಲ್ಲಿಯೇ ಅವರಿಗೆ ಧಾನ್ಯಗಳನ್ನು ದಾನ ಮಾಡುವರು. ಭೂಮಿ ತಾಯಿಯ ಒಡಲಿನಿಂದ ತಾನು ಪಡೆಯುವ ಸಂಪತ್ತನ್ನು ಇತರ ಸಮುದಾಯ ಜೀವಿಗಳೊಡನೆ ಹಂಚಿ ಉಣ್ಣುವುದೇ ರೈತನ ಬದುಕಿನ ರೀತಿ ಸ್ವಚಂದವಾಗಿದೆ.

ಕ್ಷತ್ರಿಯರ ಕೃಷಿ ಚಟುವಟಿಕೆಗಳಲ್ಲಿ ಮತ್ತು ಕೃಷಿಗೆ ಸಂಬಂಧಪಟ್ಟ ಆಚರಣೆಗಳಲ್ಲಿ ಆಯಾ ಪ್ರದೇಶದ ಬಹುಸಂಖ್ಯಾತ ಸಮುದಾಯದ ಆಚರಣೆಗಳ ಪ್ರಭಾವ ಆಗಿರುವುದು ಕಂಡುಬರುತ್ತದೆ. ಕೃಷಿ ಚಟುವಟಿಕೆಗಳು ಬಹುತೇಕ ಒಂದೇ ರೀತಿಯಾಗಿರುವುದರಿಂದ ಕೃಷಿಗೆ ಸಂಬಂಧ ಪಟ್ಟ ಇವರ ಆಚರಣೆಗಳಲ್ಲಿ ಮತ್ತು ಇತರೆ ಸಮುದಾಯಗಳ ಆಚರಣೆಗಳಲ್ಲಿ ಅಂತಹ ಭಿನ್ನತೆಗಳೇನೂ ಕಂಡುಬರದಿರಬಹುದು. ಆದರೆ ಕೃಷಿಯು ನಮ್ಮ ಹಳ್ಳಿ ಸಮುದಾಯಗಳ ಸಾಂಸ್ಕೃತಿಕ ಬದುಕಿನ ಅವಿಭಾಜ್ಯ ಅಂಗವಾಗಿರುವುದರಿಂದ ಕ್ಷತ್ರಿಯರ ಕೃಷಿ ಸಂಬಂಧಿ ಆಚರಣೆಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

ಸಮುದಾಯಗಳ ಆಚರಣೆಗಳಲ್ಲಿ ಸಂಪ್ರದಾಯಗಳಲ್ಲಿ ಹಬ್ಬ ಹರಿದಿನಗಳಲ್ಲಿ ಆ ಸಮುದಾಯಗಳ ನಂಬಿಕೆಗಳು, ಅಡಕವಾಗಿರುತ್ತವೆ. ಹಳ್ಳಿಗರಲ್ಲಿ ಆಯಾ ಜಾತಿ ಜನಾಂಗಗಳ ರೀತಿ ರಿವಾಜುಗಳು

ಇದ್ದೇ ಇರುತ್ತವೆ. ಈ ಹಿನ್ನೆಲೆಯಲ್ಲಿ ಕ್ಷತ್ರಿಯರ ವ್ಯವಸಾಯಕ್ಕೆ ಸಂಬಂಧಪಟ್ಟ ಹಬ್ಬದ ಆಚರಣೆಗಳನ್ನು ಗಮನಿಸಲಾಗಿದೆ. ಬಹುತೇಕ ಹಬ್ಬಗಳು ವ್ಯವಸಾಯಕ್ಕೆ ಸಂಬಂಧಪಟ್ಟ ಹಬ್ಬಗಳೆ ಆಗಿವೆ. ಆದ್ದರಿಂದ ಸಹಜವಾಗಿಯೇ ಅಂತಹ ಹಬ್ಬಗಳಲ್ಲಿ ಕೃಷಿಗೆ ಸಂಬಂಧಪಟ್ಟ ಅಂಶಗಳು ಯತೇಚ್ಚವಾಗಿ ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಕೃಷಿ ಪ್ರಧಾನವಾದ ಮತ್ತು ಕೃಷಿಯೊಂದಿಗೆ ಹೆಚ್ಚು ಬೆಸೆದುಕೊಂಡಿರುವ ಉಗಾದಿ, ಬಸವನಹಬ್ಬ ಕಾರಬ್ಬ, ಭೂಮಿ ಹುಣ್ಣಿಮೆ, ಹಟ್ಟಿಹಬ್ಬ, ಸಂಕ್ರಾಂತಿ ಹಬ್ಬಗಳಲ್ಲಿ ವ್ಯವಸಾಯ ಸಂಬಂಧ ಅಂಶಗಳನ್ನನು ಗಮನಿಸಬಹುದು.

**೪.೪. ವಸತಿ ವ್ಯವಸ್ಥೆ**

"ಅಲೆಮಾರಿಯಾಗಿದ್ದ ಆದಿಮಾನವ ಪ್ರಕೃತಿಯ ವೈಪರೀತ್ಯಗಳಿಂದ ರಕ್ಷಣೆ ಪಡೆಯುವ ಸಲುವಾಗಿ ಪ್ರಾಣಿಗಳಂತೆ ಗುಹೆ, ಮರದ ಪೊಟರೆಗಳಲ್ಲಿ ರಕ್ಷಣೆ ಪಡೆಯುತ್ತಿದ್ದ ಆದಿ ಕಾಲದಲ್ಲಿ ಗುಹೆಗಳೇ ಮಾನವನ ಮನೆಗಳಾಗಿದ್ದವು"(ಮೇತ್ರಿ ಕೆ ಎಂ, ಬುಡಕಟ್ಟು ಕುಲ ಕಸುಬುಗಳು, ಪುಟ-೬, ೨೦೦೨). ಅನಂತರದ ದಿನಗಳಲ್ಲಿ ತಮ್ಮ ಕಲ್ಪನೆಯಂತೆ ಮನೆಯನ್ನು ನಿರ್ಮಿಸಲು ಪ್ರಾರಂಭಿಸಿದರು. ಅವರಿಗೆ ಸುಲಭವಾಗಿ ಸೀಗುವ ವಸ್ತುಗಳಿಂದ ತಾವು ಬದುಕು ನಡೆಸಲು ಸೂರನ್ನ ಮಾಡಲು ಪ್ರಾರಂಭಿಸಿದರು. ನಂತರದ ದಿನಗಳಲ್ಲಿ ತಮ್ಮ ಜ್ಞಾನವು ಹೆಚ್ಚಾದಾಂತೆ ತಾವು ಕಲಿತ ಬೇಟೆಗಾರಿಕೆ, ಪಶುಪಾಲನೆ ಭೂಮಿಯ ಮೇಲೆ ಸ್ವಚ್ಛಂದವಾಗಿ ಸಾಗುತ್ತಿತ್ತು. ಯಾವಾಗ ಭೂಮಿಯ ಮೇಲೆ ಉಳುಮೆ ಆರಂಭಭವಾಯಿತೊ, ಆಗಲೇ ಮನುಷ್ಯನ ಅಲೆಮಾರಿತನ ಸ್ವಲ್ಪ ಮಟ್ಟಿಗೆ ಸ್ಥಗಿತವಾಯಿತು. ಕೃಷಿಗೆ ಮೂಲಭೂಮಿ, ಅದು ಚಲನೆಶೀಲವಲ್ಲ. ಪಶುಪಾಲನೆಯಿಂದ ಕೃಷಿಗೆ ಒಗ್ಗಿಕೊಂಡವರು/ತೊಡಗಿದವರು ಅಲೆಮಾರಿತನವನ್ನು ಅಲ್ಲಿಗೆ ಕೈಬಿಟ್ಟು, ಕೃಷಿ ಮಾಡಲು ಕೃಷಿಭೂಮಿಯ ಹತ್ತಿರವೆ ನೆಲೆನಿಂತರು. ಆ ಸ್ಥಳಗಳೆ ಇಂದು ನಾವು ನೋಡುವ ಊರುಗಳಾಗಿವೆ.

ಈ ರೀತಿಯಾಗಿ ಅಲೆಮಾರಿಯಾಗಿದ್ದ ಮಾನವ ಒಂದೆಡೆ ನೆಲೆನಿಂತ ಮೇಲೆ ಕೌಟುಂಬಿಕ ವ್ಯವಸ್ಥೆಯನ್ನು ಮೈಗೂಡಿಸಿಕೊಂಡ. ಪ್ರಾರಂಭದಲ್ಲಿ ಗುಹೆ ಮರದ ಪೊಟರೆ ವಾಸಿಯಾಗಿದ್ದ ಮಾನವ ಕಾಲಾನಂತರದಲ್ಲಿ ಮನೆಗಳನ್ನು ನಿರ್ಮಿಸಿಕೊಳ್ಳತೊಡಗಿದ. ಕಾಲಕ್ರಮೇಣ ಮನೆಗಳ ನಿರ್ಮಾಣದಲ್ಲಿ ಅನೇಕ ಸುಧಾರಣೆಗಳಾಗಿ ಇಂದು ವಾಸ್ತುಶಾಸ್ತ್ರ ಮತ್ತು ಆಧುನಿಕ ತಂತ್ರಜ್ಞಾನದ ಅನುಗುಣವಾಗಿ ಮನೆಗಳ ನಿರ್ಮಾಣವಾಗುತ್ತಿವೆ. ಮನುಷ್ಯನ ವಸತಿಯನ್ನು ಕುರಿತಾದ ಅಧ್ಯಯನವು ನೇರವಾಗಿ ವಾಸ್ತುಶಿಲ್ಪದ ಅಧ್ಯಯನವೇ ಆಗಿದೆ. ಅದು ಮಾನವನ ಸಾಂಸ್ಕೃತಿಕ ಬದುಕಿನ ಅಧ್ಯಯನವೂ ಹೌದು. ಈ ಹಿನ್ನಲೆಯಲ್ಲಿ ಕ್ಷತ್ರಿಯರು ವಾಸಿಸುವ ಮನೆಗಳ ರಚನೆ ಮತ್ತು ಅವುಗಳ ಸ್ವರೂಪ, ಮನೆಬಳಕೆಯ ವಸ್ತುಗಳು ಆ ಸಮುದಾಯದ ಸಂಸ್ಕೃತಿಯ ದ್ಯೋತಕಗಳಾಗಿರುವುದರಿಂದ ಅವುಗಳ ಅಧ್ಯಯನವು ಮಹತ್ವದ್ದಾಗುತ್ತದೆ.

ಆಧುನಿಕ ಪ್ರಭಾವಕ್ಕೆ ಒಳಗಾದಂತೆ ಮರ, ಮಣ್ಣು, ಕಲ್ಲು, ಸಿಮೇಂಟು, ಮರಳು, ಇಟ್ಟಿಗೆ, ಕಬ್ಬಿಣಗಳಿಂದ ಮನೆ ನಿರ್ಮಿಸಲು ಪ್ರಾರಂಭಿಸಿದ್ದನ್ನು ಕಾಣಬಹುದು. ಇದಕ್ಕೆ ಕ್ಷತ್ರಿಯ ಸಮುದಾಯ

ಹೊರತಾಗಿಲ್ಲ. ಕ್ಷತ್ರಿಯರು ಕಾಡು ಪ್ರಾಣಿಗಳ ಹಾವಳಿಯಿಂದ ದೂರವಿರುವ ನೀರಿನ ಸೌಲಭ್ಯ ಕೃಷಿ ಚಟುವಟಿಕೆಗಳಿಗೆ ಯೋಗ್ಯವಾದಂತ ಪ್ರದೇಶವನ್ನು ತಮ್ಮ ವಸತಿಗಾಗಿ ಆಯ್ಕೆಮಾಡಿಕೊಂಡಿದ್ದರು. ಹಿರಿಯರಿಂದ ಸ್ಥಳ ಪರಿಶೀಲನೆ ಮಾಡಿ ಪುರೋಹಿತರಿಂದ ಒಳ್ಳೆಯ ಮೂಹುರ್ತ ನೋಡಿ ಮನೆಗೆ ಅಡಿಪಾಯ ಹಾಕುವ ಸಂಪ್ರದಾಯ ಇವರಲ್ಲಿದೆ.

ಅನೇಕ ವೃತ್ತಿಗಳನ್ನು ಕೃಷಿಯ ಜೊತೆಯಲ್ಲಿಯೇ ಅವಲಂಬಿಸಿರುವ ಕ್ಷತ್ರಿಯರು ವಾಶಿಸುವ ಮನೆಗಳು ಅವರ ಆರ್ಥಿಕ ಸ್ಥಿತಿಗನುಗುಣವಾಗಿವೆ. ಬಹುಪಾಲು ಕ್ಷತ್ರಿಯರು ನೆರಿಕೆ ಗೋಡೆಗಳಿಂದ ಕೂಡಿದ ಸಣ್ಣ ಹುಲ್ಲಿನ ಮನೆಗಳಲ್ಲಿ ವಾಸವಾಗಿದ್ದರೆ, ಇನ್ನು ಕೆಲವರು ಮಣ್ಣಿನ ಗೋಡೆಗಳಿಂದ ಕೂಡಿದ ಕಪ್ಪು ಮತ್ತು ಕೆಂಪು ಹೆಂಚಿನ ಮನೆಗಳಲ್ಲಿ ಮತ್ತೆ ಕೆಲವರು ಸೀಮೆಂಟ್ ಸೀಟ್ ಮನೆಯಲ್ಲಿ ವಾಸಮಾಡುವವರಿದ್ದಾರೆ. ಹಾಗೆಯೇ ಇತ್ತೀಚಿನ ಆಧುನಿಕ ಯುಗದಲ್ಲಿ ಶಿಕ್ಷಣದ ಪ್ರಭಾವದಿಂದಾಗಿ ಆರ್.ಸಿ.ಸಿ ಮನೆಯನ್ನು ಕೆಲವೊಂದು ಕ್ಷೇತ್ರ ಕಾರ್ಯಕ್ಕೆ ಹೊದಾಗ ನೋಡಲಾಗಿದೆ.

ಹಾಗೆಯೇ ನೆರಿಕೆ ಗೋಡೆಗಳಿಂದ ಕೂಡಿದ ಗುಡಿಸಲುಗಳು ಅತ್ಯಂತ ಚಿಕ್ಕದಾಗಿರುತ್ತವೆ. ಹೆಂಚಿನ ಮನೆಗಳು ತಕ್ಕ ಮಟ್ಟಿಗೆ ವಿಶಾಲಗಾತ್ರದಾಗಿರುತ್ತವೆ. ಇವರ ಮನೆಗಳು ಕ್ರಮೇಣವಾಗಿ ಎರಡು, ಮೂರು ಮತ್ತು ನಾಲ್ಕು ಅಂಕಣದಲ್ಲಿ ಹಾಗೂ ಮೂರು, ನಾಲ್ಕು ಭಾಗದಲ್ಲಿ ಇರುತ್ತದೆ. ಪಕ್ಕದ ಎರಡು ಗೋಡೆಗಳು ಎತ್ತರವಾಗಿದ್ದು, ಎರಡುಗೋಡೆಗಳ ಮಧ್ಯಭಾಗದ ತುದಿಗೆ ಅಡ್ಡಬೆಲಗನ್ನು ಹಾಕಿರುತ್ತಾರೆ. ಎರಡು ಮಾಡಿ ಗೋಡೆಗಳ ಮಧ್ಯೆ ಎರಡೂ ಗೋಡೆಗಳಿಗೆ ಹೊಂದಿಕೊಂಡಂತೆ ಅಂಕಣಕ್ಕೊಂದರಂತೆ ಮೂರು ಕಂಬಗಳಿರುತ್ತವೆ. ಈ ಕಂಬಗಳ ಮೇಲೆ ತೊಲೆಗಳನ್ನಿಟ್ಟು ಅವುಗಳ ಮೇಲೆ ಮೂರು ನೆತ್ತಿಬೇಲಗಳನ್ನು ನಿಲ್ಲಿಸಿ, ಆ ಮೂರು ನೆತ್ತಿ ಬೆಲಗುಗಳ ಮೇಲೆ ಅಡ್ಡ ಬೆಲಗನ್ನು ಹಾಕಿರುತ್ತಾರೆ. ಈ ಅಡ್ಡ ಬೆಲಗು ಇಡೀ ಮನೆಯನ್ನು ಸಮನವಾಗಿ ಎರಡು ಭಾಗ ಮಾಡುತ್ತದೆ. ಇದನ್ನು ಬೆಂಗ್ಟಿ ಎಂದು ಕರೆಯಲಾಗುತ್ತದೆ. ನಂತರದಲ್ಲಿ ಅಡ್ಡ ಬೆಲಗಿನ ಮೇಲಿನಿಂದ ಎರಡೂ ಕಡೆಗೂ ಇಳಿಜಾರಾಗುವಂತೆ ಟೀರು ಅಥವಾ ಬಿದಿರಿನ ಬೊಂಬುಗಳನ್ನು ಹಾಕಿ ಅದರ ಮೇಲೆ ರೀಪರ್ ಅಥವಾ ದಬ್ಬೆಗಳನ್ನು ಅಥವಾ ಅಡಿಕೆ ದಬ್ಬೆಗಳನ್ನು ಬಡಿದು ಹೆಂಚು ಇಲ್ಲವೆ ಆಪು ಅಥವಾ ಚೊಂಡನ್ನು ಹೊದೆಸುತ್ತಾರೆ. ಇದನ್ನು ಹಾರು ಎಂದು ಕರೆಯುತ್ತಾರೆ.

ಮನೆಯ ಗೋಡೆಗಳನ್ನು ಕಟ್ಟಲು ತಳಪಾಯವನ್ನು ಕಲ್ಲು ಮರಳು ನೀರುಹಾಕಿ ಭದ್ರಪಡಿಸಿದ ನಂತರ ಅದರ ಮೇಲೆ ಕಲ್ಲು ಅಥವಾ ಇಟ್ಟಿಗೆಗಳಿಂದ ಮರಳು ಮತ್ತು ಸೀಮೆಂಟ್ ಮಿಶ್ರಿತ ಮಡ್ಡಿ ಅಥವಾ ಮಣ್ಣು ಮಿಶ್ರಿತ ಮಡ್ಡಿಯಿಂದ ಕಟ್ಟಿ ಗೋಡೆಯನ್ನು ಗಾರೆಯಂತೆ ನುಣುಪು ಮಾಡುತ್ತಾರೆ. ನಂತರದಲ್ಲಿ ಅದಕ್ಕೆ ಸುಣ್ಣ ಮತ್ತು ಬಣ್ಣ ಬಳಿಯುತ್ತಾರೆ. ಆದರೆ ಕೆಲವೊಂದು ಮನೆಗಳು ನೆಲಕ್ಕೆ ಕಲ್ಲು ಹಾಸು ಅಥವಾ ಗಾರೆ ಮಾಡುತ್ತಾರೆ. ಕೆಲವೊಂದು ಮನೆಗಳಲ್ಲಿ ಇಂದು ಸಹ ನೆಲವನ್ನು ಸಗಣಿಯಿಂದ ಸಾರಸುವುದು ಅಥವಾ ಬಳಿಯುವುದು ಕಂಡುಬರುತ್ತದೆ. ಮನೆಯ ಒಳಭಾಗವು ಮೂರು ಅಥವಾ ನಾಲ್ಕು ಪಾಳುನಿಂದ ಕೂಡಿದ್ದು, ಮೊದಲ ಪಾಳನ್ನು 'ಪಡಸಾಲೆ' ಎಂದು ಎರಡನೇ ಭಾಗವನ್ನು 'ನಡುಮನೆ' ಮತ್ತು ಮೂರನೇ ಭಾಗವನ್ನು ವಂಕವೆಂದು ಕೊನೇಯಭಾಗವನ್ನು ಅಡುಗೆಮನೆ ಎಂದು

ಕರೆಯುತ್ತಾರೆ. ಸಾಮಾನ್ಯವಾಗಿ ಈ ಮನೆಗಳಿಗೆ ಹಿತ್ತಲು ಸಹಜವಾಗಿರುತ್ತದೆ. ಅಲ್ಲಿಯೇ ಸ್ನಾನದ ಗೃಹವಿರುತ್ತದೆ. ಹಾಗೆಯೇ ಶೌಚಾಲಯವು ಅಲ್ಲಿ ಕಾಣಿಸದು. ಆದರೆ ಇತ್ತೀಚಿನ ದಿನದಲ್ಲಿ ಕಟ್ಟಿದ ಕಟ್ಟಿಸಿತ್ತಿರುವ ಮನೆಯಲ್ಲಿ ಶೌಚಾಲಯ ನೋಡಬಹುದು. ಹಾಗೆಯೇ ಕೃಷಿ ನಿರಂತರ ಮನೆಯಲ್ಲಿ ಪಡಸಾಲೆಯಲ್ಲಿ ಅಥವಾ ಒಂದು ಚಿಕ್ಕ ಮಳಿಗೆಯಲ್ಲಿ ತಮ್ಮ ಕೃಷಿ ಉಪಕರಣಗಳನ್ನು ಇಟ್ಟುಕೊಳ್ಳುತ್ತಾರೆ. ಅಲ್ಲದೆ ಇಲ್ಲಿ ಪಶು ಸಂಗೋಪನೆಗೆ ವಿಶೇಷ ಸ್ಥಾನಕಲ್ಪಿಸಿಲಾಗಿದೆ. ಪಶುಸಂಗೋಪನೆ ಸಲುವಾಗಿ ಮನೆಯ ಪಕ್ಕ ಅಥವಾ ಹಿತ್ತಲಿನಲ್ಲಿ ದನ ಕೊಟ್ಟಿಗೆ ಅಥವಾ ದನದ ಮನೆಯನ್ನು ಕಟ್ಟಿಸಿರುತ್ತಾರೆ. ಇಲ್ಲಿ ಎತ್ತು, ಎಮ್ಮೆ, ಕುರಿ, ಆಕಳು, ಕೋಳಿ ನಾಯಿಯ ವಾಸವಿರುತ್ತದೆ. ಹಾಗೆಯೇ ಪಣತವನ್ನು ಅಥವಾ ಕಣಜವನ್ನು ದವಸ ಧಾನ್ಯಗಳನ್ನು ತುಂಬುವಂತಹ ನೆಲದ ಹಗೆವು ಮತ್ತು ಕಣಜವನ್ನು ಪಡುಶಾಲೆಯಲ್ಲಿ ನಿರ್ಮಿಸಿಕೊಳ್ಳುತ್ತಾರೆ. ಅಲ್ಲದೆ ರಾಸುಗಳಿಗೆ ಹಿತ್ತಲಿನಲ್ಲಿ ಜಾಗವಿದ್ದರೆ, ಮೇವಿನ ಬಣವೆ ಹಾಕಿರುತ್ತಾರೆ.

ಮನೆಯ ಮೂರನೇ ಅಥವಾ ನಾಲ್ಕನೇ ಭಾಗವೇ ಅಡಿಗೆ ಮನೆ. ಈ ಅಡಿಗೆ ಮನೆಯಲ್ಲಿ ಮುಖ್ಯವಾಗಿ ಒಲೆಯು ಸೂರ್ಯನ ದಿಕ್ಕಿನ ಕಡೆ ಅಥವಾ ಪೂರ್ವ ದಿಕ್ಕಿನಲ್ಲಿ ಇರುತ್ತದೆ. ಅದರ ಪಕ್ಕದಲ್ಲಿ ಸೌದೆ ಮೂಲೆ ಅಥವಾ ಕಟ್ಟಿಗೆ ಮೂಲೆ ಇರುತ್ತದೆ. ಹಾಗೆ ರುಬ್ಬುವ ಕಲ್ಲು ಅಥವಾ ಕಾರ ಅರೆಯುವ ಕಲ್ಲು ಇರುತ್ತದೆ. ಮತ್ತು ನೀರಿನ ಗುಡಾಣ ಅಥವಾ ಹಂಡೇವು ಅದು ಮಣ್ಣು ಮತ್ತು ತಾಮ್ರದಾಗಿರುತ್ತದೆ. ಮೊಸರು ಕಡೆಯುವ ಕಡೆಗೋಲು ಗೂಟವಿರುತ್ತದೆ. ಕೆಲವು ದಶಕಗಳ ಹಿಂದೆ ನಾವು ಸರಿದಾಗ ಅಲ್ಲಿ ಮಣ್ಣಿ ಮಡಿಕೆಗಳು ಮತ್ತು ಪಿಂಗಾಣಿಗಳು ಕಾಣಿಸುತ್ತದ್ದಿವು. ಇತ್ತೀಚಿನ ದಿನದಲ್ಲಿ ಕೇವಲ ಸ್ಟೀಲ್ ಮತ್ತು ಪ್ಲಾಸ್ಟಿಕ್ ಅಡುಗೆ ಉಪಕರಣಗಳನ್ನು ನಾವು ಗಮನಿಸಬಹುದು. ನೀರು ಕಾಯಿಸಲು ಗುಡಾಣ ಅಥವಾ ಹಂಡೆವು ದೊಡ್ಡ ಗಾತ್ರದಲ್ಲಿ ಸ್ನಾನದ ಮನೆಯಲ್ಲಿ ನೋಡುತ್ತವೆ. ಅಡಿಗೆ ಮನೆಯಲ್ಲಿಯೇ ಗೋಡೆಯನ್ನು ಹೊಂದುಕೊಂಡಂತೆ ಕಪಾಟು ಇರುತ್ತದೆ. ಇದರಲ್ಲಿ ಹಾಲು ಮೊಸರು ಬೆಣ್ಣೆ, ತುಪ್ಪ, ಅಡುಗೆಗೆ ಬೇಕಾದ ವಸ್ತುಗಳನ್ನು ಜೋಡಣೆ ಮಾಡುವುದಾಗಿರುತ್ತದೆ. ಕೆಲವೊಂದು ಕಡೆ ನಾವು ಕ್ಷೇತ್ರಾಧ್ಯಯನದಲ್ಲಿ ನೋಡಿದಾಗ ಕೇವಲ ಮನೆಗಳಿಗೆ ಮುಂಬಾಗಿಲು ಮಾತ್ರ ಇರುತ್ತದೆ. ಪಡುಸಾಲೆಯ ನಂತರದ ನಡು ಮನೆಯಲ್ಲಿ ಅಟ್ಟವಿರುತ್ತದೆ. ಇದು ಸಹ ತುಂಬ ವಿಶಿಷ್ಟವಾಗಿ ವಿನ್ಯಾಸಗೊಳಿಸಿರುತ್ತಾರೆ. ಇಲ್ಲಿ ತುಂಬ ಮುಖ್ಯವಾದ ವಸ್ತುಗಳನ್ನು ದಾಸ್ತುನು ಮಾಡುತ್ತಾರೆ. ಸಾಮಾನ್ಯವಾಗಿ ಶೌಚಾಲಯವಿರುವುದು ತುಂಬನೇ ಕಡಿಮೆ. ಗ್ರಾಮೀಣ ಪ್ರದೇಶದಲ್ಲಿ ಊರ ಹೊರಗೆ ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ಬರುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಸಮಾಜದ ಆರೋಗ್ಯ ಕಾಳಜಿಯಿಂದಾಗಿ ಸರ್ಕಾರದ ವಂತಿಕೆಯ ಹಣದಿಂದಾಗಿ ಶೌಚಾಲಯಗಳನ್ನು ಕಟ್ಟಿಸಿರುವುದನ್ನು ನೋಡಬಹುದು.

ಮನೆಯ ಮುಂಭಾಗವನ್ನು ಅಂಗಳವೆಂದು ಕರೆಯುತ್ತಾರೆ. ಅಂಗಳದಲ್ಲಿ ತುಳಸಿಕಟ್ಟೆ ಇದ್ದೆ ಇರುತ್ತದೆ. ಇದನ್ನು ಮಣ್ಣಿನಿಂದ ಅಥವಾ ಕಲ್ಲಿನಿಂದ ನಿರ್ಮಿಸಿ ನಿತ್ಯ ಪೂಜಿಸುತ್ತಾರೆ. ಸಂಪ್ರದಾಯ ಬದ್ಧ ಮನೆಗಳಲ್ಲಿ ಒಂದು ವರಾಂಡವಿರುತ್ತದೆ. ಅದಕ್ಕೆ ಜಗುಲಿ ಎಂದು ಕರೆಯುತ್ತಾರೆ. ಅದನ್ನು

ಮನೆಯ ಪುರುಷರು ಮತ್ತು ಅತಿಥಿಗಳು ಉಪಯೋಗಿಸುತ್ತಾರೆ. ಹೆಣ್ಣು ಮಕ್ಕಳು ಆಯಾ ಮನೆಯನ್ನು ರಾಗಿ ಬೀಸುವಾಗ ಇತರೆ ಕುಲಕಸುಬುಗಳನ್ನು ಇಲ್ಲಿ ಮಾಡತೊಡಗುತ್ತಾರೆ. ಇಲ್ಲಿ ದೇವರ ಕೋಣೆಯನ್ನು ನೋಡುತ್ತವೆ. ಇವರು ತ್ರಿಸೂಲ ಕತ್ತಿ, ಮೊದಲಾದ ಆಯುಧಗಳ ಜೊತೆ ಶಂಖು ಜಾಗಟೆ ಘಂಟೆಗಳನ್ನು ದೇವರ ಕೋಣೆಯಲ್ಲಿ ಇಟ್ಟು ಕೊಂಡಿದ್ದಾರೆ. ಹಾಗೆಯೇ ತಮ್ಮ ಕುಲದೇವರನ್ನಿಟ್ಟು ದೇವರಗಳ ಪೋಟೋವನ್ನು ಇಟ್ಟು ಕಳಸಪಿಟ್ಟು ಆ ಕೋಣೆಯಲ್ಲಿ ನಿತ್ಯ ಪೂಜಿಸುತ್ತಾರೆ. ಕೆಲವೊಂದು ಮನೆಯಲ್ಲಿ ಶನಿವಾರ, ಶುಕ್ರವಾರ, ಇಂತಹ ವಾರಗಳಲ್ಲಿ ಅವರಿಗೆ ಶ್ರೇಷ್ಟವಾದ ವಾರದಂದು ವಿಶೇಷ ಪೂಜೆ ಮಾಡುತ್ತಾರೆ. ಈ ಕೋಣೆಯಲ್ಲಿ ಶುದ್ಧಾಚಾರ ಹೆಚ್ಚು, ಮುಟ್ಟಾದ ಹೆಂಗಸರು ಐದು ದಿನಗಳವರೆಗೆ ಈ ಕೋಣೆಯನ್ನು ಪ್ರವೇಶಿಸುವಂತಿಲ್ಲ.

ಹಿಂದಿನ ಕಾಲದಲ್ಲಿ ಕ್ಷತ್ರಿಯರು ಮನೆ ಕಟ್ಟುವ ಲೆಕ್ಕಾಚಾರವನ್ನು ಕೋಲಿನ ಅಥವಾ ಹಗ್ಗದ ಅಳತೆಯ ಮೂಲಕ ಮಾಡುತ್ತಿದ್ದರು. ಅಂದರೆ, ಮಳ ಮತ್ತು ಮಾರು ಎಂಬ ಲೆಕ್ಕಚಾರಹಾಕಿ ವಾಸ್ತುಶಾಸ್ತ್ರದ ಪ್ರಕಾರ ಮನೆಗಳನ್ನು ಕಟ್ಟುತ್ತಿದ್ದರು. ಒಂದೇ ಮನೆಯಲ್ಲಿ ಎರಡು–ಮೂರು ಕುಟುಂಬಗಳು ವಾಸಿಸುವರನ್ನು ಕಾಣಬಹುದು. ಮನೆಯ ಸುತ್ತಲು ಓಣಿಯನ್ನು ಬಿಟ್ಟಿರುತ್ತಾರೆ. ಕೆಲವೊಂದು ಮನೆಗಳು ಒಂದಕ್ಕೊಂದು ತಾಗಿಕೊಂಡು ಇರುತ್ತವೆ.ಮನೆ ನಿರ್ಮಾಣ ಮಾಡುವಾಗ ಮೊದಲು ಸೂಕ್ತವಾದ ಜಾಗವನ್ನು ಆಯ್ಕೆಮಾಡಿಕೊಂಡು ಶುಭದಿನ ಮತ್ತು ಶುಭಾಗಳಿಗೆಯಲ್ಲಿ ಅಂದರೆ ವಾರ, ರಾಹುಕಾಲ, ಯಮಗಂಡಕಾಲ, ಗುಳಿಕಕಾಲಗಳ, ಮತ್ತು ಯೋಗಗಳನ್ನು ನೋಡಿಕೊಂಡು ಆಯ ಮಾಡಿಸಿ ಮನೆಕಟ್ಟುವ ಕೆಲಸವನ್ನು ಆರಂಭಿಸುತ್ತಾರೆ. ತಳಪಾಯದಿಂದ ಮನೆಕಟ್ಟುವ ಕೆಲಸವನ್ನು ಪ್ರಾರಂಭಿಸುತ್ತಾರೆ. ಕಲ್ಲು ಮಣ್ಣು ಮರಳು ಅಥವಾ ಇಟ್ಟಿಗೆಗಳನ್ನು ಮನೆಕಟ್ಟಲು ಬಳಸಿಕೊಳ್ಳುತ್ತಾರೆ. ಮರವನ್ನು ಸಾಮಾನ್ಯವಾಗಿ ಮನೆಯನ್ನು ಕಟ್ಟಲು ಬಳಸುವುದು ಅಧಿಕವಾಗಿರುತ್ತದೆ. ಇಲ್ಲಿ ಮುಖ್ಯವಾಗಿ ಬೇವು, ಮಾವು, ಹಲಸು, ಜಾಲಿ, ಹೊನ್ನೆ, ತ್ಯಾಗ ಮರವನ್ನು ಅಧಿಕವಾಗಿ ಬಳಕೆ ಮಾಡುತ್ತಾರೆ. ಇಂತಹ ಮರಗಳನ್ನು ಬಳಸಿ ಮನೆ ಕಟ್ಟಿ ಮುಗಿಸುತ್ತಾರೆ. ಮನೆಯ ಬಾಗಿಲುಗಳು ಪೂರ್ವ ಮತ್ತು ದಕ್ಷಿಣ ದಿಕ್ಕಿನ ಕಡೆ ಜಾಸ್ತಿ ಯಾಗಿ ನಿಲ್ಲುಸುವುದು ಸರ್ವಸಾಮಾನ್ಯವಾಗಿದೆ.

ಮನೆಯನ್ನು ಕಟ್ಟಿಸಿದನಂತರದಲ್ಲಿ ಮನೆಯ ಅಥವಾ ಹೊಸಮನೆಯ ಗೃಹ ಪ್ರವೇಶ ಅಥವಾ ಮನೆ ಪ್ರವೇಶವು ತುಂಬ ಸಂಪ್ರದಾಯ ಪ್ರಕಾರ ಮಾಡುತ್ತಾರೆ. ಬ್ರಾಹ್ಮಣರಲ್ಲಿ ಹೋಗಿ ಮನೆಯ ಪ್ರವೇಶವನ್ನು ಗೊತ್ತುಪಡಿಸಿಕೊಂಡು ಆ ದಿನದಲ್ಲಿ ಬಂಧುಬಳಗ ಮತ್ತು ತಮ್ಮ ಅಕ್ಕಪಕ್ಕದ ಮನೆಯವರನ್ನು ನೆರೆಹೊರೆಯವನ್ನು ಆಹ್ವಾನಿಸುತ್ತಾರೆ. ರಾತ್ರಿ ಹೋಮ ಅಥವಾ ಹಗಲು ಹೋಮ ನಡೆಯುತ್ತದೆ. ಹಾಗೂ ಆ ಊರಿನಲ್ಲಿರುವ ದೇವರಗಳನ್ನು ತಮ್ಮ ಹೊಸ ಮನೆಗೆ ಇಳಿದುಕೊಳ್ಳುವ ಕಾರ್ಯಕ್ಕೆ ಕರೆತರುತ್ತಾರೆ. ನಂತರ ಗೃಹ ಪ್ರವೇಶದ ಆದ ಮೇಲೆ ಮನೆಗೆ ಆಗಮಿಸಿದ ಬಂಧುಬಳಗಕ್ಕೆ ಮತ್ತು ಆಪ್ತಷ್ಟರಿಗೆ ಸಿಹಿಊಟ ಹಾಕುವ ಸಂಪ್ರದಾಯವಿದೆ. ಹಾಗೂ ಮನೆ ಇಳಿದುಕೊಳ್ಳುವ ಕಾರ್ಯಕ್ಕೆ ಆಗಮಿಸಿದ ಬಂಧುಬಳಗದವರು ಮತ್ತು ಮಿತ್ರರೂ ಉಡುಗೊರೆಯ ಅಥವಾ ಕಾಣಿಕೆಯನ್ನು ಮನೆಯ ಯಜಮಾನನಿಗೆ ನೀಡುತ್ತಾರೆ. ಅಲ್ಲದೆ ನಗರ ಪ್ರದೇಶಗಳಲ್ಲಿ ವಾಸಿಸುವ ಕ್ಷತ್ರಿಯ ಸಮುದಾಯವು

ಮನೆಗಳನ್ನು ಹಳ್ಳಿಗಳಿಗಿಂತ ಭಿನ್ನವಾಗಿ ಕಟ್ಟಿಸಿರುವುದನ್ನು ಕಾಣಬಹುದು. ಅವರ ಆರ್ಥಿಕತೆಯ ಅನುಕೂಲತಕ್ಕಂತೆ ತಾರಸಿ ಅಥವಾ ಆರ್.ಸಿ.ಸಿ. ಮನೆಗಳನ್ನು ಕಟ್ಟಿಕೊಂಡಿರುತ್ತಾರೆ. ಆದರೆ ಇಲ್ಲಿ ಅವುಗಳ ಸಂಖ್ಯೆ ಕೇವಲ ಬೆರಳ ಎಣಿಕೆಯಷ್ಟು ಇರುತ್ತದೆ. ತಮ್ಮ ಜೀವನೋಪಾಯಕ್ಕೆ ಹಳ್ಳಿಯನ್ನು ತೊರದು ಬಂದವರು ಹಾಗೇ ಸರ್ಕಾರಿ ನೌಕರಿಯಲ್ಲಿದ್ದವರು ಆರ್ಥಿಕತೆಯಲ್ಲಿ ಗಟ್ಟಿ ಇದ್ದವರು ನಗರದಲ್ಲಿ ಮನೆಕಟ್ಟಿಸುತ್ತಾರೆ. ಆರ್ಥಿಕವಾಗಿ ಸಬಲತೆ ಇಲ್ಲದವರು ಬಾಡಿಗೆಗೆ ಇರುವುದನ್ನು ಅಧ್ಯಯನ ಕ್ಷೇತ್ರಾಧ್ಯಯನದಿಂದ ತಿಳಿದುಕೊಳ್ಳಬಹುದು.

### ೪.೫. ಗೃಹ ಬಳಕೆಯ ವಸ್ತುಗಳು

ಕ್ಷತ್ರಿಯ ಸಮುದಾಯದ ಪ್ರತಿಯೊಂದು ಮನೆಯವರಲ್ಲಿ ಅದರಲ್ಲೂ ಗ್ರಾಮೀಣ ಜನಪದ ಜೀವನದಲ್ಲಿ ಬಳಕೆಯಾಗುತ್ತಾ ಬಂದಿರುವ ನಾನಾ ವಿಧವಾದ ಸಲಕರಣೆಗಳು, ವಸ್ತು ವಿಶೇಷಗಳು, ಆಯುಧಗಳು ಭೌತಿಕ ಸಾಂಸ್ಕೃತಿಕ ವರ್ಗಕ್ಕೆ ಸೇರುತ್ತವೆ. ಶಿಲೆ, ಲೋಹ, ಮರ, ಮಣ್ಣು, ನಾರು, ಬೇರುಗಳಿಂದ ಹಿಡಿದು ಗಾಜು, ಕಾಗದಗಳವರೆಗೆ ಇವುಗಳ ಇತಿಹಾಸ ವ್ಯಾಪಿಸಿಕೊಂಡಿರುತ್ತದೆ. *(ಅಂಬಳಿಕೆ ಹಿರಿಯಣ್ಣ, ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, ಪುಟ-೯೦, ೧೯೯೯).* ಕ್ಷತ್ರಿಯರ, ಜೀವನಾವಶ್ಯಕ ವಸ್ತುಗಳು, ವ್ಯವಸಾಯದ ಅಡುಗೆ ಸಾಧನಗಳು ಬಹುತೇಕವಾಗಿ ಮರ, ಮಣ್ಣು, ಲೋಹ, ಶಿಲೆ, ಮತ್ತು ಬೆತ್ತಗಳಿಂದ ನಿರ್ಮಾಣಗೊಂಡಿರುತ್ತವೆ. ಇವರ ನಿತ್ಯ ಬಳಕೆಯ ವಸ್ತುಗಳಲ್ಲಿ ಹೆಚ್ಚಿನವು ಮರದ ಸಾಧನವಾಗಳಾಗಿವೆ.

ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಸಮುದಾಯದ ಪ್ರತಿ ಮನೆಯವರು ಈ ಮೊದಲು ನಾಲ್ಕುರಿಂದ ಐದು ಮಣ್ಣಿನ ಗಡಿಗೆಗಳನ್ನು/ಗುಡಾಣ ಉಪಯೋಗಿಸುತ್ತಿದ್ದರು. ನೀರನ್ನು ತುಂಬಿಡಲು ಅನ್ನ ಮಾಡಲು ಸಾನ್ನಕ್ಕೆ ನೀರನ್ನು ಕಾಯಿಸಲು ಹಿಟ್ಟುನ್ನು ತುಂಬಿಡಲು ಉಪ್ಪನ್ನು ಹಾಕಿಡಲು ಮೀನಿನ ಸಾರನ್ನು ಮಾಡಲು ಹೀಗೆ ಒಂದಲ್ಲ ಒಂದು ಕೆಲಸಕ್ಕೆ ಮಣ್ಣಿನ ಪಾತ್ರೆಗಳನ್ನು ಉಪಯೋಗಿಸುತ್ತಿದ್ದರು. ಅಡುಗೆ ಸಾಮಾನುಗಳನ್ನು ಕುರಿತು ನೋಡುವಾಗ ಮರದ ಸಾಧನಗಳು ಅಡುಗೆಯ ಮನೆಯಲ್ಲಿ ತನ್ನದೇ ಹಿರಿಯದಾದ ಪಾತ್ರವಹಿಸುತ್ತದೆ. ಮರಿಗೆ ಈ ಸಾಧನವನ್ನು ರೊಟ್ಟಿ ಮಾಡಲು ಬಳಸುತ್ತಾರೆ. ಕೈಬಟ್ಟಲು, ಇದನ್ನ ಮುದ್ದೆ ಮಾಡಲು ಬಳಸುವರು. ಹಾಗೇ ಲತೂಡಿ ಅಥವಾ ಲಟ್ಟಣಿಗೆ, ಇದು ಚಪಾತಿ, ರೊಟ್ಟಿ, ಹಪ್ಪಳ, ಮಾಡಲು ಬಳಸುತ್ತಾರೆ. ಮರದ ಸೌಟು, ಮದ್ದೆಕೋಲು, ಕಡೆಗೋಲು, ತುರಿಮಣೆ ಒನಕೆ, ಕ್ರಮವಾಗಿ ನೋಡುವುದಾದರೆ, ಇವು ಅಡುಗೆಯ ಮನೆಯಲ್ಲಿ ತಮ್ಮದೇ ಮಹತ್ವಗಳನ್ನು ಹೊಂದಿವೆ. ಇದರ ಜೊತೆಗೆ ಅಲ್ಯುಮಿನಿಯಂ ಮತ್ತು ಕಂಚಿನ ತಾಮ್ರದ ಪಾತ್ರೆಗಳನ್ನು ಬಳಸುತ್ತಿದ್ದರು. ಅಲ್ಲದೇ ಗುದ್ದಲಿ, ಕೊಡಲಿ, ಹಾರೆಕೋಲು, ಬರ್ಚಿ, ಕತ್ತಿ, ಮುಂತಾದ ವಸ್ತುಗಳನ್ನು ಮನೆ ಬಳಕೆಗೆ ಉಪಯೋಗಿಸುತ್ತಿದ್ದರು. ಮಲಗಿಕೊಳ್ಳಲು ಈಚಲು ಛಾಪೆಯನ್ನು ಮತ್ತು ಕಡ್ಡಿ ಛಾಪೆಯನ್ನು ಉಪಯೋಗಿಸುತ್ತಿದ್ದರು. ಅರೆಯುವ ಕಲ್ಲು, ಬೀಸುವ ಕಲ್ಲು, ಜೋಳ, ರಾಗಿ, ಭತ್ತಕುಟ್ಟಲು, ಒನಕೆ, ಅನ್ನ ಬಸಿಯಲು ಮರದ ಮರಿಗೆ(ಚಿಬಲು) ಉಪ್ಪಿನಕಾಯಿ ಹಾಕಿಡಲು ಪಿಂಗಾಣಿ ಭರಣಿ, ನೀರು ತರುವ ಗಡಿಗೆ ಬಾವಿ ನೀರೆತ್ತಲು ಗಡ/ಕಡಗ, ದವಸ ಧಾನ್ಯಗಳನ್ನು ಅಳೆಯುವ ಕೊಳಗ, ಬೀಸುವ

ಕಲ್ಲು, ಮಡಿಕೆಗಳನ್ನು ನೇತುಹಾಕುವ ಹಗ್ಗದ ನಲ್ಲಿ ಬೆತ್ತದಿಂದ ಅಥವಾ ಮರದಿಂದ ಮಾಡಿದ ತೊಟ್ಟಿಲು, ರೊಟ್ಟಿ ಸುಡುವ ಹಂಚು, ಊಟದ ಮಣೆ, ಕಂಚಿನ ತಟ್ಟೆ, ಚಹಾ ಕುಡಿಯುವ ಲೋಟಗಳು, ಹರಿವಾಣ, ಒಳಕಲ್ಲು, ಮಸ್ಗಲ್ಲು, ವಡ್ಡೇವು, ಪುಟ್ಟಿ ಬಿದಿರಿನ ಕುಕ್ಕೆಗಳು, ಜಲ್ಲೆ, ಸಿಬ್ಲು, ಕಣಜ, ಹೀಗೆ ಅನೇಕ ರೀತಿಯ ಗೃಹಬಳಕೆಯ ವಸ್ತುಗಳನ್ನು ಬಳಸುತ್ತಾರೆ. ಅನೇಕ ಕ್ಷತ್ರಿಯರು ಕೃಷಿಯನ್ನು ಅವಲಂಬಿಸಿರುವುದರಿಂದ ಅವರು ಮರ ಮತ್ತು ಮಣ್ಣು ಹಾಗೂ ಕಂಚು ತಾಮ್ರ, ಹಿತ್ತಾಳೆ, ಇವೆ ಮುಂತಾದ ಲೋಹಗಳ ಬಳಕೆ ಬಗ್ಗೆ ಜ್ಞಾನವನ್ನು ಪಡೆದುಕೊಂಡು ಉಪಯೋಗಿಸುವುದನ್ನು ಗಮನಿಸಬಹುದಾಗಿದೆ.

ಇತ್ತೀಚಿನ ದಿನಗಳಲ್ಲಿ ಭೂತಕಾಲದ ವಸ್ತುಗಳನ್ನು ಬಳಸದೇ ಆಧುನಿಕ ಕಾಲದ ಸಾಮಗ್ರಿಗಳಿಗೆ ಮಾರು ಹೋಗಿರುವುದನ್ನು ಕಾಣಬಹುದು. ಆದರೆ ಕೆಲವರು ಆರ್ಥಿಕತೆಯ ಸಂಕಷ್ಟದಿಂದಾಗಿ ಹಳೆಯ ವಸ್ತು ಬಿಡಲಾರದೆ ಹೊಸ ವಸ್ತುಗಳನ್ನು ಕೊಳ್ಳಲಾಗದೆ ಒಂದು ರೀತಿಯ ಅತಂತ್ರ ಸ್ಥಿತಿಯಲ್ಲಿ ಜೀವನ ನಡೆಸುತ್ತಿರುವುದನ್ನು ನಾವು ಕಾಣಬಹುದು.

### ೪.೬. ಅಡುಗೆ ಪದ್ಧತಿ/ಆಹಾರ ಪದ್ಧತಿ

ಜೀವಿಸುವ ಪ್ರತಿಯೊಂದು ಜೀವಿಗೂ ಆಹಾರ ಅತ್ಯವಶ್ಯಕ. ಶಿಲಾಯುಗದಲ್ಲಿ ಎಲ್ಲಾ ಸಮುದಾಯಗಳು ಮಾಂಸಹಾರಿಯಾಗಿರುವ ಬಗ್ಗೆ ಉಲ್ಲೇಖಗಳಿವೆ. ನಂತರ ವಾಸಿಸುವ ಪ್ರದೇಶಕ್ಕೆ ಅನುಗುಣವಾಗಿ ಸಸ್ಯಹಾರ ಹಾಗೂ ಮಾಂಸಹಾರವನ್ನು ರೂಢಿಸಿಕೊಳ್ಳುವುದು ಸಾಮಾನ್ಯವಾಗಿದೆ. ಇಂದು ಆಹಾರ ಕ್ರಮವು ಎಲ್ಲಾ ಸಮುದಾಯಗಳಲ್ಲಿ ಬದಲಾವಣೆ ಕಂಡುಬಂದಂತೆ ಕ್ಷತ್ರಿಯ ಸಮುದಾಯವು ಹೊರತಾಗಿಲ್ಲ. ಇವರ ದಿನನಿತ್ಯದ ಅಡುಗೆ, ನೆಂಟರಿಷ್ಟರು, ಬಂಧು-ಬಳಗ, ಮನೆಗೆ ಬಂದಾಗ ವಿಶೇಷ ಸಂದರ್ಭದಲ್ಲಿ ದೇವೋಪಾಸನೆಯ ವಾರದ ದಿನದಂದು ಹಬ್ಬ-ಹರಿದಿನಗಳಲ್ಲಿ ಮಾಡುವ ಆಹಾರ ಪದ್ಧತಿಯ ಭಿನ್ನತೆಯನ್ನು ಕಾಣುತ್ತೇವೆ.

ಒಂದು ಸಮುದಾಯದ ಜೀವನ ವಿಧಾನದ ಮುಖ್ಯ ಭಾಗವಾದ ಆಹಾರ ಪದ್ಧತಿಯು ಹಿಂದೂ ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯಲ್ಲಿ ಆ ಜನಾಂಗದ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುವ ಅಂಶವಾಗಿಬಿಡುತ್ತದೆ. ಆದ್ದರಿಂದ ಸಮುದಾಯಗಳ ಸಾಂಸ್ಕೃತಿಕ ಅಧ್ಯಯನದ ಸಂದರ್ಭದಲ್ಲಿ ಜನಾಂಗವೊಂದರ ಅಡುಗೆ ಪದ್ಧತಿಯೂ ಕೂಡಾ ಆ ಜನಾಂಗದ ಆ ನಾಡಿನ ಸಂಸ್ಕೃತಿಯ ಅನೇಕ ಅಂಶಗಳನ್ನು ಹೊರಗೆ ಪಸರುಸುತ್ತವೆ. ಈ ಹಿನ್ನೆಲೆಯಲ್ಲಿ ಕ್ಷತ್ರಿಯರ ಸಮುದಾಯದದಲ್ಲಿ ಆಹಾರ ಪದ್ಧತಿಯನ್ನು ಪರಿಭಾವಿಸಿದಾಗ ಇವರ ಆಹಾರ ಪದ್ಧತಿಯು ಹಿಂದೂ ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯಲ್ಲಿನ ಕೆಳವರ್ಗದವರ ಆಹಾರ ಪದ್ಧತಿಗಿಂತ ಭಿನ್ನವಾಗಿಲ್ಲ. ಮುಖ್ಯವಾಗಿ ಅಡುಗೆ ಪದ್ಧತಿಯನ್ನು ಎರಡು ಗುಂಪುಗಳಾಗಿ ವಿಂಗಡಿಸಿಕೊಳ್ಳಬಹುದು. ಒಂದು ಸಸ್ಯಹಾರ, ಎರಡನೇಯದು ಮಾಂಸಹಾರ ಈ ಎರಡು ಆಹಾರಗಳು ವಿಭಿನ್ನ ರುಚಿಯನ್ನು ಭಿನ್ನ ಸಾಮಾಜಿಕ ವರ್ಗಗಳಲ್ಲಿ ಗುರುತಿಸುವ ಸಂಕೇತಗಳಾಗಿ ಪಾತ್ರನಿರ್ವಹಿಸುತ್ತವೆ. ಸಸ್ಯಹಾರವು ಮೇಲ್ಜಾತಿಗಳ ಆಹಾರ ಪದ್ಧತಿಯನ್ನು ಸೂಚಿಸಿದರೆ,

ಮಾಂಸಹಾರವು ತಳಸಮುದಾಯಗಳ ಆಹಾರ ಪದ್ಧತಿಯನ್ನು ಸೂಚಿಸುತ್ತದೆ. ಈ ಹಿನ್ನೆಲೆಯಲ್ಲಿ ಒಟ್ಟು ಸಾಮಾಜಿಕ ವ್ಯವಸ್ಥೆಯಲ್ಲಿ ಕ್ಷತ್ರಿಯರ ಸಾಂಸ್ಕೃತಿಕ ಮತ್ತು ಸಾಮಾಜಿಕ ಸ್ಥನಮಾನವನ್ನು ನಿರ್ಧರಿಸಬೇಕಾಗುತ್ತದೆ.

ಸಾಮಾನ್ಯವಾಗಿ ಹಳ್ಳಿಗಾಡಿನವರಲ್ಲಿ ಕಸುಬುದಾರರಲ್ಲಿ ಮತ್ತು ಕೃಷಿಕರಲ್ಲಿ ಬಹಳಷ್ಟು ವರ್ಗದವರು ಮಾಂಸಹಾರಿಗಳು. ದುಡಿಯುವ ವರ್ಗಕ್ಕೆ ಮಾಂಸ ಮುಖ್ಯ ಆಹಾರ, ಆದರೆ ಮಾಂಸಹಾರವನ್ನು ಹೊಲಸು ಎಂಬ ನುಡಿಗಟ್ಟಿನಿಂದ ಗುರುತಿಸುವ ಮೂಲಕ ಮಾಂಸಹಾರಿಗಳನ್ನು ಕೀಳಾಗಿ ಕಾಣುವ ಪರಿಪಾಠ ಮೇಲ್ಜಾತಿಗಳ ವ್ಯವಸ್ಥಿತ ಪಿತೂರಿಯಾಗಿದೆ. ಈ ಮಾಂಸಹಾರವನ್ನು ರುಚಿಸುವರು ತಳ ಸಮುದಾಯವರಾಗಿರುತ್ತಾರೆ. ಅದರ ತಯಾರಿಕೆಯಲ್ಲಿ ಕೇವಲ ಮಾಂಸವನ್ನು ಉಪಯೋಗಿಸಿ ಮಾಡುವ ಪದ್ಧತಿಯಾಗಿರುತ್ತದೆ.

ಈ ಮಾಂಸಹಾರವನ್ನು ಆಸ್ವಾದಿಸುವುದಕ್ಕೆ ಒಂದು ಬಗೆಯ ಸಾಮಾಜಿಕ ಭಯವನ್ನು ಮೀರಬೇಕಾಗುತ್ತದೆ. ಈ ಮಾಂಸದ ತಯಾರಿಕೆಯ ಸಂದರ್ಭದ ಘಮಲು ಮನೆಯ ಎಲ್ಲೆಯನ್ನು ಮೀರಿ ಪ್ರಯಾಣಿಸುತ್ತದೆ. ಆ ಮೂಲಕ ಮನೆಯವರ ಸಾಮಾಜಿಕ ಹಿನ್ನೆಲೆಯೂ ಬಯಲಾಗುತ್ತದೆ. ಬಹುಸಂಖ್ಯಾತ ಜನವರ್ಗದ ಆಹಾರವಾದ ಮಾಂಸಹಾರವನ್ನು ಹೊಲಸು ಎಂಬ ನುಡಿಗಟ್ಟಿನಿಂದ ಗುರುತಿಸುವ ಮೂಲಕ ಮಾಂಸಹಾರಿಗಳನ್ನು ಕೀಳಾಗಿ ನೋಡುವ ಪರಿಪಾಠ ಮೇಲ್ಜಾತಿಗಳ ವ್ಯವಸ್ಥಿತ ಪಿತೂರಿಯೆನ್ನಿಸುವುದು. ಆಹಾರವನ್ನು ಕುರಿತ ಪದಕಟ್ಟುಗಳಾದ 'ಸಾತ್ವಿಕ ಆಹಾರ, ತಾಮಸಿಕ ಆಹಾರ, ಶಾಖಾಹಾರ–ಮಾಂಸಹಾರ, ಕಚ್ಚಾಹಾರ–ಪಕ್ಕಾಹಾರ ಮತ್ತು ಶುದ್ಧ–ಅಶುದ್ಧ ಆಹಾರ ಮುಂತಾದವು. ಆಹಾರದ ವರ್ಗೀಕರಣವನ್ನು ಸೂಚಿಸುವ ಪದಗಳಷ್ಟೇ ಅಲ್ಲ. ಆಹಾರ ಆಧಾರಿತ ಮೇಲು–ಕೀಳುಗಳನ್ನು ಸೂಚಿಸುವ ಪದಗಳೂ ಹೌದು. ಸಾತ್ವಿಕ ಆಹಾರ ಶ್ರೇಷ್ಠ ತಾಮಸಿಕ ಆಹಾರವು ಕನಿಷ್ಠವೆಂಬ ಸಾಮಾಜಿಕ ತಿಳುವಳಿಕೆಯ ಮೂಲಕ ಮಾಂಸಹಾರಿಗಳನ್ನು ತಾಮಸಿಕರೆಂದು ಕೀಳೆಂದು ಪರಿಗಣಿಸುವ ಮೂಲಕ ಬಹುಸಂಖ್ಯಾತ ಜನವರ್ಗವನ್ನು ದೂರವಿಡುವ ಈ ವೈದಿಕ ಜನ್ಯ ಆಹಾಧಾರಿತ ಸಾಮಾಜಿಕ ವಿಭಜನೆಯೂ ಕೂಡ ಕ್ಷತ್ರಿಯ ಸಮುದಾಯಗಳನ್ನು ಅತ್ಯಂತ ಹೀನಾಯವಾಗಿ ನಡೆಸಿಕೊಂಡಿರುವುದು ಆಹಾರ ರಾಜಕಾರಣದ ಕ್ರೂರ ವ್ಯಂಗ್ಯವಾಗಿದೆ.

ಕ್ಷತ್ರಿಯರು ಮಾಂಸಹಾರಿಗಳಾಗಿದ್ದರೂ ವಾರದ ಎಲ್ಲ ದಿನಗಳಲ್ಲೂ ತಮ್ಮ ಮನೆಗಳಲ್ಲಿ ಮಾಂಸದ ಅಡುಗೆಯನ್ನು ಮಾಡುವುದಿಲ್ಲ. ಇವರಲ್ಲಿ ಶೈವ ಮತ್ತು ವೈಷ್ಣವ ಪಂಥಗಳಾದವರು ತಮ್ಮ ಸಂಪ್ರದಾಯಕ್ಕೆ ಅನುಗುಣವಾಗಿ ಮಾಂಸಹಾರವನ್ನು ತಯಾರಿಸುತ್ತಾರೆ. ಈ ಆಹಾರವನ್ನು ಕೆಲವೊಂದು ಮನೆಯ ಒಳಗಡೆ ಅಂದರೆ, ಅಡುಗೆ ಮನೆಯಲ್ಲಿ ತಯಾರಿಸಿದರೆ, ಮತ್ತೆ ಕೆಲವುರು ಹೊಲಸು ಎಂಬ ಪದದ ಅನ್ವಯ ಅದನ್ನು ಮನೆಯ ಹೊರಗಡೆ ಅಂದರೆ, ಅದಕ್ಕೆ ಮೀಸಲು ಇಟ್ಟ ಜಾಗದಲ್ಲಿ ತಯಾರಿಸುತ್ತಾರೆ. ವಿಶೇಷವಾಗಿ ಕೆಲವೊಂದು ಪ್ರದೇಶದಲ್ಲಿ ಶನಿವಾರದಲ್ಲಿ ಮಾಂಸಹಾರ ತಯಾರಿಸಿದರೆ, ಮತ್ತೆ ಕೆಲವೊಂದು ಭಾಗದಲ್ಲಿ ಶನಿವಾರ, ಸೋಮವಾರ ಹೊರತುಪಡಿಸಿ ಉಳಿದ ದಿನದಲ್ಲಿ ಈ ಆಹಾರವನ್ನು ಉಪಯೋಗಿಸುತ್ತಾರೆ. ಮತ್ತೆ ಕೆಲವರು ವಾರದ ಏಳುದಿನಗಳಲ್ಲಿ ಉಪಯೋಗಿಸುವರು ಇದ್ದಾರೆ.

ಹಾಗೂ ಅಮಾವಾಸ್ಯೆ-ಹುಣ್ಣಿಮೆಯನ್ನು ಲೆಕ್ಕಚಾರ ಹಾಕಿ ಈ ಆಹಾರವನ್ನು ಉಪಯೋಗಿಸುವ ಕ್ರಮವಿದೆ.

ಮಾಂಸಹಾರ ಎಂದ ತಕ್ಷಣ ಎಲ್ಲ ರೀತಿಯಾದ ಪ್ರಾಣಿ/ಜೀವಿಗಳನ್ನು ಉಪಯೋಗಿಸುವ ಸಮುದಾಯಗಳಿವೆ. ಆದರೆ ಈ ಕ್ಷತ್ರಿಯ ಸಮುದಾಯದವರು ವಿಭಿನ್ನ ಇವರು ದೈವಾಭಾವನೆಯಿಂದ ಕೂಡಿದ ಜೀವಿಗಳನ್ನು ತಮ್ಮ ಮಾಂಸಹಾರಕ್ಕೆ ಉಪಯೋಗಿಸುವುದಿಲ್ಲ. ಕೇವಲ ಮಾಂಸಹಾರಕ್ಕಾಗಿ, ಕುರಿ, ಮೇಕೆ, ಕೋಳಿ, ಮೀನು, ಮೊಲ, ಜಿಂಕೆ, ಹಂದಿ, ಮಾಂಸವನ್ನು ಸೇವಿಸುತ್ತಾರೆ. ಈ ಅಡುಗೆಯನ್ನು ಮಾಡುವುದಕ್ಕಾಗಿಯೇ ಮಣ್ಣಿನ ಮಡಿಕೆ ಇಲ್ಲವೆ ಅಲ್ಯೂಮಿನಿಯಂ ಪಾತ್ರೆಗಳನ್ನು ಬಳಸುವರು. ಮಾಂಸದ ಅಡುಗೆಯನ್ನು ಮಾಡಲು ಮರದ ಸೌದೆಯನ್ನು ಉಪಯೋಗಿಸಿ ಮಾಡುತ್ತಿದ್ದರು. ಇದಕ್ಕೆ ಉಪಯೋಗಿಸುವ ಪಾತ್ರೆಗಳನ್ನು ಪ್ರತ್ಯೇಕವಾಗಿ ಸಂಗ್ರಹಿಸಿಡುವುದು ವಾಡಿಕೆ ಇದೆ. ಅಲ್ಲದೆ ಈ ಮಾಂಸಹಾರವನ್ನು ಕೆಲವೊಂದು ವಿಶೇಷ ಹಬ್ಬಗಳಲ್ಲಿ ಸ್ವಿಕರಿಸುವುದು ಕಡ್ಡಾಯ ಮಾಡಿಕೊಂಡಿದ್ದಾರೆ. ವಿಶೇಷವಾಗಿ, ದುರ್ಗಾಂಬ, ಮಾರಿಕಾಂಬ, ಗ್ರಾಮದೇವತೆಗಳ ಜಾತ್ರೆಯ ದಿನ ಈ ಆಹಾರ ಕ್ರಮವನ್ನು ಕಡ್ಡಾಯಗೊಳಿಸಿಕೊಂಡಿದ್ದಾರೆ. ಹಾಗೆಯೇ ಇತ್ತೀಚಿನ ದಿನಗಳಲ್ಲಿ ಈ ಆಹಾರ ಕ್ರಮದಲ್ಲಿ ಬದಲಾವಣೆ ಮಾಡಿಕೊಂಡಿದ್ದಾರೆ. ಅಂದರೆ, ತಮಗೆ ಸೇವಿಸಬೇಕು ಎಂಬ ಸಮಯದಲ್ಲಿ ತಂದು ತಯಾರಿಸುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಬಂಧು-ಬಳಗ ಬಂದವರಿಗೆ ಈ ಆಹಾರವನ್ನು ಮಾಡಿಹಾಕುವ ಅಭ್ಯಾಸವನ್ನು ರೂಢಿಸಿಕೊಂಡಿದ್ದಾರೆ.

ಒಂದು ಸಮುದಾಯದ ಅಡುಗೆ ಪದ್ಧತಿಯು ಅವರು ವಾಸಿಸುವ ಭೌಗೋಳಿಕ ಪ್ರದೇಶಕ್ಕೆ ಅನುಗುಣವಾಗಿರುತ್ತದೆ. ಆಯಾ ಜನಾಂಗದ ರುಚಿ ಅಭಿರುಚಿಗಳಿಗೆ ಅನುಗುಣವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಅಡುಗೆ ಪದ್ಧತಿಯನ್ನು ಮುಖ್ಯವಾಗಿ ಮೂರು ವರ್ಗಗಳಾಗಿ ವಿಂಗಡಿಸಿಕೊಳ್ಳಬಹುದಾಗಿದೆ. ಮೊದಲನೆಯದು ನಿತ್ಯದ ಅಡುಗೆಗಳು, ಎರಡನೆಯದು ಹಬ್ಬದ ಅಡುಗೆಗಳು, ಮೂರನೆಯದು ವಿಶೇಷ ಸಂದರ್ಭದ ಅಡುಗೆಗಳು. ಇಲ್ಲಿ ಮುಖ್ಯವಾಗಿ ಸಂದರ್ಭಕ್ಕೆ ತಕ್ಕಂತೆ ಮತ್ತು ವಾರ್ಷಿಕಾವರ್ತನದ ಪರಿಸ್ಥಿತಿಯ ಅನುಗುಣವಾಗಿ ಈ ಮೂರು ವರ್ಗಗಳಾಗಿ ವಿಂಗಡಿಸಿರುವ ಅಡುಗೆಯ ಹಂತವನ್ನು ಪ್ರತಿಯೊಂದು ಸಮುದಾಯಗಳಲ್ಲಿ ನಾವು ಕಾಣಬಹುದು. ಹಿಂದೂ ಧರ್ಮದವರಾದ ನಾವು ವರ್ಷದಲ್ಲಿ ಪ್ರತಿ ತಿಂಗಳು ಬರುವ ಹುಣ್ಣಿಮೆ, ಅಮಾವಾಸ್ಯೆಗೆ ವಿಶೇಷವಾದ ಹಬ್ಬಗಳನ್ನು ಆಚರಿಸುತ್ತಾ ಬರುತ್ತವೆ. ಹಾಗಾಗಿ ಮುಖ್ಯವಾಗಿ ಹಬ್ಬದ ಅಡುಗೆಗಳು ದೈವದ ಶಿಷ್ಟಾಚಾರಕ್ಕೆ ಅನುಗುಣವಾಗಿ ಅಡುಗೆ ಮಾಡುತ್ತವೆ. ಇಲ್ಲಿ ನಾವು ನಿತ್ಯದ ಅಡುಗೆಯ ಬಗ್ಗೆ ಹೇಳುವುದಾದರೆ, ಸಮುದಾಯವೊಂದರ ಆಹಾರ ಪದ್ಧತಿ ಅವರು ವಾಸಿಸುವ ಪ್ರದೇಶ, ಆರ್ಥಿಕ ಸ್ಥಿತಿಗತಿ ಮತ್ತು ಅವರು ನಿರ್ವಹಿಸುವ ಕಸುಬಿನ ಮೇಲೆ ಆಧಾರವಾಗಿರುತ್ತದೆ. ಕ್ಷತ್ರಿಯ ಸಮುದಾಯದವರು ಪೂರ್ವದಲ್ಲಿ ಕೃಷಿಕರುವಲ್ಲದವರಾದರು. ಕಾಲಾಂತರದಲ್ಲಿ ಪಶುಸಂಗೋಪನೆ, ಕೃಷಿ ಚಟುವಟಿಕೆಯಲ್ಲಿ ತೊಡಗಿದವರಾಗಿದ್ದಾರೆ. ಇವರಿಗೆ ಮೂಲ ಕಸುಬು ಯಾವುದೇಂದು ಗುರುತಿಸುವುದು ಕಷ್ಟ ಸಾಧ್ಯವೆನಿಸಿದೆ. ರೈತಾಪಿ ಜನರನ್ನು ನಾವು ನೋಡುವುದಾದರೆ, ತಮಗೆ ಬೇಕಾದ ಆಹಾರ ಪದಾರ್ಥಗಳನ್ನು ಇವರೇ ಬೆಳೆದುಕೊಳ್ಳುತ್ತಾರೆ.

ಮುಖ್ಯವಾಗಿ ಜೋಳ, ರಾಗಿ, ನವಣೆ, ಸಾವೆ, ಶೇಂಗಾ, ಎಳ್ಳು, ಕುರಷಾಣಿ, ಉದ್ದು, ಕಡಲೆ, ತೊಗರಿ, ಗೋಧಿ, ಭತ್ತ, ಅವರೆಕಾಳು, ತೊಗರಿಕಾಳು, ಹಲಸಂದಿ, ಹೆಸರುಕಾಳು, ಕೊತ್ತಂಬರಿಕಾಳು, ಮೆಂತೆ, ಮೆಣಸಿನಕಾಯಿ, ಇವೆ ಮುಂತಾದ ಧಾನ್ಯಗಳನ್ನು ಬೆಳೆದು ಸಂಗ್ರಹಿಸಿಕೊಂಡು ದಿನನಿತ್ಯದ ಅಡುಗೆಗೆ ಇವರು ಬಳಸುತ್ತಾರೆ. ಹಾಗೇ ಸೊಪ್ಪು ತರಕಾರಿಗಳನ್ನು ದಿನನಿತ್ಯದ ಅಡುಗೆಯಲ್ಲಿ ಬಳಕೆ ಮಾಡುತ್ತಾರೆ. ಅಲ್ಲದೆ ಹಾಲು, ಮೊಸರು, ಬೆಣ್ಣೆ ತುಪ್ಪ, ಇವೆ ಮುಂತಾದ ಖ್ಯಾದತೈಲಗಳನ್ನು ತೆಂಗಿನ ಕಾಯಿ, ಮುಂತಾದ ಸಾಂಬಾರು ಪದಾರ್ಥಗಳನ್ನು ಸಹ ಸ್ವತಃ ತಾವೇ ಉತ್ಪಾದಿಸಿ ದಾಸ್ತುನು ಮಾಡಿಕೊಂಡು ದಿನನಿತ್ಯದ ಅಡುಗೆಯಲ್ಲಿ ಬಳಸುತ್ತಾರೆ.

ಹಬ್ಬದ ಅಡುಗೆಗಳನ್ನು ನೋಡುವುದಾದರೆ, ಕ್ಷತ್ರಿಯರು ಹಿಂದೂಗಳು ಆಚರಿಸುವ ಎಲ್ಲ ಹಬ್ಬಗಳನ್ನು ಆಚರಿಸುತ್ತಾರೆ. ಇಲ್ಲಿ ವಿಶೇಷವಾಗಿ ಹಿಂದೂ ಪಂಚಾಂಗದ ಹಬ್ಬಗಳು ಎಲ್ಲವು ಪಕ್ಕಾಹಾರ ಅಥವಾ ಸಿಹಿ ಅಡುಗೆಯ ಹಬ್ಬಗಳೂ ಹಾಗೇ ಅವರು ವಾಸಿಸುವ ಪ್ರದೇಶಕ್ಕೆ ಅನುಗುಣವಾಗಿ ಆ ಗ್ರಾಮದಲ್ಲಿ ಒಂದು ವರ್ಷಕ್ಕೆ, ಮೂರು ವರ್ಷಕ್ಕೆ, ಐದು ವರ್ಷಕ್ಕೆ, ಈ ರೀತಿಯಾಗಿ ವಿಶೇಷ ಹಬ್ಬಗಳನ್ನು ಆಚರಿಸುತ್ತಾರೆ. ಆಗಾ ಅವರು ವಿಶೇಷವಾದ ಖಾರದ ಅಥವಾ ಮಾಂಸದ ಆಹಾರವನ್ನು ಉಪಯೋಗಿಸುತ್ತಾರೆ.

ಹಿಂದೂ ಪಂಚಾಂಗದ ಪ್ರಕಾರ ಪ್ರತಿಯೊಂದು ಹಬ್ಬಗಳೂ ಕೇವಲ ಸಿಹಿಯನ್ನು ಮಾಡಿಕೊಂಡು ಊಟ ಮಾಡುವುದಾಗಿರುತ್ತದೆ. ಬಹುತೇಕವಾಗಿ ಕ್ಷತ್ರಿಯರು ಮಾಡುವ ಹಬ್ಬದ ಅಡುಗೆಗಳು ಒಂದೇ ರೀತಿಯಾಗಿರುತ್ತದೆ. ಗೋಧಿ ಪಾಯಸ, ಶ್ಯಾವಿಗೆ ಪಾಯಸ, ಅಕ್ಕಿಪಾಯಸ, ಕಡಲೆ ಬೇಳೆಯ ಪಾಯಸ, ತೊಗರಿಬೆಳೆಯ ಹೋಳಿಗೆ, ಮತು ಮಾಲ್ದಿ ಕರ್‌ಗಡಬು, ಎಳ್ಳು ಹೋಳಿಗೆ, ಕಾಯಿ ಹೋಳಿಗೆ, ಶೇಂಗಾ ಹೋಳಿಗೆ ಇವೆ ಮುಂತಾದ ಸಿಹಿ ಅಡುಗೆ ಮಾಡುತ್ತಾರೆ. ಉಳಿದಂತೆ ಅನ್ನ ಸಾಂಬಾರು, ಪಲ್ಯ, ಕೋಸಂಬರಿ, ಹಪ್ಪಳ, ಸಂಡಿಗೆ, ಉಪ್ಪಿನ ಕಾಯಿ, ಮಜ್ಜಿಗೆ ಕಾಯಿಗಳೇ ಇವರ ಹಬ್ಬದ ಅಡುಗೆಗಳಾಗಿವೆ. ಕ್ಷತ್ರಿಯರು ಯಾವುದೇ ಕಾರಣಕ್ಕೂ ಹಬ್ಬದ ಹಿಂದಿನ ದಿನ ಮತ್ತು ಹಬ್ಬದ ಮುಂದಿನ ದಿವಸ ಹೊಲಸಿನ ಅಡುಗೆಗಳನ್ನು ಮಾಡುವುದಿಲ್ಲ. ಶ್ರಾವಣ ಮಾಸವು ಹಬ್ಬವನ್ನು ತರುವಂತಹ ಮಾಸವಾಗಿರುತ್ತದೆ. ಆರಂಭದ ಶ್ರಾವಣದಿಂದ ಇಡಿದು ಅಂದರೆ, ಈ ಶ್ರಾವಣ ಮಾಸ ಆರಂಭವಾಗುವುದೆ ಜುಲೈ-ಆಗಷ್ಟ್ ಮಾಸವಾಗಿರುತ್ತದೆ. ಆ ಮಾಸದಿಂದ ಇಡಿದು ಮುಂದಿನ ಮೇ ತಿಂಗಳವರೆಗೆ ವರ್ಷಪೂರ್ತಿ ಹಬ್ಬಗಳು ಕಾಲಚಕ್ರ ತಿರುಗಿದಂತೆ ಬರುತ್ತವೆ ಹೋಗುತ್ತವೆ. ಕೆಲವೊಂದು ಹಬ್ಬಗಳನ್ನು ತುಂಬ ಶ್ರದ್ಧಾ ಭಕ್ತಿಪೂರಕವಾಗಿ ಆಚರಿಸುತ್ತಾರೆ.

ವಿಶೇಷ ಸಂದರ್ಭದ ಅಡುಗೆಗಳು ಜನನ ಪ್ರೌಢಾವಸ್ಥೆ/ಋತುಮತಿ ಆಚರಣೆ, ಮದುವೆ, ಪೂಜೆ ಪುನಃಸ್ಕಾರಗಳೂ ಮತ್ತು ಸಾವು ಇವು ಮಾನವ ಜೀವನದ ಪ್ರಮುಖ ಹಂತಗಳು ಈ ಹಂತಗಳಲ್ಲಿ ವ್ಯಕ್ತಿಯು ಸಂತೋಷ ಪಡುವ ಮತ್ತು ದು:ಖಪಡುವ ಅನೇಕ ಸನ್ನಿವೇಶಗಳು ಎದುರಾಗುತ್ತವೆ. ಇಂತಹ ಸಮಯ ಸಂದರ್ಭಗಳಲ್ಲಿ ಮಾಡುವ ಅಡುಗೆಗಳಲ್ಲಿ ಅದರದೆ ಆದ ವಿಶಿಷ್ಟತೆ ಇರುತ್ತದೆ. ಹುಟ್ಟು ಪ್ರೌಢವ್ಯವಸ್ಥೆ ಮತ್ತು ವಿವಾಹಗಳು ಜೀವನದಲ್ಲಿ ಹರ್ಷದ ಸಮಾರಂಭಗಳಾಗಿದ್ದು, ಈ

ಸಮಾರಂಭಗಳಲ್ಲಿ ಸಾಮಾನ್ಯವಾಗಿ ಸಿಹಿ ಭಕ್ಷ್ಯಭೋಜನ ಮಾಡುತ್ತಾರೆ. ನಂತರ ಹುಟ್ಟು ಮತ್ತು ಋತುಮತಿಶಾಸ್ತ್ರದಲ್ಲಿ ಸಹ ಸಿಹಿ ಭಕ್ಷ್ಯಭೋಜನ ಮಾಡುವುದು, ವಾಡಿಕೆ ಇದೆ. ಹಾಗೆಯೇ ಮೃತರ ಸ್ಮರಣಾರ್ಥವಾಗಿ ಹಾಕುವ ಊಟವು ತಿಥಿ ಊಟ ಅನ್ನಿಸಿಕೊಳ್ಳುತ್ತದೆ. ಇಲ್ಲಿ ಸಾಮಾನ್ಯವಾಗಿ ಖಾರದ ಊಟ ಮತ್ತು ಸಿಹಿ ಊಟವು ಸಹ ಮಾಡುವ ಸಂದರ್ಭಗಳಿವೆ.

ಒಟ್ಟಾರೆಯಾಗಿ ನೋಡುವುದಾದರೆ, ಕ್ಷತ್ರಿಯ ಸಮುದಾಯವು ಆರ್ಥಿಕವಾಗಿ ಅಷ್ಟೇನು ಶ್ರೀಮಂತರಲ್ಲದ ಕಾರಣ ಆಹಾರದ ಪದ್ಧತಿಯೂ ಮೇಲ್ಜಾತಿಯರಾದ ಬ್ರಾಹ್ಮಣರ ಪಕ್ಕಾ ಆಹಾರಗಿಂತ ಕಚ್ಚಾಹಾರವು ಹೆಚ್ಚಾಗಿ ಇವರು ಸೇವಿಸುತ್ತಾರೆ. ಕೆಲವೊಬ್ಬರು ತಮ್ಮ ಆರ್ಥಿಕತೆಗೆ ತಕ್ಕಂತೆ ಆಹಾರದ ಕ್ರಮವನ್ನು ಬದಲಾಯಿಸಿಕೊಂಡಿದ್ದಾರೆ. ಅದು ಬ್ರಾಹ್ಮಣರ ಶೈಲಿಯ ಪಕ್ಕಾ ಆಹಾರವಾಗಿರುತ್ತದೆ. ಕೆಲವರು ಶ್ರಮದ ಕೆಲಸವನ್ನು ಮಾಡುವುದರಿಂದ ಸಮತೋಲನ ಆಹಾರವನ್ನು ಸೇವಿಸುತ್ತಾರೆ. ಇವರು ಕರ್ನಾಟಕದ ಎಲ್ಲ ಪ್ರದೇಶಗಳಲ್ಲಿ ವಾಸಿಸುವುದರಿಂದ ಆಯಾಯ ಪ್ರದೇಶಕ್ಕೆ ಅನುಗುಣವಾಗಿ ಆಹಾರ ಕ್ರಮವನ್ನು ಅನುಸರಿಸುವುದು ಸಾಮಾನ್ಯವಾಗಿದೆ.

**೪.೭. ಉಡುಗೆ-ತೊಡುಗೆ**

ಮಾನವನಿಗೆ ಜೀವಿಸಲು ಆಹಾರ ಕ್ರಮ ಎಷ್ಟು ಮುಖ್ಯವೋ ದೇಹವನ್ನು ಮುಚ್ಚಿಕೊಳ್ಳಲು ಉಡುಗೆ ಅಷ್ಟೇ ಮುಖ್ಯ ಅಗತ್ಯವಾಗಿರುತ್ತದೆ. ಅಲ್ಲದೆ ಉಡುಗೆಯು ಶರೀರವನ್ನು ಮುಚ್ಚುವ ವಸ್ತುವಾಗಿದ್ದರು, ಅಲಂಕರಿಸುವ ಸಾಧನವೂ ಹೌದು. ಮಾನವನು ಆರಂಭದಲ್ಲಿ ಕಾಡುಗುಹೆಗಳನ್ನು ಆಶ್ರಯಿಸಿಕೊಂಡುದ್ದು, ವ್ಯಕ್ತಿ ನಿಸರ್ಗದಲ್ಲಿ ಲಭ್ಯವಿದ್ದ ತೊಗಟೆ, ಪ್ರಾಣಿಗಳ ಚರ್ಮ, ಮರದ ಎಲೆಗಳನ್ನು ಬಳಸಿ ತನ್ನ ಶರೀರಕ್ಕೆ ಮಳೆ-ಚಳಿ ಗಾಳಿಯಿಂದ ರಕ್ಷಣೆ ಪಡೆದುಕೊಳ್ಳುತ್ತದ್ದನು. ಬುದ್ಧಿಬೆಳೆದಂತೆ ತಾನು ಜೀವಿಸುವ ವಿಧಾನದಲ್ಲಿ ಉಡುಗೆ ತೊಡಗೆಯಲ್ಲಿ ಹಲವಾರು ಬದಲಾವಣೆಗಳನ್ನು ಕಾಲಕ್ರಮೇಣ ಬದಲಾಯಿಸುತ್ತ ಬರುತ್ತಾನೆ. ಇಂದು ತನ್ನ ದೇಹ ರಕ್ಷಣೆಗಾಗಿ ಮಾತ್ರವಲ್ಲದೆ, ದೇಹ ಸೌಂದರ್ಯವರ್ಧನೆಗಾಗಿ ತೊಡುವ ಉಡುಪುಗಳು ಆತನ ಪ್ರತಿಷ್ಠತೆ ಅಂತಸ್ತುಗಳನ್ನು ತೋರ್ಪಡಿಸುವ ಸಾಧನಗಳಾಗಿ ಮಾರ್ಪಟ್ಟಿರುವ ಹಿನ್ನೆಲೆಯಲ್ಲಿ ಉಡುಗೆ ತೊಡುಗೆಗಳ ಬಗ್ಗೆ ಗಮನಿಸಬೇಕಾಗುತ್ತದೆ.

ಮಾನವ ಬದುಕಲು ಗಾಳಿ, ನೀರು, ವಸತಿ, ಬೆಳಕು, ಎಷ್ಟು ಮುಖ್ಯವೋ ಅಷ್ಟೇ ಅವಶ್ಯಕವಾದುದು ಉಡುಪು ಎನ್ನುವ ವಿದ್ವಾಂಸರ ಮಾತುಗಳು ಉಡುಪಿನ ಮಹತ್ವವನ್ನು ಹೇಳುತ್ತದೆ. ಯಾವುದೇ ದೇಶದ ಜನರು ಧರಿಸುವ ಬಟ್ಟೆಗಳ ವಿನ್ಯಾಸ ಆ ಜನರ ಮನೋಭಿಲಾಷೆಯನ್ನು ಅಭಿವ್ಯಕ್ತಪಡಿಸುತ್ತದೆ *(ಸಣ್ಣರಾಮ, ಲಂಬಾಣಿ ಸಂಸ್ಕೃತಿ, ಪುಟ-೨೧೭,೧೯೯೯)*. ಜೊತೆಗೆ ಒಂದು ಸಮುದಾಯದ ಉಡುಪುಗಳು ಆ ಸಮಾಜ ಅಥವಾ ಸಮುದಾಯವನ್ನು ಬೇರೆ ಸಮಾಜ ಅಥವಾ ಸಮುದಾಯದಿಂದ ಪ್ರತ್ಯೇಕಿಸಲು ಸಹಾಯವಾಗುವ ಬಾಹ್ಯ ಸಾಧನಗಳಾಗಿರುತ್ತವೆ *(ಅಂಬಳಿಕೆ ಹಿರಿಯಣ್ಣ, ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, ಪುಟ-೫೭, ೧೯೯೯)*. ಈ ಹಿನ್ನಲೆಯಲ್ಲಿ ಕ್ಷತ್ರಿಯ ಸಮುದಾಯದ ಉಡುಗೆ ತೊಡುಗೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಉಡುಗೆಗಳು ಲಿಂಗ ವಯಸ್ಸು, ಸಂದರ್ಭ,

ಸಾಮಾಜಿಕ ಅಂತಸ್ತು, ಪ್ರಾದೇಶಿಕತೆ, ವೃತ್ತಿ ಮತ್ತು ವಾಸಿಸುವ ನೆಲದ ಹವಾಗುಣ ಹಾಗೂ ಪರಂಪರಾಗತವಾದ ರೀತಿ ರಿವಾಜುಗಳಿಗೆ ತಕ್ಕಂತೆ ಇರುತ್ತವೆ. ಅಲ್ಲದೆ ಸಾಮಾಜಿಕ ಸಾಂಸ್ಕೃತಿಕ ಧಾರ್ಮಿಕ ಅಂಶಗಳೂ ಸಹ ಉಡುಗೆ ತೊಡುಗೆಗಳನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಈ ಹಿನ್ನಲೆಯಲ್ಲಿ ಒಂದು ಸಮುದಾಯವು ಧರಿಸುವ ಉಡುಪುಗಳನ್ನು ಸಾಮಾನ್ಯ ಉಡುಗೆಗಳು, ವೃತ್ತಿ ಉಡುಗೆಗಳು, ವಿಶೇಷ ಸಂದರ್ಭದ ಉಡುಗೆಗಳು, ಧಾರ್ಮಿಕ ಉಡುಗೆಗಳೆಂದು ವರ್ಗೀಕರಿಸಿಕೊಳ್ಳಬಹುದು.

ಯಾವುದೇ ಸಮುದಾಯದ ಸಾಮಾಜಿಕ ಜೀವನ ಕ್ರಮಕ್ಕೂ ಮತ್ತು ಅವರ ಆರ್ಥಿಕ ಸ್ಥಿತಿಗತಿಗಳಿಗೂ ಸಂಬಂಧವಿದೆ. ಬುದ್ಧಿ ಬೆಳೆದಂತೆ ತಾನು ಜೀವಿಸುವ ವಿಧಿವಿಧಾನದಲ್ಲಿ ಉಡುಗೆ ತೊಡುಗೆಯಲ್ಲಿ ಹಲವಾರು ಬದಲಾವಣೆಗಳನ್ನು ಕಾಣುತ್ತಾನೆ. ಇದಕ್ಕೆ ಕ್ಷತ್ರಿಯ ಸಮುದಾಯವು ಹೊರತಾಗಿಲ್ಲ. ದೈನಂದಿನ ಉಡುಗೆಯು ಇಂದಿನ ನಾಗರಿಕರು ಉಡುವ ಸರ್ವಸಾಮಾನ್ಯವಾಗಿ ಸರಳವಾದ ರೀತಿಯಲ್ಲಿದೆ. ಹಬ್ಬಹರಿದಿನ, ಮದುವೆ, ಜಾತ್ರೆ, ಕೆಲವು ವಿಶೇಷ ಸುಸಂದರ್ಭಗಳಲ್ಲಿ ಹೊಸ ಉಡುಪು ಆಭರಣಗಳನ್ನು ಧರಿಸುವುದು ವಾಡಿಕೆಯಾಗಿದೆ. ವಯಸ್ಕರಲ್ಲಿ ಮಾತ್ರ ಪಾರಂಪರಿಕ ಉಡುಗೆ–ತೊಡುಗೆಯ ಸಂಪ್ರದಾಯ ಉಳಿದು ಬಂದಿದೆ. ಕಾಲ ಬದಲಾವಣೆಯಾದಂತೆ ಉಡುಗೆ–ತೊಡುಗೆಯು ಸಹ ಕಾಲಕ್ಕೆ ತಕ್ಕಂತೆ ವಿನ್ಯಾಸಗೊಳ್ಳತೊಡಗಿದೆ.

ಹಿರಿಯರು ಎಂಟು ಮೊಳದ ಕಚ್ಚೆ ಪಂಚೆ, ಲುಂಗಿ ಹೆಗಲ ಮೇಲೆ ಒಂದು ಟವಲು ಹಾಕಿಕೊಳ್ಳುತ್ತಿದ್ದರು. ಇಂದು ಸಹ ಸಾಮಾನ್ಯವಾಗಿ ಪಂಚೆ, ಅಂಗಿ, ಎಡಗಡೆಯ ಹೆಗಲ ಮೇಲೆ ಟವಲು ಹಾಕುವುದು ರೂಢಿಯಲ್ಲಿದೆ. ಹಣಕಾಸಿನಲ್ಲಿ ಸುಸ್ಥಿತಿವಂತರು ಮತ್ತು ನೌಕರಿಯಲ್ಲಿರುವರು, ಆಧುನಿಕ ಉಡುಪುಗಳನ್ನು ಧರಿಸುವುದನ್ನು ಕಾಣಬಹುದು. ಮಹಿಳೆಯರು ಸಾಮಾನ್ಯವಾಗಿ ಸೀರೆ, ರವಿಕೆ, ಎರಡು ಕೈಗಳಿಗೆ ಗಾಜಿನ/ಮಣ್ಣಿನ ಬಳೆಗಳನ್ನು ಕೈತುಂಬಧರಿಸುವರು. ಗ್ರಾಮೀಣ ಜನರಲ್ಲಿ ಇಂದು ಸಹಪ್ರಾಯಕ್ಕೆ ಬರದಿರುವ ಚಿಕ್ಕಹುಡುಗಿಯರು ಲಂಗ, ರವಿಕೆ, ಲಂಗ ದೌನಿಯನ್ನು ತೋಡುತ್ತಾರೆ. ಇಂದಿನ ದಿನದಲ್ಲಿ ಸಾಮಾನ್ಯವಾಗಿ ಚೂಡಿದಾರ, ಜಿನ್ಸ್ ಪ್ಯಾಂಟ್, ಟೀ ಶರ್ಟ್‌ಗಳನ್ನು ಆಧುನಿಕ ಶೈಲಿಯ ಬಳೆಯನ್ನು ಮತ್ತು ಬಟ್ಟೆಗಳನ್ನು ಹೆಚ್ಚಾಗಿ ಧರಿಸುವುದು ಸಾಮಾನ್ಯವಾಗಿಬಿಟ್ಟಿದೆ. ಇವರು ಕಿವಿಗೆ ಓಲೆ, ಮೂಗುತಿ, ಬುಗುಡಿ, ಜಡೆಬಿಲ್ಲೆ, ಕಾಲುಂಗುರ, ಕಾಲ್ಗೆಜ್ಜೆ/ಕಾಲ್‌ಚೈನ್, ಧರಿಸುತ್ತಾರೆ. ವಿವಾಹ ಸಂದರ್ಭದಲ್ಲಿ ಹೆಣ್ಣಿನ ಅಲಂಕಾರವು ಸುಂದರವಾದ ವಿಗ್ರಹ ಮೂರ್ತಿಯಂತೆ ಧರಿಸುವುದನ್ನು ನಾವು ಕಾರ್ಯಕ್ಷೇತ್ರಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಕಾಣಬಹುದಾಗಿದೆ. ಕ್ಷತ್ರಿಯರು ವಿಶೇಷವಾಗಿ ಬಟ್ಟೆಯನ್ನು ಉಡುವುದರಲ್ಲಿ ಪ್ರಾಚೀನ ಹಾಗೂ ಆಧುನಿಕ ಶೈಲಿಯನ್ನು ರೂಢಿಸಿಕೊಂಡಿದ್ದಾರೆ.

**೪.೮. ಆಭರಣಗಳು**

ಆಭರಣಗಳನ್ನು (ತೊಡಿಗೆಗಳು) ಕೇವಲ ಅಲಂಕಾರದ ಉದ್ದೇಶಕ್ಕಾಗಿ ಮಾತ್ರವಲ್ಲದೆ ಧಾರ್ಮಿಕ ನಂಬಿಕೆಯ ಉದ್ದೇಶವನ್ನು ಹೊಂದಿದ್ದು, ಸಾಂಕೇತಿಕವಾಗಿ ರೂಪ ತಳೆದಿರುವುದು, ಮಹತ್ವದ

ಸಂಗತಿಯಾಗಿದೆ. ಮಾಂತ್ರಿಕ ಶಕ್ತಿಯು ನಂಬಿಕೆ, ಧಾರ್ಮಿಕ ಶ್ರದ್ಧೆ, ದುಷ್ಟ ಶಕ್ತಿಗಳಿಂದ ಪಾರಾಗುವ ಉದ್ದೇಶ. ಸೌಂದರ್ಯೋಪಾಸನೆ, ಪ್ರತಿಷ್ಠೆ ಶ್ರೀಮಂತಿಕೆ, ಇವೆಲ್ಲವುಗಳ ಪ್ರದರ್ಶನವೆ. ಆಭರಣಗಳನ್ನು ಧರಿಸುವಿಕೆಯ ಉದ್ದೇಶವಾಗಿತ್ತು (ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೨, ಕರಕುಶಲ ಕಲೆಗಳು, ಪುಟ-೧೦೭, ೨೦೦೦). ಈ ಹಿನ್ನಲೆಯಲ್ಲಿ ಕ್ಷತ್ರಿಯರು ಧರಿಸುತ್ತಿದ್ದ ಆಭರಣಗಳನ್ನು ಕುರಿತಂತೆ ಈ ವಿಭಾಗದಲ್ಲಿ ವಿವೇಚನೆ ಮಾಡಲಾಗಿದೆ.

ಸಾಧಾರಣ ತೊಡಿಗೆಗಳೆಂದರೆ, ಗಂಡಸರು ಸಾಮಾನ್ಯವಾಗಿ ಕಿವಿಗಳಿಗೆ ಓಲಿಯನ್ನು ಮತ್ತು ಬೆರಳುಗಳಿಗೆ ಉಂಗುರಗಳನ್ನು ಧರಿಸುತ್ತಿದ್ದರು. ಶ್ರೀಮಂತರು ಬಲಗೈಗೆ ಬಂಗಾರ ಅಥವಾ ಬೆಳ್ಳಿಯ ಕಡಗವನ್ನು ಧರಿಸುತ್ತಿದ್ದರು. ಮಹಿಳೆಯರು ಧರಿಸುತ್ತಿದ್ದ ಆರಭರಣಗಳೆಂದರೆ, ಮೂಗುಬಟ್ಟು (ನತ್ತು) ಕಿವಿಯೊಳೆ (ಬೆಂಡೋಲೆ) ಕಾಲ್ಕಡಗ (ಕಾಲ್ಚೈನು) ಕೈಬಳೆ ಇವು ಸಾಮಾನ್ಯವಾಗಿ ನಿತ್ಯದ ಧರಿಸುತ್ತಿದ್ದ ಆಭರಣಗಳಾಗಿದ್ದವು. ವಿವಾಹಿತ ಮಹಿಳೆಯರು ಈ ಆಭರಣಗಳ ಜೊತೆಗೆ ಕೊರಳಲ್ಲಿ ತಾಳಿ ಮತ್ತು ಕಾಲುಗಳ ಬೆರಳುಗಳಿಗೆ ಕಾಲುಂಗುರಗಳನ್ನು ಧರಿಸುತ್ತಿದ್ದರು. ವಿವಾಹಿತ ಮತ್ತು ವಯಸ್ಕ ಮಹಿಳೆಯರು ಸೊಂಟಪಟ್ಟಿಯನ್ನು ಧರಿಸುತ್ತಿದ್ದರು. ವಿಶೇಷ ಸಂದರ್ಭದಲ್ಲಿ ಕೊರಳಿಗೆ ಕಾಸಿನಸರ, ತೋಳ್ಬಂದಿ, ಕೆನ್ನೆಸರ, ನಾಗರಬಿಲ್ಲೆ, ಡಾಬು, ಮುಂತಾದ ಆಭರಣಗಳನ್ನು ಧರಿಸುತ್ತಿದ್ದರು. ಹೆಣ್ಣು ಮಕ್ಕಳು ವಿಶೇಷವಾಗಿ ಹಸೆ/ಹಚ್ಚೆ ಹಾಕಿಸಿಕೊಳ್ಳುತ್ತಿದ್ದರು. ವಿಧವೆಯರಾದವರು ತಾಳಿ, ಕಾಲುಂಗುರ ಹಾಗೂ ಕೈಬಳೆಗಳನ್ನು ಧರಿಸುತ್ತಿರಲಿಲ್ಲ. ಹಾಗೂ ಹಣೆಗೆ ಕುಂಕುಮ, ಕೆನ್ನೆಗೆ ಅರಿಷಿಣ ಧರಿಸುವಂತಿಲ್ಲ. ತಲೆಗೆ ಹೂಗಳನ್ನು ಮುಡಿಯುವಂತಿಲ್ಲ.

ಆದರೆ ನಾಗರೀಕತೆಯು ನವೀನತೆಯು ಹೆಚ್ಚಾದಂತೆ ವೇಷಭೂಷಣ ಆಭರಣಗಳ ಬಳಕೆಯಲ್ಲಿನ ದೃಷ್ಟಿಕೋನಗಳು ಬದಲಾಗುತ್ತಾ ಸಾಗಿವೆ. ಸಿದ್ಧಉಡುಪು ಮತ್ತು ವಸ್ತ್ರವಿನ್ಯಾಸಗಳು ಸಾಕಷ್ಟು ಬದಲಾವಣೆಯ ಹಾದಿಯಲ್ಲಿ ಸಾಗಿವೆ. ಚಿಕ್ಕವರಿಂದ ಹಿಡಿದು ಹಿರಿಯವರಗೆ ಸಾಕಷ್ಟು ಬದಲಾವಣೆಯನ್ನು ಕಾಣಬಹುದು. ಅಲ್ಲದೆ ತಮ್ಮ ಅನುಕೂಲಕ್ಕೆ ತಕ್ಕಂತೆ ತಾವು ಧರಿಸುವ ಉಡುಪು ಆಭರಣಗಳಲ್ಲಿ ಬದಲಾವಣೆಯನ್ನು ಮಾಡತೊಡಗಿದ್ದಾರೆ.

**೪.೯. ನ್ಯಾಯ ಪದ್ಧತಿ**

ನ್ಯಾಯವು ಅನ್ಯಾಯಕ್ಕೆ ಪರಿಹಾರ, ಇದನ್ನರಿತ ಮಾನವ ಈ ಭೂಮಿಯ ಮೇಲೆ ಹುಟ್ಟಿ ದಿನದಿಂದ ಒಂದಲ್ಲೊಂದು ರೂಪದಲ್ಲಿ ಅವನಿಗೆ ನ್ಯಾಯವನ್ನು ನೀಡಲಾಗುತ್ತಿದೆ. ನ್ಯಾಯವನ್ನು ಕೊಡುವ ವಿಧಾನಗಳು ದೇಶದಿಂದ ದೇಶಕ್ಕೆ, ಸ್ಥಳದಿಂದ ಸ್ಥಳಕ್ಕೆ, ಸಮುದಾಯಗಳಿಂದ ಸಮುದಾಯಕ್ಕೆ, ಬೇರೆಯಾಗುತ್ತವೆಂಬುದರಲ್ಲಿ ಸಂದೇಹವಿಲ್ಲ. ಭಿನ್ನ ಪರಿಸರಗಳು, ಆಚಾರ-ವಿಚಾರ, ವಾತಾವರಣ, ಜೀವನ ನಿರ್ವಹಣೆಯ ವಿಧಾನ ಇತ್ಯಾದಿಗಳು ಇದಕ್ಕೆ ಕಾರಣಗಳಾಗುವುವು. ಅತೀ ಪ್ರಾಚೀನ ಕಾಲದಲ್ಲಿ ಮಾನವ ತನಗಾದ ಅನ್ಯಾಯಕ್ಕೆ ಸೇಡು ತೀರಿಸಿಕೊಳ್ಳುವ ಕಾನೂನು ಬದ್ಧವಾದ ಹಕ್ಕು ತನಗಿದೆಯೆಂದೂ ಅದಕ್ಕೆ ಪರಿಹಾರವನ್ನು ಕಂಡುಕೊಳ್ಳುವುದು ತನಗೆ ಮಾತ್ರ ಬಿಟ್ಟದೆಂದೂ ಭಾವಿಸಿದ್ದನು.

ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳು ಸಮುದಾಯಗಳ ಸಾಂಸ್ಕೃತಿಕ ಚಹರೆಗಳು, ಇವು ಆಯಾ ಸಮುದಾಯಗಳ ಗತಕಾಲದ ಸಾಮಾಜಿಕ ಒಪ್ಪಂದಗಳಾಗಿರುವುವು. ಇವುಗಳಿಂದ ಸಮುದಾಯಗಳ ಬೆಳವಣಿಗೆ ಕುಂಠಿತಗೊಳ್ಳುವುದಾದರೆ, ಸಮುದಾಯಗಳ ಬುದ್ಧಿವಂತರು ಸಾರ್ವಜನಿಕರನ್ನು ನಂಬಿಕೆಗೊಳಪಡಿಸಿ ಹೊಸ ನಿಯಮಗಳನ್ನು ರೂಪಿಸುವರು. ದೀರ್ಘಕಾಲಿನ ನಿಯಮಪಾಲನೆಗಳಿದ್ದರೆ, ಅವುಗಳ ಮುಂದುವರಿಕೆಗೆ ಸಂಪ್ರದಾಯಗಳನ್ನು ರೂಢಿಸುವರು. ಮತ್ತು ಅವುಗಳ ಪಾಲನೆಗಾಗಿ ಆಚರಣೆಗಳನ್ನು ಏರ್ಪಡಿಸುವರು. ಇವೆಲ್ಲವೂ ಅಲಿಖಿತವಾಗಿದ್ದರೂ ಇವುಗಳನ್ನು ಸಮಾಜದ ಶಾಶ್ವತ ನಿಯಮಗಳೆಂದು ಮತ್ತು ಇವುಗಳ ಪಾಲನೆ ತಮ್ಮ ಕರ್ತವ್ಯವೆಂದು ಪಾಲಿಸುವುದುಂಟು. ಜೀವನಾವರ್ತಕ ಸಂಸ್ಕಾರಗಳು ಮತ್ತು ಸಮುದಾಯಗಳ ಆಚರಣೆಗಳು ಸಾಂಪ್ರದಾಯಿಕವಾಗಿ ಮುಂದುವರಿಯುವುದರಿಂದ ಸಮಾಜದ ಗತಕಾಲದ ಸಂಸ್ಕೃತಿಗೆ ಭಂಗಬರುವುದಿಲ್ಲ. ಹಲವು ಸಮುದಾಯಗಳ ಅಭಿವೃದ್ಧಿಗೆ ಈ ಸಂಪ್ರದಾಯಗಳೇ ಅಡ್ಡಿಯಾಗುವುದುಂಟು. ಹಲವಾರು ಸಮುದಾಯಗಳೂ ಅಭಿವೃದ್ಧಿಪರ ಚಿಂತನೆ ನಡೆಸಿ ಹೊಸ ಸಂಪ್ರದಾಯ ಮತ್ತು ಆಚರಣೆಗಳನ್ನು ರೂಢಿಸಿಕೊಂಡಿರುವರು. ಅವು ಅವರ ಪೂರ್ವಜರ ಕುರುಹುಗಳೆಂದು ನಂಬಿ ಮುಂದುವರಿಸುವರು. ಈ ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳಿಗೆ ಭಂಗ ಬರದಂತೆ ಎಚ್ಚರವಹಿಸುವರು. ಹಾಗೇನಾದರೂ ಭಂಗ ಉಂಟಾದಲ್ಲಿ ಜಾತಿ ಪಂಚಾಯತಿಯಲ್ಲಿ ಅದನ್ನು ಸರಿಪಡಿಸಲು ಪ್ರಯತ್ನಿಸುವರು.

ಹಿಂದೂ ನ್ಯಾಯ ಗ್ರಂಥಗಳಲ್ಲಿ "ಕುಲ ಮತ್ತು ಗಣಗಳ ಉಲ್ಲೇಖಗಳಿದ್ದು, 'ಕುಲಕರು' ಮತ್ತು 'ಶ್ರೀಮಂತರು', 'ಕುಲ'ನ್ಯಾಯಾಲಗಳ ಮುಖಂಡರಾಗಿರುತ್ತಿದ್ದರು" *(ಪುಟ್ಟಪ್ಪ ಕೆ ವಿ, (ಸಂ), ಯುಗಯಾತ್ರಿ ಭಾರತೀಯ ಸಂಸ್ಕೃತಿ, ಪುಟ-೩೨೬, ೧೯೭೦).* ಮಹಾಭಾರತದಲ್ಲಿ ಹೇಳಿರುವಂತೆ ಅಪರಾಧಿ ಸಂಬಂಧಿ ಮೊಕದ್ದಮೆಗಳ ವಿಚಾರಣೆ ನಡೆಸಬೇಕಾದುದು ಕುಲದ ಹಿರಿಯರ ಕರ್ತವ್ಯವಾಗಿತ್ತು ಎಂಬ ಉಲ್ಲೇಖಗಳನ್ನು ಗಮನಿಸಿದಾಗ ಕುಲ ನ್ಯಾಯಾಲಯಗಳು ತುಂಬಾ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದವೆಂಬ ಸಂಗತಿ ಬೆಳೆದು ಬರುತ್ತದೆ. ಈ ರೀತಿಯ ಗ್ರಾಮ ನ್ಯಾಯಾಲಯ ಮತ್ತು ಗ್ರಾಮ ಪಂಚಾಯಿತಿಗಳ ಜೊತೆಗೆ ಜಾತಿ ಪಂಚಾಯಿತಿಗಳೂ ಅಸ್ತಿತ್ವದಲ್ಲಿದ್ದು, ಆಯಾ ಬುಡಕಟ್ಟಿನ ಕುಲದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಿದ್ದವು.

ನ್ಯಾಯನಿಷ್ಠೆ ಹಿನ್ನೆಲೆಯಲ್ಲಿ ಸ್ಥಾಪನೆಗೊಂಡಿದ್ದ ಭಾರತೀಯ ಬುಡಕಟ್ಟು ಜಾತಿಗಳ ಸಾಮಾಜಿಕ ಪರಿಸ್ಥಿತಿಯಲ್ಲಿ ಅತ್ಯಂತ ಜನಪ್ರೀಯವಾಗಿದ್ದ, ಪಂಚಾಯಿತಿ ಮತ್ತು ಜಾತಿ ಪಂಚಾಯಿತಿಗಳ ಉದ್ದೇಶ ಭಾರತೀಯ ಹಳ್ಳಿಗಳಲ್ಲಿ ಸಮಾಜದ ವ್ಯವಸ್ಥೆಯನ್ನು ನಿಯಂತ್ರಿಸುವುದರ ಮೂಲಕ ಸಮಾಜದಲ್ಲಿ ಅಹಿತಕರ ಘಟನೆಗಳು ನಡೆಯದಂತೆ ತಡೆಗಟ್ಟುವುದಾಗಿತ್ತು. ಇಂತಹ ಸದುದ್ದೇಶವನ್ನು ಇರಿಸಿಕೊಂಡಿದ್ದ ಭಾರತದ ಬಹುತೇಕ ಬುಡಕಟ್ಟು ಸಮುದಾಯಗಳು ತಮ್ಮ ಸಮುದಾಯಗಳ ಒಳಿತಿಗಾಗಿ ತಮ್ಮದೇ ಆದ ಸಾಮಾಜಿಕ ಕಟ್ಟಳೆ, ವಿಧಿ-ವಿಧಾನಗಳ ಮೂಲಕ ರಚಿಸಿಕೊಂಡಿದ್ದ ಸ್ಥಳೀಯ ಮಟ್ಟದಲ್ಲಿ ನ್ಯಾಯಾಲಯ ಮತ್ತು ನ್ಯಾಯ ಪದ್ಧತಿಗಳನ್ನು ಕಾಣಬಹುದಾಗಿದೆ. ಇವುಗಳನ್ನು ಕಟ್ಟೆಮನೆ, ನ್ಯಾಯದ ಕಟ್ಟೆ, ನ್ಯಾಯದ ಮನೆ, ದೈವದ ಮನೆ, ದೈವದಚಾವಡಿ, ನ್ಯಾಯಕಟ್ಟೆ ಪಂಚಾಯಿತಿ, ಪಂಚಾಯಿತಿ

ಕಟ್ಟೆ, ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಈ ಪಂಚಾಯಿತಿಗಳ ಮೂಲಕ ತಮ್ಮ ಕುಲ ಅಥವಾ ಜಾತಿಯವರಲ್ಲಿ ಹುಟ್ಟಿಕೊಳ್ಳುವ ಬಾಹ್ಯ ಮತ್ತು ಆಂತರಿಕ ಸಂಘರ್ಷ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಅನೇಕ ಪ್ರದೇಶಗಳಲ್ಲಿ ಇಂದಿಗೂ ಈ ರೀತಿಯಾದ ನ್ಯಾಯ ವ್ಯವಸ್ಥೆಯನ್ನು ನೋಡಬಹುದು. ಹಳ್ಳಿಗಳಲ್ಲಿ ಕಟ್ಟೆ ಪಂಚಾಯಿತಿಗಳು ಇರುವುದರಿಂದ ಮುಖ್ಯನ್ಯಾಯಾಲಕ್ಕೆ ಪ್ರಕರಣಗಳ ಸಂಖ್ಯೆ ಕಡಿಮೆಯಾಗಿವೆ. ಪ್ರತಿಯೊಂದು ಜಾತಿಯು ತನ್ನ ಜಾತಿ ಜನರ ನೀತಿ, ನಿಯಮ ನಡತೆ ಮತ್ತುನಡಾವಳಿಗಳ ಮೇಲೆ ನಿಯಂತ್ರಣವನ್ನು ಇಟ್ಟುಕೊಳ್ಳಲು ತನ್ನದೇ ಆದಂತಹ ಒಳಾಡಳಿತ ಪದ್ಧತಿಯನ್ನು ರೂಪಿಸಿಕೊಂಡಿರುತ್ತದೆ. ಹಾಗೆಯೇ ಕ್ಷತ್ರಿಯ ಸಮುದಾಯದಲ್ಲಿ ಒಳಾಡಳಿತ ವ್ಯವಸ್ಥೆಯನ್ನು ಗಮನಿಸಿದಾಗ ಪ್ರತಿ ಕ್ಷತ್ರಿಯ ಸಮುದಾಯಗಳಲ್ಲಿ ಗ್ರಾಮ/ಊರಿಗೆ ಒಬ್ಬ ಯಜಮಾನನಿರುತ್ತಾನೆ.

ಗ್ರಾಮದ ಮುಖಂಡನಿಗೆ ಮುಖ್ಯಸ್ಥನೆಂದು ಕರೆಯುತ್ತಿದ್ದರು. ಈತ ಗ್ರಾಮದ ಪಟೇಲನು ಆಗಿದ್ದು, ಗ್ರಾಮದ ಜಾತಿಯ ಜನರಿಗೆ ಅಷ್ಟೆ ಅಲ್ಲ ಇತರ ಜಾತಿಯ ಜನರ ಮೇಲೆ ಹಿಡಿತವುಳ್ಳವನಾಗಿದ್ದನು. ಗ್ರಾಮದ ಆಗು–ಹೋಗುಗಳ ಜವಾಬ್ದಾರಿಯನ್ನು ಹೊತ್ತಿರುವ ಊರಿನ ತಂಟೆ ತಕರಾರುಗಳಿಗೆ ನ್ಯಾಯ ನಿರ್ಣಯ ನೀಡುವ ಜವಾಬ್ದಾರಿ ಈತನದಾಗಿತ್ತು. ದೊಡ್ಡ ಗ್ರಾಮಕ್ಕೆ ಇನ್ನೊರ್ವ ಸಹಾಯಕ ಮುಖ್ಯಸ್ಥನು ಇರುತ್ತಿದ್ದನು. ಇವರು ಜಾತಿಯ ಕಟ್ಟು ಬಹಿಷ್ಕಾರಗಳಿಗೆ ಸಂಬಂಧಿಸಿದಂತೆ ಚರ್ಚೆ ನಡೆಸಿ ನ್ಯಾಯ ನಿರ್ಣಯವನ್ನು ನೀಡುತ್ತಿದ್ದನು. ತಪ್ಪಿತಸ್ಥರಿಗೆ ಮುಖ್ಯಸ್ಥರ ಸಭೆಯಲ್ಲಿ ದಂಡ ವಿಧಿಸುವುದು ಹಾಗೂ ನ್ಯಾಯ ನಿರ್ಣಯ ಮೀರಿದರೆ, ಜಾತಿ ಕಟ್ಟು ಮಾಡುತ್ತಿದ್ದನು. ಅನೇಕ ಸಂದರ್ಭಗಳಲ್ಲಿ ಮುಖ್ಯಸ್ಥರು ಸರ್ವಾಧಿಕಾರಿಯಂತೆ ವರ್ತಿಸಿ ತಮ್ಮ ಸ್ವಪ್ರತಿಷ್ಟೆ ನಿರಾಪರಾಧಿಗಳ ಮೇಲೆ ಕ್ರೌರ್ಯವೆಸುಗುತ್ತಿದ್ದ ನಿದರ್ಶಗಳಿವೆ.

ಬದಲಾವಣೆಯ ಕಾಲಘಟ್ಟದಲ್ಲಿ ಜಾತಿ ವ್ಯವಸ್ಥೆಯಿಂದಾಗಿ ಸ್ವಜನಪಕ್ಷಪಾತ, ತಾರತಮ್ಯ ಸ್ವಾರ್ಥ ಮುಂತಾದ ಕ್ಷುಲಕ ಅಂಶಗಳು ಬುಡಕಟ್ಟುಜಾತಿಗಳ ನ್ಯಾಯ ವ್ಯವಸ್ಥೆಯಲ್ಲಿ ನುಸುಳಿಕೊಂಡು, ಇಡೀ ಸಮುದಾಯಗಳ ಒಳಾಡಳಿತ ವ್ಯವಸ್ಥೆಗಳನ್ನು ಕೆಳಂಕಿತಗೊಳಿಸಿದವು. ಪರಕೀಯರ ಆಗಮನದಿಂದಾಗಿ ಸಮುದಾಯಗಳ ಆಡಳಿತ ವ್ಯವಸ್ಥೆ ಕ್ರಮೇಣ ಆ ಗ್ರಾಮದ ಪಟೇಲ, ಗೌಡ, ಶಾನುಭೋಗ, ಕುಲಕರಣಿಗಳ ಬಣಕಾರರ ಕೈಸೇರಿ ಮೇಲ್‌ಜಾತಿಯ ಪ್ರಾಬಲ್ಯಕ್ಕೆ ಒಳಗಾದವು. ಸ್ವಾತಂತ್ರ್ಯಾ ನಂತರವೂ ಇದೇ ಪದ್ಧತಿ ಇನ್ನೊಂದು ಬಗೆಯಲ್ಲಿ ಮುಂದುವರೆದು ಗ್ರಾಮ ಜೀವನದಲ್ಲಿ ಇದ್ದ ಒಗ್ಗಟ್ಟಿನ ಬದುಕು ಆಭದ್ರತೆಗೊಂಡು ಗ್ರಾಮದಲ್ಲಿ ದ್ವೇಷ, ಅಸೂಯೆಗಳು ಹೆಚ್ಚಾಗತೊಡಗಿದವು. ಇದರಿಂದಾಗಿ ಅತ್ಯಂತ ವಿಶಿಷ್ಟ ಮತ್ತು ಆದರ್ಶವಾಗಿದ್ದ ಕ್ಷತ್ರಿಯರ ನ್ಯಾಯ ಪದ್ಧತಿಯು ಅವಸಾನಗೊಂಡು ಈಗ ಕೇವಲ ಹಬ್ಬಹರಿದಿನಗಳನ್ನು ಆಚರಿಸುವ ದಿನಗಳನ್ನು ನಿರ್ಧರಿಸುವಂತಹ ಸಂದರ್ಭಗಳಲ್ಲಿ ಊರಿನ ದೇವಸ್ಥಾನ ಅಥವಾ ಸಮುದಾಯದ ಭವನ/ಮನೆಯಲ್ಲಿ ಸಭೆ ಸೇರುವ ಸ್ಥಿತಿಯನ್ನು ತಲುಪಿವೆ. ಆದರೆ ಉತ್ತರ ಕರ್ನಾಟಕದ ಕೆಲವೊಂದು ಭಾಗದಲ್ಲಿ ವಿಶಿಷ್ಟ ನ್ಯಾಯ ಪದ್ಧತಿಯು ಇಂದಿಗೂ ನೆಲೆಯನ್ನು ಕಂಡುಕೊಂಡಿದೆ.

ಶಿಕ್ಷೆಯ ವಿಧಾನಗಳು ಬಹುತೇಕ ಬುಡಕಟ್ಟು ಜಾತಿ ಸಮುದಾಯಗಳ ವ್ಯವಸ್ಥೆಯನ್ನು ನಿಯಂತ್ರಿಸುವ ಮತ್ತು ಅಹಿತಕರ ಘಟನೆಗಳು ನಡೆಯದಂತೆ ತಡೆಗಟ್ಟುವ ಉದ್ದೇಶದಿಂದ ತಮ್ಮದೇ ಆದ ಸಾಮಾಜಿಕ

ಕಟ್ಟಳೆ ಹಾಗೂ ವಿಧಿವಿಧಾನಗಳ ಮೂಳಕ ಸ್ಥಳೀಯ ನ್ಯಾಯಾಲಯಗಳನ್ನು ಮತ್ತು ನ್ಯಾಯ ಪದ್ಧತಿಗಳನ್ನು ರಚಿಸಿಕೊಂಡಿರುತ್ತವೆ. ಹಾಗೆಯೇ ಅಪರಾಧಗಳನ್ನು ತಡೆಗಟ್ಟುವ ಉದ್ದೇಶದಿಂದ ಅನೇಕ ಬಗೆಯ ಶಿಕ್ಷಾ ವಿಧಾನಗಳನ್ನು ಎಲ್ಲ ಜಾತಿ ಪಂಚಾಯಿತಿಗಳು ಅನುಸರಿಸುತ್ತಿದ್ದವು. ಬುಡಕಟ್ಟು ಸಮುದಾಯಗಳು ನೀಡುತ್ತಿದ್ದ ಶಿಕ್ಷಾ ಪದ್ಧತಿಗಳು ಕೂಡ ಬೇರೆ ಬೇರೆ ಬುಡಕಟ್ಟು ಮತ್ತು ಜಾತಿಗಳಲ್ಲಿ ಬೇರೆ ಬೇರೆ ತೆರನಾಗಿರುತ್ತಿದ್ದವು. ಶಿಕ್ಷೆ ವಿಧಿಸುವ ವಿಧಾನಗಳು ಅಪರಾಧದ ಸ್ವರೂಪ ಅಪರಾಧಿಯ ವಯಸ್ಸು ಅಪರಾಧವನ್ನು ಎಸಗಿದ ಸಂದರ್ಭ ಮುಂತಾದವುಗಳನ್ನು ಅವಲಂಬಿಸಿ ನಿರ್ಧಾರವಾಗುತ್ತಿದ್ದವು.

ಕ್ಷತ್ರಿಯರು ಆಯಾಯ ಅಪರಾಧಗಳಿಗೆ ತಕ್ಕಂತೆ ಶಿಕ್ಷೆಯನ್ನು ವಿಧಿಸುತ್ತಿದ್ದರು. ಅಪರಾಧಿಯು ಎಸಗಿದ ಅಪರಾಧವು ಸಾಬೀತಾದರೆ, ದಂಡಹಾಕುವುದು, ಜಾತಿ ಬಹಿಷ್ಕಾರ ಮಾಡುವುದು ಕುಲದವರಿಗೆ ಊಟ ಹಾಕಿಸುವಂತಹ ಶಿಕ್ಷೆ ವಿಧಿಸುವುದು, ಕಂಬಕ್ಕೆ ಕಟ್ಟಿಕಲ್ಲು ಹೊರಿಸಿ ನಿಲ್ಲಿಸುವುದು, ದೇವಸ್ಥಾನದಲ್ಲಿ ಪ್ರಮಾಣ/ಆಣೆ ಮಾಡಿಸುವುದು, ಮುಂತಾದ ಸರಳ ರೀತಿಯ ಶಿಕ್ಷೆಗಳನ್ನು ವಿಧಿಸುತ್ತಿದ್ದರು. ಈ ರೀತಿಯ ಶಿಕ್ಷೆಗಳನ್ನು ವಿಧಿಸುವಂತಹ ಪದ್ಧತಿ ಇಂದಿಗೂ ಅನೇಕ ಕ್ಷತ್ರಿಯರು ವಾಸಿಸುವ ಹಳ್ಳಿಗಳಲ್ಲಿ/ ಗ್ರಾಮಗಳಲ್ಲಿ ಕಂಡುಬರುತ್ತವೆ. ಆದರೆ ಯಾರಿಗೂ ಕ್ರೂರವಾದ ಶಿಕ್ಷೆಯನ್ನು ವಿಧಿಸುತ್ತಿರಲಿಲ್ಲ. ಮತ್ತು ಯಾರಿಗೂ ಹೆಚ್ಚು ಹೊರೆಯಾಗದಂತಹ ಶಿಕ್ಷೆಗಳನ್ನು ವಿಧಿಸುತ್ತಿರಲಿಲ್ಲ. ಯಾವುದೇ ಬುಡಕಟ್ಟು ಜಾತಿಗಳಲ್ಲಿ ಸಣ್ಣಪುಟ್ಟ ತಪ್ಪುಗಳಾದರೆ, ಅವುಗಳನ್ನು ಸಮಾಜದ ಹಿರಿಯರು ಸಂಬಂಧಪಟ್ಟವರಿಗೆ ಬುದ್ಧಿ ಹೇಳಿ ಸರಿಪಡಿಸುತ್ತಿದ್ದರು. ಹಾಗೆಯೇ ತಪ್ಪು ಮಾಡಿದವರನ್ನು ಶಿಕ್ಷಿಸುವುದಕ್ಕೂ ಹಿಂಜರಿಯುತ್ತಿರಲಿಲ್ಲ. ಚಪ್ಪಲಿಯಿಂದ ಹೊಡೆದಾಡಿದಾಗ, ಸಮಾಜದ್ರೋಹ ಕೆಲಸ ಮಾಡಿದಾಗ ಕದ್ದುಹೋಗಿ ಮದುವೆ, ಮಾಡಿಕೊಂಡಾಗ, ಅಥವಾ ಬೇರೆ ಜಾತಿಯವರೊಂದಿಗೆ ಮದುವೆ ಮಾಡಿಕೊಂಡಾಗ ಕುಲಸ್ಥ ಯಜಮಾನರು ಕಟ್ಟೆಮನೆಯಲ್ಲಿ ಪಂಚಾಯಿತಿ ಸೇರಿ ಆಯಾ ತಪ್ಪುಗಳಿಗೆ ತಕ್ಕಂತೆ ಶಿಕ್ಷೆಗಳನ್ನು ವಿಧಿಸುತ್ತಿದ್ದರು.

ಜಾತಿ ಪಂಚಾಯಿತಿಗಳಲ್ಲಿ ವಿಧಿಸುತ್ತಿದ್ದ ಶಿಕ್ಷೆಯಲ್ಲಿ ಜಾತಿ ಬಹಿಷ್ಕಾರ, ಸಾಮಾನ್ಯವಾಗಿ ಜಾತಿಯಿಂದ ಹೊರದೂಡುವಿಕೆ, ಗಡಿಪಾರು ಮಾಡುವುದು, ಪ್ರತಿಯೊಂದು ಬುಡಕಟ್ಟು ಅಥವಾ ಜಾತಿ ಸಮುದಾಯಗಳೂ ತಮ್ಮ ಜಾತಿ ಪಾವಿತ್ರ್ಯವನ್ನು ಉಳಿಸಿಕೊಳ್ಳವ ಸಲುವಾಗಿ ಈ ರೀತಿಯ ಶಿಕ್ಷೆಗಳನ್ನು ವಿಧಿಸುತ್ತಿದ್ದವು. ಆದರೆ ಕ್ರಮೇಣ ಧರ್ಮದ ಪ್ರಭಾವ ನಿಯಂತ್ರಣವಾದಂತೆ ಸಾಮಾಜಿಕ ನಿಯಂತ್ರಣದ ಸಾಧನಗಾಗಿ ಕಾನೂನುವ್ಯವಸ್ಥೆಗಳು ರೂಪಿತಗೊಂಡಂತೆ ಧಾರ್ಮಿಕ ನಿಯಮಗಳ ಹಿಡಿತ ಸಡಿಲಗೊಂಡು ಧರ್ಮ ಮನ್ನಿತವಾದ ಕಾಯಿದೆಗಳು ದುರ್ಗಲಗೊಂಡು ಬಹಿಷ್ಕಾರದಂತಹ ಶಿಕ್ಷೆಗಳು ಹೆಚ್ಚು ಕಡಿಮೆ ಎಲ್ಲ ಸಮಾಜಗಳಲ್ಲೂ ಮನ್ನಣೆಯನ್ನೂ ಕಳೆದುಕೊಳ್ಳುತ್ತಾ ಬಂದು ಪ್ರಸ್ತುತ ಇಲ್ಲದಂತಾಗಿದೆ.

ಭಾರತೀಯ ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಪ್ರತಿಯೊಂದು ಜಾತಿಗಳೂ ತಮ್ಮ ಜಾತಿ ಪಾವಿತ್ರ್ಯವನ್ನು ಕಾಪಾಡಿಕೊಳ್ಳುವ ಸಲುವಾಗಿ ಅನೇಕ ಕಟ್ಟುಕಟ್ಟಳೆಗಳನ್ನು ಇರಿಸಿಕೊಂಡಿದ್ದು, ಆ ಜಾತಿಯ ಯಾವುದೇ ವ್ಯಕ್ತಿ ಅವುಗಳನ್ನು ಉಲ್ಲಂಘಿಸಿದಂತೆ ಅನೇಕ ಬಗೆಯ ನಿರ್ಬಂಧಗಳನ್ನು ಹಾಕಿಕೊಂಡಿರುತ್ತದೆ. ತನ್ನ ಜಾತಿಯ ಯಾವುದೇ ವ್ಯಕ್ತಿ ಆ ಕಟ್ಟಳೆಗಳನ್ನು ಮೀರಿದಾಗ ಅವನನ್ನು/

ಅವಳನನ್ನು ಶಿಕ್ಷಿಸುವುದು ಮತ್ತು ತಪ್ಪಿತಸ್ಥನು ತಪ್ಪನ್ನು ಒಪ್ಪಿಕೊಂಡು ಶರಣಾಗತನಾದರೆ, ಅವನನ್ನು ಕೆಲವೊಂದು ಶುದ್ಧೀಕರಣ ಕ್ರಿಯೆಗಳಿಗೆ ಒಳಪಡಿಸಿ ಪುನಃ ಬಹಿಷ್ಕಾರ ಮುಂತಾದ ಶಿಕ್ಷೆಗಳನ್ನು ಹಿಂಪಡೆಯಲಾಗುತ್ತದೆ. ಶುದ್ಧೀಕರಣವು ಪ್ರತಿಯೊಂದು ಜಾತಿಯಲ್ಲಿ ವಿಭಿನ್ನ ರೀತಿಯಲ್ಲಿ ನೇರವೇರುತ್ತದೆ. ಒಂದು ವೇಳೆ ಅವನು/ಅವಳು ತನ್ನ ತಪ್ಪನ್ನು ಒಪ್ಪಿಕೊಂಡು ತಪ್ಪುಗಳನ್ನು ಮನ್ನಿಸಬೇಕೆಂದು ಪಂಚಾಯಿತಿಗೆ ಶರಣಾಗತನಾದರೆ, ಅವನನ್ನು ಕೆಲ ಶುದ್ಧೀಕರಣ ಕ್ರಿಯೆಗಳಿಗೆ ಒಳಪಡಿಸಲಾಗುತ್ತಿತ್ತು. ಕಟ್ಟುಕರಾರುಗಳು ಬೇರೆ ಜಾತಿಗಳಲ್ಲಿ ಇರುವಂತೆ ಕ್ಷತ್ರಿಯರಲ್ಲೂ ಇದ್ದು, ಜಾತಿ ವ್ಯವಸ್ಥೆ ಮತ್ತು ಕುಲದ ಪರಿಶುದ್ಧತೆಯನ್ನು ಸಂರಕ್ಷಿಸಿಕೊಳ್ಳುವ ಮನೋಭಾವ ಈ ರೀತಿಯ ಆಚರಣೆಗಳ ಹಿನ್ನೆಲೆಯಲ್ಲಿ ಇರುವುದು ಕಂಡುಬರುತ್ತದೆ.

ಸಮಾಜಗಳಲ್ಲಿರುವ ಜಾತಿಯ ವಿಶೇಷವಾದ ಒಂದು ಸಂಗತಿಯೆಂದರೆ, ಬೇರೆ ಜಾತಿಯವರನ್ನು ತಮ್ಮ ಜಾತಿಗೆ ಸೇರಿಸಿಕೊಳ್ಳುವುದು. ಕೆಲವು ಸಂದರ್ಭಗಳಲ್ಲಿ ಒಂದು ಜಾತಿಯ ಹುಡುಗ ಬೇರೊಂದು ಜಾತಿಯ ಹುಡುಗಿಯನ್ನು ವಿವಾಹವಾದರೆ, ಅಂತಹ ವಧು–ವರರನ್ನು ಕೆಲವು ವಿಧಿಯಾಚರಣೆಗಳ ಮೂಲಕ ತಮ್ಮ ಜಾತಿಗೆ ಅಂದರೆ ಹುಡುಗನ ಜಾತಿಗೆ ಸೇರಿಸಿಕೊಳ್ಳುವ ಸಂಪ್ರದಾಯ ಎಲ್ಲ ಜಾತಿಗಳಲ್ಲೂ ಕಂಡುಬರುತ್ತದೆ.

ಒಟ್ಟಿನಲ್ಲಿ ಕ್ಷತ್ರಿಯರ ನ್ಯಾಯ ವ್ಯವಸ್ಥೆಯು ಅತ್ಯಂತ ಶಿಸ್ತುಬದ್ಧವಾಗಿದ್ದು, ಜಾತಿಯೊಳಗೆ ಉಂಟಾಗುತ್ತಿದ್ದ ಸಂಘರ್ಷ, ಸಮಸ್ಯೆ ಜಗಳ ವೈಮನಸ್ಸು ಬಗೆಹರಿಸಿಕೊಳ್ಳುವ ಸಲುವಾಗಿ ಕಟ್ಟೆಮನೆ, ಗಡಿಮನೆ, ಮಂಗಲಮನೆ, ಮೂರು ಹಂತದ ನ್ಯಾಯ ಪದ್ಧತಿಯನ್ನು ಹೊಂದಿದ್ದು, ವಿವಿಧ ಹಂತಗಳಲ್ಲಿ ನ್ಯಾಯ ತೀರ್ಮಾನ ಮಾಡುತ್ತಾ ಬಂದಿರುವುದನ್ನು ಕಾಣುತ್ತೇವೆ. ನ್ಯಾಯ ತೀರ್ಮಾನಕ್ಕೆ ಬಂದ ವಿಷಯಗಳನ್ನು ತಾಳ್ಮೆಯಿಂದ ಪರಿಶೀಲಿಸಿ ನಿಷ್ಪಕ್ಷಪಾತ ಮತ್ತು ಸರ್ವಸಮ್ಮತವಾದ ತೀರ್ಮಾನವನ್ನು ನೀಡಲು ಜಾತಿ ಪಂಚಾಯಿತಿಗಳು ಶ್ರಮಿಸುತ್ತಿದ್ದವು. ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಅನೇಕ ರೀತಿಯ ಪ್ರಮಾಣ ವಿಧಾನಗಳನ್ನು ಅನುಸರಿಸುತ್ತಿದ್ದವು. ತಪ್ಪು ಸಾಬೀತಾದರೆ, ತಪ್ಪಿತಸ್ಥನಿಗೆ ತಪ್ಪಿನ ಪ್ರಮಾಣದ ಆಧಾರದ ಮೇಲೆ ಜುಲ್ಮಾನೆ/ದಂಡ ಬಹಿಷ್ಕಾರ ಮುಂತಾದ ಶಿಕ್ಷೆಗಳನ್ನು ವಿಧಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಬುಡಕಟ್ಟು ಮೂಲದ ಇವರ ಜಾತಿಪದ್ಧತಿಯಲ್ಲಿದ್ದ ಕಟ್ಟುಪಾಡುಗಳು ಶಿಸ್ತುಗಳನ್ನು ಕಳೆದುಕೊಳ್ಳುತ್ತವೆ. ಆಧುನೀಕರಣದಲ್ಲಿ ಜಾತಿ ನ್ಯಾಯ ಪಂಚಾಯಿತಿಗಳು ತಮ್ಮ ನೈಜತೆಯನ್ನು ಕಳೆದುಕೊಂಡು ಆಧುನಿಕ ಜಗತ್ತಿನಲ್ಲಿರುವ ಕೋರ್ಟು, ಕಛೇರಿಗಳಲ್ಲಿ ಜನ ನ್ಯಾಯಕ್ಕಾಗಿ ಮುಖಮಾಡತೊಡಗಿರುವದರಿಂದ ಗ್ರಾಮಗಳಲ್ಲಿರುವ ಕಟ್ಟೆ ಪಂಚಾಯ್ತಿಗಳು ಶಾಶ್ವತವಾಗಿ ಮುಚ್ಚಲ್ಪಟ್ಟಿವೆ. ಸಮುದಾಯಗಳಲ್ಲಿದ್ದ ಐಕ್ಯತೆ ಬಿರುಕುಬಿಟ್ಟಿದೆಯಾದರೂ ಕೆಲವೊಂದು ಗ್ರಾಮಗಳಲ್ಲಿ ಇಂದಿಗೂ ಸಹ ನ್ಯಾಯಕಟ್ಟೆಗಳು ಗಟ್ಟಿನೆಲೆಯನ್ನು ಕಂಡುಕೊಂಡಿರುವುದು ಆಶ್ಚರ್ಯಕರವಾದ ಸಂಗತಿ.

## ೪.೧೦. ವೈದ್ಯ ಪದ್ಧತಿ

ಜನಪದ ವೈದ್ಯ ಪದ್ಧತಿಯು ಪಾರಂಪಾರಿಕ ವೈದ್ಯಕೀಯ ಜ್ಞಾನವಾಗಿರುತ್ತದೆ. ಒಬ್ಬ ವ್ಯಕ್ತಿಯಿಂದಾಗಲೀ ಅಥವಾ ಸಮೂಹದಿಂದಾಗಲಿ ಬೆಳೆದು ಬಂದಿರುವಂತಹದ್ದಲ್ಲ. ಈ ಜ್ಞಾನ ಶಾಖೆಯ ಹಿಂದೆ ಹಲವಾರು ಆದಿವಾಸಿ ಸಮುದಾಯಗಳ ವಿಶಿಷ್ಟವಾದ ಅನುಭವಗಳು ಇವೆ. ಜಗತ್ತಿನ ಜನಪದ

ವೈದ್ಯ ಪರಂಪರೆಯು ಕ್ಷತ್ರಿಯ ಸಮುದಾಯದಲ್ಲಿ ಕಂಡುಬರುತ್ತದೆ. ಇವರು ಹೆಚ್ಚು ಆರೋಗ್ಯವಂತರಾಗಿರಲು ಕಾರಣ ಅವರು ಸೇವಿಸುತ್ತಿದ್ದ ಆಹಾರವೇ ಮೂಲಕಾರಣ ಅನೇಕ ಜಾತಿಯ ಸೊಪ್ಪುಗಳು, ಹಣ್ಣು, ಹಂಪಲಗಳನ್ನು ಆಹಾರಕ್ಕೆ ಔಷಧಿಗೆ ಬಳಸಲಾಗುತ್ತಿತ್ತು. ಅವರು ಬಳಸುತ್ತಿದ್ದ ಆಹಾರಗಳಲ್ಲಿ ಪೌಷ್ಟಿಕತೆ ಅಂಶ ಇರುತ್ತಿತ್ತು. ಆಹಾರಕ್ಕೆ ಬಳಸುವ ಸಸ್ಯಗಳ ಬಗೆಗೆ ಸಂಪೂರ್ಣ ಜ್ಞಾನ ಉಂಟು. ಮಕ್ಕಳಿಂದ ಹಿಡಿದು ಮುದುಕರವರೆಗೆ ಅವರವರ ವಯಸ್ಸಿಗನುಗುಣವಾಗಿ ಆಹಾರ ಸೇವಿಸುವುದು ಕಂಡುಬರುತ್ತದೆ. ಋತುಮತಿ, ಗರ್ಭಿಣಿ, ಬಾಣಂತಿ ಅವರ ಬಗೆಗೆ ಕಾಳಜಿ ಇತ್ತು.

ರೋಗವು ಮಾನವನಷ್ಟೆ ಪ್ರಾಚೀನವಾದುದು, ತನ್ನ ದೇಹವನ್ನು ರಕ್ಷಿಸುವ ಹಾದಿಯಲ್ಲಿ ಹಲವಾರು ರೋಗ ರುಜಿನಗಳನ್ನು ಎದುರಿಸುತ್ತ ರೋಗಗಳನ್ನು ಹತ್ತಿಕ್ಕ ಬೇಕೆಂಬ ಪಥದಲ್ಲಿ ಮಾನವನ ಹೋರಾಟ ಪ್ರಾರಂಭವಾಗುತ್ತದೆ ಎನ್ನಬಹುದು. ಜನಪದ ವೈದ ಪದ್ಧತಿಯು ಸುಮಾರು ವರ್ಷಗಳಿಂದಲೂ ಜನಪದರೊಂದಿಗೆ ಬೆಸೆದುಕೊಂಡು ಬಂದಿದೆ. ಕಾಡಿನಲ್ಲಿ ವಾಸಿಸುವ ಮಾನವರಿಗೆ ಪ್ರಕೃತಿಯೆ ಆರಾಧ್ಯ ದೈವಾವಾಗಿತ್ತು. ಆಸ್ಪತ್ರೆಗಳ ಸೌಕರ್ಯಗಳು ದೊರೆಯದ ಕಡೆ ಈ ಜನಪದ ವೈದ್ಯ ಪದ್ಧತಿಯು ತಮ್ಮ ಸುತ್ತಮುತ್ತಲ ಪರಿಸರದಲ್ಲಿ ಸುಲಭವಾಗಿ ಸಿಗುವಂತಹ ಔಷಧಿಗಳನ್ನು ತಯಾರಿಸಿಕೊಂಡು ಕಾಯಿಲೆಗಳನ್ನು ಗುಣಪಡಿಸಿಕೊಳ್ಳುತ್ತಿದ್ದರು. ಕಾಡಿನಲ್ಲಿ ದೊರೆಯುವ ಹಣ್ಣಗಳೂ, ಸೊಪ್ಪು, ಜೇನು, ನಾರು, ಬೇರು, ಮಾಂಸ ಸೇವಿಸುತ್ತಿದ್ದರು. ತಾಮ್ರ, ಹಿತ್ತಾಳೆ, ಹಾಳೆ, ಮಣ್ಣು ಮೊದಲಾದವುಗಳು ವೈದ್ಯ ಪದ್ಧತಿಗೆ ಬರುತ್ತಿದ್ದವು. ಪ್ರಾರಂಭದಲ್ಲಿ ತಮ್ಮ ಪಾರಂಪರಿಕ ಜ್ಞಾನದ ವೈದ ಪದ್ಧತಿಯ ಮೂಲಕ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಅದರಿಂದ ಗುಣವಾಗದಿದ್ದರೆ, ಮಾತ್ರ ವೈದ್ಯರ ಹತ್ತಿರ ಹೋಗುತ್ತಿದ್ದರು. ಮಹಿಳೆಯರು, ಗರ್ಭಿಣೀಯರು, ಮಕ್ಕಳ ಆರೈಕೆಗೆ, ತಮ್ಮದೇ ಆದ ಜನಪದ ವೈದ್ಯ ಪದ್ಧತಿಯನ್ನು ಔಷಧವನ್ನು ಕೊಡುತ್ತಿದ್ದರು. ಬಸುರಿರಗೆ ಕಣಲೆ/ಕಳಲೆ, ಅಣಬೆ ಕೋಳಿ ಮಾಂಸವನ್ನು ನೀಷಧ ಮಾಡುತ್ತಿದ್ದರು. ಗರ್ಭಿಣಿಯರು ಪಪ್ಪಾಯ ಕಾಯಿ ಸೇವಿಸಬಾರದು ಸುಸ್ತಾದರೆ ಕೊತ್ತಂಬರಿ ಕಷಾಯ ಮಾಡಿ ಕುಡಿಸುತ್ತಿದ್ದರು. ಮೊದಲನೆಯ ದಿನ ಅನ್ನ ಊಟ ಮಾಡಬಾರದು ತುಪ್ಪ, ಕಾಫಿ, ಗಂಜಿ ಮಾತ್ರ ಸೇವಿಸಬೇಕು ನಂತರದ ದಿನಗಳಲ್ಲಿ ಬೆಳ್ಳುಳ್ಳಿ, ನೀರುಳ್ಳಿ, ಜೀರಿಗೆ, ಮೆಣಸು ಸೇರಿಸಿ ಸಾರು ಮಾಡಿ ಅನ್ನವನ್ನು ಕಲಸಿ ಕೊಡುತ್ತಿದ್ದರು. ಮೀನಿನ ಕರಿ, ಹೀರೆಕಾಯಿ, ಬಸ್ಸಾರು, ಬೆಳ್ಳುಳ್ಳಿ, ಶುಂಠಿ, ದ್ರಾಕ್ಷಿ, ಗಸಗಸೆ, ಬಾದಮಿ, ಒಣ ಮೆಣಸು, ಜಾಯಿಕಾಯಿ ಬೆಲ್ಲ, ಜೇನು ಸೇರಿಸಿ ಚೆನ್ನಾಗಿ ಇಂಗಿಸಿ ರೊಟ್ಟಿ ಮಾಡಿ ಕೊಡುತ್ತಾರೆ. ಇದರಿಂದ ಹೊಟ್ಟೆ ನೋವು ಬರುವುದಿಲ *(ಸುರೇಶನಾರಾಯಣನಾಯ್ಕ, ರಾಮಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ-೪೪, ೨೦೧೧).*

ಮಗುವಿಗೆ ಮೊಲೆಹಾಲು ಆರೋಗ್ಯಕ್ಕೆ ಒಳ್ಳೆಯದು. ಅಜೀರ್ಣವಾದರೆ, ಬಜೆಯನ್ನು ನಾಲಿಗೆಗೆ ತಿಕ್ಕುತ್ತಾರೆ. ಬೇಧಿಯಾದರೆ, ಕಟುಕ ರೋಹಿಣಿ, ಆಡುಸೊಗೆ ಸೊಪ್ಪಿನ ರಸವನ್ನೂ ಜೇನಿನ ಜೊತೆ ಕೊಡುತ್ತಾರೆ. ಸತ್ವಾರ ಬಳ್ಳಿ ರಸದಿಂದ ಶೀತ ನಿವಾರಿಸುತ್ತಾರೆ. ವಾಂತಿಯಾದಗ ಪಂಚಪತ್ರೆ ರಸವನ್ನು ಕುಡಿಸುತ್ತಾರೆ. ಮಗುವಿಗೆ ಶೀತ ಕಫ ಆಗದಂತೆ ಸಾಂಬ್ರಾಣಿ ಲೋಬಾನದ ಧೂಪದ ಹೊಗೆಹಾಕಿ ಇಡುತ್ತಾರೆ. ಬಾಲ ಗ್ರಹ ಪೀಡೆ ಮಗುವಿಗೆ ಬಂದರೆ, ಮೂಲಿಕೆ ಮಾತ್ರೆಯನ್ನು ಕೊಡುತ್ತಾರೆ. ತುಂಬೆ

ರಸ, ಕುಡಿಸುತ್ತಾರೆ. ಶುಂಠಿ, ಅಮೃತಬಳ್ಳಿ ಕಷಾಯ, ಎಕ್ಕಗಿಡದ ಎಲೆ ಬೇರು, ನುಗ್ಗೆಯ ಎಲೆ, ಓಮದ ಕಷಾಯ, ಮೆಂತೆ, ತೆಂಗಿಎಣ್ಣೆ, ಹಾಗಲ ಎಲೆ, ಎಕ್ಕದ ಹಾಲು, ಗರಿಕೆಯ ರಸ, ಕಲ್ಲು ಸಕ್ಕರೆ, ಕೆಂಪು ಅಕ್ಕಿ, ಜಾಯಿಕಾಯಿ, ದಾಲ್ಚಿನಿ, ಲವಂಗ, ಅಡಿಕೆ, ಎಲೆ (ತಾಂಬೂಲ) ಸಾಸಿವೆ, ಬೆಳ್ಳುಳ್ಳಿ, ಏಲಕ್ಕಿ, ಈರುಳ್ಳಿ, ತುಂಬೆ ಸೊಪ್ಪು, ಬೇವಿನ ಸೊಪ್ಪು, ಇನ್ನು ಹೆಸರು ಹೇಳದಿರುವ ಕೆಲವೊಂದು ಕಾಡ ಮೂಲಿಕೆಯಿಂದ ಜನಪದ ವೈದ್ಯ ಪರಂಪರೆಯ ಈ ಸಮುದಾಯದಲ್ಲಿ ಬಳಸುವುದನ್ನು ನಾವು ನೋಡಬಹುದು. ಕೇವಲ ಮನುಷ್ಯರಿಗೆ ಮಾತ್ರವಲ್ಲ ತಮ್ಮೊಂದಿಗೆ, ಬದುಕುವ ಪ್ರಾಣಿಗಳಿಗೆ ರೋಗ ರುಜೀನಗಳು ಬಂದಾಗಲು ಗಿಡಮೂಲಿಕೆಗಳಿಂದ ಜೀವಿಗಳ ಆರೋಗ್ಯವನ್ನು ಕಾಪಾಡಿಕೊಳ್ಳುತ್ತಿದ್ದರು. ಇದನ್ನು ಜನಪದ ವೈದ್ಯ ನಾಡವೈದ್ಯ ಮನೆವೈದ್ಯ ವನೌಷಧಿ ಈ ಮುಂತಾದ ಹೆಸರಿನಿಂದ ಕರೆಯುತ್ತಿದ್ದರು.

ಸಮುದಾಯವೊಂದರ ಜೀವನ ವಿಧಾನಗಳ ಮೊತ್ತ ಎನ್ನುವ ಸಂಸ್ಕೃತಿ ಗ್ರಹಿಕೆಯ ಹಿನ್ನೆಲೆಯಲ್ಲಿ ಕ್ಷತ್ರಿಯರ ಭೌತಿಕ ಸಂಸ್ಕೃತಿಗೆ ಸಂಬಂಧಪಟ್ಟ ಉಡುಗೆ–ತೊಡುಗೆ–ಅಡುಗೆ–ಪದ್ಧತಿ ಗೃಹ ನಿರ್ಮಾಣ, ಮನೆ ಬಳಕೆಯ ವಸ್ತುಗಳು ವ್ಯವಸಾಯ–ಪಶುಪಾಲನೆ ಬೇಟೆ ನ್ಯಾಯಪದ್ಧತಿ ಮುಂತಾದ ಸಾಮಾಜಿಕ ಜೀವನಕ್ಕೆ ಸಂಬಂಧ ಪಟ್ಟ ವಿವರಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಈ ಅಧ್ಯಯನಕ್ಕೆ ಪೂರಕವಾಗಿ ಮುಂದಿನ ಭಾಗದಲ್ಲಿ ಇವರ ಅಭೌತಿಕ ಸಂಸ್ಕೃತಿಗೆ ಸಂಬಂಧಪಟ್ಟ ವಿವರಗಳನ್ನು ಅಧ್ಯಯನಕ್ಕೆ ಒಳಪಡಿಸುವ ಮೂಲಕ ಕ್ಷತ್ರಿಯರ ಸಮುದಾಯದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಪರಿಭಾವಿಸಲಾಗುವುದು.

**ಆಧಾರ ಸಾಹಿತ್ಯಗಳು**


ಅಂಬಳಿಕೆ ಹಿರಿಯಣ್ಣ, *ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ*, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯.

ಈಶ್ವರಪ್ಪ ಎಂ ಜಿ, *ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ*, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೫.

ಪುಟ್ಟಪ್ಪ ಕೆ ವಿ (ಸಂ), *ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂಪುಟ–೧ ಮತ್ತು ೨*, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦.

ಮೇತ್ರಿ ಕೆ ಎಂ, *ಬುಡಕಟ್ಟು ಕುಲಕಸುಬುಗಳು*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

ಮೋಹನ್ ಕೃಷ್ಣರೈ ಕೆ, *ಪ್ರಭುತ್ವ ಮತ್ತು ಜನತೆ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬೆಂಗಳೂರು, ೨೦೦೪.

ವಿಶ್ವಕೋಶ–೨, *ಕರಕುಶಲ ಕಲೆಗಳು*, ಕನ್ನಡ ವಿಶ್ವವಿದ್ಯಾಲಯ ೨೦೦೦.

ಸಣ್ಣರಾಮ, *ಲಂಬಾಣಿ ಸಂಸ್ಕೃತಿ*, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೯.

ಸುರೇಶ ನಾರಾಯಣ ನಾಯ್ಕ, *ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ*, ಸುವರ್ಣ ಪ್ರಕಾಶನ, ಹೊನ್ನಾವರ, ೨೦೧೧.

# ಅಧ್ಯಾಯ: ಐದು

# ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ರ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳು

# ಅಧ್ಯಾಯ: ಐದು

## ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ರ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳು

### ಪೀಠಿಕೆ

ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ಯ ಸಮುದಾಯದವರು ಪಾರಂಪರಿಕ ಸಂಸ್ಕಾರ, ಸಂಸ್ಕೃತಿ, ಸಾಂಪ್ರದಾಯಿಕ ಕಟ್ಟುಪಾಡುಗಳನ್ನು ಅನುಸರಿಸಿಕೊಂಡು ಬಂದಿರುವರು. ಯಾವುದೇ ಸಮುದಾಯವು ಕೇವಲ ವೃತ್ತಿ ಅಥವಾ ಭೌಗೋಳಿಕ ಪರಿಸ್ಥಿತಿಯನ್ನು ಅನುಸರಿಸಿಯಷ್ಟೆ ಬೆಳೆಯವುದಿಲ್ಲ, ವಂಶಪಾರಂಪರಿಕ ವೃತ್ತಿ ಮತ್ತು ಜೀವನ ವಿಧಾನ ಭಾರತೀಯ ಸಮಾಜದ ಒಂದು ವಿಶಿಷ್ಟ ಲಕ್ಷಣವಾಗಿದೆ. ತಮ್ಮದೇ ಆದ ವೃತ್ತಿ, ಜೀವನ ವಿಧಾನ, ರೀತಿ ರಿವಾಜು, ನಂಬಿಕೆ ಸಂಪ್ರದಾಯಗಳು, ಮುಂತಾದ ಜೀವನಾವರ್ತನ ಆಚರಣೆಗಳು ಜಾತಿಯಿಂದ ಜಾತಿಗಳಿಗೆ ಅಥವಾ ಸಮುದಾಯಗಳಿಂದ ಸಮುದಾಯಗಳಿಗೆ ವಿಭಿನ್ನವಾದ ಆಚರಣೆ ಇರುತ್ತದೆ. ಇಂತಹ ಭಿನ್ನತೆಯೆ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವಾಗಿದೆ. ಈ ಬಗೆಯ ಸಾಂಸ್ಕೃತಿಕ ಮತ್ತು ಸಾಮಾಜಿಕ ವಿಶಿಷ್ಟತೆಗೆ ಕಾರಣವಾಗಿರುವ ಜನ ಸಮುದಾಯದ ಜಾತಿಯಲ್ಲಿ ಕ್ಷತ್ರಿಯ ಸಮುದಾಯದ ಭೌತಿಕ ಸಂಸ್ಕೃತಿಗೆ ಸಂಬಂಧಪಟ್ಟಂತಹ ಮತ್ತು ಸಮಾಜಕ್ಕೆ ಕುಟುಂಬಗಳೆ ಮಾಲಾಧಾರವಾಗಿದ್ದು, ಅದು ಜನರ ಒಂದುಗೂಡುವಿಕೆ ಮಾತ್ರ ಆಗಿರದೆ ಸಾಮಾಜಿಕ ವ್ಯವಸ್ಥೆಯಲ್ಲಿನ ವಿಭಿನ್ನ ಸಾಂಸ್ಕೃತಿಕ ಅಂಶಗಳೊಂದಿಗೆ ಕೊಂಡಿತಾಗಿಸಿಕೊಂಡು ಮುಂದುವರಿಯುತ್ತದೆ. ಆ ದೃಷ್ಟಿಯಿಂದ ಮಾನವನನ್ನು ಸಮಾಜ ಜೀವಿ ಎಂದು ಕರೆಯಲಾಗಿದೆ. ಸಾಮಾಜಿಕ ಕಟ್ಟುಕಟ್ಟಳೆಗಳಿಗೆ ಒಳಪಟ್ಟು ಸುಸಂಘಟಿತ ಸಮುದಾಯವನ್ನು ನಾವು ಸಮಾಜ ಎನ್ನುತ್ತೇವೆ. ವ್ಯಕ್ತಿಗಳ ವ್ಯವಸ್ಥಿತ ಸಮೂಹವಾದ ಸಮಾಜದಲ್ಲಿ ವಿವಿಧ ಅಂಗಗಳಿರುತ್ತದೆ. ಅತ್ಯಂತ ಚಿಕ್ಕ ಘಟಕವಾದ ಕುಟುಂಬವಿಲ್ಲದೆ ಸಮಾಜವಿರಲು ಸಾಧ್ಯವಿಲ್ಲ. ಕ್ಷತ್ರಿಯರ ಕೌಟುಂಬಿಕ ವ್ಯವಸ್ಥೆಯಲ್ಲಿ ತಮ್ಮದೇ ಆದ ವೈಶಿಷ್ಟ್ಯಗಳನ್ನು ಹೊಂದಿದ್ದಾರೆ.

## ೫.೧. ಕೌಟುಂಬಿಕ ಜೀವನ

ನಾವು ಕುಟುಂಬವನ್ನು ಕುರಿತು ವಿಚಾರ ಮಾಡಿದಾಗ ಅದನ್ನು ಮಕ್ಕಳಿರುವ ಅಥವಾ ಮಕ್ಕಳಿಲ್ಲದ ಗಂಡ ಹೆಂಡತಿಯರ ಒಂದು ಸಂಘವೆಂದೋ ಅಥವಾ ಮಕ್ಕಳಿರುವ ಒಬ್ಬ ಗಂಡನಿಂದಾಗಲಿ ಅಥವಾ ಏಕಾಂಗಿ ಹೆಂಗಸಿನಿಂದಾಗಲಿ ಕೂಡಿದ ಹೆಚ್ಚು ಕಡಿಮೆ ಬಾಳಿಕೆ ಬರುವ ಒಂದು ಸಂಘವೆಂದೋ ನಮ್ಮಲ್ಲಿ ಕಲ್ಪಿಸಿಕೊಳ್ಳುತ್ತೇವೆ. ಲಿಂಗ, ಜಾತಿ ಮತ್ತು ಜನ್ಮದಾತೃಗಳ ಕಾರ್ಯಗಳು ಕುಟುಂಬಕ್ಕೆ ವಿಶಿಷ್ಟವಾಗಿವೆ. ಅವು ಸಂಸ್ಥೆಯ ಅಸ್ತಿತ್ವಕ್ಕೆ ಮೂಲಕಾರಣವಾಗಿ ಸಮಸ್ತ ಸಂಸ್ಕೃತಿಗಲ್ಲೂ ಕುಟುಂಬಕ್ಕೆ ಸಾಮಾನ್ಯವಾಗಿವೆ. ಕುಟುಂಬದ ಪ್ರಧಾನ ಉದ್ಯೋಗ ವರ್ಗಗಳಲ್ಲಿ ಸಂಗಾತಿಗಳು ಮತ್ತು ಅವರ ಸಂತತಿಯವರು ಸೇರಿರುತ್ತಾರೆ. ತಂದೆ ತಾಯಿಗಳು ಮತ್ತು ಮಕ್ಕಳು ಕೂಡಿದ ಜೈವಿಕ ಕುಟುಂಬವು ಕುಟುಂಬ ಸಂಘಟನೆಯ ಏಕಮಾತ್ರ ರೂಪವಾಗಿಲ್ಲ. ಗಂಡಹೆಂಡತ್ತಿಯರ ಸುತ್ತಲೂ ವ್ಯವಸ್ಥೆಗೊಂಡಂಥ ಕುಟುಂಬಕ್ಕೆ ಬದಲಾಗಿ ಸೋಹದರ ಸೋಹದರಿಯರಾಗಲೂ ತಂದೆ ತಾಯಿಗಳು ಮತ್ತು ಮಕ್ಕಳಾಗಲಿ ಇವರ ನಡುವೆ ಕಂಡುಬರುವಂಥ ರಕ್ತಸಂಬಂಧಗಳ ಒಂದು ಕೇಂದ್ರದ ಸುತ್ತಲೂ ಸಂಘಟಿತವಾದ ಕಾರ್ಯಾತ್ಮಕ ಕುಟುಂಬವನ್ನು ಗ್ರಹಿಸುವುದು ಪ್ರತಿಯಾಗಿ ಸಾಧ್ಯವಿದೆ. ಕಾರ್ಯಾತ್ಮಕ ಸಮೂಹವು ರಕ್ತಸಂಬಂಧಗಳನ್ನು ಆಧರಿಸಿರುವ ಕಡೆಯಲ್ಲಿ ಅದನ್ನು ರಕ್ತ ಸಂಬಂಧವನ್ನುಳ್ಳ ಒಂದು ಕುಟುಂಬ ಸಂಘಟನೆ ಎಂದು ಕರೆಯಬಹುದು.

ವಂಶಾನುಕ್ರಮವನ್ನು ತಂದೆ ತಾಯಿಗಳಿಬ್ಬರ ಮೂಲಕವೂ ಪತ್ತೆ ಮಾಡದೇ ತಾಯಿಯ ಕಡೆಯಿಂದಾಗಲಿ ಅಥವಾ ತಂದೆಯ ಕಡೆಯಿಂದಾಗಲಿ ಪತ್ತೆ ಮಾಡಲಾಗುತ್ತದೆ. ವಂಶಾನುಕ್ರಮವು ಪಿತೃವಂಶೀಯವಾಗಿರುವ ಕಡೆಯಲ್ಲಿ ರಕ್ತಸಂಬಂಧವನ್ನುಳ್ಳ ಕುಟುಂಬವು ಒಬ್ಬ ಯಜಮಾನ ಅವನ ಮಕ್ಕಳು ಮತ್ತು ಪುರುಷ ಸಂತಾನದ ಮೂಲಕ ಬಂದಿರುವ ಅವನ ಪುರುಷ ವಂಶಜರನ್ನು ಒಳಗೊಂಡಿರುತ್ತದೆ. ತನ್ನ ಹೆಂಡತಿಯ ಕುಟುಂಬದಲ್ಲಿ ಗಂಡನು ವಾಸಮಾಡಿಕೊಂಡಿರುವ ಕಡೆಯಲ್ಲಿ ವ್ಯವಸ್ಥೆಯನ್ನು ಮಾತೃಸ್ಥಾನೀಯ ವಾಸವೆಂದು ಕರೆಯಲಾಗಿದೆ. ಅದರ ವಿರುದ್ಧವಾದ ವ್ಯವಸ್ಥೆಯನ್ನು ಪಿತೃಸ್ಥಾನೀಯ ವಾಸವೆಂದು ಕರೆಯಲಾಗಿದೆ. ಪುರುಷರ ಮೂಲಕ ವಂಶಾನುಕ್ರಮವನ್ನು ಪತ್ತೆಮಾಡುವ ಸಂಸ್ಕೃತಿಗಳೆಲ್ಲವೂ ಸ್ಪಷ್ಟವಾಗಿ ಪಿತೃಸ್ಥಾನೀಯ ಸಂಸ್ಕೃತಿಗಳಾಗಿವೆ. ವಂಶಾನುಕ್ರಮವನ್ನು ಹೆಂಗಸರ ಮೂಲಕ ಪತ್ತೆಮಾಡುವುದಾದರೆ, ವಾಸವು ಮಾತೃಸ್ಥಾನೀಯ ಆಗಿರಬಹುದು ಅಥವಾ ಪಿತೃಸ್ಥಾನೀಯ ಆಗಿರಬಹುದು. ವ್ಯಕ್ತಿ, ಮನೆಯ ಉಳಿದ ವ್ಯಕ್ತಿಗಳು ಇವನನ್ನು ಅನುಸರಿಸುತ್ತಾರೆ. ಯಾವುದೇ ನಿರ್ಣಯವನ್ನು ತೆಗೆದುಕೊಳ್ಳುವಾಗ ಮುಖ್ಯಸ್ಥನ ನಿರ್ಣಯ ಅಂತಿಮವಾಗಿದ್ದರೂ ಕೆಲವೊಮ್ಮೆ ಉಳಿದ ಹಿರಿಯರೊಂದಿಗೆ ಸಮಾಲೋಚನೆ ನಡೆಸಿ ನಿರ್ಣಯಕ್ಕೆ ಬರುವುದನ್ನು ಕಾಣಬಹುದು.

ಕುಟುಂಬದ ಪ್ರತಿಯೊಂದು ಕೆಲಸ-ಕಾರ್ಯಗಳ ಜವಾಬ್ದಾರಿ, ಯಜಮಾನದ್ದೇ ಆಗಿರುತ್ತದೆ. ಹಿರಿಯ ವ್ಯಕ್ತಿ ಮಾಡಿದ ಖರ್ಚುವೆಚ್ಚ ಉಳಿದವರು ಒಪ್ಪಿಕೊಳ್ಳಬೇಕಾಗುತ್ತದೆ. ಮನೆಯಲ್ಲಿ ನಡೆಯುವ ಕಾರ್ಯಕ್ರಮಗಳು ಮನೆಯ ಹಿರಿಯವನಿಂದಲೇ ನಡೆಯುತ್ತದೆ. ಕುಟುಂಬದ ಹಿರಿಯವರಿಗೆ, ಕಿರಿಯರಿಗೆ ಉಡುಗೆ-ತೊಡುಗೆ ತರುವ ಮನೆಯ ಅಗ್ಯತಕ್ಕೆ ತಕ್ಕಂತೆ ಸಾಮಾನ ತರುವ, ತಂದೆ ತಾಯಿಯಂದಿರನ್ನು ಸಾಕುವುದು ಇವನ ಕರ್ತವ್ಯವಾಗಿರುತ್ತದೆ. ಕುಟುಂಬದಲ್ಲಿ ಉಂಟಾಗುವ ಭಿನ್ನಾಭಿಪ್ರಾಯಗಳನ್ನು ಮುಖ್ಯಸ್ಥನೆ ಪರಿಹರಿಸುತ್ತಾನೆ. ಇಲ್ಲಿಯ ಬಾಂಧವ್ಯ ರಕ್ತಸಂಬಂಧದ ಭಾವನಾತ್ಮಕ ಸಂಬಂಧವಾಗಿರುತ್ತದೆ

*(ಸುರೇಶ ನಾರಾಯಣ ನಾಯ್ಕ, ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ-೨೯, ೨೦೧೧).* ಕ್ಷತ್ರಿಯರ ವಿಭಕ್ತ ಕುಟುಂಬದಲ್ಲಿ ಗಂಡ-ಹೆಂಡತಿ ಹಾಗೂ ಅವನ ಮಕ್ಕಳು ಸೇರಿರುತ್ತಾರೆ. ಈಗಿಗ ವಿವಾಹವಾದ ನಂತರ ಗಂಡ-ಹೆಂಡತಿ ಪ್ರತ್ಯೇಕವಾಗಿ ವಾಸಿಸಲು ಆರಂಭಿಸುತ್ತಾರೆ. ಅವಿಭಕ್ತ ಕುಟುಂಬದಲ್ಲಿ ಸದ್ಯರ ಸಂಖ್ಯೆ ಹೆಚ್ಚು ಇರುವುದರಿಂದ ದಾಯಾದಿ ಮತ್ಸರ ಬರುತ್ತದೆ. ಇದರಲ್ಲಿ ಅಜ್ಜ-ಅಜ್ಜಿ, ಚಿಕ್ಕಪ್ಪ, ದೊಡ್ಡಪ್ಪ, ಅತ್ತಿಗೆ, ನಾದಿನಿ, ಒಟ್ಟಾಗಿ ಇರುತ್ತಾರೆ. ಅನೇಕ ಕುಟುಂಬಗಳು ಸೇರಿ ಇರುವುದಕ್ಕೆ 'ಕೇರಿ' ಎಂದು ಕರೆಯುತ್ತಾರೆ. ಹಾಗೇ ಅನೇಕ ಕೇರಿಗಳು ಸೇರಿ ಊರಾಗುತ್ತದೆ. *(ಸುರೇಶ ನಾರಾಯಣ ನಾಯ್ಕ, ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ-೩೦, ೨೦೧೧)*

ಹಿಂದೂ ಕ್ಷತ್ರಿಯ ಹಾಗೂ ಈ ಸಮುದಾಯದ ಸಮನಾಂತರ ಉಪಜಾತಿಗಳಾದ ಕ್ಷತ್ರಿಯರು, ಕ್ಷತ್ರಿ:ಕ್ಷತ್ರಿಯ, ಕೋಟೆ ಕ್ಷತ್ರಿಯ, ಕುಟುಂಬವು ಸಾಮಾಜಿಕ ಸಂಘಟನೆಯಲ್ಲಿ ಒಂದು ಘಟಕವಾಗಿ ಕಾರ್ಯ ನಿರ್ವಹಿಸುತ್ತಿದೆ. ಇವರಲ್ಲಿ ವಿಭಕ್ತ ಕುಟುಂಬ ಮತ್ತು ಅವಿಭಕ್ತ ಕುಟುಂಬ ಎಂಬ ಎರಡು ವಿಧಗಳಿವೆ. ಇವರಲ್ಲಿ ವಿಭಕ್ತ ಕುಟುಂಬಗಳೇ ಹೆಚ್ಚಾಗಿ ಕಾಣಸಿತ್ತವೆ. ಕೆಲವೂಂದು ಮನೆಗಳು ಮಾತ್ರ ತಾವು ವಾಸಿಸುವ ಪ್ರದೇಶದಲ್ಲಿ ಚಿಕ್ಕ ಚಿಕ್ಕ ಕುಟುಂಬಗಳಾಗಿವೆ. ಇವರಿಗೆ ತುಂಡು ಭೂಮಿಯೇ ಜೀವನಾಧಾರವಾಗಿದೆ. ಆದರೆ ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ನ್ಯಾಯಬದ್ಧವಾಗಿ ಈ ತನಕವೂ ಹಂಚಿಕೊಂಡಿಲ್ಲ. ಅವಿಭಕ್ತ ಹಾಗೂ ವಿಭಕ್ತ ಕುಟುಂಬಗಳಿಗೆ ವಿಭಿನ್ನ ಹೆಸರುಗಳಿಂದ ಕರೆಯಲಾಗುತ್ತದೆ. ಈ ಸಮುದಾಯದಲ್ಲಿ ಮಾತೃ ಪ್ರಧಾನ ವ್ಯವಸ್ಥೆಯಿಲ್ಲ. ಕುಟುಂಬದಲ್ಲಿ ಕರ್ತಾನ ಹೇಳಿಕೆಯಂತೆ ಹೆಂಡತಿ ಮಕ್ಕಳು ಹಾಗೂ ಎಲ್ಲ ಸದಸ್ಯರು ವರ್ತಿಸಬೇಕಾಗುತ್ತದೆ. ಮದುವೆ ಮರಣ ಪೂಜೆ ಇತ್ಯಾದಿ ಕಾರ್ಯಗಳಲ್ಲಿ ಅವನಿಗೆ ಉನ್ನತ ಸ್ಥಾನಮಾನಗಳಿವೆ. ಈತ ಕುಟುಂಬ ನಿರ್ವಹಿಸಲು ವಿಫಲನಾದರೆ, ಆರ್ಥಿಕವಾಗಿ ದಿವಾಳಿಕೋರನಾಗಿದ್ದರೆ ಆ ಮನೆಯ ಮಹಿಳೆಯು ಕುಟುಂಬದ ಸಂಪೂರ್ಣ ಜವಾಬ್ದಾರಿಯನ್ನು ನಿರ್ವಹಿಸುತ್ತಾಳೆ.

ಕೆಲವು ವರ್ಷಗಳ ಹಿಂದೆ ಅವಿಭಕ್ತ ಕುಟುಂಬಗಳು ಅಧಿಕವಾಗಿದ್ದವು. ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ಬಿಟ್ಟುಬಂದ ನಂತರವು ಅನೇಕ ಭಾಗಗಳಲ್ಲಿ ಅವಿಭಕ್ತ ಕುಟುಂಬಗಳಿದ್ದು, ಪ್ರಸ್ತುತ ನಗರ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿ ಮತ್ತು ಶಿಕ್ಷಣ ಮತ್ತು ವೃತ್ತಿಯಿಂದಾಗಿ ಚಿಕ್ಕ ಕುಟುಂಬಗಳಾಗಿ ಪರಿವರ್ತನೆಗೊಂಡಿವೆ. ಕೂಡು ಕುಟುಂಬವಿದ್ದಾಗ ಅಜ್ಜ, ಅಜ್ಜಿ, ಅತ್ತಿಗೆ ನಾದಿನಿ, ಭಾವ, ಮೈದುನ, ಸಹೋದರಮಾವ, ಸೋದರತ್ತೆ, ಚಿಕ್ಕಮ್ಮ, ದೊಡ್ಡಮ್ಮ, ಚಿಕ್ಕಪ್ಪ ದೊಡ್ಡಪ್ಪರಿರುತ್ತಾರೆ. ಕೌಟುಂಬಿಕ ಬಾಂಧವ್ಯವು ಸಮಾಜದಿಂದಲೇ ಮಾಯವಾಗಬಹುದಾದ ಸಾಧ್ಯತೆಗಳು ಕಂಡುಬರುತ್ತಿವೆ. ಕ್ಷೇತ್ರಾಧ್ಯಯನದಿಂದ ಕುಟುಂಬದ ಬಗ್ಗೆ ಹೇಳುವುದೇನೆಂದರೆ, "ಕುಟುಂಬ ಮೊದಲು ಅವಿಭಕ್ತವೇ ಆಗಿತ್ತು. ವ್ಯವಸಾಯ ಮಾಡಲು ಅನುಕೂಲಕರವಾಗಿತ್ತು. ಕೌಟುಂಬಿಕ ಸಂಬಂಧವು ಚೆನ್ನಾಗಿತ್ತು. ಮದುವೆಯಾದ ಹೆಣ್ಣು ಮಕ್ಕಳನ್ನು ತವರಿಗೆ ಕರೆಯುವುದೂ ಕಳಿಸುವುದು, ನೆಂಟರಿಷ್ಟರನ್ನು ಆಹ್ವಾನಿಸಿ ಕುಟುಂಬದಲ್ಲಿ ಕಾರ್ಯಕ್ರಮಗಳನ್ನು ಮಾಡುವುದು ಇವರ ವಿಶೇಷಗುಣ. ಒಗ್ಗಟ್ಟಿನಿಂದ ಇದ್ದು, ಸರಳ ಜೀವನ ನಡೆಸುತ್ತಿದ್ದರು"*(ಸುರೇಶ ನಾರಾಯಣ ನಾಯ್ಕ, ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ-೩೧, ೨೦೧೧).*

ಅನೇಕ ಸಂದರ್ಶಿಸತರ ಕ್ಷೇತ್ರಾಧ್ಯಯನದಲ್ಲಿ ಕೂಡು ಕುಟುಂಬದ ಬಗ್ಗೆ ಮಾತಾನಾಡುತ್ತಾರೆ. ಈ ಕೂಡು ಕುಟುಂಬದಲ್ಲಿ ಗಂಡ-ಹೆಂಡತಿ, ಗಂಡುಮಕ್ಕಳು, ಸೊಸೆಯಂದಿರು ಮೊಮ್ಮಕ್ಕಳು ಇರುತ್ತಿರುವುದು ಸ್ವಾಭಾವಿಕ, ಹೆಣ್ಣು ಮಕ್ಕಳು ಮದುವೆಯಾದೊಡನೆ ಅವರ ಗಂಡಂದಿರೊಡನೆ ಮತ್ತೊಂದು ಮನೆಯಲ್ಲಿ ಸೊಸೆಯಂದಿರಾಗಿ ಬಾಳುತ್ತಾರೆ. ಶುಭ-ಅಶುಭ ಕಾರ್ಯಗಳಲ್ಲಿ ಹೆಣ್ಣು ಮಕ್ಕಳು, ಅಳಿಯಂದಿರು ಅವರ ಮಕ್ಕಳು ಮನೆಯವರು ಪಾಲ್ಗೊಳ್ಳುವುದು ಸ್ವಾಭಾವಿಕ. ಇಲ್ಲಿ ಪರಸ್ಪರ ಪ್ರೀತಿ, ವಿಶ್ವಾಸಗಳು ಬೆಳೆಯುವುದಕ್ಕೂ ಮುಂದೆ ಪರಸ್ಪರ ಸಂಬಂಧಗಳನ್ನು ಬೆಳಸುವುದಕ್ಕೂ ಅವಕಾಶವಿತ್ತು. ಉದಾಹರಣೆಗೆ, ತಾಯಿಯ ತಮ್ಮ ಅಥವಾ ಅಣ್ಣ ಮಾವನಾಗಿ ಮಾವನ ಮಕ್ಕಳೊಂದಿಗೆ ಲಗ್ನ ನಡೆಯುವ ಸಂಪ್ರದಾಯವಿದೆ. ಅಂದರೆ ಒಂದೇ ಮನೆಯ ಅಕ್ಕ-ತಮ್ಮಂದಿರ ಅಥವಾ ಅಣ್ಣ-ತಂಗಿಯಂದಿರ ಮಕ್ಕಳೊಳಗಿನ ಸಹೋದರ ಸಂಬಂಧ ಬೆಳೆಸುವ ವಾಡಿಕೆ ಹಿಂದೆ ಅಧಿಕವಾಗಿತ್ತು. ಆದರೆ ಈಗ ವರದಕ್ಷಿಣೆಯ ಪಿಡುಗು ಆ ಮಧುರ ಬಾಂಧ್ಯವನ್ನೇ ಇಲ್ಲದಂತಾಗಿಸಿರುವುದು ಸತ್ಯ ಸಂಗಾತಿಯಾಗಿದೆ.

ರಕ್ತ ಸಂಬಂಧದ ದೃಷ್ಟಿಯಿಂದ ಬೇರೆ ಪ್ರದೇಶಗಳಿಂದ ವಲಸೆ ಬಂದ ನಂತರ ಬಂಧುತ್ವದ ಪದಗಳು ಆ ಪ್ರದೇಶಗಳಿಗನುಸಾರವಾಗಿ ರೂಢಿಯಲ್ಲಿದೆ. ಮಾವನ ಮಗಳನ್ನು ಮದುವೆಯಾದರೆ ಆಕೆ ಹೆಂಡತಿ ಇಲ್ಲದಿದ್ದರೆ ಮಾವನ ಮಗಳು ಅತ್ತಿಗೆ ಅಥವಾ ನಾದಿನಿ, ಮಾವನ ಮಗನನ್ನು ಮದುವೆಯಾದರೆ, ಆತ ಗಂಡ ಇಲ್ಲವಾದರೆ ಆತ ಭಾವ ಅಥವಾ ಮೈದುನ, ಸಹೋದರ ಮಾವನ ಅತ್ತೆಯ ಮಕ್ಕಳು ಭಾವಂದಿರು, ಅತ್ತಿಗೆ, ನಾದಿನಿ ಎಂದು ಕರೆಯುತ್ತಿದ್ದರು. ತಾಯಿಯ ತಮ್ಮ ಅಥವಾ ಅಣ್ಣನನ್ನು ಸೋದರ ಮಾವನೆಂದು ಕರೆಯುತ್ತಾರೆ. ತಂದೆಯ ತಮ್ಮನನ್ನು ಚಿಕ್ಕಪ್ಪ ಅಣ್ಣನನ್ನು ದೊಡ್ಡಪ್ಪನೆಂದು ಕರೆಯುತ್ತಾರೆ. ಅಪ್ಪನ ಅಮ್ಮನ ತಂದೆಯ ತಂದೆಗೆ ಅಜ್ಜ, ಅಪ್ಪನ, ಅಮ್ಮನ ತಾಯಿಯ ತಾಯಿಗೆ ಅಜ್ಜಿ ಎಂದು ಕರೆಯುತ್ತಾರೆ. ಈ ರೀತಿಯಾಗಿ ಬಂಧುತ್ವದ ಪದಗಳನ್ನು ಉಪಯೋಗಿಸುವುದನ್ನು ಕಾಣುತ್ತೆವೆ. ಅಪ್ಪನಿಗೆ ಬಾಬಾ, ಪಪ್ಪ, ಅಣ್ಣ, ಅಜ್ಜನಿಗೆ ತಾತ, ಎಂದು ಸಂಬೋಧನೆ ಮಾಡುತ್ತಾರೆ. ತಾಯಿಗೆ ಅವವು ಅಮ್ಮಾ ಎಂದು ಕರೆಯುತ್ತಾರೆ. ಇತ್ತೀಚಿನದ ಕಾಲಮಾನದಲ್ಲಿ ಈ ಸಮುದಾಯಗಳು ತುಂಬನೆ ತರಾ-ತುರಿಯಲ್ಲಿ ಬದಲಾವಣೆಯನ್ನು ಕಾಣತೊಡಗಿವೆ.

ಒಂದೊಂದು ಮನೆತನಕ್ಕೆ ಒಂದೊಂದು ಹೆಸರು ಕೋತ್ವಾಲ ಹೋಬಳಿದಾರ, ದಪೆದಾರ ಉಗ್ರಾಣಿ, ಒಟ್ಪಾಡಿ ಬಳ್ಳಾರಿ ಮದ್ದೋಡಿ, ತಿಗಳ, ಪೂಜಾರಿ, ಪಂಗಾರಿ, ಕಡೆಮನೆ, ಪಟೇಲ, ಗೌಡ, ಬುದ್ಧಿವಂತ, ಧರ್ಮಾಯಣ, ಬಳ್ಳಾರಿ, ಸಣ್ಣತಿ, ಹೀಗೆ ಹಲವಾರು ಮನೆತನಗಳಿಂದ ಕರೆಯುತ್ತಾರೆ. ಇನ್ನು ಅವರು ವೃತ್ತಿಯಿಂದ ಹೆಸರುಗಳಿಸಿದರೆ, ಅದೇ ಅಡ್ಡ ಹೆಸರಿನಿಂದ ಪ್ರಚಾರವಾಗುತ್ತಿದ್ದರು. ಈಗಲೂ ಸಹ ಹಲವು ಮನೆತನಗಳಿಗೆ ಅಡ್ಡಗೆಸರುಗಳಿವೆ. ಪ್ರಾಚೀನ, ಮಧ್ಯಕಾಲಿನದಲ್ಲಿ ಬಂದು ನೆಲೆನಿಂತ ಕೇರಿ ಊರು ಗ್ರಾಮಗಳಲ್ಲಿನ ಹೆಸರೆ ಅವರ ಪಂಗಡಗಳ ನಾಮವಾಗಿದೆ. ಈ ಸಮುದಾಯದವರಿಗೆ ಗೋತ್ರವಿದೆ ಎನ್ನುತ್ತಾರೆ. ಹೊರನೋಟಕ್ಕೆ ಈ ಸಮುದಾಯಗಳಲ್ಲಿ ಭಿನ್ನತೆಗಳಿದ್ದರೂ ಅವು ಮೂಲತಃ ಸಮಾನ ಅಂಶಗಳನ್ನು ಒಳಗೊಂಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ ಕೆಲವರು ಅವರು ನೆಲೆಸಿರುವ ಊರಿನ ಹಾಗೂ ಅವರು ಮಾಡುವ ವೃತ್ತಿಗೆ ಅನುಸಾರವಾಗಿ ಅಡ್ಡ ಹೆಸರುಗಳಿವೆ.

### ೫.೨. ಕ್ಷತ್ರಿಯರ ಬೆಡಗುಗಳು

ಕುಲಪದ್ಧತಿ ವೈದಿಕ ಸಂಸ್ಕೃತಿಯ ಗೋತ್ರಗಳಿಗೆ ಸಮನಾಗಿ ಬುಡಕಟ್ಟು ಮತ್ತು ತಳಸಮುದಾಯಗಳಲ್ಲಿ ಬೆಡಗುಗಳ ರೂಪಿತಗೊಂಡಿವೆ. ವೈದಿಕ ಸಾಂಸ್ಕೃತಿಕ ಗೋತ್ರಗಳು ಋಷಿಮೂಲಗಳಿಂದ ಸೃಷ್ಟಿಗೊಂಡಿರುತ್ತವೆ. ಸಾಮಾನ್ಯವಾಗಿ 'ದ್ರಾವಿಡ ಬುಡಕಟ್ಟನಿಂದ ವಿಕಾಸವಾದ ಜನಾಂಗಗಳು ನಿಸರ್ಗದ ಹೆಸರಿನಲ್ಲಿ ಬೆಡಗುಗಳನ್ನು ರೂಪಿಸಿಕೊಂಡಿರುತ್ತವೆ' (ನಾಗರಾಜು ಎಂ ಹೆಚ್, ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ, ಪುಟ-೧೨೨, ೨೦೦೩). ಬುಡಕಟ್ಟುಗಳ ಮತ್ತು ಶ್ರಮಸಂಸ್ಕೃತಿಯ ಶೂದ್ರವರ್ಗದವರ ಬೆಡಗಳು ಕುಲದೇವತಾ ಸಂಸ್ಕೃತಿಯ ಸ್ವರೂಪವನ್ನು ಪಡೆದು ಕೊಂಡಿರುವುದಲ್ಲದೆ, ಗಿಡ, ಮರ, ಪ್ರಾಣಿ, ಪಶು, ಪಕ್ಷಿ ಮುಂತಾದ ಬದುಕಿಗೆ ಪೂರಕವಾದ ನಿಸರ್ಗಕ್ಕೆ ತೀರಾ ಹತ್ತಿರವಾದ ವಸ್ತುಗಳಿಂದ ಆವೃತ್ತವಾಗಿರುತ್ತವೆ. ಹಾಗೆಯೇ ಬುಡಕಟ್ಟುಗಳ ಮತ್ತು ತಳಸಮುದಾಯಗಳ ಬೆಡಗುಗಳನ್ನು ಕುಲ, ಕೊಲ, ಬಳಿ, ಕುಳಿ ಮುಂತಾಗಿ ಭಿನ್ನಹೆಸರುಗಳಿಂದ ಕರೆಯಲ್ಪಟ್ಟಿರುವ ಬೆಡಗುಗಳ ಮೂಲ ಉದ್ದೇಶಬಂಧುತ್ವವನ್ನು ಗುರುತಿಸಿಕೊಳ್ಳುವುದು ಮತ್ತು ನೆಂಟಸ್ತಿಕೆಯನ್ನು ರೂಪಿಸಿಕೊಳ್ಳುವುದು ಆಗಿರುತ್ತದೆ (ಮಲ್ಲಿಕಾರ್ಜುನ ಕೆ ಎಂ, ಕಾಡುಗೊಲ್ಲರ ಜನಪದ ಕಾವ್ಯಗಳಲ್ಲಿ ಸಾಂಸ್ಕೃತಿಕ ಸಂಘರ್ಷ, ಅಪ್ರ ಪುಟ-೭೦). ಕ್ಷತ್ರಿಯರ ಬೆಡಗುಗಳಲ್ಲಿಯೂ ಇಂತಹ ನಿಸರ್ಗಕ್ಕೆ ಸಂಬಂಧಪಟ್ಟ ಅನೇಕ ಅಂಶಗಳನ್ನು ಗುರುತಿಸಬಹುದು. ಹಾಗಾಗಿ ಕ್ಷತ್ರಿಯರು ನಿಸ್ಸಂಶಯವಾಗಿ ದ್ರಾವಿಡ ಮೂಲದವರೆಂದು ಗುರುತಿಸಬಹುದು. ಪ್ರತಿಯೊಂದು ಜಾತಿ ಸಮುದಾಯಗಳೂ ತಮ್ಮ ಗುಂಪನ್ನು ಅನೇಕ ಬೆಡಗುಗಳನ್ನಾಗಿ ವಿಂಗಡಿಸಿಕೊಂಡಿರುತ್ತವೆ. ಒಂದೊಂದು ಬೆಡಗಿನ ಹುಟ್ಟಿಗೂ ಒಂದಿಲ್ಲೊಂದು ಕಥೆಗಳಿರುತ್ತವೆ. ಕೆಲವು ಬೆಡಗಳು ಆಯಾ ಕುಲದ ಮೂಲ ಪುರುಷನ ವೃತ್ತಿಯನ್ನು ಅನುಸರಿಸಿ ಹುಟ್ಟಿಕೊಂಡಿದ್ದರೆ ಇನ್ನು ಕೆಲವು ಬೆಡಗುಗಳು ಬಹುಮಟ್ಟಿಗೆ ಪ್ರಕೃತಿಯಲ್ಲಿನ ವಸ್ತು, ಪ್ರಾಣಿ, ಪಕ್ಷಿ, ಗಿಡ, ಮರ ಹೂಗಳು ಮತ್ತು ಆಕಾಶದಲ್ಲಿ ಆಕಾಶ ಕಾಯಗಳ ಹೆಸರುಗಳನ್ನು ಹೊಂದಿರುತ್ತವೆ. ವಿವಿಧ ವಂಶಾವಳಿಯ ಗೋತ್ರಗಳ ಬೆಡಗುಗಳು ಗಂಡು ಸಂಬಂಧಕ್ಕೆ ಅನುಗುಣವಾಗಿ ರಚಿತವಾಗಿರುತ್ತವೆ. ಒಂದೇ ಬೆಡಗಿನವರೊಂದಿಗೆ ಪರಸ್ಪರ ವಿವಾಹ ನಡೆಯುವುದಿಲ್ಲ. ಹಾಗೇನಾದರೂ ಒಂದೇ ಬೆಡಗಿನವರಲ್ಲಿ ವಿವಾಹ ಸಂಬಂಧಗಳು ಏರ್ಪಟ್ಟರೆ ಅವರನ್ನು ಜಾತಿಯಿಂದ ಬಹಿಷ್ಕರಿಸಲಾಗುತ್ತದೆ.

ಕ್ಷತ್ರಿಯರ ಗೋತ್ರಗಳು ಕ್ಷತ್ರಿಯ ಧರ್ಮ ಪರಂಪರೆಯಲ್ಲಿ ಪ್ರಾಚೀನ ಕಾಲದಿಂದಲೂ ಜನಗೋತ್ರ ಪ್ರವರ್ತಕ ಋಷಿಗಳು ಪ್ರಮುಖರೆನಿಸಿದ್ದಾರೆ. ಇವರಲ್ಲಿ ಸಹಗೋತ್ರ ವಿವಾಹ ನಿಷಿದ್ಧ, ಗೋತ್ರದ ಋಷಿಗಳೆಂದರೆ, ವಿಶ್ವಾಮಿತ್ರ, ಭಾರದ್ವಾಜ, ಜಮದಗ್ನಿ, ಗೌತಮ, ವಸಿಷ್ಠ, ಕಾಶ್ಯಪ, ವೈಶಂಪಾಯ, ಕೌಶಿಕ, ಶಾಂತಣ್ಯ, ವತ್ಸ, ಕೌಂಡಿನ್ಯರಾಗಿದ್ದಾರೆ. ಗೋತ್ರ ಋಷಿಗಳ ಹಿನ್ನೆಲೆಯಲ್ಲಿ ಹಲವು ವಂಶಗಳು ಕ್ಷತ್ರಿಯಲ್ಲಿವೆ *(ರಾಮಕ್ಷತ್ರಿಯ ಕುಲೋತ್ಪತ್ತಿ, ಶಿವರಾಮಯ್ಯ ಬಿ, ಪುಟ-೧೩, ೧೯೪೯).* ಮುಖ್ಯವಾಗಿ ಸೂರ್ಯವಂಶ, ಚಂದ್ರವಂಶ, ಅಗ್ನಿವಂಶ, ನಾಗವಂಶವೆಂದು ಗುರುತಿಸಬಹುದು.

ಸೂರ್ಯವಂಶ, ಚಂದ್ರವಂಶ, ಅಗ್ನಿವಂಶ, ನಾಗವಂಶ, ವಂಶಗಳನ್ನು ಮುಖ್ಯ ಋಷಿಮುನಿಗಳ ಮತ್ತು ವೇದಗಳಲ್ಲಿ ಈ ವಂಶಗಳನ್ನು ಕ್ಷತ್ರಿಯ ಸಮುದಾಯದ ಪೂರ್ವಜರೆಂದು ಪರಿಗಣಿಸಲಾಗಿದೆ.

ಅವರ ಹೆಸರಿನಿಂದ ಗೋತ್ರಗಳ ವ್ಯವಸ್ಥೆ ಪ್ರಾರಂಭವಾಗಿದೆ. ಗೋತ್ರಾ ಋಷಿಗಳೆಂದರೆ, ಒಂದು ಕುಲದ ಜನಕ ಅಥವಾ ಕುಲದಗುರು ಎಂದರ್ಥ. ಪ್ರವರ ಋಷಿಗಳನ್ನು ಗೋತ್ರ ಋಷಿಗಳ ಪಿತಾಮಹ ಎಂದು ಹೇಳಲಾಗುತ್ತದೆ. ವೈದಿಕ ಹಿಂದೂ ಅನುಯಾಯಿಗಳನ್ನು ಅನೇಕ ಧಾರ್ಮಿಕ ಸಮಾರಂಭಗಳಿಗೆ ಗೋತ್ರ ಮತ್ತು ಪ್ರವರ ತಿಳಿದುಕೊಳ್ಳುವದು. ಅಗತ್ಯವಾಗಿದೆ. ಮದುವೆ, ಮರಣಾನಂತರ ಕಾರ್ಯಕ್ರಮಗಳಾದ ಶ್ರಾದ್ಧಪಕ್ಷ, ಉತ್ತರ ಕ್ರಿಯೆ, ಹಾಗೂ ಹುಟ್ಟಿನಿಂದಲೂ ಮರಣದವರೆಗೂ ಧಾರ್ಮಿಕ ಆಚರಣೆಗಳಲ್ಲಿ ಗೋತ್ರಗಳ ಬಳಕೆ ಬಹುಮುಖ್ಯ ಪಾತ್ರವಹಿಸುತ್ತವೆ. ಸಮುದಾಯದಲ್ಲಿ ವ್ಯಕ್ತಿಯು ಧಾರ್ಮಿಕ ಕ್ರೀಯೆಗಳನ್ನು ಕೈಗೊಂಡಾಗ ಆ ಸಮಯದಲ್ಲಿ ತನ್ನ ಪೂರ್ವಜರ ಮತ್ತು ವಂಶಜರ ನೆನಪು ಮಾಡಿಕೊಳ್ಳುವುದು ಬಹುಮುಖ್ಯವಾಗಿರುತ್ತದೆ. ಆಗಾ ಈ ಗೋತ್ರ ಮತ್ತು ಪ್ರವಗಳು ಬಗ್ಗೆಹೇಳಲಾಗುತ್ತದೆ.

ಬ್ರಾಹ್ಮಣರು ಹೇಳುವುದೇನೆಂದರೆ, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಸ್ವತಂತ್ರವಾದ ಗೋತ್ರ ಮತ್ತು ಪ್ರವರಗಳನ್ನು ಹೊಂದಿರಲಿಲ್ಲ. ಆದ್ದರಿಂದ ಅವರು ಗೋತ್ರ ಮತ್ತು ಪ್ರವರಗಳನ್ನು ಕುಟುಂಬದ ಅರ್ಚಕರಿಂದ ಪಡೆದುಕೊಳ್ಳುತ್ತಿದ್ದರು. ಆದರೆ ಇದು ನಿಜವಾದ ಸಂಗತಿಯಲ್ಲ. ಸಂಶೋಧನೆಯ ಕಾರ್ಯಕ್ಷೇತ್ರದಿಂದ ತಿಳಿಯುವುದೇನೆಂದರೆ, ವಾಸ್ತವೇ ಬೇರೆ ಇದೆ. ಬ್ರಾಹ್ಮಣರು ಕ್ಷತ್ರಿಯರಿಗೆ ಗೋತ್ರ ಮತ್ತು ಪ್ರವರಗಳನ್ನು ಧಾರಣಮಾಡಿದ್ದಾರೆ. ಬ್ರಾಹ್ಮಣರು ತಮ್ಮನ್ನು ಏಳು ಯೋಗ್ಯ ಋಷಿಗಳಾದ ಅಂಗಾರಿಸ, ಭೃಗು, ವಿಶ್ವಾಮಿತ್ರ, ಕಶ್ಯಪ, ವಸಿಷ್ಠ, ಅತ್ರಿ, ಮತ್ತು ಅಗಸ್ತಿ ಋಷಿಗಳ ಗೋತ್ರದವರೆಂದು ಪರಿಗಣಿಸಲಾಗಿದೆ. ಇವರಲ್ಲಿ ವಿಶ್ವಾಮಿತ್ರ ಮುನಿಗಳು ಕ್ಷತ್ರಿಯರಾಗಿದ್ದರೆ, ಕೌಶಿಕ ಗೋತ್ರದ/ಮುನಿಗಳು ಸಹ ಕ್ಷತ್ರಿಯರಾಗಿದ್ದಾರೆ. ಕೆಲವೊಂದು ಮೂಲಗಳ ಪ್ರಕಾರ ವಿಶ್ವಾಮಿತ್ರರ ಕೌಶಿಕರನ್ನು ಭೃಗು ಗೋತ್ರದ ಕುಟುಂಬಗಳು ಅನುಸರಿಸಿವೆ.

ಬೆಡಗುಗಳ ವಿವರಗಳನ್ನು ತಿಳಿದುಕೊಳ್ಳುವುದರಿಂದ ಬೆಡಗಿನ ಹೆಸರಿನ ಮೂಲ, ಪರಸ್ಪರ ಸಂಬಂಧ, ಆರಾಧನೆಯ ಕೇಂದ್ರಗಳು, ಮನೆದೇವರುಗಳು ಮತ್ತಿತರ ವಿವರಗಳನ್ನು ತಿಳಿದುಕೊಳ್ಳಬಹುದಾಗಿದೆ. ಈ ದೃಷ್ಟಿಯಿಂದ ಕ್ಷತ್ರಿಯರ ಬೆಡಗುಗಳ ವಿವರಗಳನ್ನು ತಿಳಿದುಕೊಳ್ಳುವುದು ಅಗತ್ಯವಿದೆ. ಕ್ಷತ್ರಿಯರಲ್ಲಿ ಸುಮಾರು ನೂರಕ್ಕಿಂತಲೂ ಹೆಚ್ಚಿನ ಸಂಖ್ಯೆಯ ಬೆಡಗುಗಳಿವೆ. ಇವುಗಳನ್ನು ಕೆಳಕಂಡಂತೆ ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಕ್ಷತ್ರಿಯ ಧರ್ಮದ ಮೂಲ ಕುಲ ಹಾಗೂ ವಂಶವಾಹಿನಿ ಗೋತ್ರಗಳು ಪ್ರಮುಖ ಪಾತ್ರವಹಿಸುತ್ತವೆ. ಈ ಬೆಡಗುಗಳು ಹೇಗೆ ರೂಢಿಯಲ್ಲಿ ಬಂದವು ಎಂಬುದನ್ನು ಮತ್ತು ಅವುಗಳ ಪಟ್ಟಿಯನ್ನು ಈ ಕೆಳಕಂಡಂತೆ ನೋಡಬಹುದು. ಕ್ಷತ್ರಿಯನು 'ಕ್ಷತ್ರಿಯ ಧರ್ಮದ' ಎಲ್ಲ ನಿಯಮ ಹಾಗೂ ವೇದಾಧ್ಯಯನದ ನಂತರ ರಾಜನ ಸಮ್ಮುಖದಲ್ಲಿ ಪರೀಕ್ಷೆಯನ್ನು ಏರ್ಪಡಿಸಿ ವಿಜಯಶಾಲಿಯಾದವನು ಅವನ ವಿದ್ಯೆಗೆ ತಕ್ಕ ಅಧಿಕಾರ ಜವಬ್ದಾರಿಯನ್ನು ವಹಿಸಿಕೊಳ್ಳುತ್ತಿದ್ದ. ಸಾಮ್ರಾಜ್ಯಧಿಪತಿ ರಾಜನ ಆಸ್ಥಾನದಲ್ಲಿ ಪ್ರಜೆಗಳ ರಕ್ಷಣೆ ಹಾಗೂ ಶಾಂತಿಯನ್ನು ಕಾಪಾಡಲು ಹಲವು ಅಧಿಕಾರಗಳನ್ನು ಸ್ವಯಂ ಪ್ರೇರಿತವಾಗಿ ಹಂಚಿಕೊಳ್ಳುತ್ತಿದ್ದ, ಯಾವ ಹುದ್ದೆಯಲ್ಲಿಯೂ ತಾರತಮ್ಯತೆಯನ್ನು ತೋರಿಸುತ್ತಿರಲಿಲ್ಲ. ಅವರವರ

ಅನುಕೂಲಗಳಿಗೆ ತಕ್ಕಂತೆ ರಾಜ್ಯಭಾರವನ್ನು ಮಾಡುತ್ತಿದ್ದರು. ರಾಜ್ಯದ ರಕ್ಷಣೆಗೆ ಬೇಕಾದ ವ್ಯವಸ್ಥೆಯನ್ನು ರಾಜನ ಮಾರ್ಗದರ್ಶನದಲ್ಲಿ ಮಂತ್ರಿಮಂಡಲದ ಮೂಲಕ ಸೇನಾಧಿಪತಿ, ಗುಪ್ತಚರ ಮೂಲಕ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಹಾಗೇ ಕೆಲವು ಕಾರ್ಯಗಳನ್ನು ಅಗತ್ಯಕ್ಕೆ ತಕ್ಕ ಹಾಗೆ ವಂಶಪಾರಂಪರಿಕವಾಗಿ ನಿರ್ವಹಿಸಿಕೊಂಡು ಬರುತ್ತಿದ್ದರು. ಹೀಗೆ ಇನ್ನುಳಿದ ಸಮಯದಲ್ಲಿ ಸೈನಿಕರಾಗಿ ಮತ್ತು ಕೃಷಿಯ ಕಡೆ ಒಲವು ತೋರಿಸುತ್ತಿದ್ದರು. ಹೀಗೆ ಅವರ ಮನೆಗಳ ಮನೆತನಗಳ ವಂಶ ಪಾರಂಪರಿಕ ಜ್ಞಾನ ವೃತ್ತಿಗಳೇ ಇಂದು ಬೆಡಗುಗಳಾಗಿ ಅಸ್ತಿತ್ವಕ್ಕೆ ಬಂದಿವೆ. ಈ ಬೆಡಗುಗಳ ಆಧಾರದ ಮೇಲೆ ವೈವಾಹಿಕ ಸಂಬಂಧಗಳನ್ನು ನಿಶ್ಚಿಯಿಸಲಾಗುತ್ತದೆ.

**ಸಸ್ಯವಾಚಿ ಬೆಡಗುಗಳು:** ಅಗಿಲ, ಅಲೆ, (ಆಲೂಗಡ್ಡೆ), ಅರಶಿಣ, ಬಾಳೆ, ಬೇಲದ, ಹೊಂಗೆ ಕಗಲ/ ಕಗ್ಗಲಿ, ನೇರಳೆ, ಎಕ್ಕೇಲರು, ಮಲ್ಲಿಗೆ, ಸಂಪಿಗೆ, ಕಲಗ, ಇವೆಲ್ಲಾ ಮರ, ಬಳ್ಳಿ ಅಥವಾ ಸಸ್ಯಮೂಲದಿಂದ ಬಂದ ಬೆಡಗುಗಳಾಗಿವೆ. ಅಗಿಲ ಒಂದು ಬಗೆಯ ಸುವಾಸನೆಯ ಅಥವಾ ಪರಿಮಳಯುಕ್ತ ಮರ, ವೃಕ್ಷ ಮೂಲದಿಂದ ಈ ಬೆಡಗನ್ನ ಗುರುತಿಸಲಾಗಿದೆ. ಅದೇ ರೀತಿ ಬೇಲದ, ಹೊಂಗೆ, ನೇರಳೆ, ಸಂಪಿಗೆ ಇವೆಲ್ಲ ಹಣ್ಣಿನ, ಹೂವಿನ ಮರಗಳಾಗಿದ್ದು, ಅತ್ಯಂತ ಉಪಯುಕ್ತ ಸಸ್ಯ ಮೂಲಕ ಬೆಡಗುಗಳಾಗಿವೆ. ಎಕ್ಕೇಲರೂ ಸಸ್ಯ ಮೂಲದ ಬೆಡಗಾಗಿದೆ. ಇವೆಲ್ಲವೂ ಬಹುತೇಕ ಕೃಷಿ ಮೂಲವನ್ನು ಕುರಿತು ಬೆಡಗುಗಳಾಗಿವೆ. ಕ್ಷತ್ರಿಯರು ಹೆಚ್ಚಾಗಿ ಕೋಟೆಗಳಲ್ಲಿ ಮತ್ತು ಕೃಷಿಯಲ್ಲಿ ವೃತ್ತಿಯನ್ನು ಅವಲಂಬಿಸಿರುವುದರಿಂದ ಈ ಹಿನ್ನೆಲೆಯಲ್ಲಿ ಈ ಹೆಸರುಗಳು ಇವರ ಬೆಡಗುಗಳಾಗಿವೆ.

**ಪ್ರಾಣಿವಾಚಿ ಬೆಡಗುಗಳು:** ಆನೆ, ಹುಲಿವನ, ಗೋವು, ಕಸ್ತೂರಿ, ಕಿಂದುರೆ/ಕುದುರೆ, ಮಣಕ/ಮನುಕ ನರಿ, ಕೋಣ, ಇವೆಲ್ಲಾ ಪ್ರಾಣಿ ಮೂಲದಿಂದ ಬಂದ ಬೆಡಗುಗಳಾಗಿವೆ.

**ಪದಾರ್ಥವಾಚಿ ಬೆಡಗುಗಳು:** ಕೊತ್ತಂಬರಿ, ಸಕ್ಕರೆ, ಸಣ್ಣಕ್ಕಿ, ಬೆಲ್ಲದವರು, ತುಪ್ಪ ಮುಂತಾದ ಬೆಡಗುಗಳು ದಿನನಿತ್ಯ ಬಳಸುವಂತಹ ಪದಾರ್ಥಗಳ ಹಿನ್ನೆಲೆಯಿಂದ ಬಂದ ಬೆಡಗುಗಳಾಗಿವೆ.

**ವೃತ್ತಿವಾಚಿ ಬೆಡಗುಗಳು:** ಕೃಷಿ ಕೆಲಸದಲ್ಲಿ ತೊಡಗಿಸಿಕೊಂಡಿದ್ದ ಅಥವಾ ಇಂತಹ ಕೃಷಿ ಉಪಕರಣವನ್ನು ತಯಾರು ಮಾಡುತ್ತಿದ್ದವರನ್ನು ಈ ಹೆಸರಿನ ಬೆಡಗಿನಿಂದ ಗುರುತಿಸಲಾಗಿದೆ. ಕುಂಬಲಾರು ಕುಂಭ ಅಂದರೆ ಗಡಿಗೆ ಅಂದರೆ ಗಡಿಗೆ, ಮಾಡುವ ಅಥವಾ ಮಾರುವ ವೃತ್ತಿಯವರಾಗಿದ್ದಿರಬಹುದು. 'ಅರಸು' ರಾಜಮನೆತನಕ್ಕೆ ಸೇರಿದವರು ಅರಸಾಗಿ ಆಳ್ವಿಕೆ ಮಾಡಿದ್ದವರಾದ ಕಾರಣ ಅಥವಾ ಅವರಿಗೆ ಸಹಾಯಕರಾಗಿದ್ದ ಕಾರಣ ಈ ಹೆಸರು ಅವರ ಬೆಡಗಾಗಿರುವ ಸಾಧ್ಯತೆ ಇದೆ. ರಾಜಣದವರು ಅಂದರೆ, ದೊರೆ, ಅರಸು, ಪ್ರಭು, ಬಹುಶಃ ಇವರು ಕ್ಷತ್ರಿಯ ವಂಶದಲ್ಲಿ ಹುಟ್ಟಿದವರಾಗಿದ್ದರಿಂದ ಅಥವಾ ರಾಜರಾಗಿ ಆಳ್ವಿಕೆ ಮಾಡಿದ್ದರಿಂದ ಈ ಹೆಸರು ಇವರ ಬೆಡಗಾಗಿದ್ದಿರಬಹುದು. ಕಠಾರಿ ಅಂದರೆ ಕಿರುಗತ್ತಿ ಅಥವಾ ಚಾಕು ಎಂಬ ಅರ್ಥವಿದೆ. ಕಠಾರಿಯ ಕ್ಷತ್ರಿಯ(ಭಾ: ೭.೪.೪) ಮೂಲವನ್ನು ಸೂಚಿಸುವ ಆಯುಧ ನಾಮವಾಗಿದ್ದು, ವಿಶೇಷವಾಗಿ ಯುದ್ಧದ ಸಂದರ್ಭದಲ್ಲಿ ಬಳಸುವ ಆಯುಧವಾಗಿದೆ. ಯುದ್ಧದಲ್ಲಿ ಭಾಗವಹಿಸುತ್ತಿದ್ದಂತಹ ಗುಂಪಿನವರ ಬೆಡಗಾಗಿದೆ. ಈ ಮೇಲಿನ

ಎಲ್ಲಾ ಬೆಡಗುಗಳು ಕ್ಷತ್ರಿಯರು ಕೈಗೊಂಡಿದ್ದ ಅಥವಾ ನಿರ್ವಹಿಸಿದ ವೃತ್ತಿಹಿನ್ನೆಲೆಯಿಂದ ಬಂದ ಬೆಡಗುಗಳಾಗಿವೆ.

**ಸ್ಥಳವಾಚಿ ಬೆಡಗುಗಳು:** ರಾಯದುರ್ಗದವರು, ನಿಡುಗಲ್ಲಿನವರು ಪಲ್ಲಾಗೆರೆಯವರು, ಗುಂತಕಲ್ಲಿನವರು ಇವುಗಳು ಸ್ಥಳ ಮೂಲದಿಂದ ಬಂದ ಬೆಡಗುಗಳಾಗಿವೆ. ಬಹುಶಃ ರಾಯದುರ್ಗದ ಕಡೆಯಿಂದ ಬಂದ ನೆಲಸಿದವರು ರಾಯದುರ್ಗದ ಕ್ಷತ್ರಿಯರು ಇವರಲ್ಲಿ ವೈಷ್ಣವ ಮತ್ತು ತಿರುಪತಿ ವೆಂಕಟರಮಣನಿಗೆ ನಡೆದುಕೊಳ್ಳುವರಿದ್ದಾರೆ. ಸ್ಥಳವಾಚಿಯಾಗಿ ಬೆಡಗುಗಳಲ್ಲಿ ನಾವು ಗುರುತಿಸಬಹುದಾಗಿದೆ.

**ನಂಬಿಕೆವಾಚಿ ಬೆಡಗುಗಳು:** ಗಂಧವನ್ನು/ಚಂದನ ಧೂಪನವರು ದಶಮುಖದವರು, ಹೊನ್ನದಾಸನವರು, ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರ ಬೆಡಗುಗಳು ನಂಬಿಕೆಯ ಹಿನ್ನಲೆಯಿಂದ ಬಂದಾಗಿವೆ. ಪರಿಮಳಯುಕ್ತವಾದ ಗಂಧದ ಮರದಿಂದ ಅಥವಾ ಹಣೆಯ ಮೇಲೆ ಇಟ್ಟುಕೊಳ್ಳುವ ಶ್ರೀಗಂಧದಿಂದ ಈ ಬೆಡಗು ಗುರುತಿಸಲ್ಪಟ್ಟಿದೆ. ಹಾಗೂ ನಾಮದವರು ವೆಂಕಟರಮಣ ಭಕ್ತರಾದ ಕ್ಷತ್ರಿಯರು ಎರಡು ಬಿಳಿ ನಾಮ ಮತ್ತು ಒಂದು ಕೆಂಪು ನಾಮವನ್ನು ಧರಿಸುತ್ತಿದ್ದರು. ಬಲ ಮತ್ತು ಎಡಕ್ಕೆ ಬಿಳಿ ನಾಮವನ್ನು ಅವರೆಡರ ನಡುವೆ ಕೆಂಪು ನಾಮವನ್ನು ಧರಿಸುತ್ತಿದ್ದರು. ಆ ಕಾರಣಕ್ಕೆ ಹೊನ್ನದಾಸನವರು ಆ ಬೆಡಗು ಹೊಂದಿದ್ದಾರೆ. ದಶಮುಖದವರು ಅಂದರೆ, ತಾವು ಆಳುತ್ತಿದ್ದ ಕೋಟೆಯನ್ನು ಹತ್ತು/ದಶ ಮುಖದಿಂದ ನೋಡಿಕೊಳ್ಳುತ್ತಿರುವುದರಿಂದ ಇವರನ್ನು ದಶಮುಖ ಬೆಡಗುಗಳೆಂದು ಕರೆಯುತ್ತಾರೆ.

**ದ್ರವ್ಯವಾಚಿ ಬೆಡಗುಗಳು:** ಬೆಳ್ಳಿಯವರು ಹೊನ್ನಿನವರು ಹೊನ್ನಮೀಸೆ, ಹೊನ್ನ ಕಾಳೇನ್ನವರ, ಹೊನ್ನರೆಡ್ಡೇರ್, ಕಂಚಿನವರು, ರನ್ನದವರು, ಮುತ್ತಿನವರು, ಬೆಳ್ಳಿಹೊನ್ನು ಕಂಚು, ರನ್ನ, ಮುತ್ತು, ಮೊದಲಾದವುಗಳು ದ್ರವ್ಯಕ್ಕೆ ಸಂಬಂಧಿಸಿದವುಗಳಾಗಿವೆ. ವಸ್ತು ರೂಪದಲ್ಲಿರುವ ಐಶ್ವರ್ಯ/ಸಂಪತ್ತು ಅಥವಾ ಧನದ ಮೂಲಗಳಾಗಿರುತ್ತವೆ. ಈ ಮೇಲಿನ ಎಲ್ಲ ಬೆಡಗುಗಳು ಶ್ರೀಮಂತಿಕೆಯ ಮೂಲದಿಂದ ಬಂದ ಬೆಡಗುಗಳಾಗಿವೆ. ಹೊನ್ನಿನವರು ಅಣ್ಣ ತಮ್ಮಂದಿರು ಭಾಗವಾಗುವಾಗ ಒಬ್ಬ ಹೊನ್ನು ಜಾಸ್ತಿ ತೆಗೆದು ಕೊಂಡನಂತೆ. ಅದಕ್ಕೆ ಆ ವಂಶದವರು ಹೊನ್ನಿನವರಾದರಂತೆ ಕಾಣುತ್ತದೆ. ಇದೇ ರೀತಿ ಬೆಳ್ಳಿ, ಕಂಚು ರನ್ನ ಮುತ್ತು ಮೊದಲಾದವುಗಳನ್ನು ಹೆಚ್ಚು ಹೊಂದಿದ್ದರಿಂದ ಈ ಹೆಸರುಗಳು ಇವರ ಬೆಡಗುಗಳಾಗಿ ಬಂದಿರುವ ಸಾಧ್ಯತೆ ಇರುತ್ತದೆ.

**ಇತರೆ ಬೆಡಗುಗಳು:** ಅಂದರೆ ಈ ಮೇಲಿನ ಯಾವುದೇ ವರ್ಗಕ್ಕೆ ಅನ್ವಯಿಸದ ಅದೆಷ್ಟೋ ಬೆಡಗುಗಳು ಈ ಸಮುದಾಯದಲ್ಲಿವೆ. ಅಲ್ಲದೆ ಅವುಗಳನ್ನು ಅರ್ಥೈಸುವುದು ಅತ್ಯಂತ ಕಠಿಣವಾದ ವಿಷಯವಾಗಿದೆ. ಅಂತಹ ಎಲ್ಲಾ ಬೆಡಗುಗಳನ್ನು ಇತರೆ ಬೆಡಗುಗಳಲ್ಲಿ ಸೇರಿಸಿಕೊಳ್ಳಲಾಗಿದೆ. ಉದಾಹರಣೆಗೆ, ಮಂದಾಗಾಣೆ, ಗಂಪಿಲವರು, ಮತಖಾನೆನವರು ಮುಂತಾದ ಬೆಡಗುಗಳ ಬಗ್ಗೆ ಖಚಿತವಾದ ಮಾಹಿತಿಯನ್ನು ಪಡೆಯುವುದ ಅತ್ಯಂತ ಕಷ್ಟ ಸಾಧ್ಯವಾದ ಮಾತಾಗಿದೆ. ಇಂತಹ ಅನೇಕ ಬೆಡಗುಗಳ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ.

ಬೆಡಗಳು ಅವರವರ ಭಾಷಾ ಅನುಗುಣವಾಗಿ ಗೋಚರಿಸಲಾಗಿವೆ. ಹೀಗೆ ವಂಶಪಾರಂಪರಿಕವಾಗಿ ಮುಂದುವರೆಯಲಿವೆ. ಅವುಗಳ ಪಟ್ಟಿಯನ್ನು ನಾವು ನೋಡುವುದಾರೆ, ಆನೆನ್ನವರ, ಚಾಪನ್ನವರ,

ಮುತ್ತನ್ನವರ, ಕವಲನ್ನವರ, ಗೋ ಗೋಲ್ಲರವರು, ದ್ಯಾಡಲಾರ, ಆಡನ್ನವರ, ಹೊನ್ನಗೊಚಲು, ಮಂಟನ್ನವರು, ಆಡ್ಲವರು, ಅಂಗನಿವರ, ಚೌಡಲ್ಲವರ, ಹೊನ್ನ ದೇವಗನ್ನವರ, ಬಾಳೆಹೊನ್ನವರ, ಸುರತ್‌ನವರ, ಚವಡಲಾರ, ಭತ್ತನವರ, ಅರಸುಕುಮಾರ, ದೇವಶೆಟ್ಟ, ನುಗ್ಗನೂರಲರ, ತುಪ್ಪದಾರ, ವಿಶ್ವಾಮಿತ್ರ, ಬೆಳಲವರ, ಪ್ರಧಾನಿಯವರು, ನಾಗಲವರು, ಬ್ಯಾಳೆಸಲವರು, ಧೂಪಿನವರು, ಏರಬಲಿಯವರು, ಕಡಗದವರು, ಎಕ್ಸೆಲ್‌ನವರು, ಬ್ಯಾಳೆಸಲವರು, ಅರಿಷಣದವರು, ಹಗ್ಗದವರು, ಒಡೆಗಲವರು, ಹಗ್ಗಬಣೆನ್ನವರು, ಅಮೃತಕನೆನವರ, ಶ್ಯಾಂಡಿಲ್ಯವರ, ಚೌಡನ್ನವರ, ಹೊನ್ನಕೌಲನ್ನವರ, ಹೊನ್ನಗೋಶಾಲರ, ಚಾಳೇರ, ತಮಡೆಣ್ಣವರ, ದೇವಶೇಟ್ಟಿ, ಹೊನ್ನ ಅಮೃತಕಾನೆನ್ನವರ, ಮೂಡಲವರ, ಸಾವಂತ್ಲರ್, ಹೊನ್ನಪಡಲುವರ, ಚನ್ನೆನ್ನವರ, ಹೊನ್ನಚೌಡಲ್ಲರ, ಹೊನ್ನಗೋವಲ್ಲರು, ಮಂದಾಗಾಣೆ, ಸಣ್ಣಕ್ಕಿ, ಬೆಳ್ಳೆಳವರು, ಚಿವಮಲವರು, ಸಣ್ಣಲವರು, ಶೆಟ್ಟಿಲವರು, ಗುಪ್ಪಲವರು, ಹನ್ನೆನ್ನವರು, ದಶಕಂಶ, ಗಂಪಿಲವರು, ಪುಲ್ಲಿನ್ನವರು, ಹಸಿಬೆಲವರು, ಮತಖಾನೆನವರು, ಹೊನ್ನಬನ್ನಿಯವರು, ಮಾನಿಕನವರುಕ ಹಂಗನವರು, ಬಾನೆಲವರು, ಉಂಗಂಡಲವರು, ತೇಜಲವರು, ನಿಳಿಗುರಿಲವರು, ಪ್ಪಿಲವರು, ಹಸಿಬೆವಲವರು, ಮಾಮಲಿನವರು, ತಲಗನವರ, ವೆಂಪಿಲವರು, ಆದ್ದಲವರು, ಧೂಪನವರು, ದ್ಯಾವಣೆಲವರು, ದಶಮುಖದವರು, ಹಂಡೆಹೆಣಕಿಲವರು, ಮಿಂಡಗುದ್ಲೆಲವರು, ಅನ್ನಿಲವರು ಹುರಪಲವರು, ಉದಗನವರು, ಉರಬಲಿವರು, ದ್ಯಾವಲವರು, ಕಳಸಿನವರ, ಗೊರಬಲವರು, ಬುದ್ನಮನೆತನದವರು, ಕರಿಹುಲಿಬಲೆನವರು, ಹೊನ್ನದ್ಯಾಸನವರು, ಮತ್ತಿನವರು ಸಾವಲವರು, ಗೊವಲವರು, ಬಾಳನ್ನವರ, ಹೊನ್ನರಿಶಂದವರ, ಆನೇಲರು, ಒಡಲಿನವರು, ನಾಗಲಾರ, ಕಮಲನಾರ, ಕೋರೆನವರ, ತಮಡೆಣ್ಣವರ, ಹೊನ್ನಬಾಲನ್ನವರ, ಹೋನ್ನಚಿನ್ನವರ, ದಸಕನವರ, ಹೊನ್ನ ಅಮತಕನ್ನೆನವರ ಹಾಲಿನೇರ, ಮಲ್ಲಿಗನಾರ, ಪಡುಲರ, ಹೊನ್ನದಳ್ಳಿದಾಸನ್ನವರ, ನೆರಕೋಲ್, ಫಷಲಾರ, ಹುಬ್ಬಲಿ, ಮಲ್ಲಿಗನವರ, ಹೊನ್ನದಾಸನವರ, ಹೊನ್ನ ಚಂದ್ರನ್ನವರ, ಭಾರದ್ವಜ, ಗಂಚೆನಾರ, ಜೇರಿಗೆಯವರ, ಹೊನ್ನ ಪಡುಲವರ, ಲಚ್ಚಪ್ಪನವರ, ಪಿಲ್ಲೆನವರ, ಚಂದನಗಣಿ, ಹೊನ್ನಬೆಣಲವರ, ಹೊನ್ನ ಬೆನ್ನನ್ನವರ, ಚಂದಗಣನ್ನವರ, ಹೊನ್ನಕೌವಡ್ಲಾರ, ಹೊನ್ನ ಆಡಲವರ, ಗಡನ್ನವರ, ಈ ಮೇಲ್ಕಂಡಂತೆ ನಾವು ಕ್ಷತ್ರಿಯರು, ಕ್ಷತ್ರಿ:ಕ್ಷತ್ರಿಯ, (ಹಿಂದೂ ಕ್ಷತ್ರಿಯ) ಕೋಟೆಕ್ಷತ್ರಿಯ, ಬೆಡಗುಗಳನ್ನು ಗುರುತಿಸಬಹುದಾಗಿದೆ(ಕ್ಷತ್ರಿಯ ಸಮಾಜದ ಬೆಡಗುಗಳು ದಿ ಕಲ್ಲಪ್ಪ ಗೋವಿಂದಪ್ಪ ಹಲಗತ್ತಿ).

ಪ್ರತಿಯೊಂದು ಜಾತಿ/ಸಮುದಾಯವರಲ್ಲಿ ಈ ಬೆಡಗುಗಳು ಕಂಡುಬರುತ್ತವೆ. ಹಾಗೇ ಸಾಮಾಜಿಕ ವ್ಯವಸ್ಥೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತವೆ. ಬಂಧುತ್ವ ಮತ್ತು ನೆಂಟಸ್ತಿಕೆಯನ್ನು ಗುರುತಿಸಿಕೊಳ್ಳುವುದು/ರಕ್ತಸಂಬಂಧವನ್ನು ನೋಡುವುದು, ಬೆಡಗುಗಳ ಮೂಲ ಉದ್ದೇಶವಾಗಿವಾದೆ. ಜನಾಂಗದ ವಿಕಾಸವಾದ ಬಹುತೇಕ ವರ್ಷಗಳ ನಂತರ ರಕ್ತ ಸಂಬಂಧ ವಿವಾಹ ಪದ್ಧತಿ (ಸೋಹದರ–ಸೋಹದರಿ ವಿವಾಹ ಪದ್ಧತಿ) ಅಸ್ತಿತ್ವದಲ್ಲಿದ್ದು ಹಲವು ತಲೆಮಾರುಗಳ ಕಾಲ ಈ ರೀತಿಯ ರಕ್ತ ಸಂಬಂಧಿ ವಿವಾಹ (ಸಹೋದರ–ಸಹೋದರಿ ವಿವಾಹ ಪದ್ಧತಿ) ಪದ್ಧತಿಯು ಸೂಕ್ತವಲ್ಲ ಎಂಬ ನಿರ್ಧಾರಕ್ಕೆ ಬಂದ ನಂತರ ಈ ವಿವಾಹಗಳನ್ನು ತಡೆಗಟ್ಟುವ ಉದ್ದೇಶದಿಂದ ಜನಾಂಗದ ಹಿತಚಿಂತಕರು

ಜನಾಂಗವನ್ನು ವಿವಿಧ ಗುಂಪುಗಳಾಗಿ ವಿಂಗಡಿಸಿ ಅವುಗಳನ್ನು ಬೆಡಗು ಅಥವಾ ಗೋತ್ರ ಎಂದು ಕರೆದು ಕೆಲವೊಂದು ಬೆಡಗುಗಳನ್ನು ರಕ್ತ ಸಂಬಂಧದ ಆಧಾರದ ಮೇಲೆ ಸೋಹದರ ಬೆಡಗುಗಳೆಂದು ಪರಿಭಾಪಿಸಿ ಅವುಗಳ ನಡುವೆ ಪರಸ್ಪರ ವಿವಾಹ ಸಂಬಂಧವನ್ನು ನಿಷೇಧಿಸಿದರು. ಈ ರೀತಿ ಸಹೋದರ ಬೆಡಗುಗಳನ್ನು ಹೊರತುಪಡಿಸಿ ಉಳಿದ ಬೆಡಗುಗಳ ನಡುವೆ ವಿವಾಹ ಸಂಬಂಧಗಳಿಗೆ ಅನವು ಮಾಡಿಕೊಟ್ಟರು.

ಒಟ್ಟಾರೆ ಜನಾಂಗದ ಹಿತ ಚಿಂತನೆಯ ಉದ್ದೇಶದಿಂದ ಬೆಡಗುಗಳನ್ನು ರೂಪಿಸಿಕೊಳ್ಳಲಾಗಿದೆ. ಪ್ರತಿಯೊಂದು ಬೆಡಗಿನವರಿಗೂ ಪ್ರತ್ಯೇಕ ಮನೆದೇವರುಗಳಿವೆ. ಅವರೆಲ್ಲರೂ ಅಣ್ಣ ತಮ್ಮಂದಿರಂತೆ ನಡೆದುಕೊಳ್ಳುತ್ತಾರೆ. ಒಂದೇ ಬೆಡಗು ಮತ್ತು ಒಂದೇ ಮನೆದೇವರಿಗೆ ಸಂಬಂಧ ಪಟ್ಟವರು ಸಾವು ನೋವು ಸೂತಕಗಳಲ್ಲಿ ಒಂದೇ ಮನೆಯವರಂತೆ ನಡೆದುಕೊಳ್ಳುತ್ತಾರೆ. ಒಟ್ಟಾರೆ ವಿವಿಧ ವಂಶಾವಳಿಯ ಗೋತ್ರಗಳು ಬೆಡಗುಗಳು ಗಂಡು ಸಂಬಂಧಕ್ಕೆ ಅನುಗುಣವಾಗಿ ರಚಿತವಾಗಿದ್ದು, ಸಹೋದರಿಕೆ ವಿವಾಹ ತಪ್ಪಿಸಿ ಆರೋಗ್ಯವಂತ ಸಧೃಡ ಸಮಾಜ/ಜನಾಂಗ ನಿರ್ಮಾಣ ಈ ಬೆಡಗುಗಳ ವಿಂಗಡಣೆಗೆ ಮುಖ್ಯ ಉದ್ದೇಶವಾಗಿರುತ್ತದೆ. ಸಗೋತ್ರ ಬೆಡಗಿನವರೊಂದಿಗೆ ವಿವಾಹ ಸಂಬಂಧಗಳನ್ನು ನಿಷೇಧಿಸಲಾಗಿದೆ. ಹಾಗೇನಾದರೂ ಒಂದೇ ಬೆಡಗಿನವರಲ್ಲಿ ವಿವಾಹ ಸಂಬಂಧಗಳು ಏರ್ಪಟ್ಟಲ್ಲಿ ಅವರನ್ನು ಜಾತಿಯಿಂದ ಬಹಿಷ್ಕರಿಸಲಾಗುತ್ತದೆ. ಪ್ರಸ್ತುತ ಸಂಶೋಧನೆಯು ಕ್ಷತ್ರಿಯರ ಸಾಮಾಜಿಕ ಅಧ್ಯಯನವನ್ನು ಕುರಿತಾಗಿರುವುದರಿಂದ ಮುಂದಿನ ಭಾಗದಲ್ಲಿ ಕ್ಷತ್ರಿಯರು, ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಅಥವಾ ಕೋಟೆಕ್ಷತ್ರಿಯ, ಇಂತಹ ನಾಮಸೂಚಿತ ಜಾತಿ ಸಮುದಾಯದಲ್ಲಿ ಆಚರಣೆಗೊಳ್ಳುವ ಬದುಕಿನ ಸಂದರ್ಭದ (ಜೀವನಾವರ್ತನದ) ಆಚರಣೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೫.೩. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರ ಜೀವನಾವರ್ತನ ಆಚರಣೆಗಳು**

ಸಂಸ್ಕೃತಿಯ ಅಧ್ಯಯನದಲ್ಲಿ ಆಚರಣೆಗಳ ಮತ್ತು ಸಂಪ್ರದಾಯಗಳ ಪಾತ್ರ ಅತ್ಯಂತ ಮಹತ್ವದ್ದಾಗಿರುತ್ತದೆ. ಸಂಪ್ರದಾಯಗಳೇ ಸಂಸ್ಕೃತಿಯ ಜೀವಾಳವಾದ್ದರಿಂದ ಮನುಷ್ಯನ ಜನನದಿಂದ ಮೊದಲುಗೊಂಡು ಸಾವಿನ ಮತ್ತು ಶವಸಂಸ್ಕಾರದವರೆಗೆ ಮಾಡುವ ಆಚರಣೆಗಳು ಸಂಪ್ರದಾಯಗಳು, ಹಬ್ಬ–ಹರಿದಿನಗಳು ಮನುಷ್ಯನ ಬದುಕನ್ನು ಪರಿಷ್ಕರಿಸಿ ಪವಿತ್ರಗೊಳಿಸುತ್ತವೆಂದು ನಂಬಲಾಗಿದೆ. ಸಂಪ್ರದಾಯಗಳು ಸಮಾಜದ ಒಟ್ಟಾರೆ ಜನನಗಳಿಂದ ಕೆಲವು ಪ್ರತಿಷ್ಠಿತ ವ್ಯಕ್ತಿಗಳಿಂದ ಮತ್ತೆ ಕೆಲವು ಧರ್ಮ ದೇವರುಗಳ ಭಯದಿಂದ ಹುಟ್ಟಿಕೊಂಡಿರುತ್ತವೆ *(ಬೋರಲಿಂಗಯ್ಯ ಹಿ ಚಿ, ದಾಸಪ್ಪ ಜೋಗಪ್ಪ, ಪುಟ–೨, ೨೦೦೪).* ಇಂತಹ ಸಂಪ್ರದಾಯ ಮತ್ತು ಆಚರಣೆಗಳ ಅಧ್ಯಯನವೇ ಸಂಸ್ಕೃತಿ ಅಧ್ಯಯನವಾಗಿದೆ. 'ಒಂದು ಜನಾಂಗದ ಸಂಸ್ಕಾರ ವಿಶೇಷವಾದ ಭದ್ರಬುನಾದಿಯ ಮೇಲೆ ರೂಪಿತವಾಗಿ ಪರಂಪರಾತವಾಗಿ ಆ ಸಮಾಜದಲ್ಲಿ ಮುಂದುವರೆಯುವ ವಿಶಿಷ್ಟ ಆಚರಣೆಗಳೆ ಸಂಪ್ರದಾಯಗಳು ಎನಿಸಿಕೊಳ್ಳುತ್ತವೆ *(ಅಂಬಳಿಕೆ ಹಿರಿಯಣ್ಣ, ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, ಪುಟ–೨೩೬, ೧೯೯೯).* ಹೀಗೆ ಜಾನಪದದ ಅವಿಭಾಜ್ಯ ಅಂಗಗಳಾದ ಆಚರಣೆಗಳು ಮತ್ತು ಸಂಪ್ರದಾಯಗಳು ಒಂದು ಪ್ರದೇಶದ ಒಂದು ಜನ ಸಮೂಹದ ಮನೋಭಾವವನ್ನು,

ಸಂಸ್ಕೃತಿಯನ್ನು ಸಮರ್ಥವಾಗಿ ಬಿಂಬಿಸುತ್ತವೆ. ಆದ್ದರಿಂದ ಕ್ಷತ್ರಿಯ ಸಮುದಾಯವು ಹುಟ್ಟಿನಿಂದ ಸಾವಿನವರೆಗೆ ಆಚರಿಸುವ ಸಂಪ್ರದಾಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಆದಿಮಾನವನಿಂದ ಆಧುನಿಕ ಮಾನವನವರೆಗೂ ತಮ್ಮನ್ನು ಒಳ್ಳೆಯವೋ ಅಥವಾ ಕೆಟ್ಟವೋ ಆದ ಅಮಾನುಷ ಶಕ್ತಿಗಳು ಸದಾ ಆವರಿಸಿವೆ ಎಂಬ ನಂಬಿಕೆ ಇದೆ. ಇವುಗಳಿಂದ ಆಗುವ ದುಷ್ಟ ಪರಿಣಾಮವನ್ನು ಹೋಗಲಾಡಿಸಲು ಅನೇಕ ಪರಿಹಾರಗಳನ್ನು ಕಂಡುಕೊಂಡನು. ಈ ನೆಲೆಯಿಂದ ಅನೇಕ ಸಂಸ್ಕಾರಗಳು ರೂಪಗೊಂಡವು. ಏಕೆಂದರೆ, 'ಸಂಸ್ಕಾರದಿಂದ ಪರಿಶುದ್ಧಗೊಂಡ ಮನುಷ್ಯನನ್ನು ದುಷ್ಟಶಕ್ತಿಗಳು ನೋಯಿಸಲಾರವು. ಎಂಬ ಭಾವನೆ ಎಲ್ಲ ಕಾಲದಲ್ಲೂ ಎಲ್ಲ ಜನಾಂಗಗಳಲ್ಲೂ ಉಂಟು. ಹಾಗಾಗಿ ಸಂಸ್ಕಾರಗಳು ಜೀವನಕ್ಕೆ ಪಾವಿತ್ರ್ಯತೆಯನ್ನು ತಂದುಕೊಡುತ್ತವೆ. ಈ ಭೌತಿಕ ಶರೀರಕ್ಕೆ ಅಂಟಿದ ಅಪವಿತ್ರತೆಯು ಸಂಸ್ಕಾರದ ಆಚರಣೆಯಿಂದ ತೊಡೆದು ಹೋಗುತ್ತದೆ (ಪುಟ್ಟಪ್ಪ ಕೆ ವಿ, (ಪ್ರಸಂ). ಯುಗಯಾತ್ರೀ ಭಾರತೀಯ ಸಂಸ್ಕೃತಿ, ಪುಟ–೨೯೨, ೧೯೭೦). ಎಂಬ ನಂಬಿಕೆ ಸಾಮಾನ್ಯವಾಗಿ ಇರುವುದರಿಂದ ಮನುಷ್ಯನ 'ಗರ್ಭಾವಸ್ಥೆಯಿಂದ ಮೊದಲುಗೊಂಡು ಶವಸಂಸ್ಕಾರದವರೆಗೆ ವಿವಿಧ ಹಂತಗಳಲ್ಲಿ ಅನೇಕ ಧಾರ್ಮಿಕ ಸಂಸ್ಕಾರಗಳಿಗೆ ವ್ಯಕ್ತಿ ಒಳಗಾಗುತ್ತಾನೆ. ಈ ಬಗೆಯ ಆಚರಣೆಗಳು ಎಲ್ಲ ಜನಾಂಗಗಳಲ್ಲೂ ಇರುತ್ತವೆ. ಈ ಸಂಸ್ಕಾರಗಳು ಪರಂಪರಾಗತವಾಗಿ ಬಂದ ಧಾರ್ಮಿಕ ವಿಧಿಗಳಾಗಿರುತ್ತವೆ. ಈ ಧಾರ್ಮಿಕ ವಿಧಿ ವಿಧಾನಗಳು ವ್ಯಕ್ತಿಯ ಬಾಹ್ಯ ಮತ್ತು ಆಂತರಿಕ ಬೆಳವಣಿಗೆಯ ಮೇಲೆ ಪ್ರಭಾವವನ್ನು ಬೀರುತ್ತವೆ ಮತ್ತು ಸಮಾಜದಲ್ಲಿ ಆತನ ವ್ಯಕ್ತಿತ್ವ ರೂಪಗೊಳ್ಳಲು ಕಾರಣವಾಗುತ್ತವೆ (ಸಣ್ಣರಾಮ. ಲಂಬಾಣಿ ಸಂಸ್ಕೃತಿ, ಪು–೬೮, ೧೯೯೯). ಈ ಹಿನ್ನೆಲೆಯಲ್ಲಿ ಕ್ಷತ್ರಿಯರು ಅನುಸರಿಸುವ ಜೀವನಾವರ್ತನದ ಸಂಪ್ರದಾಯಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

**೫.೩.೧. ಋತುಮತಿ ಆಚರಣೆ**

ಸಾಮಾನ್ಯವಾಗಿ ಹೆಣ್ಣು ಮಗಳು ಹನ್ನೆರಡು ಅಥವಾ ಹದಿಮೂರನೇ ವರ್ಷದಲ್ಲಿ ಋತುಮತಿ ಆಗುತ್ತಾಳೆ. ಅಂದರೆ ಮೈನೆರೆಯುತ್ತಾಳೆ. ಇದು ಹೆಣ್ಣು ಮಗಳಲ್ಲಿ ಹೆಂಗಸಾಗುವ ಸಹಜ ಪ್ರಕ್ರಿಯೆ ಇದು. ದೈಹಿಕ ಮತ್ತು ಮಾನಸಿಕ ಪರಿವರ್ತನೆಯ ಪರ್ವಕಾಲವಾಗಿರುವುದರಿಂದ ಋತುಮತಿಯಾದ ಹುಡುಗಿಯನ್ನು ಮನೆಯ ಒಂದು ಪ್ರತ್ಯೇಕ ಜಾಗದಲ್ಲಿ ಕುಳ್ಳಿರಿಸುತ್ತಿದ್ದರು. ಆರೋಗ್ಯದ ದೃಷ್ಟಿಯಿಂದ ಆಕೆ ಮನೆಯ ಎಲ್ಲಾ ಕಡೆ ತಿರುಗಾಡುವಂತಿಲ್ಲ. ಮನೆಮಂದಿಯನ್ನು ಮುಟ್ಟುವಂತಿಲ್ಲ. ಅವಳಿದ್ದಲ್ಲಿಗೆ ಊಟ ಉಪಚಾರ, ನಂತರ ಐದನೇ ದಿನ ತಲೆಯ ಮೇಲೆ ಮಂಗಳ ಸ್ನಾನಮಾಡಿ ದೇವರ ಕೋಣೆ ಪ್ರವೇಶ ಮಾಡಬೇಕು. ಈ ಹಿಂದೆ ಬಾಲ್ಯ ವಿವಾಹ ರೂಢಿಯಲ್ಲಿತ್ತು. ಋತುಮತಿಯಾಗುವ ಮುನ್ನವೇ ವಿವಾಹ ಬಂಧನಕ್ಕೆ ಒಳಪಡುತ್ತಿದ್ದಳು. ಮೊದಲ ಮುಟ್ಟಿನ ಅನುಭವ ಮನಸ್ಸಿನಲ್ಲಿ ಆತಂಕವನ್ನು ಉಂಟುಮಾಡುತ್ತಿತ್ತು. ಮನೋವೈಜ್ಞಾನಿಕ ದೃಷ್ಟಿಯಿಂದ ಮಾನಸಿಕವಾಗಿ ಪಕ್ವವಾಗುವಂತೆ ಈ ಜೀವನ ಚಕ್ರವನ್ನು ಧೈರ್ಯದಿಂದ ಸ್ವೀಕರಿಸಲು ಆ ಸಂದರ್ಭದಲ್ಲಿ ನಡೆಯುವ ವಿಧಿ ವಿಧಾನಗಳು ಪೂರಕವಾಗಿದೆ (ಸುರೇಶ ನಾರಾಯಣ ನಾಯ್ಕ, ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ–೭೩, ೨೦೧೧).

ಕ್ಷತ್ರಿಯರ ಹುಡುಗಿ ಮೈನೆರೆದಾಗ ಮೊದಲ ತುಪ್ಪ ಅವಲಕ್ಕಿ ಬಾಳೆಹಣ್ಣು ತಿನ್ನಲು ಕೊಡುತ್ತಾರೆ. ನೆರೆದ ನಂತರ ಆಕೆ ಹೊರಗಡೆ ಜಗುಲಿಯ ಕೋಣೆಯಲ್ಲಿರುತ್ತಾಳೆ. ಪ್ರತಿದಿನ ಸೀಗೆ ಅರಿಶಿಣ ಸ್ನಾನವನ್ನು ಮಾಡುತ್ತಾಳೆ. ಮೈನೆರೆದ ಯಾವುದೇ ಭೂತ ಪ್ರೇತದ ಗಾಳಿಶೋಕ ಬಾದೆ ಆಕೆಗೆ ತಟ್ಟದಿರಲು ಕಾಲಿನ ಬುಡದಲ್ಲಿ ಹಳೆ ಕಸಪರಕೆ ಮತ್ತು ತಲೆಯ ಬುಡದಲ್ಲಿ ಒಂದು ಕತ್ತಿ/ಕೊಡ್ಲೂಗ್ಲು, ಇಡುತ್ತಾರೆ. ಈ ಕ್ರಮ ಆಕೆ ಕುಳಿತಿರುವ ಜಾಗದಲ್ಲಿ ಲೋಬಾನ, ಕಹಿಬೇವು(ಬೇವಿನಸೊಪ್ಪು) ಮತ್ತಿತ್ತರ ಸೊಪ್ಪುಗಳನ್ನು ಹಾಕಿ ಹೊಗೆ ಹಾಕುತ್ತಿದ್ದರು. ಇದರಿಂದ ಸುತ್ತಮುತ್ತಲಿನ ಯಾವುದೇ ರೀತಿಯ ರೋಗಾಣು ಅವಳ ಆರೋಗ್ಯದ ಮೇಲೆ ಪರಿಣಾಮ ಬೀರಬಾರದು ಎಂಬುದು ಇದರ ಉದ್ದೇಶವಾಗಿತ್ತು. ಈಕೆ ಮುಟ್ಟ ಬಟ್ಟೆಯನ್ನು ಯಾರು ಸಹ ಬಳಸುವಂತಿಲ್ಲ. ನಂತರ ಋತುಮತಿಗೆ ಎಣ್ಣೆ ಹಾಕಿ ಸ್ನಾನ ಮಾಡಿಸಿ ಕುಡಿಯಲು ಗೋಮಯ ನೀಡುವರು. ನಂತರ ಸಿಂಗಾರಿಸಿ ಆಕೆಯ ಮಡಿಲಿಗೆ ಅಕ್ಕಿ, ಕಾಯಿ, ಬೆಲ್ಲ, ಬಾಳೆ, ಹಣ್ಣು, ಹೂವು ಮುಂತಾದ ಪಂಚದ್ರವ್ಯಗಳನ್ನು ಇಟ್ಟು ಉಡಿತುಂಬುತ್ತಾರೆ, ಇದನ್ನು ಉಡಿ ತುಂಬುವುದು ಎನ್ನುತ್ತಾರೆ. ಪಾಯಸ ಮಾಡುತ್ತಾರೆ. ಉಡುಗೊರೆಯಾಗಿ ತಂದೆ–ತಾಯಿ ಅವಳಿಗೆ ಬಟ್ಟೆಯನ್ನು ಕೊಡಿಸುತ್ತಾರೆ. ಇತ್ತೀಚಿನ ದಿನದಲ್ಲಿ ಮೂಲ ಸಂಸ್ಕೃತಿಯ ಸೊಗಡನ್ನು ಉಳಿಸಿಕೊಂಡಿಲ್ಲ. ಇದು ನಗರಕ್ಕಿಂತ ಹಳ್ಳಿ ಭಾಗದಲ್ಲಿ ಒಂದು ಕಟ್ಟುನಿಟ್ಟಿನ ಆಚರಣೆಯಾಗಿದೆ *(ಸುರೇಶ ನಾರಾಯಣ ನಾಯ್ಕ, ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ–೭೩, ೨೦೧೧).*

ಋತುಮತಿ ಆದ ೧೬ನೇ ದಿನಕ್ಕೆ 'ವಸಿಗೆ ಕ್ರಮ' ಅಥವಾ ಹುಡುಗಿ ಎಬ್ಬಿಸುವುದು ಅಥವಾ ಋತುಮತಿ ದೀಪಬೆಳಗಿಸುವ ಕಾರ್ಯಕ್ರಮ, ಆ ದಿನ ಬೆಳ್ಳಿಗೆ ಮಡಿವಾಳಗಿತ್ತಿ ಬಂದು ಮಡಿಯಾಗಿರುವ ಬಟ್ಟೆಯನ್ನು ತೆಗದುಕೊಂಡು ಹೋಗುತ್ತಾಳೆ. ದೇವರ ತೀರ್ಥ ಹಾಕಿ ಎಲ್ಲಾ ಕಡೆ ಶುದ್ಧ ಮಾಡಬೇಕು. ಹುಡುಗಿಯ ಮನೆಯವರು ಬಂಧುಗಳು, ನೆಂಟರಿಷ್ಟರು, ನೆರೆಹೊರೆಯವರು ಆಹ್ವಾನಿಸುತ್ತಾರೆ. ಸಹಿ ಊಟವನ್ನು ಸಿದ್ಧಮಾಡುತ್ತಾರೆ. ಮನೆಗೆ ಬಂಧು ಬಳಗದವರು ಬಂದ ಮೇಲೆ ಹುಡುಗಿಗೆ ನೀರಿನ ಶಾಸ್ತ್ರವನ್ನು ಮಾಡಿದ ಮೇಲೆ ಹೊಸ ಸೀರೆರವಿಕೆ ಹಾಕಿಸಿ ಹುಡುಗಿಯನ್ನು ಪಡಸಾಲೆಯಲ್ಲಿ (ಚಾವಡಿ) ಚಾಪೆಯ ಮೇಲೆ ಅಥವಾ ಇತ್ತೀಚಿನ ದಿನದಲ್ಲಿ ಕುರ್ಚಿಯ ಮೇಲೆ ಕುಳ್ಳರಿಸುವರು. (ಅನುಬಂಧ:೭.೪.೪. ಛಾಯಾಚಿತ್ರ ೧೬)ರಲ್ಲಿ ನೋಡಬಹುದು. ನಂತರ ಮುತ್ತೈದೆಯರು ಮಂಗಳದ್ರವ್ಯಗಳಾದ ಕುಂಕುಮ, ಹಳದಿ, ಹಚ್ಚಿ ಕೈಯಲ್ಲಿ ಉಡುಗೊರೆಕೊಟ್ಟು ಅಕ್ಷತೆ (ಹರಿವಾಣದಲ್ಲಿ ಇಟ್ಟು ಅಕ್ಕಿ) ಹಾಕಿ ಆಶೀರ್ವದಿಸುತ್ತಾರೆ. ಬಂದವರೆಲ್ಲ ಊಟೋಪಚಾರ ಸ್ವೀಕರಿಸಿಸುತ್ತಾರೆ.

**೫.೪. ಮದುವೆ**

ವಿವಾಹವೆಂಬುದು ವ್ಯಕ್ತಿಯ ಜೀವನದಲ್ಲಿ ಬ್ರಹ್ಮಚರ್ಯೆಯಿಂದ ಗೃಹಸ್ಥಾಶ್ರಮಕ್ಕೆ ಅಡಿ ಇಡುವ ಒಂದು ಪುಣ್ಯಕಾರ್ಯದ ಸಂಸ್ಕಾರ, ವ್ಯಕ್ತಿಯು ಮಾನಸಿಕವಾಗಿ, ದೈಹಿಕವಾಗಿ–ಸಿದ್ಧಗೊಳ್ಳುವ ಪ್ರಕ್ರಿಯೆ ಆಗಿರುತ್ತದೆ. ಗಂಡ ಹೆಂಡತಿ ನಿಜವಾದ ಅರ್ಥದಲ್ಲಿ ಅಜೀವ ಗಳೆಯರು ಅದು ಅನ್ಯೂನ್ಯ ಪ್ರೀತಿ, ಮಧುರತೆ, ಗೌರವಗಳ ಕೂಡುವಿಕೆಯಾಗಿರುತ್ತದೆ. ಈ ದೂರದೃಷ್ಟಿಯನ್ನು ಇಟ್ಟುಕೊಂಡು ಹಿರಿಯರು ವಿವಹಾವೆಂಬ ಪುಣ್ಯಕ್ರಿಯೆಗೆ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ವಿಶಾಲವಾದ ವ್ಯಾಪ್ತಿಯನ್ನು ರೂಪಿಸಿರುವರು.

ಮಾನವ ಜೀವನದಲ್ಲಿ ಮದುವೆ ಎಂಬುದು ಒಂದು ಮಹತ್ವದ ಘಟ್ಟ ಪ್ರಪಂಚದ ಎಲ್ಲೆಡೆ ಒಂದಲ್ಲ ಒಂದು ರೀತಿಯಲ್ಲಿ ಕಂಡುಬರುವ ಒಂದು ಸಾಮಾಜಿಕ ವ್ಯವಸ್ಥೆ. ಪ್ರತಿಯೊಂದು ಸಮಾಜದಲ್ಲೂ ಇರುವ ಸಾಮಾನ್ಯ ಗಂಡು ಹೆಣ್ಣುಗಳ ಲೈಂಗಿಕ ಸಂಯೋಗವೇ ವಿವಾಹವೆನಿಸಿಕೊಳ್ಳುತ್ತದೆ ಅಪರಿಚಿತವಾದ ಗಂಡು ಹೆಣ್ಣುಗಳನ್ನು ಒಂದು ಗೂಡಿಸಿ ಜೀವನ ಸಂಗಾತಿಗಳನ್ನಾಗಿ ಮಾಡುವ ವಿಶಿಷ್ಟ ಸಂದರ್ಭವಾದ ವಿವಾಹವು ಬದುಕಿಗೆ ಒಂದು ಭದ್ರತೆಯನ್ನು ಜವಾಬ್ದಾರಿಯನ್ನು ತಂದುಕೊಟ್ಟು ಜೀವನಕ್ಕೆ ಉತ್ಸಾಹವನ್ನು ಆನಂದವನ್ನು ತುಂಬುತ್ತದೆ. ಅಲ್ಲದೆ ಎರಡು ಕುಟುಂಬಗಳ ನಡುವೆ ಹೊಸ ಸಂಬಂಧವನ್ನು ಬೆಸೆಯುತ್ತದೆ *(ಅಂಬಳಿಕೆ ಹಿರಿಯಣ್ಣ, ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, ಪುಟ-೨೬೫, ೧೯೯೯).* ಒಟ್ಟಿನಲ್ಲಿ ವಿವಾಹ ಎಂಬುದು ಸಮಾಜದಿಂದ ಅಂಗೀಕರಿಸಲ್ಪಟ್ಟ ಸ್ತ್ರೀ ಪುರುಷರ ಸಮ್ಮಿಲನ ಎಂಬುದು ಅನೇಕ ಸಂಸ್ಕೃತಿ ಚಿಂತಕರ ಅಭಿಪ್ರಾಯವಾಗಿದೆ. ಆದರೂ ಭಾರತೀಯ ಹಿಂದೂಗಳ ಮನೋಭಾವದಲ್ಲಿ ವಿವಾಹ ಎಂಬುದು ಒಂದು ಪವಿತ್ರಕರ್ಮ ಎಂದು ಪರಿಗಣಿಸಲ್ಪಟ್ಟಿದೆ. ವಿವಾಹದ ಮುಖಾಂತರ ಸ್ತ್ರೀ–ಪುರುಷರಿಬ್ಬರು ದಂಪತಿಗಳೆನಿಸಿಕೊಳ್ಳುತ್ತಾರೆ. ವಿವಾಹದಿಂದಾಗಿ ಅವರ ಬದುಕಿಗೊಂದು ಭದ್ರತೆ ಮತ್ತು ಅನೇಕ ಬಗೆಯ ಜವಾಬ್ದಾರಿಗಳು ಲಭ್ಯವಾಗುತ್ತವೆ. ಒಟ್ಟರೆಯಾಗಿ ವಿವಾಹವು ಹೆಣ್ಣು ಗಂಡುಗಳ ನಡುವಿನ ಒಂದು ಪವಿತ್ರ ಸಂಬಂಧವಾಗಿದೆ. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ವದ ಪಾತ್ರವನ್ನು ವಹಿಸುತ್ತದೆ.

ಮಾನವ ವಿಕಾಸದ ಹಾದಿಯಲ್ಲಿ ಮನುಷ್ಯ ನಾಗರಿಕನಾಗುತ್ತಿದ್ದಂತೆ ಅವನು ರೂಪಿಸಿಕೊಂಡು ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ನೀತಿ ನಿಬಂಧನೆಗಳು, ಕಟ್ಟುಪಾಡುಗಳು ರೂಢಿಗೆಬಂದವು. ಅಂತೆಯೇ ಅವನು ರೂಢಿಸಿಕೊಂಡು ಸಾಮಾಜಿಕ ವ್ಯವಸ್ಥೆಯಲ್ಲಿ ಒಂದಾದ ವಿವಾಹಕ್ಕೆ ಸಂಬಂಧಪಟ್ಟ ವಿಧಿವಿಧಾನಗಳು ಆಯಾ ಜಾತಿ ಸಮುದಾಯಗಳು ರೂಪಿಸಿಕೊಂಡ ಆಶೋತ್ತರ ಮತ್ತು ಸಾಂಸ್ಕೃತಿಕ ನಡಾವಳಿಗಳಿಗೆ ಅನುಗುಣವಾಗಿ ಭೌಗೋಳಿಕ ಪ್ರದೇಶಕ್ಕೆ ತಕ್ಕಂತೆ ಬೇರೆ ಬೇರೆಯಾಗಿರುತ್ತವೆ. ಈ ಹಿನ್ನೆಯಲ್ಲಿ ಕ್ಷತ್ರಿಯ ಸಮುದಾಯವು ಮದುವೆಗೆ ಸಂಬಂಧಪಟ್ಟ ಆಚರಣೆಗಳು ಅನನ್ಯತೆಯಿಂದ ಕೂಡಿದ್ದು, ಅವರ ಸಂಸ್ಕೃತಿಯ ದ್ಯೋತಕವಾಗಿರುತ್ತವೆ.

ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯದಲ್ಲಿ ಮದುವೆಯು ಒಂದು ಪವಿತ್ರ ಬಂಧನವೆಂಬ ಭಾವನೆ ಇದೆ. ಇತರೆ ಹಿಂದೂಗಳಂತೆ ಇವರಲ್ಲಿ ಸಮಾನ ಬೆಡಗಿನವರೊಂದಿಗೆ ವಿವಾಹವಾಗುವುದನ್ನು ನಿಷೇಧಿಸಲಾಗಿದೆ. ಹೆಣ್ಣಿನ ಮತ್ತು ಗಂಡಿನ ತಾಯಿಯ ಕುಲ ಒಂದೇ ಆಗಿರಬಾರದೆಂಬ ನಂಬಿಕೆ ಇದೆ. ಒಂದಾದರೆ, ಅವರ ಸಹೋದರ ಸೋಹದರರಿರಾಗುತ್ತಾರೆ ಎಂಬ ಭಾವನೆ ಇವರಲ್ಲಿದೆ. ಬಹುತೇಕ ಹಿಂದೂ ಜಾತಿಗಳಲ್ಲಿರುವಂತೆ ಕ್ಷತ್ರಿಯರಲ್ಲಿ ಸೋದರ ಮಾವನ (Paternal Uncle) ಮಗಳು/ಮಗ, ಸೋದರತ್ತೆಯ ಮಗಳು/ಮಗ ಮತ್ತು ಅಕ್ಕನ ಮಗಳನ್ನು ಮದುವೆಯಾಗುವ ಪದ್ಧತಿ ಇವರಲ್ಲಿದೆ. ಪರಸ್ಪರ ವಿವಾಹ (Mutual Marriage) ಪದ್ಧತಿ ಮತ್ತು ಅಕ್ಕ ತಂಗಿಯರನ್ನು ಅಣ್ಣ ತಮ್ಮಂದಿರಿಗೆ ಕೊಟ್ಟು ವಿವಾಹ ಮಾಡುವ ಪದ್ಧತಿ ಸಹ ಇವರಲ್ಲಿ ಕಂಡುಬರುತ್ತದೆ.

ಕ್ಷತ್ರಿಯ ಸಮುದಾಯದಲ್ಲಿ ಮದುವೆಗೆ ಉನ್ನತ ಸ್ಥಾನವಿದೆ. ಇವರ ಮದುವೆಗಳು ತಮ್ಮದೆ ಆದ ವೈಶಿಷ್ಟ್ಯಗಳನ್ನು ಹೊಂದಿದೆ. ಪ್ರೇಮವಿವಾಹಕ್ಕೆ ಅವಕಾಶ ಕಡಿಮೆ ಎಂದು ಹೇಳಬೇಕು. ಪ್ರಾಯಕ್ಕೆ

ಬಂದಾಗ ತಂದೆ-ತಾಯಿಯವರು ಮದುವೆಯನ್ನು ನಿಶ್ಚಯಿಸುತ್ತಾರೆ *(ಸುರೇಶ ನಾರಾಯಣ ನಾಯ್ಕ, ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ-೭೫, ೨೦೧೧).* ಹುಡುಗಿಯನ್ನು ನೋಡಲು ಹಿರಿಯರು, ಮಿತ್ರರು, ಅಕ್ಕ-ಭಾವ ಹೀಗೆ ಐದಾರು ಜನ ಸೇರಿ ಹೋಗುತ್ತಾರೆ. ವಧುವನ್ನು ನೋಡಲು ಹೋದವರಿಗೆ ಚಹಾ-ತಿಂಡಿಗಳ ಉಪಚಾರವಿರುತ್ತದೆ. ಯಾವುದಾದರೂ ಹಬ್ಬ, ಜಾತ್ರೆಯ ಸಂದರ್ಭಗಳಲ್ಲಿ ವಧು-ವರರನ್ನು ನೋಡಿ ಆಯ್ಕೆ ಮಾಡುತ್ತಾರೆ. ಹಿಂದೆ ವರದಕ್ಷಿಣೆ ಇತ್ತು, ಇಂದು ಸಹಚಾಲ್ತಿಯಲ್ಲಿದೆ. ವಧು-ವರರ ಜಾತಕ ಹೊಂದಾಣಿಕೆಯ ಕುರಿತು ಪುರೋಹಿತರೊಂದಿಗೆ ಸಮಾಲೋಚಿಸಿ ಜಾತಕ ಕೂಡಿ ಬಂದಲ್ಲಿ ನಿಶ್ಚಯ ತಾಂಬೂಲಕ್ಕೆ ದಿನಾಂಕ ಗೊತ್ತುಪಡಿಸುವರು(ಸುರೇಶ ನಾರಾಯಣ ನಾಯ್ಕ, ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ-೭೫, ೨೦೧೧). ಅಂದು ಐದು ದಿನಗಳವರೆಗೆ ಮದುವೆಯ ಕಾರ್ಯಕ್ರಮ ನಡೆಯುತ್ತಿತ್ತು. ಇಂದು ಮೂರೇ ದಿನದಲ್ಲಿ ಎಲ್ಲಾ ಕಾರ್ಯಕ್ರಮಗಳು ಮುಗಿಯುತ್ತದೆ. ಮದುವೆಯ ಮೊದಲು ಉಪನಯನಮಾಡಿ ವರನ ಕಡೆಯವರು ದಿಬ್ಬಣವನ್ನು ತಮ್ಮ ಬಂಧು-ಬಳಗದೊಂದಿಗೆ ಮಂಟಪಕ್ಕೆ ತೆಗೆದುಕೊಂಡು ಬರುತ್ತಾರೆ. ವಧುವಿನ ಕಡೆಯವರು ದಿಬ್ಬಣಕ್ಕೆ ಸ್ವಾಗತಕೋರಿ ಚಪ್ಪರಕ್ಕೆ ಬರಮಾಡಿಕೊಂಡು, ಚಹಾ-ತಿಂಡಿ ಅಥವಾ ತಂಪು ಪಾನೀಯ ಕೊಡುತ್ತಾರೆ. ನಂಜುಡಯ್ಯ ಹೆಚ್ ವಿ, ಮತ್ತು ಅನಂತಕೃಷ್ಣ ಅಯ್ಯರ್‌ಎಲ್ ಕೆ ರವರ `The Mysore tribes and castes' ಗ್ರಂಥದ ನಾಲ್ಕನೇ ಸಂಪುಟದಲ್ಲಿ ಉಲ್ಲೇಖಿತಗೊಂಡಿದೆ. ಐದರಿಂದ ಒಂಭತ್ತು ದಿನಗಳವರೆಗೆ ಮದುವೆಗಳು ನಡೆಯುತ್ತಿದ್ದ ಆ ಕಾಲದಲ್ಲಿ ಒಂದು ದಿನ ದೇವರಶಾಸ್ತ್ರ, ಒಂದು ದಿನ ಹಿರಿಯರಶಾಸ್ತ್ರ ಒಂದು ದಿನ ಒಳ್ಳಕ್ಕಿ ಕುಟ್ಟುವಶಾಸ್ತ್ರ, ಒಂದು ದಿನ ಹಸೆಶಾಸ್ತ್ರ, ಒಂದು ದಿನ ಮುಹೂರ್ತ, ಒಂದು ದಿನ ನಾಗೋಟೆಶಾಸ್ತ್ರ, ಒಂದು ದಿನ ಓಕುಳಿಶಾಸ್ತ್ರ ಇತ್ಯಾದಿಯಾಗಿ ಒಂದೊಂದು ದಿನ ಒಂದೊಂದು ಶಾಸ್ತ್ರಗಳನ್ನು ನೆರವೇರಿಸುತ್ತಿದ್ದರು ಎಂಬ ವಿವರಗಳು ತಿಳಿದುಬರುತ್ತವೆ. ಕ್ಷತ್ರಿಯರಲ್ಲಿ ಮೂರು ದಿನಗಳವರೆಗೆ ಮದುವೆಗಳು ನಡೆಯುತ್ತಿದ್ದ ಬಗ್ಗೆ ಅನುಭವಿ ವಕ್ತೃಗಳಿಂದ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಮೊದಲ ದಿನದಂದು ಚಪ್ಪರಶಾಸ್ತ್ರ , ದೇವರು ಹಿರಿಯರ ಪೂಜೆ ಮತ್ತು ಮದ್ಲಿಂಗ ಶಾಸ್ತ್ರಗಳನ್ನು ನೆರವೇರಿಸುತ್ತಾರೆ. ಅಂದೇ ವರನನ್ನು ವಧುವಿನ ಮನೆಗೆ ಕರೆದುಕೊಂಡು ಹೋಗುತ್ತಾರೆ. ಎರಡನೆಯ ದಿನದಂದು ಮುಹೂರ್ತ ಮತ್ತು ಮೂರನೆಯ ದಿನದಂದು ಮಾಮನೆಕಾರ್ಯ ಮತ್ತು ಮೆರವಣಿಗೆಯನ್ನು ನೆರವೇರಿಸುತ್ತಾರೆ.

ಕ್ಷತ್ರಿಯರ ಮದುವೆಗಳು ಮುಖ್ಯವಾಗಿ ನಾಲ್ಕು ಹಂತಗಳಲ್ಲಿ ನಡೆಯುತ್ತವೆ. ಮೊದಲನೆಯದು, ಹೆಣ್ಣು/ಕನ್ಯಾ ನೋಡುವ ಅಥವಾ ಮನೆನೋಡುವ ಶಾಸ್ತ್ರ ಸಲುವಳಿ ಕೇಳುವುದು, ಮಾತುಕತೆ. ಎರಡನೆಯದು, ನಿಶ್ಚಯ ಅಥವಾ ನಿಶ್ಚಿತಾರ್ತ. ಮೂರನೆಯದು, ಮದುವೆ ಅಥವಾ ಲಗ್ನ ಕಟ್ಟುವುದು. ನಾಲ್ಕನೆಯದು, ಮನೆ ತುಂಬಿಸಿಕೊಳ್ಳುವುದು. ಪ್ರತಿ ಹಂತದಲ್ಲೂ ಆಯಾ ಕಾರ್ಯಕ್ಕೆ ಸಂಬಂಧ ಪಟ್ಟಂತಹ ಶಾಸ್ತ್ರಗಳು ಸಂಪ್ರದಾಯಗಳನ್ನು ಆಚರಿಸಲಾಗುತ್ತದೆ.

### ೫.೪.೧. ಹೆಣ್ಣು ನೋಡುವ ಶಾಸ್ತ್ರ

ಇದು ಮದುವೆಯ ಮೊದಲನೆಯ ಹಂತ ಇಲ್ಲಿಂದ ಮದುವೆಯ ಕಾರ್ಯಗಳು ಆರಂಭಗೊಳ್ಳುತ್ತವೆ. ತಮಗೆ ಹೊಂದಿಕೆಯಾಗುವ ಮನೆಯಲ್ಲಿ ಹೆಣ್ಣು, ಇರುವುದು ಗೊತ್ತಾದ ಮೇಲೆ ಹೆಣ್ಣಿನ ಬಗೆಗೆ

ಮತ್ತು ಮನೆತನದ ಬಗೆಗಿನ ವಿಚಾರವನ್ನು ತಿಳಿದುಕೊಂಡು ನಂತರ ಗಂಡಿನವರು ಹೆಣ್ಣಿನ ಮನೆಗೆ ಹೋಗಿ ಹೆಣ್ಣು ಮತ್ತು ಮನೆತನವನ್ನು ನೋಡಿ ತಮಗೆ ಒಪ್ಪಿಗೆಯಾದರೆ ನಂತರ ಸಲುವಳಿ ಕೇಳಿಸುತ್ತಾರೆ, ಮತ್ತು ದೇವರಲ್ಲಿಯೂ ಅಪ್ಪಣೆ ಕೇಳಿಸುತ್ತಾರೆ. ಇದೆಲ್ಲ ಹೊಂದಾಣಿಕೆ ನಂತರ ಗಂಡಿನವರು ಮಾತುಕತೆಗೆಂದು ಹೆಣ್ಣಿನ ಮನೆಗೆ ಹೋಗುತ್ತಾರೆ. ತಾವು ಬರುವ ದಿನವನ್ನು ಮೊದಲೇ ಹೆಣ್ಣಿನ ಮನೆಯವರಿಗೆ ತಿಳಿಸುತ್ತಾರೆ. ಸಂದರ್ಭದಲ್ಲಿ ವಧುದಕ್ಷಣೆ ಅಥವಾ ವರದಕ್ಷಿಣೆ ಹಾಗೂ ಹೆಣ್ಣು ಗಂಡುಗಳಿಗೆ ಕೊಡಬೇಕಾದ ವಸ್ತು ಒಡವೆಗಳ ಬಗ್ಗೆ ಮಾತನಾಡುತ್ತಾರೆ. ಒಂದು ನಿರ್ಧಾರಕ್ಕೆ ಬಂದನಂತರ ಎರಡೂ ಕಡೆಯವರು ಕೊಟ್ಟು ತಂದುಕೊಳ್ಳುವ ಬಗ್ಗೆ ಒಪ್ಪಿಕೊಂಡು ಪರಸ್ಪರ ವೀಳ್ಯವನ್ನು ಹಂಚಿಕೊಳ್ಳುತ್ತಾರೆ. ವರನಕಡೆಯವರು ಮತ್ತು ವಧುವಿನ ಕಡೆಯವರು ಇಬ್ಬರು ಸಹ ಸಿಹಿಯನ್ನು ಈ ಸಂದರ್ಭದಲ್ಲಿ ಸ್ವೀಕರಿಸುತ್ತಾರೆ. ಇದನ್ನೆ ನಿಶ್ಚಯ ಅಥವಾ ನಿಶ್ಚಿಥಾರ್ತ ಎಂದು ಕರೆಯುತ್ತಾರೆ ಅಥವಾ ಇತ್ತೀಚಿನ ದಿನದಲ್ಲಿ `Engagement' ಎಂದು ಕರೆಯಲಾಗುತ್ತದೆ.

### ೫.೪.೨. ಲಗ್ನ ಪತ್ರಿಕೆ

ಮದುವೆ ಎಂದ ಮೇಲೆ ಮುಖ್ಯವಾಗಿ ವಧು-ವರರನ್ನು ಪರಿಚಯಿಸುವ ಮತ್ತು ಬಂಧು-ಬಾಂಧವರನ್ನು ಕರೆಯಿಸಿಕೊಳ್ಳುವ ಪತ್ರಿಕೆಯೆ ಆಮಂತ್ರಣ ಪತ್ರಿಕೆಯಾಗಿರುತ್ತದೆ. ಈ ಪತ್ರಿಕೆಯಲ್ಲಿ ವಧುವಿನ ತಂದೆ-ತಾಯಿ ಮತ್ತು ಕುಲದೇವರ ಹೆಸರು ಹಾಗೇ ಸುಖಾಗಮ ಬಯಸುವರ ಹೆಸರು ಇರುತ್ತದೆ. ಅದೆ ವರನ ತಂದೆ-ತಾಯಿ ಕುಲದೇವ ಹೆಸರು ಗುರುಹಿರಿಯ ಹೆಸರು ಅದರಲ್ಲಿ ಮುದ್ರಿತವಾಗಿರುತ್ತದೆ. ಅದರಲ್ಲಿ ವಿವಾಹದ ದಿನಾಂಕ ಘಳಿಗೆ ವಾರ ಸಹ ಮುದ್ರಿತವಾಗಿರುತ್ತದೆ. ಈ ರೀತಿಯಾಗಿ ಮುದ್ರಿತವಾಗಿ ತಯಾರದ ಪತ್ರಿಕೆಯನ್ನು ವಧುಮತ್ತು ವರನ ಮನೆಯವರು ಅವರ ಕುಲಪುರೋಹಿತರಿಂದ ಬರೆಯಿಸಿಕೊಂಡು ಅದನ್ನ ಮುದ್ರಿಸಿರುತ್ತಾರೆ. ಈ ಪತ್ರಿಕೆಯನ್ನು ಅಥವಾ ಆಮಂತ್ರಣವನ್ನು ಮೊದಲು ಅರಶಿಣ ಅಕ್ಷತೆ ಮತ್ತು ಕುಂಕುಮ ದಿಂದ ಪೂಜಿಸಲ್ಪಟ್ಟ ನಂತರ ಕುಲದೇವರಿಗೆ ಅರ್ಪಿಸಿ ಗುರು ಹಿರಿಯರಿಯಿಂದ ಮೊದಲುಗೊಂಡು ವಿತರಿಸಲಾಗುತ್ತದೆ. ಹೀಗೆ ಅವರ ಬಂಧು-ಬಗಿನಿಯರಿಗೆ ಸ್ನೇಹಿತರಿಗೆ ನೆರೆಹೊರೆಯವರಿಗೆ ಹಂಚುವ ಸಂಪ್ರದಾಯವಿದೆ. ಈ ರೀತಿಯಾಗಿ ಲಗ್ನ ಪತ್ರಿಕೆಯ ತನ್ನದೇ ಪಾತ್ರನಿರ್ವಹಿಸುತ್ತದೆ.

### ೫.೪.೩. ಜವಳಿ ತೆಗೆಯುವುದು

ಮದುವೆಯ ದಿನದಂದು ಬಂಧು-ಬಳಗದವರಿಗೆ ಮತ್ತು ವಧುವರರಿಗೆ ಉಡುಗೊರೆ ಕೊಡುವ ಸಂಪ್ರದಾಯ ಕ್ಷತ್ರಿಯರಲ್ಲಿದೆ. ಅದಕ್ಕೆ ಬೇಕಾದ ಬಟ್ಟೆಗಳನ್ನು ಅವರ ಮನೆಯವರಷ್ಟೇ ಅಲ್ಲದೆ ಅವರ ಸಮುದಾಯದ ಅಥವಾ ನೆರೆಹೊರೆಯರ ಹಿರಿಯರೊಂದಿಗೆ ಹೋಗಿ ತರವುದು, ವಾಡಿಕೆ. ಸೀರೆ ಆಯ್ಕೆ ಮಾಡಿಕೊಳ್ಳಲು ಸ್ತ್ರೀಯರನ್ನು ಕರೆದೊಯ್ಯುತ್ತಾರೆ. ದುಬಾರಿಯಾದ ಸೀರೆಯನ್ನು ವಧುವಿಗೆ ತರುತ್ತಾರೆ. ಹಾಗೆ ಅವರ ಬಂಧು ಬಾಂಧವರಿಗೆ ಕೊಡುವ ಅಜ್ಜಿ ಸೀರೆ ತಾಯಿ ಸೀರೆ, ಶಾಸ್ತ್ರದ ಸೀರೆಗಳನ್ನು ತೆಗೆಯುತ್ತಾರೆ. ಹಾಗೆ ಮನೆ ಮಂದಿಗೆ ಬಟ್ಟೆಯನ್ನು ತೆಗೆದುಕೊಳ್ಳುತ್ತಾರೆ. ಇದನ್ನು ಜವಳಿಗಂಟು ಎಂದು ಕರೆಯುತ್ತಾರೆ. ಜವಳಿಯನ್ನು ತರುವಾಗ ಮನೆ ಬಾಗಿಲಿಗೆ ಬರುತ್ತಿದ್ದಂತೆ

ನೀರನ್ನು ಪ್ರೋಕ್ಷಿಸಿಜವಳಿಯ ಹೊತ್ತಿರುವ ಮುತ್ತೈದೆಯ ಕಾಲು ತೊಳೆದು ಜವಳಿಗೆ ಪೂಜಿಸಿ ಸ್ವಾಗತಿಸುವ ಪದ್ಧತಿ ಇದೆ. ಜವಳಿಯನ್ನು ಬಿಡಿಸಿ ಯಾರ್‍ಯಾರಿಗೆ ಯಾವ ಬಟ್ಟೆಕೊಡಬೇಕು ಎಂದು ತೀರ್ಮಾನಿಸಿ ಆಯ್ದು ಪ್ರತ್ಯೇಕಿಸಿ ಇಡುತ್ತಾರೆ. ಅದನ್ನು ಮದುವೆ ದಿನ ಕೊಟ್ಟು ಕೈಮುಗಿದು ಆಶೀರ್ವಾದ ಪಡೆಯುವ ಸಂಪ್ರದಾಯ ಇದೆ. ಹಾಗೆ ಅಂದಿನ ದಿನದೊಂದು ಬಾಸಿಂಗವನ್ನು ಸಹ ಮಾಡಿಸಲು ವರನ ಅಕ್ಕಭಾವನಿಗೆ ತಿಳಿಸುತ್ತಾರೆ.

**೫.೪.೪. ನಿಶ್ಚಿಥಾರ್ತ**

ಇದು ವಿವಾಹನ ಎರಡನೇಯ ಹಂತವಾಗಿದೆ. ಈ ಹಂತದಲ್ಲಿ ಮದುವೆಯ ಪ್ರಸ್ತಾಪ ನಿಶ್ಚಿತ ರೂಪತಾಳುತ್ತದೆ. ಮೊದಲೆ ನಿರ್ಧರಿಸಿದ ದಿನದಂದು ವರನ ಕಡೆಯವರು ಹಣ್ಣು, ಕಾಯಿ, ಹೂ, ಬಟ್ಟೆ, ಒಡವೆ, ಮುಂತಾದವುಗಳನ್ನು ತೆಗೆದುಕೊಂಡು ಮನೆಯ ಯಜಮಾನ ಅಥವಾ ಹಿರಿಯರು ತನ್ನ ಕಡೆಯ ಸಂಬಂಧಿಕರೊಂದಿಗೆ ಹೊರಡಲು ಮುಂದಾಗುತ್ತಾರೆ. ಮುಂದೆ ಒಬ್ಬ ಹಿರಿಯ ವ್ಯಕ್ತಿಯು ದೇವರಿಗೆ ಕೈಮುಗಿದು ಹೊರಡುತ್ತಾನೆ. ಇವನ ಹಿಂದೆ ಉಳಿದ ಸಂಬಂಧಿಕರು ಹೊರಡುತ್ತಾರೆ. ಇತರೆ ಎಲ್ಲ ಸಮುದಾಯದಲ್ಲಿರುವಂತೆ ಕ್ಷತ್ರಿಯರೂ ಸಹ ದಾರಿ ಶಕುನಗಳನ್ನು ನೋಡುತ್ತಾರೆ. ನಂತರ ಹುಡಗಿಯ ಮನೆ ತಲುಪಿದ ಮೇಲೆ ವರನ ಕಡೆಯವರಿಗೆ ಲಘು ಉಪಹಾರ ಸಿದ್ಧಪಡಿಸಿ ಮುಂದಿನ ತಯಾರಿ ಮಾಡಿಕೊಳ್ಳುವರು. ನಿಶ್ಚಯ ಕಾರ್ಯದಲ್ಲಿ ಎರಡೂ ಕಡೆಯವರ ಹಿರಿಯರು ಪಾಲ್ಗೊಳ್ಳುತ್ತಾರೆ. ಇಲ್ಲಿ ಮತ್ತೊಮ್ಮೆ ಹೆಣ್ಣಿನ ಮತ್ತು ಗಂಡಿನ ಕಡೆಯವರ ಒಪ್ಪಿಗೆ ಕೇಳಲಾಗುತ್ತದೆ. ಹಾಗೆ ಕೊಡುವ ತಂದುಕೊಳ್ಳುವ ಉಪಚಾರ–ವಿಚಾರದ ಬಗ್ಗೆ ಮಾತನಾಡಲಾಗುತ್ತದೆ. ಎಲ್ಲ ಮಾತುಕತೆಗಳು ಮುಗಿದ ನಂತರ ನಿಶ್ಚಯ ಕಾರ್ಯವನ್ನು ಆರಂಭಿಸುತ್ತಾರೆ.

ನಿಶ್ಚಯಕ್ಕೆ ಸಂಬಂಧಪಟ್ಟ ಮಾತುಕತೆಗಳು ಮುಗಿದನಂತರ ಮದುವೆ ಹೆಣ್ಣನ್ನು ಮಾತ್ರ ಕೂರಿಸಿ ನಿಶ್ಚಯ ಮಾಡುತ್ತಾರೆ. ಇತ್ತೀಚಿನ ದಿನ ಮಾನದಲ್ಲಿ ವಧುವರರಿಬ್ಬರನ್ನು ಕೂರಿಸಿ ನಿಶ್ಚಿಯ ಕಾರ್ಯ ಮಾಡುತ್ತಾರೆ. ಈ ಸಂದರ್ಭದಲ್ಲಿ ಊರಿನ ಹಿರಿಯರು ಅಥವಾ ಸಮುದಾಯದ ಹಿರಿಯರು ಸೇರಿಕೊಂಡು ವಧುವರರಿಬ್ಬರ ಬೆಡಗುಗಳನ್ನು ಮತ್ತು ಜಾತಕ ಕೇಳಿಕೊಂಡು ಅಲ್ಲಿ ನೆರೆದ ಉಭಯ ಯಜಮಾನರ ಸಮ್ಮುಖದಲ್ಲಿ ಮಾತನಾಡುತ್ತಾರೆ. ವಧು–ವರರನ್ನು ಆಯ್ಕೆ ಮಾಡಿಕೊಂಡ ಮೇಲೆ ಹುಡುಗ ಮತ್ತು ಸಹೋದರ ಮಾವಂದಿರ, ತಂದೆ ತಾಯಿಗಳ ಮತ್ತು ಕುಟುಂಬಸ್ಥರ ನಡುವೆ ನಡೆಯುವ ಒಡಂಬಡಿಕೆಯೇ ಈ 'ವೀಳ್ಯಶಾಸ್ತ್ರ' ಅಥವಾ ವಾಗ್ದಾನ ಕಾರ್ಯಕ್ರಮ ಎಂದು ಕರೆಯಲಾಗುತ್ತದೆ. ಈ ಕಾರ್ಯಕ್ರಮದಲ್ಲಿ ಮೊದಲು ವಧುವಿನವರು. ಅಂದರೆ, ವಧುವಿನ ಸೋದರ ಮಾವ, ಇಲ್ಲದಿದ್ದರೆ, ತಂದೆ ಅಥವಾ ಹಿರಿಯರು ವರನಕಡೆಯವರನ್ನು ಆದರಾತಿಥ್ಯದೊಂದಿಗೆ ಸ್ವಾಗತಿಸಿ ಅವರನ್ನು ಉತ್ತಮಾಸನದಲ್ಲಿ ಪಶ್ಚಿಮಾಭಿಮುಖವಾಗಿ ಕೂರಿಸಲಾಗುವುದು. ಯಾಕೆಂದರೆ, ಅವರು ಕನ್ಯೆಯನ್ನು ಸ್ವೀಕರಿಸುವವರು. ಕನ್ಯೆಯ ಸೋದರಮಾವ ಅಥವಾ ತಂದೆ ಹಾಗೂ ಕುಟುಂಬದವರನ್ನು ಅವರೆದುರು ಪೂರ್ವಾಭಿಮುಖವಾಗಿ ಕೂರಿಸಲಾಗುವುದು. ಯಾಕೆಂದರೆ, ಇವರು ಕನ್ಯೆಯನ್ನು ಕೊಡುವವರಾಗಿರುತ್ತಾರೆ. ಎರಡು ಹರಿವಾಣಗಳಲ್ಲಿ ವೀಳ್ಯದಲೆ ಮತ್ತು ಅಡಿಕೆಗಳನ್ನು

ಇಡಲಾಗಿರುತ್ತದೆ. ಮೊದಲು ಕನ್ಯೆ ಸೋದರ ಮಾವ ಅಥವಾ ತಂದೆ ತಮ್ಮ ಕುಲದೇವರು, ಮನೆದೇವರು ಹಾಗೂ ಗುರು ಹಿರಿಯರನ್ನು ಸ್ಮರಿಸಿ, 'ನಿಮ್ಮ ಇಂತಹ ಬಳಿ' 'ಹುಡುಗನಿಗೆ ನಮ್ಮ ಇಂತಹ ಬಳಿಯ' ಹುಡುಗಿಯನ್ನು ಅಗ್ನಿ ಸಾಕ್ಷಿಯಾಗಿ ಧಾರೆ ಎರೆದುಕೊಡುತ್ತೇವೆ. ಇದಕ್ಕೆ ನಾವು ತಪ್ಪುವುದಿಲ್ಲ ಎಂದು ವಾಗ್ದಾನ ಮಾಡಿ ವೀಳ್ಯದ ತಟ್ಟೆಯನ್ನು ವರನ ಸಹೋದರಮಾವ ಅಥವಾ ತಂದೆಯ ಕೈಯಲ್ಲಿರಿಸಲಾಗುವುದು. ಅದೇ ರೀತಿ, ವರನ ಸೋದರಮಾವ ಅಥವಾ ತಂದೆ ಇನ್ನೊಂದು ತಟ್ಟೆಯಲ್ಲಿರಿಸಿದ ವೀಳ್ಯವನ್ನು ಕೈಯಲ್ಲಿ ಹಿಡಿದುಕೊಂಡು ಇಂತಹ ಬಳಿಯ ನಿಮ್ಮ ಹುಡುಗಿ'ಯನ್ನು ಇಂತಹ ಬಳಿಯ ನಮ್ಮ ಹುಡುಗ'ನಿಗೆ ಒಪ್ಪಿಗೆಯಾಗಿದೆ. ನಿಮ್ಮ ಹುಡುಗಿಯನ್ನು ನಮ್ಮ ಹುಡುಗನಿಗೆ 'ವಿವಾಹ ಪೂರ್ವಕ ವಾಗ್ದಾನ' ಸ್ವೀಕರಿಸಲು ಬದ್ಧರಾಗಿದ್ದೇವೆ ಎಂದು ವಚನ ನೀಡುತ್ತೇವೆ ಎಂದು ಹೇಳಿ ವೀಳ್ಯದ ತಟ್ಟೆಯನ್ನು ವಧುವಿನ ಸೋದರ ಮಾವ ಅಥವಾ ತಂದೆಗೆ ನೀಡುತ್ತಾರೆ. ಇದೇ ಕ್ರಮದಲ್ಲಿ ಮೂರು ಸಲ ವೀಳ್ಯವನ್ನು ಬದಲಾಯಿಸಿಕೊಳ್ಳಲಾಗುವುದು. ನಂತರ ಎರಡೂ ಕಡೆಯವರು ಜೊತೆಯಾಗಿ ತಾಂಬೂಲ ತಿನ್ನವುದು ಸಂಪ್ರದಾಯ. ಇಲ್ಲಿ ತಾಂಬೂಲವು ವಿಶಿಷ್ಟ ಒಡಂಬಡಿಕೆಯಲ್ಲಿ ಪರಸ್ಪರ ನೀಡುವ ಗೌರವ ಮತ್ತು ಮುಂದೆ ನಡೆಯುವ ಮಂಗಳ ಕಾರ್ಯಕ್ಕೆ ಸಂಕೇತವಾಗಿ ನಿಲ್ಲುತ್ತದೆ.

ವರನ ಕಡೆಯ ಹೆಣ್ಣು ಮಕ್ಕಳು ಕನ್ಯೆಗೆ ಅರಶಿಣ, ಕುಂಕುಮ, ಸೀರೆ, ಒಡವೆಗಳನ್ನು ಕೊಟ್ಟು ಹಣೆಗೆ ಕುಂಕುಮವಿಟ್ಟು ವಧುವಿನ ಕೆನ್ನಯ ಬಲ ಮತ್ತು ಎಡಕ್ಕೆ ಅರಿಸಿಣ ಹಚ್ಚುತ್ತಾರೆ. ಹಾಗೆ ವಧುವಿಗೆ ತಂದಿದ್ದ ಸೀರೆ ಮತ್ತು ಬಂಗಾರದ ಉಂಗುರವನ್ನು ಕೊಡುತ್ತಾರೆ. ಆಗಾ ವರನು ಹುಡುಗಿಗೆ ಬಲ ಕೈಯ ಮೂರನೇ ಬೆರಳಿಗೆ ಹಾಕುವನು. ನಂತರ ಹುಡುಗಿ ಕಡೆಯವರು ವರನಿಗೆ ಬಟ್ಟೆಯನ್ನು (ಶಲ್ಯ ಪಂಚೆ/ಪ್ಯಾಂಟ್ ಟವಲ್) ಮತ್ತು ಬಂಗಾರದ ಉಂಗುರವನ್ನು ತಂದುಕೊಡುವರು. ಆಗಾ ಸ್ವತಃ ವಧು ವರನಿಗೆ ಬಲಕೈಯ ಮೂರನೇಯ ಬೆರಳಿಗೆ ತೊಡಿಸುತ್ತಾಳೆ. ಈ ಕಾರ್ಯವು ಪರಸ್ಪರ ತೊಡಿಸುವ ಸಂಪ್ರದಾಯವು ಅಂದಿನ ದಿನದಲ್ಲಿ ಮುಗಿಯುತ್ತದೆ. ಈ ವೇಳೆಯಲ್ಲಿ ಹುಡುಗಿಗೆ ಕೊಡಬೇಕಾದ ಚಿನ್ನಾಭರಣವರನಿಗೆ ಕೊಡುವ ಆಭರಣ, ವರದಕ್ಷಿಣೆ ಮದುವೆ ದಿನಾಂಕ, ವಿಧಿ–ವಿಧಾನಗಳ ಕುರಿತು ಚರ್ಚಿಸುತ್ತಾರೆ. ಈ ಎಲ್ಲವೂಗಳ ಒಪ್ಪಿಗೆಯಾದ ಬಳಿಕ ಪರಸ್ಪರರು ವೀಳ್ಯವನ್ನು ಬದಲಿಸಿಕೊಳ್ಳುವರು. ಬಂದವರಿಗೆಲ್ಲ ಹೂವು, ಕುಂಕುಮ, ಬಾಳೆಹಣ್ಣು, ಸಕ್ಕರೆಯನ್ನು ಹಂಚುತ್ತಾರೆ. ಬಂದ ಅತಿಥಿಗಳಿಗೆಲ್ಲ ಊಟೋಪಚಾರವಿರುತ್ತದೆ. ಈ ಎಲ್ಲ ಕಾರ್ಯಗಳಲ್ಲಿ ಪುರೋಹಿತರ ಅಥವಾ ಹಿರಿಯರ ಸಮ್ಮುಖದಲ್ಲಿ ನೆರವೇರುತ್ತದೆ. ಮದುವೆ ಸಹ ಪುರೋಹಿತರು ನಿಗದಿ ಮಾಡಿದ ಘಳಿಗೆ ದಿನಾಂಕದಂದು ನಡೆಯುತ್ತದೆ. ಕ್ಷತ್ರಿಯರಲ್ಲಿ ವ್ಯಕ್ತಿ ಮದುವೆಯಲ್ಲಿ ಅಕ್ಕ–ಭಾವನಿಗೆ ಪ್ರಮುಖ ಸ್ಥಾನವನ್ನು ಕಲ್ಪಿಸಲಾಗಿದೆ. ಸೋಬಾನೆ ಹಾಡನ್ನು ಸಹ ಈ ಸಂದರ್ಭದಲ್ಲಿ ಹಾಡುತ್ತಾರೆ.

**೫.೪.೫. ಮದುವೆ ಸಿದ್ಧತೆ**

ಇದು ಮದುವೆ ಕಾರ್ಯದ ಮೂರನೇಯ ಹಂತವಾಗಿದೆ. ಹಿಂದಿನ ಕಾಲದಲ್ಲಿ ಕ್ಷತ್ರಿಯರ ಮದುವೆಗಳು ಅವರವರ ಯೋಗ್ಯತೆಯ ಮೇಲೆ ನಡೆಯುತ್ತಿದ್ದವು. ಐದು ದಿನದಿಂದ ಒಂಭತ್ತು ದಿನಗಳವರೆಗೆ ನಡೆಯುತ್ತಿದ್ದವು. ಆದರೆ ಬದಲಾದ ಕಾಲಘಟ್ಟದಲ್ಲಿ ಎರಡು ದಿನಗಳಲ್ಲಿ

ಮುಗಿದುಹೋಗುತ್ತವೆ. ಮದುವೆಗಳಲ್ಲಿ ಗಂಡಸರ ಕೆಲಸ ಕಾರ್ಯಗಳನ್ನು ಯಜಮಾನರು ಅಥವಾ ಕುಲದ ಮುಖ್ಯಸ್ಥರು ನೆರವೇರಿಸಿದರೆ, ಸಂಪ್ರದಾಯದ ಕೆಲಸ ಕಾರ್ಯಗಳನ್ನು ಹೆಣ್ಣು ಮಕ್ಕಳು ನೆರವೇರಿಸುತ್ತಾರೆ.

**೫.೪.೬. ಚಪ್ಪರ ಮೂಹರ್ತ**

ವಿವಾಹಕ್ಕೆ ಎರಡು-ಮೂರು ದಿನಗಳಿರುವಾಗ ವಧುವಿನ ಗೃಹದಲ್ಲಿ ಒಳ್ಳೆಯ ಘಳಿಗೆಯ ದಿನದಂದು ಚಪ್ಪರ ಹಾಕುವ ಪದ್ಧತಿ ಇದೆ. ಈಶಾನ್ಯ ಮೂಲೆಯಿಂದ ಚಪ್ಪರ ಹಾಕುವ ಕೆಲಸವನ್ನು ಆರಂಭಿಸಿ, ಬೆಸ ಸಂಖ್ಯೆಯ ಕಂಬಗಳನ್ನು ನೆಟ್ಟು ಚಪ್ಪರ ಹಾಕುತ್ತಾರೆ. ತೆಂಗಿನ ಗರಿಯನ್ನು ಚಪ್ಪರಕ್ಕೆ ಬಳಸುತ್ತಾರೆ. ವರನ ಮತ್ತು ವಧುವಿನ ಮನೆಯಲ್ಲಿ ಚಪ್ಪರ ಮೂಹರ್ತ ನಡೆಯುತ್ತದೆ. ಮೊದಲು ಶುಭಘಳಿಗೆಯಲ್ಲಿ ವರನನ್ನು ಸಿಂಗರಿಸಿ ಮುತ್ತೈದೆಯರು ಸೇರಿಕೊಂಡು ಅತ್ತಿ ಮತ್ತು ಹಾಲು ಬರುವ ಕಂಬವನ್ನು ಮನೆಯ ಬಲ ಭಾಗದಲ್ಲಿ ನೆಟ್ಟು ವರನುಒಂದುಮುಷ್ಟಿ ಮಣ್ಣನ್ನು ಹಾಕಿಪೂಜಿಸುತ್ತಾರೆ. ಹಾಗೇ ವಧುವಿನ ಮನೆಯಲ್ಲಿ ಇದೆ ರೀತಿಯಾಗಿ ಕಾರ್ಯಮಾಡುತ್ತಾರೆ. ಮದುವೆಯ ಅಡುಗೆಗಾಗಿ ಮಾಡಿದ ಒಲೆಗಳಿಗೆ ಕನ್ಯೆಯಿಂದ ಬೆಂಕಿ ಹಾಕಿಸುವ ಪದ್ಧತಿ ಇದೆ. ನಂತರ ಅಗಸನು ಮಂಟಪಕ್ಕೆ ವಸ್ತ್ರ ಕಟ್ಟುತ್ತಾನೆ. ಅಲ್ಲದೆ ಅಲ್ಲಿ ವಿಶೇಷವಾಗಿ ಆ ಮನೆಯ ಸೇವೆಮಾಡುವ ಮಾದಿಗರ ಪಾತ್ರ ಹೆಚ್ಚಾಗಿರುತ್ತದೆ. ಈ ಚಪ್ಪರವನ್ನು ಅಗಸ ಮತ್ತು ಮಾದಿಗರಿಬ್ಬರ ಸೇರಿಕೊಂಡು ಅಲಂಕರಿಸುತ್ತಾರೆ. ಮನೆ ಹಾಗೂ ಪ್ರಧಾನ ಬಾಗಿಲಿಗೆ ಬಣ್ಣ ಹಚ್ಚುತ್ತಿದ್ದರು. ದೇವರ ಕೋಣೆಯಲ್ಲಿ ಕಳಸ ಬಾಸಿಂಗ ಮೊದಲಾದ ಚಿತ್ರಗಳನ್ನು ಬಣ್ಣಗಳಿಂದ ಬಿಡಿಸುತ್ತಿದ್ದರು. ಚಪ್ಪರಹಾಕಲು ಬಂಧುಬಳಗ ಮತ್ತು ನೆರೆಹೊರೆಯವರು ಯಾವುದೇ ಫಲಾಪೇಕ್ಷೆಯಿಲ್ಲದೆ ಮಾಡುವ ಒಂದು ಶ್ರಮ ಸೇವೆ ಇದಾಗಿದೆ. ಅಡುಗೆಗೆ ಪ್ರತ್ಯೇಕ ಚಪ್ಪರ ಹಾಕುವುದನ್ನು ಕಾಣಬಹುದು. ಇವರಿಗೆ ಬೆಲ್ಲದ ಪಾನಕ, ನೀರು, ನೀಡುತ್ತಾರೆ. ಹಾಗೂ ಚಪ್ಪರ ಹಾಕಲು ಬಂದವರಿಗೆ ಲಘು ಉಪಾಹಾರ ಮಂಡಕ್ಕಿ, ಟೀ, ಕೊಡುತ್ತಾರೆ. ಈ ರೀತಿಯಾಗಿ ವಧು/ವರ ಗೃಹದಲ್ಲಿ ಈ ಚಪ್ಪರದ ಕಾರ್ಯ ನಡೆಯುತ್ತದೆ. ಅಲ್ಲಿ ಮುಖ್ಯವಾಗಿ ಈ ಚಪ್ಪರವು ೯ ದಿನಗಳ ಕಾಲ ಇರಬೇಕಾಗುತ್ತದೆ. ಪ್ರತಿ ದಿನ ರಾತ್ರಿ ಈ ಚಪ್ಪರಕ್ಕೆ ದೀಪದ ಬೆಳಕು ಸಹ ಇರಬೇಕು. ಹಾಗೆ ಮದುವೆಯು ಮುಗಿಯವರಗೆ ಈ ಚಪ್ಪರಕ್ಕೆ ಮಹತ್ವವನ್ನು ನೀಡುತ್ತಾರೆ.

**೫.೪.೭. ಬಳೆ ತೊಡಿಸುವಶಾಸ್ತ್ರ**

ವಿವಾಹಕ್ಕಾಗಿ ಚಪ್ಪರಶಾಸ್ತ್ರ ಮುಗಿದಮೇಲೆ ಬಂಧು-ಬಾಂಧವರಿಗೆ ಮುತ್ತೈದೆಯರಿಗೆಲ್ಲ ಬಳೆತೊಡಿಸುವ ಪದ್ಧತಿ ಇವರಲ್ಲಿದೆ. ಬಳೆಗಾರನು ಬಳೆಯೊಂದಿಗೆ ವಧುವಿನ ಮನೆಗೆ/ವರನ ಮನೆಗೆ ಬರುತ್ತಾನೆ/ಳೆ, ಅದನ್ನು 'ಬಳೆ ತೊಡುವ ಶಾಸ್ತ್ರ' ಎನ್ನುತ್ತಾರೆ. ಮನೆಯ ಜಗಲಿಯಲ್ಲಿ ಚಾಪೆ ಹಾಸಿ ಬಳೆಗಾರನನ್ನು ಕೂರಿಸಿ ಆತನ ತಂದಿರುವಂತಹ ಬಳೆಗಳ ಗಂಟ್ಟಿಗೆ, ಅರಿಶಿಣ, ಕುಂಕುಮ, ಹೂವು ದಕ್ಷಿಣೆ ಬಾಳೆಹಣ್ಣು, ಇಟ್ಟು, ಊದುಬತ್ತಿಯಿಂದ ಪೂಜಿಸಿಸುತ್ತಾರೆ. ಮೊದಲು ವಧುವಿಗೆ ಹಸಿರು, ಹಳದಿ, ಕುಂಕುಮ ಕೇಸರಿ ಬಣ್ಣದ ಬಳೆಗಳನ್ನು ತೊಡಿಸುತ್ತಾರೆ. ಇವರಿಗೆ ಹದಿಮೂರು ಮತ್ತು

ಹದಿನೈದು ಹೀಗೆ ಬೆಸಸಂಖ್ಯೆಯಲ್ಲಿ ಬಳೆಯನ್ನು ತೊಟ್ಟುಕೊಳ್ಳುವುದು ಶುಭ ಎಂದು ಭಾವಿಸುತ್ತಾರೆ. ಮುತ್ತೈದೆಯರೆಲ್ಲ, ಸಾಮಾನ್ಯವಾಗಿ ಹದಿಮೂರು, ಬಳೆಯನ್ನು ತೊಟ್ಟು ಮಧುಮಗಳಿಗೆ ಆಶೀರ್ವಾದ ಮಾಡುತ್ತಾರೆ. ಆದರೆ ಇತ್ತೀಚಿನ ದಿನದಲ್ಲಿ ಇದು ಮರೆಯಾಗುತ್ತಲಿದೆ, ಅನ್ನುವುದೇ ವಿಷಾದದ ಸಂಗತಿಯ ವಿಷಯ.

### ೫.೪.೮. ದೇವರ ಕಾರ್ಯ

ವರನ ಮನೆಯಲ್ಲಿ ನಡೆಯುವ ಈ ಕಾರ್ಯವು ವಧುವಿನ ಮನೆಯ ಚಪ್ಪರ ಮೂಹುರ್ತದ ದಿನದಂದು ನಡೆಯುವ ಸಂಪ್ರದಾಯ. ಅಂದು ಬಂಧು-ಬಳಗ ಅಥವಾ ಕುಲದವರೆಲ್ಲ ವರನ ಮನೆಗೆ ಬರುತ್ತಾರೆ. ಆ ದಿನ ಚಪ್ಪರ ಮೂಹುರ್ತ ಮತ್ತು ದೇವರ ಕಾರ್ಯನಡೆಯುತ್ತದೆ. ಸಾಮಾನ್ಯವಾಗಿ, ಹಗಲು-ರಾತ್ರಿ ಈ ಅವಧಿಯಲ್ಲಿ ನಡೆಯುತ್ತದೆ. ವರನ ಮನೆಯಲ್ಲಿ ಹಿರಿಯ ಮುತ್ತೈದೆಯರು ಸಂಪ್ರದಾಯಸ್ಥವಾಗಿ ನೆರವೇರಿಸುತ್ತಾರೆ. ಕಳಸಗಿತ್ತಿಗೆ ಕಳಸದ ಸೀರೆಯ ಉಡುಗೊರೆ ಬಂಧು ಬಾಂಧವರಿಗೆ ಉಡುಪು ವಧುವಿಗೆ ಧಾರೆ ಸೀರೆ, ಅತ್ತೆ ಮಾವನವರಿಗೆ, ಭಾವ ಮೈದುನರಿಗೆ ನೀಡುವ ಬಟ್ಟೆಗಳೆಲ್ಲ ಈ ದಿನವೇ ಸಿದ್ಧಮಾಡಿ ಇಡುತ್ತಾರೆ. ಕನ್ಯೆಗೆ ಮುಸುಕು ಹಾಕಲು ಸೀರೆ, ವರನಿಗೆ ಸಂಬಂಧಿಸಿದ ಉಡುಪು, ಬಾಸಿಂಗ ಕರಿಮಣಿ, ತಾಳಿ ಮತ್ತಿತರ ಆಭರಣಗಳನ್ನು ಸಿದ್ಧಮಾಡಿ ವಧುವಿಗೆ ಕೊಡಬೇಕಾದ ಮಂಗಳಸೂತ್ರವೂ ಪೂಜಾ ಸಾಮಗ್ರಿಗಳೊಡನೆ ಇಡುತ್ತಾರೆ.

### ೫.೪.೯. ದಿಬ್ಬಣ ಹೊರಡುವುದು

ಮದುವೆ ಮುನ್ನಾದಿನದಲ್ಲಿ ವಧು-ವರರನ್ನು ಸೌಂದರ್ಯಭರಿತರನ್ನಾಗಿ ಉಲ್ಲಾಸದಾಯಕರನ್ನಾಗಿ ಮಾಡಲು ಅವರ ಮೈಗೆ ಅರಿಷಿಣ ಮತ್ತು ಹಾಲಿನ ಹಾಗೂ ತುಪ್ಪದ ಮಿಶ್ರಣವನ್ನು ಲೇಪಿಸಿ ಹೊಳಪನ್ನು ನೀಡುವ ಸಂಪ್ರದಾಯವಿದೆ. ಮದುವೆಯ ದಿನ ವರನ ಮನೆಯಲ್ಲಿ ಚಪ್ಪರ ಹಾಕಿದ ದಿನದಂದು ಕ್ಷೌರಿಕನನ್ನು ಆಹ್ವಾನಿಸಿ ವರನ ತಲೆಕೂದಲು ಮತ್ತು ಗಡ್ಡದ ಮುಖ ಕ್ಷೌರವನ್ನು ಮಾಡಿಸುತ್ತಾರೆ. ಆ ಕ್ಷೌರಿಕನಿಗೆ ಅಕ್ಕಿ, ಬೆಲ್ಲ, ಬಾಳೆಹಣ್ಣು, ಎಲೆ ಅಡಿಕೆ, ದಕ್ಷಿಣೆಯನ್ನು ಇಟ್ಟು ಬಿಳ್ಕೊಡುತ್ತಾರೆ. ಮನೆಮಂದಿಯೆಲ್ಲ ವಧುವಿನ ಅಥವಾ ವರನ ಮೈಗೆ ಈ ಮಿಶ್ರಣವನ್ನು ಲೇಪಿಸಿ ಆದ ಮೇಲೆ ಅವರನ್ನು ಸ್ನಾನ ಮಾಡಲು ಕರೆದ್ಯೊಯಲಾಗುತ್ತದೆ. ಹಾಗೆ ಮದ್ಲಿಂಗ್‌ನಿಗೆ ಐದು ಜನ ಮುತ್ತೈದು ಸೇರಿ ಆರತಿ ಮಾಡಿ ಹರಿನೀರು ಶಾಸ್ತ್ರವನ್ನು ಮಾಡುತ್ತಾರೆ. ಹಾಗೆ ಅಂದು ವರನು ದೈಹಿಕವಾಗಿ, ಮಾನಸಿಕವಾಗಿ ಶುಚಿಶೋಭಿತನಾಗುತ್ತಾನೆ. ಮನೆಯ ದೈವಗಳಿಗೆ ಕೈ ಮುಗಿದು, ದೀಪವಿರಿಸಿ, ತಂದೆ-ತಾಯಿಗಳಿಗೆ ಮತ್ತು ಗುರುಹಿರಿಯರಿಗೆ ನಮಸ್ಕಾರಿಸುತ್ತಾನೆ. ನಂತರ ವರನ ಮನೆಯ ಮಾದಿಗನು ವರನಿಗೆ ಹೊಸ ಜೋಡನ್ನ ತಂದು ಕೊಡುತ್ತಾನೆ. ಹಾಗೆ ಆ ಜೋಡನ್ನ ಪೂಜಿಸುತ್ತಾನೆ. ಅವನಿಗೆ ಸಹ ವರನು ಅವನಿಗೆ ಖುಷಿಯಾಗುವಷ್ಟು ಹಣವನ್ನು ಕೊಡುವನು. ಹಿಂದಿನ ಕಾಲದಲ್ಲಿ ಜಜಾಮಾನಿ ಪದ್ಧತಿಯು ತುಂಬ ಕೆಲಸ ಕಾರ್ಯ ಮಾಡುತ್ತಿದ್ದವು, ಅದು ಇಂದು ಮರೆಯಾಗಿದೆ. ವರನ ಅಥವಾ ವಧುವಿನ ಸ್ವಗೃಹದಲ್ಲಿ ಮಾದಿಗ, ಅಗಸ, ಕೊರಮರ, ಬಡಗಿ, ಇವರ ಕೆಲಸವು ಮದುವೆಯ ಸೇವೆಗೆ ಸನ್ನದ್ಧರಾಗಿರುತ್ತಿದ್ದರು. ನಂತರದಲ್ಲಿ ವರನಿಗೆ ಐದೂ ಜನ ಮುತ್ತೈದೆಯರು 'ಅಕ್ಷತೆ (ಸೇಸೆ)

ಹಾಕಿ ಆರತಿ ಮಾಡಿ ಹಣೆಗೆ ಕುಂಕುಮವಿರಿಸುವರು. ವರನ ಕೈಗೆ ವಿಳ್ಯದ ಎಲೆಯ ಕಂಕಣ ಕಟ್ಟುತ್ತಾರೆ. ನಂತರ ಹೊಸ ಅಂಗಿ, ಟವಲ್, ಪಂಜೆ ಧರಿಸಲು ವರನಿಗೆ ತಿಳಿಸುವರು. ವರನ ದಿಬ್ಬಣವು ಪುರೋಹಿತರು ತಿಳಿಸಿದ ಸಮಯಕ್ಕೆ ಸರಿಯಾಗಿ ಹೊರಡುವುದು. ದಿಬ್ಬಣವು ಹೊರಡುವಾಗ ಗುರುಹಿರಿಯರು ಇದ್ದುಕೊಂಡು ಕುಲದೇವರಾದ ಶ್ರೀಮಾರುತಿಯನ್ನು (ಆಂಜನೇಯ್ಯ) ಸ್ಮರಿಸಿ ಮತ್ತು ಕುಲದೇವರಾದ ತಿರುಪತಿ ವೆಂಕಟರರಮಣನನ್ನು ಸ್ಮರಿಸಿ, ಮನೆಯ ದೈವಗಳಿಗೆ ದೀಪವಿಟ್ಟು ಗುರುಹಿರಿಯರಿಗೆ ವಂದನೆಮಾಡಿ ಎಲ್ಲಾರೊಂದಿಗೆ ದಿಬ್ಬಣ ಹೊರಡುತ್ತದೆ. ಇದೇ ರೀತಿಯಾಗಿ ವಧುವಿನ ಮನೆಯಲ್ಲಿಯೂ ನಡೆಸಲಾಗುತ್ತದೆ.

### ೫.೪.೧೦. ಲಗ್ನ ಕಟ್ಟಿಸುವ ಶಾಸ್ತ್ರ

ಮದುವೆಯ ಮನೆಯಲ್ಲಿ ಲಗ್ನ ಕಟ್ಟಿಸುವ ಶಾಸ್ತ್ರವು ತುಂಬ ಸಂಪ್ರದಾಯಿಕವಾಗಿ ನಡೆಯುತ್ತದೆ. ಕುಲದ ಮುಖ್ಯಸ್ಥರು ಬಂಧು ಬಾಂಧವರು ಅಂದು ವರನ/ವಧುವಿನ ಸ್ವಗೃಹದಲ್ಲಿ ಸೇರಿಕೊಂಡಿರುತ್ತಾರೆ. ದೊಡ್ಡ ಹರಿವಾಣವೊಂದರಲ್ಲಿ ಕುಂಕುಮ, ಅರಶಿಣ, ಹೂವು, ಕಾಯಿ, ಹಣ್ಣು, ಎಲೆ, ಅಡಿಕೆ, ಬೆಲ್ಲ, ಕೊಬ್ಬರಿಬಟ್ಟಲು, ಉತ್ತತ್ತಿ,ಸಕ್ಕರೆ, ಬೆಲ್ಲ, ಮೊದಲಾದ ಹಣ್ಣು ಹಂಪಲುಗಳನ್ನು ಇರಿಸಿ ಕಳಸದ ಆರತಿ, ಒಂದು ಕರಿ ಕಂಬಳಿ ವಿಭೂತಿ, ವೀಳ್ಯದ ಕಂಕಣ ಇವೆ ಮುಂತಾದ ಪೂಜಾ ಸಾಮಗ್ರಿಗಳನ್ನು ಸಿದ್ಧಪಡಿಸಿರುತ್ತಾರೆ. ಕುಟುಂಬ ವಂಶಸ್ಥರು ಮತ್ತು ಕುಲದ ಹಿರಿಯರಿಕರು, ನೆರೆಹೊರೆಯವರು ಸಹ ಇರುತ್ತಾರೆ. ಕರಿ ಕಂಬಳಿಯನ್ನು ಎರಡು ಮಡಿಕೆಯಮೇಲೆ ಚೌಕಕಾರವಾಗಿ ಹಾಸಿರುತ್ತಾರೆ. ಅದರ ಮೇಲೆ ಅಕ್ಕಿಯನ್ನು ಸುರಿದು ರಾಶಿ ಮಾಡಿರುತ್ತಾರೆ. ಅದನ್ನು ವಿಳ್ಯದ ಎಲೆಯಿಂದ ಅಲಂಹಕಾರಿಸಿ ಬಂದವರಿಗೆ ಹಣೆಯ ಮೇಲೆ ವಿಭೂತಿ ಹಚ್ಚಿ ಮತ್ತು ಕುಂಕುಮದ ತಿಲಕವಿಟ್ಟು ಬಲಕೈಗೆ ಕಂಕಣವನ್ನು ಕಟ್ಟುತ್ತಾರೆ. ಈ ರೀತಿಯಾದ ರೀತಿ–ನೀತಿ ರಿವಾಜಗಳ ಸಂಪ್ರದಾಯದ ನಂತರ ಆ ಅಕ್ಕಿಯ ರಾಶಿಯಿಂದ ಬಂದವರಿಗೆ ಎಲ್ಲಾರಿಗೂ ಮೂರು ಹಿಡಿಹಿಡಿಯಾಗಿ ಅಕ್ಕಿಯನ್ನು ಒಂದು ಅಡಿಕೆ ಒಂದು ಎಲೆಯನ್ನು ಮತ್ತು ಉತ್ತತ್ತಿಯನ್ನು ಕೊಡುತ್ತಾರೆ. ಮಿಕ್ಕ ರಾಶಿಯ ಅಕ್ಕಿಯನ್ನು ಒಂದು ಬಿದಿರಿನ ಅಲಂಕರಿಸಿದ ಅರಣೆ ಅಥವಾ ಹರಿವಾಣದಲ್ಲಿ (ಅನುಬಂಧ: ೭.೪.೪. ಛಾಯಾಚಿತ್ರ ೧೪)ರಲ್ಲಿ ನೋಡಬಹುದು. ತುಂಬಿಸಿ ಮನೆಯ ಅಟ್ಟದ ಮೇಲೆ ಅಥವಾ ದೇವರ ಕೋಣೆಯಲ್ಲಿರುಸುತ್ತಾರೆ. ಈ ರೀತಿಯಾದ ಶಾಸ್ತ್ರಕ್ಕೆ ಲಗ್ನ ಕಟ್ಟಿಸುವ ಕಾರ್ಯದ ದಿನದಂದೇ ಕೊಟ್ಟ ತಂದ ವೀಳ್ಯವನ್ನು ಎತ್ತುತ್ತಿದ್ದರು. ಮುಂದೆ ನಡೆಯುವುದೇ ವಿಳ್ಯದ ಶಾಸ್ತ್ರವಾಗಿದೆ.

### ೫.೪.೧೧. ದಿಬ್ಬಣವು ವರ/ವಧುವಿನ ಗೃಹಕ್ಕೆ ಬಂದ ಮೇಲೆ

ವಧು–ವರರ ಕಡೆಯವರು ಮದುವೆ ಮನೆಯ ಊರಿಗೆ ಬರುತ್ತಾರೆ. ಆ ದಿಬ್ಬಣವು ನೇರವಾಗಿ ವರ ಅಥವಾ ವಧುವಿನ ಮದುವೆಯ ಮನೆಗೆ ಹೋಗುವುದಿಲ್ಲ. ಆ ಊರಿನಲ್ಲಿರುವ ದೇವಾಲಯದಲ್ಲಿ ಮೊದಲು ತಂಗುವರು. ಊರಿನಲ್ಲಿ ಸಹ ವಿಶೇಷವಾಗಿ ಅವರವರ ಸಮುದಾಯಕ್ಕೆ ಸಂಬಂಧಪಟ್ಟಂತೆ ದೇವಾಲಯವಿರುತ್ತವೆ. ಅಲ್ಲಿ ಅವರು ತಂಗುವರು. ಆಗ ವರನ ಅಥವಾ ವಧುವಿನ ಮನೆಯಿಂದ ಬೀಗರನ್ನು ದಿಬ್ಬಣವನ್ನು ಬರಮಾಡಿಕೊಳ್ಳಲು ಓಲಗವಾದ್ಯಗಳನ್ನು ತೆಗೆದುಕೊಂಡು ಮತ್ತು ಅದರ

ಜೊತೆಯಲ್ಲಿ ಬೀಗರಿಗೆ ಕುಡಿಯಲು ನೀರು, ಬೆಲ್ಲ ಮತ್ತು ಖಾರಹಚ್ಚಿದ ಮಂಡಿಕ್ಕಿಯನ್ನು ತೆಗೆದುಕೊಂಡು ಹೋಗುತ್ತಾರೆ. ಇಲ್ಲಿ ಆರತಿ ಕಳಸವು ಪ್ರಮುಖ ಪಾತ್ರವಹಿಸುತ್ತದೆ. ನಂತರ ದಿಬ್ಬಣವನ್ನು ದೇವಾಲಯದಲ್ಲಿ ವರನಕಡೆಯವರಿಗೆ ಅಥವಾ ವಧುವಿನ ಕಡೆಯವರೆಗೆ ಸಂಬಂಧಿಸಿದ ಪೂಜಾ ವಿಧಾನ ಮುಗಿಸಿ ಮದುವೆ ಮನೆಗೆ ಬರಮಾಡಿಕೊಳ್ಳುತ್ತಾರೆ. ವರನ ಅಥವಾ ವಧುವಿನ ದಿಬ್ಬಣಕ್ಕೆ ಬಿಡಾರದ ಮನೆ ಕೊಡುತ್ತಾರೆ. ಅಲ್ಲಿ ಆ ದಿಬ್ಬಣವು ತಂಗಿರಬೇಕಾಗುತ್ತದೆ. ಆದರೆ ಇತ್ತೀಚಿಗೆ ವಿದ್ಯಮಾನದಲ್ಲಿ ಕೆಲವರು ಮದುವೆಮಂಟಪಗಳ ಮದುವೆ ನಡೆಯುವುದರಿಂದ ಈ ರೀತಿಯಾದ ಬಿಡಾರದ ಮನೆ ಇರಲಾದ ಇಲ್ಲಿ ವಧು ಮತ್ತು ವರನ ಕಡೆಯವರು ಒಂದೇಡೆ ಸೇರುವುದಿದೆ. ವರನ ಅಥವಾ ವಧುವಿನ ಕಡೆಯ ದಿಬ್ಬಣದ ಐದು ಜನ ಮುತ್ತೈದೆಯರು ಕಳಸ, ಹೂವು, ಅರಶಿಣ, ಕುಂಕುಮ ಹಿಡಿದುಕೊಂಡು ಬಂದು, ಅರಿಷಿಣ, ಕುಂಕುಮವಿರಿಸಿ ಮುಡಿದುಕೊಳ್ಳಲು ಹೂವನ್ನು ಕೊಟ್ಟು ಹುಡುಗಿಗೆ ಅಥವಾ ಹುಡುಗನಿಗೆ ಆರತಿ ಮಾಡಿ ಸ್ವಾಗತಿಸುತ್ತಾರೆ. ಅದೇ ರೀತಿ ಉಳಿದ ಸ್ತ್ರೀಯರಿಗೆ ಅರಿಷಿಣ, ಕುಂಕುಮ, ಹೂವನಿತ್ತು ಸ್ವಾಗತಿಸುತ್ತಾರೆ.

ಅಂದಿನ ರಾತ್ರಿಯಲ್ಲಿ ನಡೆಯುವುದೆ ವೀಳ್ಯದ ಶಾಸ್ತ್ರ ಕ್ಷತ್ರಿಯ:ಕ್ಷತ್ರಿ (ಹಿಂದೂಕ್ಷತ್ರಿಯ) ಕ್ಷತ್ರಿಯರ ಮದುವೆಗಳಲ್ಲಿ ನಡೆಯುವ ಶಾಸ್ತ್ರಗಳಲ್ಲಿ ವೀಳ್ಯದ ಶಾಸ್ತ್ರ ಒಂದು ಪ್ರಮುಖ ಶಾಸ್ತ್ರವಾಗಿದೆ. 'ಅರಿವಾಣದ ಪೂಜೆ ಸಂದರ್ಭದಲ್ಲಿ ವೀಳ್ಯದ ಪೂಜೆಯನ್ನು ಮಾಡುತ್ತಾರೆ. ಇದನ್ನೇ ವೀಳ್ಯದ ಶಾಸ್ತ್ರ ಎಂದು ಕರೆಯುತ್ತಾರೆ. ಅಥವಾ ಸಣ್ಣ ವೀಳ್ಯ ಎಂದು ಸಹ ಕರೆಯುತ್ತಾರೆ. ವರನು ವಧುವಿನ ಮನೆಗೆ ಬರುವ ಸಂದರ್ಭದಲ್ಲಿ ಒಂದು ಸಣ್ಣ ಬಿದಿರಿನ ಪುಟ್ಟಿಯಲ್ಲಿ ವೀಳ್ಯದ ಶಾಸ್ತ್ರಕ್ಕೆ ಬೇಕಾಗುವ ವೀಳ್ಯದೆಲೆ, ಅಡಿಕೆ, ಬಾಳೆಹಣ್ಣು, ತಂದಿರುತ್ತಾರೆ. ಇವುಗಳನ್ನೇ ವೀಳ್ಯದ ಶಾಸ್ತ್ರಕ್ಕೆ ಬಳಸುತ್ತಾರೆ. ವೀಳ್ಯದಶಾಸ್ತ್ರ ಅಥವಾ ಹರಿವಾಣದ ಪೂಜೆಯ ಸಂದರ್ಭದಲ್ಲಿ ಕ್ಷತ್ರಿಯರ ಸಮುದಾಯದ ಯಾಜಮಾನ/ಹಿರಿಯರು ಭಾಗವಹಿಸಿರುತ್ತಾರೆ. ಅಲ್ಲಿ ಒಂದು ರಾಶಿ ಅಕ್ಕಿಯನ್ನು ಕರಿಕಂಬಳಿಯ ಮೇಲೆ ಸುರಿದು, ಕಳಸ ಹೂಡಿ ಪೂಜೆ ಮಾಡುತ್ತಾರೆ. ಕಳಸ ಮತ್ತು ರಾಶಿಯ ಸುತ್ತ ಅಡಿಕೆ, ಎಲೆ ಚಿಗಣಿ ತಂಬಿಟ್ಟುಗಳನ್ನು ಇಟ್ಟಿರುತ್ತಾರೆ. ಕ್ಷತ್ರಿಯ:ಕ್ಷತ್ರಿ (ಹಿಂದೂಕ್ಷತ್ರಿಯ) ಕ್ಷತ್ರಿಯ ಸಮುದಾಯದ/ಕುಲಬಾಂಧವರು ಹಿರಿಯರ ಸಮ್ಮುಖದಲ್ಲಿ ಒಬ್ಬ ಹಿರಿಯರ ಪೂಜೆ ನೆರೆವೇರಿಸುತ್ತಾನೆ. ಈ ಸಂದರ್ಭದಲ್ಲಿ ಸಾವಿರಗಟ್ಟಲೆ ಎಲೆ ಮತ್ತು ಸೇರುಗಟ್ಟಲೆ ಅಡಿಕೆಗಳನ್ನು ಇರಿಸಿರುತ್ತಾರೆ. ಹೆಣ್ಣಿಗೆ ಮತ್ತು ಗಂಡಿಗೆ ತಂದಂತಹ ಒಡವೆಗಳನ್ನು ಮುಖ್ಯವಾಗಿ ಹೆಣ್ಣಿನ ಒಡವೆಗಳಾದ ತಾಳಿ, ಕಾಲುಸುತ್ತು ಅಥವಾ ಕಾಲಂಗುರ ಮತ್ತು ಬಟ್ಟೆಗಳನ್ನು ಇರಿಸಿ ಪೂಜಿಸುತ್ತಾರೆ. ಸಮುದಾಯದ ಹಿರಿಯವನು ಪೂಜೆ ಮಾಡಿದ ನಂತರವೇ ಗಂಡಿಗೆ ಹೆಣ್ಣಿನ ಕಡೆಯವರು ಕೊಡುವ ಬಟ್ಟೆ ಮತ್ತು ಒಡವೆಗಳನ್ನು ಕೂಡುತ್ತಾರೆ. ಇದನ್ನೇ ಬಣ್ಣ ಬಂಗಾರವನ್ನು ಒಪ್ಪಿಸುವುದು ಎನ್ನುತ್ತಾರೆ. ಈ ರೀತಿಯ ಸಂಪ್ರದಾಯಗಳು ಬೇರೆ ಜನಾಂಗಗಳಲ್ಲಿ ಇರುವವಾದವರೂ ಬೇರೆ ಬೇರೆಯಾಗಿ ವಿಭಿನ್ನವಾಗಿ ಕಂಡುಬರುತ್ತದೆ. ಇದೇ ಸಂದರ್ಭದಲ್ಲಿ ಹೆಣ್ಣಿಗೆ ಕೊಡುವ ತೆರ ಕಟ್ಟುವ ಹಣ ೨೫ ರೂಪಾಯಿಗಳಿಂದ ೫೦೦ ರೂಪಾಯಿಯವರೆಗೆ ಮತ್ತು ವರನ ಕಡೆಯವರ ಸಹ ೨೫೦ ರೂಪಾಯಿಯಿಂದ ೫೦೦ ರೂಪಾಯಿಯವರಗೆ ಸಂದಾಯ ಮಾಡಬೇಕಾಗುತ್ತದೆ. ಈ ಹಣವು ಆಯಾ ಭಾಗದ ಗ್ರಾಮದಲ್ಲಿನ ಕುಲದ ಬಾಂಧವರು ರಶೀದಿಯನ್ನು ಹಣ ಸಂದಾಯವಾದ

ಮೇಲೆ ನೀಡುತ್ತಾರೆ. ನಂತರ ಈ ವೀಳ್ಯದ ಪೂಜೆಯ ಮಾಡಿದವರೆ ವೀಳ್ಯವನ್ನು ಎತ್ತಿಕೊಡಬೇಕು. ಮೊದಲು ವೀಳ್ಯವನ್ನು ಕುಲದ ದೈವಕ್ಕೆ ಸಲ್ಲಿಸಿ ನಂತರ ಊರಿನ ಸಮಸ್ತ ದೈವಗಳಿಗೆ ಸಲ್ಲಿಸುತ್ತಾರೆ. ಬಳಿಕ ಅಲ್ಲಿನ ಕುಲದ ಹಿರಿಯರಿಗೆ ಬಳಗದವರಿಗೆ ಮತ್ತು ಊರಿನ ಯಜಮಾನರುಗಳಿಗೆ ಮತ್ತು ಸೋಬಾನೆ ಪದ ಹೇಳುವವರಿಗೆ ಹಂಚಿ ಬಳಿಕ ನೆರೆದ ಸಮಸ್ತರಿಗೂ ಹಂಚುತ್ತಾರೆ. ಈ ಮೂಲಕ ಕುಲದೈವದ ಹಾಗೂ ಸಮಸ್ತ ಗೌಡರ ಮತ್ತು ಜನರ ಆರ್ಶೀವಾದ ಹಾಗೂ ಒಪ್ಪಿಗೆಯನ್ನು ಆ ಮದುವೆಗೆ ಪಡೆಯಲಾಗುತ್ತದೆ. ಇದು ಜಾತಿಯೊಂದರ ಅಲಿಖಿತ ಸಂವಿಧಾನವಾಗಿದ್ದು, ಈ ಜನಾಂಗದ ಸಂಸ್ಕೃತಿಯ ದ್ಯೋತಕವಾಗಿದೆ.

### ೫.೪.೧೨. ಚಪ್ಪರದ ಕಂಬ ತರುವ ಶಾಸ್ತ್ರ

ಕ್ಷತ್ರಿಯ:ಕ್ಷತ್ರಿ (ಹಿಂದೂಕ್ಷತ್ರಿಯ) ಕ್ಷತ್ರಿಯರ ಮದುವೆಗಳಲ್ಲಿ ವಿಶೇಷವಾಗಿ ಕಾಣುವಂತಹ ಒಂದು ಆಚರಣೆ ಎಂದರೆ, ಚಪ್ಪರದ ಕಂಬ ತರುವ ಶಾಸ್ತ್ರ, ಬೇರೆ ಜನಾಂಗಗಳಲ್ಲಿ ಚಪ್ಪರ ಹಾಕುವ ಸಂದರ್ಭದಲ್ಲಿ ಚಪ್ಪರದ ಕಂಬಗಳಿಗೆ ದುಂಡಕಳ್ಳಿ ಕಂಬ(ಹಾಲಕಂಬ), ಅತ್ತಿ ಮರದ ಕಂಬಗಳನ್ನು ಸೇರಿಸಿಯೇ ಚಪ್ಪರ ಹಾಕುತ್ತಾರೆ. ಈ ಕಂಬಗಳನ್ನು ತರುವುದೇ ಒಂದು ವಿಶೇಷವಾಗಿರುತ್ತದೆ. ಅತ್ತೆಯ ಮಗ ಅತ್ತಿಕಂಬವನ್ನು ಮಾವನ ಮಗ ಹಾಲಗಂಬವನ್ನು ವರನ ಕಡೆಯ ನೆಂಟರು ತರಬೇಕೆಂಬ ನಿಯಮವಿದೆ. ಮೂಹೂರ್ತದ ಸಂದರ್ಭದಲ್ಲಿ ಅತ್ತಿಕಂಬದಿಂದ ಮತ್ತು ಹಾಲಕಂಬದಿಂದ ತಯಾರಿಸಿದ ಚಿಕ್ಕ ಮಣಿಗಳನ್ನು (ಅನುಬಂಧ:೭.೪.೪. ಛಾಯಾಚಿತ್ರ ನೋಡಬಹುದು.) ವಧು ವರರಿಬ್ಬರ ಕಾಲಿನಡಿ ಇಟ್ಟಿರುತ್ತಾರೆ. ಹಾಲಗಂಬ, ಅತ್ತಿಕಂಬ ಇವುಗಳೆಲ್ಲವೂ ಪುನಃ ಚಿಗುರುವ ಗುಣವುಳ್ಳವುಗಳಾಗಿದ್ದು, ಅವುಗಳಂತೆ ಇವರೀರ್ವರ ವಂಶ ಚಿಗುರಲಿ ಬೆಳೆಯಲಿ ಎಂಬುದರ ಸಂಕೇತವಾಗಿ ಇವುಗಳನ್ನು ಬಳಸುವ ಸಂಪ್ರದಾಯವಿದೆ. ಈ ಮಣೆಗಳನ್ನು ಮಾಡುವರು ಬಡಗಿಯವರು (ಮರದ ಕೆಲಸ) ಮಾಡುವರು.

### ೫.೪.೧೩. ಅರಿಶಿಣಶಾಸ್ತ್ರ ಅಥವಾ ಹಸೆಶಾಸ್ತ್ರ

ಮಂಗಳದಾಯಕವಾದ ಕಾರ್ಯದಲ್ಲಿ ವಧು-ವರರಿಬ್ಬರಿಗೂ ಅರಿಶಿಣಶಾಸ್ತ್ರ ಪವಿತ್ರವಾದದ್ದು. ಈ ಶಾಸ್ತ್ರವನ್ನು ಮದುವೆಯ ಮನೆಯಲ್ಲಿ ರಾತ್ರಿ ನಡೆಯುವ ಶಾಸ್ತ್ರವಾಗಿದೆ. ಹಾಗೆ ಮುಂದುವರೆದು ಮಂಗಳ ಸ್ನಾವಾಗುವರಗೆ ನಡೆಯುತ್ತಿರುತ್ತದೆ. ಎಣ್ಣೆ ಮತ್ತು ಅರಿಶಿಣವನ್ನು ಕೂಡಿಸಿ ತಯಾರಿಸುತ್ತಾರೆ. ವಧುವರರಿಗೆ ಮಂಗಳ ಸ್ನಾನ ಮಾಡಿಸುವ ಮುಂಚೆ ಮಾಡುವ ಶಾಸ್ತ್ರವನ್ನು ಹಸೆಶಾಸ್ತ್ರ ಎಂದು ಕರೆಯುತ್ತಾರೆ. ವಧುವರರಿಗೆ ನಾಗಾಲಿಹಸೆ, ಬಾಸಿಂಗದಸೆ, ದೇವರಸೆ, ಸಾಲಿಹಸೆ, ಮುಂತಾದ ಒಂಭತ್ತು ರೀತಿಯ ಹಸೆಗಳನ್ನು ಬರೆದು, ವಧುವರರನ್ನು ಅಹಸೆಗಳ ಮೇಲೆ ಪ್ರತ್ಯೇಕವಾಗಿ ಮತ್ತು ಒಟ್ಟಿಗೆ ಕೂರಿಸಿ ಅರಿಶಿಣದೆಣ್ಣೆ ಹಚ್ಚಲು ಪ್ರಾರಂಭಿಸುತ್ತಾರೆ. ಮೊದಲು ತಾಯಿ ಮತ್ತು ಸೋದರತ್ತೆಯರು ಅರಿಶಿಣವನ್ನು ವಧುವಿಗೆ ಬಲ ಅಂಗುಷ್ಟು ನಂತರ ಎಡ ಮೋಣಕೈಗೆ ಬಲಭುಜ, ಎಡಭುಜ ಮತ್ತು ಹಣೆಗೆ, ಕೆನ್ನೆಗೆ ಹಚ್ಚುತ್ತಾರೆ. ಅದೇ ರೀತಿಯಾಗಿ ವರನಿಗೆ ಸಹ ಹಚ್ಚಲಾಗುತ್ತದೆ. ನಂತರ ಮುತ್ತೈದೆಯರು ಅವರಿಗೆ ಸಾಸುವೆ ಇಟ್ಟು ಆಶೀರ್ವದಿಸುತ್ತಾರೆ. ಇದನ್ನೇ ಹಸೆಶಾಸ್ತ್ರ ಎಂದು ಕರೆಯುತ್ತಾರೆ. ಈ ಶಾಸ್ತ್ರ

ಮುಗಿದ ಬಳಿಕ ವರ ವಧುವಿಗೆ ಸ್ನಾನ ಮಾಡಿಸಲು ಗಂಗೆಯನ್ನು ತರಲು ಐದು ಜನ ಮುತ್ತೈದುರು ಅಥವಾ ಅಲ್ಲಿಯೇ ಹತ್ತಿರವಿರುವ ಬಾವಿ ಅಥವಾ ಕೊಳಯಿನದಿಗೆ ಹೋಗುವರು. ಅಲ್ಲಿ ಗಂಗೆ ಪೂಜೆಯನ್ನು ಮಾಡಿಕೊಂಡು ಐದುಜನ, ಮುತ್ತೈದುರು ತುಂಬಿದ ನೀರಕೊಡಗಳನ್ನು ತಂದು ವಧು-ವರರಿಗೆ ಹರಿನೀರು ಹಾಕಲು ಪ್ರಾರಂಭಿಸುತ್ತಾರೆ. ಅಲ್ಲಿ ವಿಧಿವತ್ತವಾದ ಒಂದು ಕಾರ್ಯ ನಡೆಯುತ್ತದೆ. ಐದು ಜನ ಮುತ್ತೈದೆಯರು ತಂದ ನೀರನ್ನು ನಾಲ್ಕು ಕಡೆ ಅಂದರೆ ನಾಲ್ಕು ದಿಕ್ಕಿನಲ್ಲಿ ನಾಲ್ಕು ಕೊಡವಿಟ್ಟು ಸುರಗಿಯನ್ನು ಸುತ್ತುತ್ತಾರೆ. ನಂತರ ಪೂಜೆಮಾಡಿದನಂತರ ಸುರಗೆ ನಡುವೆ ವಧು-ವರರನ್ನು ನಿಲ್ಲಿಸಿ ಅಥವಾ ಕುಳ್ಳರಿಸಿ ಕಳಸದಿಂದ ಆರತಿ ಮಾಡಿ ಕೂಡದಲ್ಲಿ ತಂದು ಗಂಗೆಯನ್ನು ಮತ್ತು ಹತ್ತಿಕಂಬ ಮತ್ತು ಹಾಲಗಂಬದಿಂದ ಮಾಡಿದ ಮಣಿಯನ್ನು ಹಿಡಿದುಕೊಂಡು ವಧು-ವರರ ತಲೆಯ ಮೇಲೆ ಹರೀನೀರನ್ನು ಹಾಕುತ್ತಾರೆ. ಇದಕ್ಕೆ ಅರಿಶಿಣದ ನೀರು ಹಾಕುವುದು ಎನ್ನುತ್ತಾರೆ. ವಧುವರರಿಬ್ಬರೂ ದಾಂಪತ್ಯ ಜೀವನಕ್ಕೆ ಕಾಲಿಡುವ ಮುನ್ನ ಮಾಡುವ ಪವಿತ್ರ ಸ್ನಾನ (ಅವಭೃತಸ್ನಾನ)ವಾದ್ದರಿಂದ ಯಾವುದೇ ಕ್ಷುದ್ರ ಶಕ್ತಿಗಳ ದೃಷ್ಟಿ ತಾಕದರಲೆಂದು ಈ ಸುರಿಗೆ ನೂಲನ್ನ ವಧು-ವರರ ಸುತ್ತ ಹಿಡಿದುಕೊಳ್ಳುತ್ತಿದ್ದದು ಕಾಣುವುದು ಹಾಗೇ ವಧು-ವರರ ಅರಿಷಿಣದಿಂದ ಕೊಡಿದ ಬಟ್ಟೆಯನ್ನು ಅಗಸನಿಗೆ ತಗೆದುಕೊಂಡು ಹೋಗುತ್ತಾರೆ.

**೫.೪.೧೪. ಬಿಡದಿ ಕೊಡುವ ಶಾಸ್ತ್ರ**

ನೀರಾಕುವ/ಮೇಲ್ನಿರು ಶಾಸ್ತ್ರ ಮುಗಿದ ಬಳಿಕ ವರನನ್ನು ಅಲಂಕಾರ ಮಾಡಿ ಬಿಡದಿ ಕೊಡಲಾಗುತ್ತದೆ. ಬಿಡದಿಯನ್ನು ಸಾಮಾನ್ಯವಾಗಿ ನೆಂಟರಮನೆಗೆ ಕೊಡುತ್ತಾರೆ. ಇದೆ ಸಂದರ್ಭದಲ್ಲಿ ಮುಹೂರ್ತಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಬಿಡದಿ ಕೊಟ್ಟ ಸಂದರ್ಭದಲ್ಲಿ ಹೆಣ್ಣಿಗೆ ಗಂಡಿಗೆ ಕೊಡುವ ಬಟ್ಟೆ ಒಡವೆಗಳನ್ನು ಪರಸ್ಪರ ಮೂರು ಬಾರಿ ಕೊಟ್ಟು ಮಾಡುತ್ತಾರೆ. ಬಿಡದಿ ಕೊಟ್ಟ ಬಳಿಕ ಮಧು ಮಗಳ ಶೃಂಗಾರ ಮತ್ತು ಮಧುಮಗನ ಶೃಂಗಾರಕ್ಕೆ ಹೆಚ್ಚು ಮಹತ್ವವಿದೆ.

ಕ್ಷತ್ರಿಯರು ಮಧುಮಗಳ ಶೃಂಗಾರಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ. ಶೃಂಗಾರಕ್ಕೆ ಬೇಕಾದ ಸಾಮಗ್ರಿಯನ್ನು ಈ ಹಿಂದೆ ಗಂಡಿನ ಕಡೆಯ ಮುತ್ತೈದೆಯರು ವಧುವಿನ ತಾಯಿಗೆ ಹಸ್ತಾಂತರಿಸುತ್ತಾರೆ. ಮಧುಮಗಳಿಗೆ ಧಾರೆಯ ಸೀರೆಯನ್ನುಡಿಸಿ ಹಣೆಗೆ ಬೊಟ್ಟನ್ನು ಚಂದ್ರಿಕೃತಿಯಲ್ಲಿಟ್ಟು ತಿಲಕವಿಟ್ಟು, ಬಾಸಿಂಗವನ್ನು ಕಟ್ಟುವರು. ಬಾಸಿಂಗದ ಸುತ್ತಲೂ ಮಲ್ಲಿಗೆ ಹೂವಿನಿಂದ ಜಡೆಯನ್ನು ಅಲಂಕರಿಸುತ್ತಾರೆ. ಸೊಂಟಕ್ಕೆ 'ಡಾಬು' ಕೈಬೆರಳಿಗೆ ಉಂಗುರ, ಮದರಂಗಿ, ಎರಡು ಕೈಗಳಿಗೆ ಹಸಿರು ಬಳೆ, ಕಿವಿಗಳಿಗೆ ಚಿನ್ನಾಭಾರಣಗಳನ್ನು ತೊಡಿಸುತ್ತಾರೆ. ಕೊರಳಿಗೆ ಮುತ್ತಿನ ಸರ ಹಾಕುತ್ತಾರೆ. ಈ ಮೊದಲು ಕೆಲವೊಂದು ಸಂಪ್ರದಾಯಿಕ ಆಭರಣಗಳಾದ ಸೊಂಟದ ಪಟ್ಟಿ, ತೋಳಪಟ್ಟಿ, ಕೆನ್ನೆಸರ ಇಡುತ್ತಿದ್ದರು. ಆಧುನಿಕತೆಯ ಪ್ರಭಾವದಿಂದಾಗಿ ಇಂದು ಬೇರೆ ಬೇರೆ ಆಭರಣಗಳನ್ನು ಬಂಗಾರದ ಮಳಿಗೆಗಳಿಂದ ಬಾಡಿಗೆಗೆ ತರುವುದು ನಂತರ ಹಿಂದಿರುಗಿಸುವ ಕ್ರಮವಿದೆ.

ಮಧುಮಗನಿಗೆ ಧಾರೆಯ ಮುಂಚಿತ ಅಲಂಕರಿಸುವುದು ಕಡಿಮೆ ಆದರೆ ಧಾರೆಯನಂತರ ಶೃಂಗಾರಿಸುವುದು ಸಾಮಾನ್ಯ. ಸಂಪ್ರದಾಯ ರೀತಿಯಲ್ಲಿ ಹದಿನಾರು ಮೊಳದ ಪಂಚೆಯಿಂದ ಕಚ್ಚೆಯನ್ನು

ಕಟ್ಟಬಿಳಿ ಅಂಗಿ ತಲೆಗೆ ಪೇಟವನ್ನು ತೋಡಿಸುತ್ತಾರೆ. ಬಿಳಿ ಅಥವಾ ಕೆಂಪು ಶಾಲನ್ನು ಬಲ ಮತ್ತು ಎಡ ಭುಜದ ಮೇಲೆ ಇಳಿ ಬಿಡುತ್ತಾರೆ. ಹಣೆಗೆ ತಿಲಕವನ್ನಿಟ್ಟು ಬಾಸಿಂಗವನ್ನು ಭಾವನು/ಮಾವನು ಕಟ್ಟುತ್ತಾನೆ. ಸಿಂಗಾರಿಸುವ ಕೆಲಸವನ್ನು ಸ್ನೇಹಿತರು, ಸಹೋದರ ಮಾವನು ಮಾಡುತ್ತಾರೆ. ವರನ ಕೈಯಲ್ಲಿ ಪುರೋಹಿತರು ಸೂತ್ರಬಂಧ ಮಾಡಿಕೊಟ್ಟು ಜುಟ್ಟು ಇದ್ದ ಸಣ್ಣ ತೆಂಗಿಕಾಯಿ ಮತ್ತು ವರನು ಸ್ವಗೃಹದಿಂದ ತಂದ ಕಠಾರಿ ಅಥಾವ ಕತ್ತಿಯು ಸಹ ಇರುತ್ತದೆ. ಇವರಿಬ್ಬರ ಶೃಂಗಾರ ಅದಾ ಮೇಲೆ ಮೂಹೂರ್ತಕ್ಕೆ ಎಲ್ಲ ಸಿದ್ಧತೆಗಳು ಮುಗಿದ ನಂತರ ವರನನ್ನು ಬಿಡದಿ ಮನೆಯಿಂದ ಕರೆತರಲಾಗುತ್ತದೆ. ಆಗಾ ಅಲ್ಲಿ ವರನು ಮಂಗಳಸೂತ್ರವನ್ನು ಸಿದ್ಧಮಾಡಬೇಕಾಗುತ್ತದೆ. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರಲ್ಲಿ ಬಂಗಾರದ ತಾಳಿಯನ್ನು ಕಟ್ಟುವ ಕ್ರಮವಿಲ್ಲ. ಇವರಲ್ಲಿ ಅರಿಶಿಣದ ಮಂಗಳ ಸೂತ್ರದೊಡನೆ ಎರಡು ಚಿನ್ನದ ಗುಂಡಿನ (ಪದಕ) ಮಧ್ಯದಲ್ಲಿ ಹವಳ ಕರಿಮಣಿಗಳನ್ನು ಸೇರಿಸಿಡುತ್ತಾರೆ. ಇಲ್ಲಿ ಈ ಬಂಗಾರದ ತಾಳಿಯ ಪದಕವನ್ನು ಗಂಡಿನ ಕಡೆಯವರು ಹೆಣ್ಣಿನ ಕಡೆಯವರು ಸೇರಿ ತರುವುದು, ವರನ ಕಡೆಯವರು ಸ್ವಲ್ಪ ತೂಕ ಜಾಸ್ತಿ ಇರುವುದುಕೊಟ್ಟರೆ ವಧುವಿನ ಕಡೆಯವರು ಕಡಿಮೆ ತೂಕದ ಬಂಗಾರದ ಪದಕವನ್ನು ಕೊಡಿಸಬೇಕು. ಈ ಮಂಗಳ ಸೂತ್ರವನ್ನು ವರನೆ ಕುಳಿತು ಸಿದ್ಧಮಾಡಬೇಕಾಗುತ್ತದೆ. ಅದಕ್ಕೆ ಮುತ್ತೈದೆಯರು ಸಹ ಸಹಾಯ ಮಾಡುತ್ತಾರೆ. ಇದು ಬೆಸ ಸಂಖ್ಯೆಯಲ್ಲಿ ಇರುತ್ತದೆ. ಏಕೆಂದರೆ ಶುಭದಾಯಕವೆಂದು ಅಥವಾ ಗುಂಡಿನ ನಡುವೆ ಹವಳ ಪ್ರಶಸ್ತವೆಂದು ಈ ರೂಢಿಯನ್ನು ಮಾಡಿಕೊಂಡಿರುವ ಸಾಧ್ಯತೆ ಇದೆ. ನಂತರ ಮದುವೆಯ ಮೂಹೂರ್ತಕ್ಕೆ ವರನು ಬಿಡದಿ ಮನೆಯಿಂದ ಕರೆತರಲಾಗುತ್ತದೆ. ಈ ಸಂದರ್ಭದಲ್ಲಿ ವರನನ್ನು ವಧುವಿನ ಕಡೆಯವರು ಎದುರುಗೊಂಡು ಪರಸ್ಪರ ಭತ್ತ, ಅಥವಾ ಅಕ್ಷತೆಯನ್ನು ಎರಚುತ್ತಾರೆ. ಇದಕ್ಕೆ ಎದುರುಗೊಳ್ಳುವ ಶಾಸ್ತ್ರವೆಂದು ಕರೆಯುತ್ತಾರೆ. ಮಧುಮಗ ಅಕ್ಕಿ ಇಟ್ಟು ಕುಡಿಬಾಳೆಯ ಮೇಲೆ ನಿಂತಾಗ ಅತ್ತೆ ಓಕಳಿಯಿಂದ ದೃಷ್ಟಿತೆಗೆದು ಹಣೆಗೆ ತಿಲಕವಿಟ್ಟು ಮಂಟಪಕ್ಕೆ ಕರೆದೊಯ್ಯುತ್ತಾರೆ. ಚಪ್ಪರದಲ್ಲಿ ಮಂಟಪ ಸಿದ್ಧಗೊಂಡಿರುತ್ತದೆ. ವರನು ಪ್ರದಕ್ಷಿಣೆ ಹಾಕಿ ಬಲಕಾಲು ಮುಂದಿಟ್ಟು ಮಂಟಪವನ್ನು ಪ್ರವೇಶಿಸಿ ಮಣೆಯ ಮೇಲೆ/ಕುರ್ಚಿಯ ಬಲಭಾಗದಲ್ಲಿ ಕುಳಿತುಕೊಳ್ಳುವ ಪದ್ಧತಿ ಇದೆ. ಆದರೆ ಇಂದು ಉಡುಗೆ ತೊಡುಗೆಯಲ್ಲಿ ಸಂಪ್ರದಾಯದಲ್ಲಿ ಪರಿವರ್ತನೆಗಳಾಗಿವೆ.

**೫.೪.೧೫. ಮುಹೂರ್ತ**

ಮುಹೂರ್ತದ ಸಂದರ್ಭದಲ್ಲಿ ವಿವಾಹ ವೇದಿಕೆಯ ಮೇಲೆ ಪುರೋಹಿತರು, ಗಳಿಗೆ ಬಟ್ಟಲನ್ನು ಸಿದ್ಧಗೊಳಿಸುತ್ತಾರೆ. ಪೂರ್ವಾಭಿಮುಖವಾಗಿ ಇರಿಸಿದ ಐದು ಬಾಳೆ ಎಲೆಗಳಲ್ಲಿ ೯ ಸೇರು ಬೆಳ್ತಿಗೆ ಅಕ್ಕಿ ೯ ತೆಂಗಿನಕಾಯಿ, ೨ ಎಳೆನೀರು, ವೀಳ್ಯದೆಲೆ, ಅಡಿಕೆ, ರಂಗೋಲಿ ಪುಡಿ, ೨ ದೀಪ, ಮಲ್ಲಿಗೆ ಸಹಿತ ಐದು ಬಗೆಯ ಪುಷ್ಪಗಳು, ಫಲವಸ್ತುಗಳು, ದಾರಿ ಗಿಂಡಿಂಗೆ, ಕರಿಮಣಿಸರ (ಮಾಂಗಲ್ಯ) ಅರಶಿಣದ ತುಂಡು ನೂಲಿನುಂಡೆ, ದೀಪದ ಹತ್ತಿ, ಅಗರಬತ್ತಿ, ಎಣ್ಣೆ ಇತ್ಯಾದಿಗಳನ್ನು ಸಿದ್ಧಪಡಿಸಲಾಗುವುದು. ಮಂಟಪದಲ್ಲಿ ನವಗ್ರಹ ಪೂಜೆಗೆ ೯ ತೆಂಗಿನಕಾಯಿ ೯ ಸೇರು ಅಕ್ಕಿಯ, ೯ ರೀತಿಯ ದವಸ ಧಾನ್ಯಗಳು, ವೀಳ್ಯದೆಲೆ ಅಡಿಕೆ ಇಡಲಾಗುತ್ತದೆ. ಗುರುಗಣಪತಿಗೆ ಒಂದೊಂದು

ಸ್ವಸ್ತಿಕೆ, ವೀಳ್ಯದೆಲೆ, ಅಡಿಕೆ, ಬೆಲ್ಲ, ಬಾಳೆಹಣ್ಣು ಸಿದ್ಧಗೊಳಿಸಿ ಪುಣ್ಯಾಹವಾಚನ ಮತ್ತು ನಾಂದಿ ಸಮಾವರ್ತನೆಗೆ ವಧು–ವರರ ತಂದೆ ತಾಯಿಗಳನ್ನು ಸಂಕಲ್ಪ ಮಾಡಿಸುತ್ತಾರೆ. ವೇದಿಕೆಯ ಮೇಲಿರಿಸಿದ ಅಕ್ಕಿ ಹಾಕಿದ ಎರಡು ತುದಿ ಬಾಳೆ ಎಲೆಯ ಮೇಲೆ ವರನನ್ನು ಪೂರ್ವಾಭಿಮುಖವಾಗಿ ವಧುವನ್ನು ಪಶ್ಚಿಮ ದಿಕ್ಕಿಗೆ ಮುಖಮಾಡಿ ಪರಸ್ಪರ ಅಭಿಮುಖವಾಗಿ ನಿಲ್ಲಿಸಲಾಗುವುದು. ಪುರೋಹಿತರು ವಧು–ವರರಿಗೆ ತೀರ್ಥಪ್ರಸಾದ ನೀಡಿ ಮೊದಲು ವರನಿಗೆ ನಂತರ ವಧುನಿಗೂ ಇಬ್ಬರ ನಡುವಿನ ಅಂತಃಪಟವನ್ನು ತೆಗೆಯುತ್ತಾರೆ. ಪರದೆ ತೆಗೆದ ಮೇಲೆ ಪುರೋಹಿತರು ಇಬ್ಬರಿಗೂ ತೀರ್ಥಪ್ರಸಾದ ನೀಡಿ ಇಬ್ಬರ ಕೈಯಲ್ಲೂ ಹೂ ಮಾಲೆಯನ್ನು ನೀಡುತ್ತಾರೆ. ಪುರೋಹಿತರ ಮಂತ್ರೋಚ್ಚಾರಣೆಯೊಂದಿಗೆ ಮೊದಲು ವಧು ವರನ ತಲೆಗೆ ಮತ್ತು ಪಾದಕ್ಕೆ ಅಕ್ಷತೆ ಹಾಕಿ ಹೂವಿನ ಹಾರವನ್ನು ವರನ ಕೊರಳಿಗೆ ಹಾಕಿ ಆತನ ಪಾದಗಳನ್ನು ಹಿಡಿಯಬೇಕು. ಆ ಮೇಲೆ ಮಂತ್ರೋಚ್ಚಾರಣೆಯೊಂದಿಗೆ ವರ ವಧುವಿನ ತಲೆಯ ಮೇಲೆ ಅಕ್ಷತೆ ಹಾಕಿ ವಧುವಿನ ಕೊರಳಿಗೆ ಹಾರವನ್ನು ಹಾಕುತ್ತಾನೆ.

**೫.೪.೧೬. ಕನ್ಯಾದಾನ/ಧಾರೆ ಎರೆಯುವುದು**

ಇದೊಂದು ವಧುವನ್ನು ವರನಿಗೆ ಒಪ್ಪಿಸುವ ವಿಶಿಷ್ಟ ಸಂಪ್ರದಾಯ ಇದನ್ನು ಕ್ಷತ್ರಿಯರ ಸಮುದಾಯದಲ್ಲಿ ಧಾರೆ ಎರೆದುಕೊಡುವುದು, ಕನ್ಯಾದಾನ ಮಾಡಿಕೊಡುವುದು ಎಂದು ಕರೆಯುತ್ತಾರೆ. ತಾಳಿಯನ್ನು ಕಟ್ಟುವ ಮುನ್ನ ವಧುವಿನ ತಂದೆ–ತಾಯಿ ಬಂಧುಗಳು ಧಾರೆ ಎರೆಯುತ್ತಾರೆ. ಪುರೋಹಿತರು ವರನ ಎರಡೂ ಕೈಗಳ ಮೇಲೆ ವಧುವಿನ ಎರಡು ಕೈಗಳನ್ನು ಇರಿಸಲಾಗುವುದು. ಆ ಕೈಗಳ ಮೇಲೆ ಮೊದಲು ವೀಳ್ಯದ ಎಲೆ ನಂತರ ಅಡಿಕೆ ಒಂದು ರೂಪಾಯಿ ನಾಣ್ಯ ಅಥವಾ ಬೆಳ್ಳಿಯ ನಾಣ್ಯ ಧರ್ಭೆ ಮತ್ತು ತುಳಸಿ ದಳಗಳು, ತೆಂಗಿನ ಕಾಯಿನ್ನು ಪುರೋಹಿತರು ಇರಿಸುತ್ತಾರೆ. ಧಾರೆ ಎರೆದು ಕನ್ಯಾದಾನ ಮಾಡಿದ ವಧುವಿನ ತಂದೆ ತಾಯಿ ಧಾರೆಯ ಗಿಂಡಿಗೆ ಅಂದರೆ ಧಾರೆಯನ್ನು ಎರೆಯಲು ಧಾರೆಯ ನೀರಿನಲ್ಲಿ ಹಾಲನ್ನ ಬೆರೆಸಿರುತ್ತಾರೆ. ಈ ಹಾಲು ನೀರು ಮುಂದೆ ಸಂಸಾರದಲ್ಲಿ ಬರುವಂತಹ ಕಷ್ಟ ಸುಖಗಳೆರಡನ್ನು ಸಮನಾಗಿ ಸ್ವೀಕರಿಸಬೇಕೆಂಬ ಆಶಯವನ್ನು ಬಿಂಬಸುತ್ತದೆ. ನಂತರ ಪುರೋಹಿತರು ವಧು ವರನ ಬಟ್ಟೆಗಳನ್ನು ಮೂರುಗಂಟನ್ನು ಹಾಕುತ್ತಾರೆ. ಈ ಸಂದರ್ಭದಲ್ಲಿ ಸೋದರ ಮಾವಂದಿರು ಹಾಗೂ ರಕ್ತ ಸಂಬಂಧಿಗಳು ಎರಡು ಕಡೆಗಳಲ್ಲಿ ನಿಲ್ಲುತ್ತಾರೆ. ಅನಂತರ ವರನ ವಧುವಿನ ಗೋತ್ರ ಹಿರಿಯರ ಹೆಸರುಗಳನ್ನು ವಧುವರರ ನಕ್ಷತ್ರ ನಾಮಗಳನ್ನು ಹೇಳಿ ಪುರೋಹಿತರು ವಧುವಿನ ತಂದೆ ಮತ್ತು ತಾಯಿಂದ ಪವಿತ್ರ ನೀರು ಭೂಮಿಗೆ ಬೀಳದಂತೆ ಮೂರಸಲ ಧಾರೆ ನೀರು ಹೇಳುತ್ತಾರೆ. ಆಗಾ ಪುರೋಹಿತರು ಮಂತ್ರೋಚ್ಚಾರಣೆ ಮಾಡ್ತತಾನೆ ಇರುತ್ತಾರೆ. ಈ ಸಂದರ್ಭದಲ್ಲಿ ಧಾರೆಯ ಪವಿತ್ರ ನೀರು ಭೂಮಿಗೆ ಬೀಳದಂತೆ ಕೈಯ ಅಡಿಭಾಗದಲ್ಲಿ ವರನ ಸೋದರ ಮಾವ ಅತ್ತೆ ಅಥವಾ ತಂದೆ, ತಾಯಿ, ಅಕ್ಕ, ಭಾವ ಹರಿವಾಣವನ್ನು ಹಿಡಿದುಕೊಳ್ಳುತ್ತಾರೆ. ಇದೇ ರೀತಿ ವಧು–ವರರಿಗೆ ಮೂರು ಸಲ ಸುತ್ತು ಬಂದು ಪ್ರತಿಸಲವೂ ಮೂರು ಸಲಧಾರೆ ಎರೆಯುತ್ತಾರೆ. ಹರಿವಾಣದಲ್ಲಿ ಸಂಗ್ರಹವಾದ ನೀರನ್ನು ಫಲಪುಷ್ಪ ನೀಡುವ ಕಲ್ಪವೃಕ್ಷ ಅಥವಾ ಹೂವಿನ ಗಿಡದ ಕೆಳಗೆಡೆ ಹಾಕಲಾಗುತ್ತದೆ. ಇದು ಕನ್ಯಾದಾನದ ಮುಖ್ಯಭಾಗ ಈ ಧಾರೆಯೇ ಆಗಿದೆ.

### ೫.೪.೧೭. ಕಂಕಣ ಬಂಧನ

ಮುಖಪಟ/ಅಂತ:ಪಟ ತೆಗೆದ ನಂತರ ಧಾರೆಯನ್ನು ಮಾಡುವ ಸಂದರ್ಭದಲ್ಲಿ ಮದುವೆಯ ಕೆಲಸ ನಿರ್ವಿಘ್ನವಾಗಿ ನಡೆಯಬೇಕೆಂಬ ದೃಷ್ಟಿಯಿಂದ ಹುಟ್ಟಿಕೊಂಡ ಸಂಪ್ರದಾಯ. ಇದನ್ನು ಕಂಣಬಂಧನ, ಸೂತ್ರ ಪರಿವೇಷ್ಟನ, ಸೂತ್ರಬಂಧನ ಎಂದು ಕರೆಯುತ್ತಾರೆ. ಎಂಟು ಸುತ್ತು ನೂಲಿನಿಂದ ವಧುವರರನ್ನು ಬಂಧಿಸಿ ಮೇಲಿಂದ ತೆಗೆದು ನಾಲ್ಕು ಸುತ್ತು ನೂಲನ್ನು ವಧುವಿನ ಎಡಗೈಗೆ ಅರಿಶಿಣ ತುಂಡುಗಳೊಂದಿಗೆ ಕಟ್ಟುತ್ತಾರೆ. ಇದು ವಧುವರರಿಗೂ ಅವರ ತಂದೆ-ತಾಯಂದಿರಿಗೂ ಮದುವೆ ಮುಗಿಯುವವರಿಗೆ ಯಾವ ಸೂತಕವು ಭಾದಕವಾಗದಂತೆ ಮಾಡುವ ವಿಧಾನವೂ ಹೌದು. ಇದನ್ನು ಪುರೋಹಿತರು ಹಾರವಿನಿಮಯ, ಧಾರೆಶಾಸ್ತ್ರ, ಮಂಗಳಸೂತ್ರ ಧಾರಣೆಯ ನಂತರ ನೇರವೇರಿಸಿಕೊಡುತ್ತಾರೆ. ಇದು ಮದುವೆಯ ಕಾರ್ಯ ಮುಗಿಯವರೆಗೂ ತಗೆಯುವಂತಿಲ್ಲ.

### ೫.೪.೧೮. ಮಾಂಗಲ್ಯಧಾರಣೆ

ಇದು ಮದುವೆ ಮುಖ್ಯ ಘಟ್ಟ ಧಾರೆಯನ್ನು ಎರೆಯುವ ಕಾರ್ಯದ ನಂತರ ವಧುವರರನ್ನು ಎದುರುಬದುರಾಗಿ ನಿಲ್ಲಿಸಿದ್ದಾಗ ಅವರ ಕೈಯಲ್ಲಿದ್ದ ಧಾರೆಯಿಂದ ತೆಂಗಿನಕಾಯಿಯನ್ನು ತೆಗೆದು ಇರಿಸುತ್ತಾರೆ. ನಂತರ ವಧುವರರು ಮೆಟ್ಟಿಕ್ಕಿಯ(ಬಿದರಿನ ಪುಟ್ಟಿಯಲ್ಲಿ ಭತ್ತವನ್ನು ಇಟ್ಟಿರುತ್ತಾರೆ)ಮೇಲೆ ನಿಂತಿರುವಾಗ ಮುತ್ತೈದೆಯರಿಂದ ಗುರುಹಿರಿಯರಿಂದ ಮದುವೆಗೆ ಬಂದಂತಹ ಬಂಧು-ಬಾಂಧವರಿಂದ ನೆಂಟರಿಷ್ಟರಿಂದ ವಧುವಿಗೆ ವರನು ಧಾರೆಗೆ ಮಾಡಬೇಕಾಗಿರು ಮಂಗಳಸೂತ್ರವನ್ನು ಆಶೀರ್ವಧಿಸಿಕೊಂಡು ಬಂದು ವರನ ಕೈಯಿಂದಲೂ ಸಹ ಮಂಗಳಸೂತ್ರಕ್ಕೆ ನಮಸ್ಕಾರಿಸಿಕೊಂಡ ಮೇಲೆ ಪುರೋಹಿತರು ಪಡೆದುಕೊಂಡು ಮಂತ್ರೋಚ್ಚಾರಣೆ ಮಾಡುತ್ತಾ ವರನ ಕೈಗೆ ನೀಡಿದಾಗ ಆತ ವಧುವಿನ ಕೊರಳಿಗೆ ಕಟ್ಟುವ ಮುಂಚೆ ಅಕ್ಷಣದಲ್ಲಿ ನೆರದಂತಹ ಸಭಾ ಗುರುಹಿರಿಯರನ್ನು ಒಪ್ಪಿಗೆ ಪಡೆಯುತ್ತಾರೆ. ವಾದ್ಯಘೋಷ ಮಂತ್ರೋಚ್ಚಾರಣೆಯಿಂದ ಸಮ್ಮತಿಯನ್ನು ಪಡೆದ ಮೇಲೆ ವರನಿಗೆ ಕೊಟ್ಟ ಮಂಗಳಸೂತ್ರವನ್ನು ಕಟ್ಟಲು ಪುರೋಹಿತರು ಹೇಳುತ್ತಾರೆ. ನಂತರ ಅಲ್ಲಿದ್ದ ಮುತ್ತೈದೆಯರು ಸಹ ಅದನ್ನು ಕಟ್ಟಲು ಸಹಾಯ ಹಸ್ತ ಚಾಚುತ್ತಾರೆ. ವಧುವಿನ ಕೊರಳಿಗೆ ಮಂಗಳಸೂತ್ರವನ್ನು ಕಟ್ಟುವಾಗ ಗಟ್ಟಿಮೇಳ ಗಟ್ಟಿಮೇಳ ಎಂದು ಹೇಳುತ್ತಾರೆ. ಆಗ (ಸರ್ವರು ತಮ್ಮ ಕೈಯಲ್ಲಿದ್ದ ಕುಂಕುಮಾಕ್ಷತೆಯನ್ನು ವಧುವರರಿಗೆ ಹಾಕುತ್ತಾರೆ. ಆ ಮಂಗಳಸೂತ್ರ/ಕರಿಮಣಿಯನ್ನು ಕಟ್ಟಿದ ಬಳಿಕ ವರನು ವಧುವಿಗೆ ಕೈ ಉಂಗುರುವನ್ನು ವರನ ಕೈ ಬೆರಳಿಗೆ ಉಂಗುರವನ್ನು ತೊಡಿಸುತ್ತಾರೆ. ನಂತರ ವರನ ಕಡೆಯವರ ಮತ್ತು ವಧುವಿನ ಕಡೆಯವರು ಆಶೀರ್ವಾದ ಮಾಡುತ್ತಾರೆ).

ಪುರೋಹಿತರು ಮಾಂಗಲ್ಯಂ ತಂತುನಾನೇನ ಮಮಜೀವನ ಹೇತುನಾ। ಕಂಠೇ ಬಧ್ನಾಮಿ ಸುಭಗೇ ಸಜೀವ ಶರದಃ ಶೈತಮ್ ಎಲ್ಲೆ ಸೌಭಾಗ್ಯವತಿಯೇ, ನನ್ನ ಜೀವನಕ್ಕೆ ಕಾರಣೀಭೂತವಾದ ಈ ಮಾಂಗಲ್ಯವನ್ನು ನಿನ್ನ ಕಂಠದಲ್ಲಿ ಕಟ್ಟುತ್ತೇನೆ. ವಧುವೇ ನೂರು ವರ್ಷ ಬಾಳು. ಅಂದರೆ ನೀನು ಇದ್ದರೇ ನನ್ನ ಬಾಳು ನಾನು ಇರಬೇಕಾದರೆ ನೀನು ಇರಲೇ ಬೇಕು (ಆದ್ದರಿಂದಲೇ ಮಮ ಜೀವನ ಹೇತು ನಾ ಎನ್ನುವುದು) ಎನ್ನುತ್ತಾ ತನ್ನ ಮಧುರವಾದ ಭಾವನೆಗಳನ್ನು ಜವಾಬ್ದಾರಿಯ ವಿಚಾರಗಳನ್ನು

ಸಹಜವಾಗಿ ತಿಳಿಸುತ್ತಾ ಆಕೆಯ ಕೊರಳಿಗೆ ಮಾಂಗಲ್ಯಧಾರಣೆ ಮಾಡುತ್ತಾನೆ. ಹಣೆಗೆ ಸಿಂಧೂರ ಕುಂಕುಮ ಏರಿಸುತ್ತಾನೆ. ತಲೆಗೆ ಪುಷ್ಪ ಏರಿಸುತ್ತಾನೆ. ನಂತರ ವಧುವಿನ ಹೆಬ್ಬೆರಳನ್ನು ವರನು ಹಿಡಿದುಕೊಂಡು ನೂಲು ಸುತ್ತಿಕೊಂಡಿರುವಂತೆ ವರನ ಎಲೆಯ ಮೇಲೆ ವಧು ಹಾಗೂ ವಧುವಿನ ಎಲೆಯ ಮೇಲೆ ವರ ಕೊಡುತ್ತಾರೆ. (ಸ್ಥಳ ಬದಲಾಯಿಸುತ್ತಾರೆ) ಆ ಮೇಲೆ ಮೇಲ್ಭಾಗದಲ್ಲಿರುವ ಐದು ಸುತ್ತು ನೂಲನ್ನು ತಲೆಯ ಮೇಲಿಂದ ತೆಗೆದು ಪುರೋಹಿತರು ಅದಕ್ಕೆ ಅರಿಶಿಣ ತುಂಡನ್ನು ಸೇರಿಸಿ ವರನ ಬಲಗೈಗೆ ಕಟ್ಟುತ್ತಾರೆ. ಉಳಿದ ಮೂರು ಸುತ್ತನ್ನು ಕಾಲಿನ ಕೆಳಗಿನಿಂದ ತೆಗೆದು ಅದನ್ನು ವಧುವಿನ ಬಲಗೈಗೆ ವರ ಕಟ್ಟುತ್ತಾನೆ. ಅಡ್ಡ ಪರದೆಯಾಗಿ ಹಿಡಿದಿದ್ದ ಶಾಲನ್ನು ವಧುವಿನ ಧಾರೆ ಸೀರೆ ಮತ್ತು ವರನ ಮೇಲೆ ಶಾಲಿಗೆ ಜೋಡಿಸಿ ಕಟ್ಟಲಾಗುವುದು. ವಧುವಿನ ಹೆಬ್ಬೆರಳನ್ನು ಹಿಡಿದುಕೊಂಡು ಮುಂದಿನಿಂದ ಸಾಗುವ ವರನು ಪುರೋಹಿತರು ಇರಿಸಿದ ತಳಿಗೆಗೆ ಒಂದು ಸುತ್ತು ಬಂದು ಪುನಃ ಹಿಂದೆ ನಿಂತಿದ್ದ ಎಲೆಗಳ ಮೇಲೆ ವರ ಪೂರ್ವಾಭಿಮುಖವಾಗಿ ವಧು ಪಶ್ಚಿಮಾಭಿಮುವಾಗಿ ನಿಲ್ಲಬೇಕು.

ವರನು ದಾನವಾಗಿ ಸ್ವೀಕರಿಸಿದ ವಧುವಿಗೆ ಪತ್ನಿತ್ವ ಪ್ರಾಪ್ತಿಗೋಸ್ಕರವಾಗಿ ಅಗ್ನಿಯನ್ನು ಪ್ರತಿಷ್ಠಾಪಿಸಿ ವರನು ಅಗ್ನಿ ಮುಖಾಂತರ ದೇವತೆಗಳಿಗೆ ಹವಿರ್ಭಾವವನ್ನು ಕೊಟ್ಟು ಪ್ರಾರ್ಥಿಸಿ ಅಗ್ನಿಸಾಕ್ಷಿಯಾಗಿ ವಧುವಿನ ಪಾಣಿಗ್ರಹಣ ಮಾಡುತ್ತಾನೆ. ವಧುವಿನ ಹೆಬ್ಬೆರಳನ್ನು ಕೈಯಲ್ಲಿ ಹಿಡಿದುಕೊಂಡ ವರ ಪುರೋಹಿತರು ಇರಿಸಿದ ಎರಡು ಮಣೆಗಳಲ್ಲಿ ಲಾಜಾ ಹೋಮಕ್ಕಾಗಿ ಕುಳಿತುಕೊಳ್ಳುತ್ತಾರೆ. ಇಲ್ಲಿ ಎಡಭಾಗದಲ್ಲಿ ವರನನ್ನು ಬಲಭಾಗದಲ್ಲಿ ವಧುವನ್ನು ಕುಳ್ಳಿರಿಸಲಾಗವುದು (ಯಾಕೆಂದರೆ ಇಲ್ಲಿ ವರ ಸ್ವೀಕರಿಸುವವನಾಗಿರುತ್ತಾನೆ) ಪುರೋಹಿತರಿಂದ ತೀರ್ಥ ಮಂತ್ರಾಕ್ಷತೆಯನ್ನು ಸ್ವೀಕರಿಸಿದ ವಧು-ವರರು ಲಾಜಾ ಹೋಮಕ್ಕೆ ಸಿದ್ಧರಾಗಿರುತ್ತಾರೆ. ಪುರೋಹಿತರು ಮತ್ತೋಚ್ಚಾರಣೆಯೊಂದಿಗೆ ವಧುವಿನ ಹೆಬ್ಬೆರಳನ್ನು ಹಿಡಿದುಕೊಂಡು ವರ ಹೋಮಕುಂಡಕ್ಕೆ ಒಂದು ಸುತ್ತು ಬಂದು, ಪುರೋಹಿತರು ನೀಡಿದ ಅಕ್ಷತೆಯನ್ನು ಹೋಮಕ್ಕೆ ಹಾಕಬೇಕು. ನಂತರ ಹುಡುಗಿಯ ಹೆಗಲಿನ ಮೇಲೆ ಕೈಯನ್ನು ತಂದು ಎರಡೂ ಕೈಜೋಡಿಸಿ ನಿಲ್ಲುತ್ತಾನೆ. ವಧು ಅದರ ಮೇಲೆ ತನ್ನ ಕೈಗಳನ್ನು ಇರಿಸುತ್ತಾಳೆ. ವಧುವಿನ ಸಹೋದರ ಅವರ ಕೈಗಳಿಗೆ ಹರಿವಾಣದಿಂದ ಮೂರು ಮುಷ್ಠಿ ಹರಳನ್ನು ಹಾಕುತ್ತಾನೆ. ಅದನ್ನು ವಧುವರರು ಹೋಮಕ್ಕೆ ಹಾಕುತ್ತಾರೆ. ಇದೇ ರೀತಿ ಮೂರು ಸಲ ಮಾಡಿದ ಮೇಲೆ ಉಳಿದ ಹರಳನ್ನು ಪುರೋಹಿತರು ಹೋಮಕ್ಕೆ ಹಾಕುತ್ತಾರೆ. ಪುರೋಹಿತರಿಂದ ಪಡೆದ ಮಂತ್ರಾಕ್ಷತೆಯನ್ನು ಅಗ್ನಿದೇವತೆಗೆ ಪ್ರಾರ್ಥಿಸಿ ಅಗ್ನಿಗೆ ಹಾಕಬೇಕು. ಅಗ್ನಿ ಮುಖಾಂತರ ದೇವತೆಗಳಿಗೆ ಹವಿರ್ಭಾವ ಸಮರ್ಪಿಸಿ ಗೃಭ್ಣಾಮಿತೇ ಸೌಬಾಗತ್ವಾಯ ಹಸ್ತಂ ಮಯಾ ಪತ್ಯಾ ಜರರ ದಷ್ಟಿರ್ಯ ಥಾಸಃ । ಭಗೋ ಆರ್ಯಮಾ ಸವಿತಾ ಪುರಂದಿರ್ಮ್ಯ ಹ್ಯಂತ್ವಾದುರ್ಗ್ಗಾರ್ಹ ಪತ್ಯಾಯ ದೇವಾಃ ॥ ಅರ್ಥಾತ್ ಎಲೈ ಸೌಭಾಗ್ಯವತಿಯೇ, ನನ್ನ ಜೀವದ ಕೊನೆಯ ಕ್ಷಣದವರೆಗೂ ನೀನು ನನ್ನ ಸಹಚಾರಿಣಿಯಾಗಿರು. ನಮ್ಮಿಬ್ಬರ ಸುಖ ಸಂತೋಷಕ್ಕಾಗಿ ನಿನ್ನ ಪಾಣಿಗ್ರಹಣ ಮಾಡುತ್ತಿದ್ದೇನೆ. ನಿನ್ನ ಮೂಲಕ ನಾನು ಗೃಹಪತಿಯಾಗಲೆಂದು ಸವಿತಾ ಆರ್ಯಾಮಾ ಮತ್ತು ಪೂಷಾದೇವತೆಗಳು ನಿನ್ನನ್ನು ನನಗೆ

ಅನುಗ್ರಹಿಸುತ್ತಿದ್ದಾರೆ ಎಂದು ವಧುವಿನ ಕೈಹಿಡಿದು ಎತ್ತಿ ಲಾಜಾ ಹೋಮ ಮಾಡಿಸಿ ಯಜ್ಞೇಶ್ವರನಿಗೆ ಪ್ರದಕ್ಷಿಣೆ ಮಾಡುತ್ತಾರೆ.

### ೫.೪.೧೯. ಸಪ್ತಪದಿ

ವರನು ವಧುವಿನ ಕೈಹಿಡಿದು ದಾಂಪತ್ಯ ಜೀವನದ ಕಷ್ಟ-ಸುಖ, ನೋವು-ನಲಿವುಗಳನ್ನೆಲ್ಲಾ ಮೀರಿ ನಾವು ಒಂದಾಗಬೇಕೆಂಬ ಮಹದುದ್ದೇಶದಿಂದ ಏಳು ಹೆಜ್ಜೆ ನಡೆಸಿ ವರನು ತನ್ನ ಸಾಮಿಪ್ಯಕ್ಕೆ ಬರಮಾಡಿಕೊಳ್ಳುವುದೇ ಸಪ್ತಪದಿ, ವಧುವರರು ಪರಸ್ಪರ ಬದುಕಿನುದ್ದಕ್ಕೂ ನಡೆದುಕೊಳ್ಳಬೇಕಾದ ಧಾರ್ಮಿಕ ಹೆಜ್ಜೆಗಳೇ ಸಪ್ತಪದಿ, ವರನು ಹುಡುಗಿಯ ಕೈಹಿಡಿದು ನಡೆಸುವುದು. ಹೋಮಕುಂಡವನ್ನು ಪ್ರದಕ್ಷಿಣೆ ಮಾಡುವದು ಅಗ್ನಿಸಾಕ್ಷಿಯಾಗಿ ಇಬ್ಬರು ಬದುಕಿನಲ್ಲಿ ಒಂದಾಗಿ ಬದುಕುವುದರ ಸಂಕೇತ 'ಸಪ್ತಪದಿ' ಒಂದು ಧರ್ಮರೀತಿಯ ಒಪ್ಪಂದವಾದ್ದರಿಂದ ಇದನ್ನು ಮೀರಿನಿಲ್ಲುವ ಹಾಗಿಲ್ಲ ಎಂಬುದು ಈ ಸಮುದಾಯದವರ ಅಭಿಪ್ರಾಯ. ಸಪ್ತಪದಿ ಎಂದರೆ ಏಳು ಹೆಜ್ಜೆಗಳು ಹೋಮದ ಸುತ್ತು ಸುತ್ತುವುದು ಇದು ಯಾವುದಕ್ಕೆ ಒತ್ತು ನೀಡುತ್ತವೆ ಎಂಬುದು ಮಂತ್ರದ ವಿವರಗಳಿಂದ ತಿಳಿಯುತ್ತದೆ. ಪುರೋಹಿತರು ಏಳುಕಡೆ ಸಾಲಾಗಿ ಮಂತ್ರಾಕ್ಷತೆ ಹಾಕಿ ಅದರ ಮೇಲೆ ಒಂದು ರೂಪಾಯಿ ನಾಣ್ಯವನ್ನು ಇರಿಸಿರುತ್ತಾರೆ. ಇದರ ಮೇಲೆ ಬಲಗಾಲನ್ನಿರಿಸಿಕೊಂಡು ವಧುವಿನ ಕೈಯನ್ನು ಹಿಡಿದುಕೊಂಡು ಮುಂದಿನಿಂದ ವರ ಒಂದೊಂದೇ ಹೆಜ್ಜೆಯನ್ನಿರಿಸಿಕೊಂಡು ಬರುತ್ತಾನೆ. ವರನಿಂದ ಪುರೋಹಿತರು ಹೇಳಿಸುವ ಮಂತ್ರದ ಅರ್ಥಹೀಗಿದೆ. ವರನು ವಧುವಿ ಜೊತೆ ಹೆಜ್ಜೆಯನ್ನು ಇಡುತ್ತಾ ವಧುವಿಗೆ ಈ ಮಂತ್ರವನ್ನು ಹೇಳಿಸುತ್ತಾನೆ.

ಏಳು ಹೆಜ್ಜೆಗಳು ಕ್ರಮವಾಗಿ ಈ ಕೆಳಕಂಡಂತೆ ನೋಡಬಹುದಾಗಿದೆ.

ಇಷ ಏಕಪದೀ ಭವ – ಅನ್ನಕ್ಕಾಗಿ, ದೃಢ ಸಂಕಲ್ಪಕ್ಕಾಗಿ ಮೊದಲ ಹೆಜ್ಜೆಯಿಟ್ಟು ಇದರಲ್ಲಿ ನನ್ನನ್ನು ಅನುಸರಿಸು

ಉರ್ಜೇದ್ವಿಪದೀ ಭವ – ದೈಹಿಕ ಆರೋಗ್ಯದ ಶಾರೀರಿಕ ಬಲಕ್ಕಾಗಿ ಮತ್ತು ಬೆಳವಣಿಗೆಗೆ ಬಲದ ಅಭಿವೃದ್ಧಿಗಾಗಿ ಎರಡನೇ ಹೆಜ್ಜೆ ಇಡು ಇದರಲ್ಲಿ ನನ್ನನ್ನು ಅನುಸರಿಸು.

ರಾಯಸ್ಪೋಷಾಯ ತ್ರಿಪದೀ ಭವ – ಸಮೃದ್ಧಿ, ಧನದ ಅಭಿವೃದ್ಧಿಗಾಗಿ ಮೂರನೇ ಹೆಜ್ಜೆ ಇಡು ಇದರಲ್ಲಿ ನನ್ನನ್ನು ಅನುಸರಿಸು.

ಮಾಯೋಭವ್ಯಾಯ ಚತುಷ್ಪದೀ ಭವ – ದಾಂಪತ್ಯ ಸುಖಕ್ಕಾಗಿ, ಸೌಖ್ಯದ ಸುಖಾನುಭವದ ಅಭಿವೃದ್ಧಿಗಾಗಿ ನಾಲ್ಕನೇ ಹೆಜ್ಜೆ ಇಡು ಇದರಲ್ಲಿ ನನ್ನನ್ನು ಅನುಸರಿಸು.

ಪ್ರಜಾಭ್ಯಃ ಪಂಚಪದೀ ಭವ – ಸತ್ಪ್ರಜೆಯನ್ನು ಪಡೆಯುವುದಕ್ಕಾಗಿ, ಸಂತಾನ ಅಭಿವೃದ್ಧಿಗಾಗಿ ಐದನೇ ಹೆಜ್ಜೆ ಇಡು, ಇದರಲ್ಲಿ ನನ್ನನ್ನು ಅನುಸರಿಸು.

ಋತುಭ್ಯಃ ಷಟ್ಪದೀಭವ – ಉಪಯುಕ್ತವಾದ ಋತುಕಾಲಗಳಿಗಾಗಿ ಅಭಿವೃದ್ಧಿಗಾಗಿ ಆರನೇ ಹೆಜ್ಜೆ ಇಡು. ಇದರಲ್ಲಿ ನನ್ನನ್ನು ಅನುಸರಿಸು.

ಸುಖಾ ಸಪ್ತಪದೀ ಭವ – ಸ್ನೇಹ ಸಹಕಾರಕ್ಕಾಗಿ ಅಭಿವೃದ್ಧಿಗಾಗಿ ಏಳನೇ ಹೆಜ್ಜೆ ಇಡು. ಇದರಲ್ಲಿ ನನ್ನನ್ನು ಅನುಸರಿಸು *(ಸುರೇಶ ನಾರಾಯಣ ನಾಯ್ಕ, ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ, ಪುಟ-೮೪, ೨೦೧೧).*

ಈ ಮೇಲಿನ ಏಳು ಸೂತ್ರಗಳಲ್ಲಿ 'ನನ್ನನ್ನು ಅನುಸರಿಸಿ ನನ್ನೊಡನೆ ನನ್ನ ಬದುಕಿನೊಡನೆ ಈ ಸಪ್ತ ಹೆಜ್ಜೆಗಳನ್ನು ಹಾಕಿ ನನಗೆ ಪತ್ನಿಯಾಗಿ ಸುಖ-ಸಂತೋಷ ಉಳಿಸಿ ಬೆಳೆಸುವಂತಾಗಲಿ ಹಾಲು ಮತ್ತು ಜೇನಿನಂತೆ ಒಂದಾಗಿ ಬಾಳೋಣ. ಸಂಸಾರದ ಸುಖ ದು:ಖಗಳನ್ನು ಒಂದಾಗಿ ಅನುಭವಿಸಿ ಬಾಳೋಣ ಎಂದ ಅರ್ಥ. ನಂತರ ಮಂಟಪ ವೇದಿಕೆಯ ಮೇಲಿರುವ ಆಸನದ ಬಲಭಾಗದಲ್ಲಿ ವರನನ್ನು ಎಡಭಾಗದಲ್ಲಿ ವಧುವನ್ನು ಕುಳ್ಳಿರಿಸುತ್ತಾರೆ. ಪುರೋಹಿತರು ವಧುವರರಿಗೆ ಅಕ್ಷತೆ ಹಾಕಿ ಆಶೀರ್ವಚನ ಮಾಡಿ ಪೂಜೆ ಹಾಗೂ ಹೋಮದ ಪ್ರಸಾದವನ್ನು ನೀಡುತ್ತಾರೆ. ಪ್ರಸಾದವನ್ನು ಸ್ವೀಕರಿಸಿ ವಧು-ವರರು ಪುರೋಹಿತರ ಕಾಲು ಹಿಡಿದು ಆಶೀರ್ವಾದ ಬೇಡುತ್ತಾರೆ. ನಂತರ ಪುರೋಹಿತರು ವಧುವರರಗೆ ಸೂರ್ಯಪೂಜೆ (ಆರುಂಧತಿ ನಕ್ಷತ್ರ ದರ್ಶನ) ಮಾಡಿಸುತ್ತಾರೆ. ವಧುವರನ್ನು ಚಪ್ಪರದಿಂದ ಹೊರಗೆ ಕರೆದುಕೊಂಡು ಹೋಗಿ ಆಕಾಶದ ಕಡೆ ಮುಖಮಾಡಿಸಿ ಸೂರ್ಯದೇವನಿಗೆ ನಮಸ್ಕಾರಿಸಿ ಆರುಂಧತಿ ನಕ್ಷತ್ರದ ದರ್ಶನ ಮಾಡುವರು. ನಂತರ ಮರಳಿ ಬಂದು ನಮಸ್ಕರಿಸಿ ಗೋಡೆಯ ಮೇಲೆ ವಧುವಿನ ಎರಡು ಕೈಗಳನ್ನು ಒತ್ತಿಸಿ ಮಧ್ಯದಲ್ಲಿ ವರನ ಒಂದು ಕೈಯನ್ನು ಒತ್ತಿಸುತ್ತಾರೆ. ಇದಕ್ಕೆ ಹಸ್ತವಿಡುವುದು ಎಂದು ಕರೆಯುತ್ತಾರೆ. ಬಳಿಕ ವಧುವಿನಿಂದ ವರನ ಪಾದ ಪೂಜೆಯನ್ನು ಮಾಡಿಸುತ್ತಾರೆ. ನಂತರ ಪುರೋಹಿತರಿಗೆ ದಕ್ಷಿಣೆಯನ್ನು ಕೊಟ್ಟು ಅವರನ್ನು ಸತ್ಕರಿಸಿ ಕಳುಹಿಸಲಾಗುವುದು. ನಂತರ ವಧು-ವರರ ಕಡೆಯ ಐದು ಜನ ಮುತ್ತೈದೆಯರು ವಧು-ವರರ ಎದುರಿನಲ್ಲಿ ಮಣೆಯಿಟ್ಟು ಬಟ್ಟೆಹಾಕಿ ಅಕ್ಷತೆ ತುಂಬಿದ ತಟ್ಟೆಯನ್ನು ಮತ್ತು ಆರತಿ ಅರಿಶಿಣ ಕುಂಕುಮ ತಂದರಿಸುತ್ತಾರೆ. ವಧು-ವರರಿಗೆ ಆರತಿ ಮಾಡಿ ಸೋಭಾನೆ ಹಾಡನ್ನು ಹಾಡಿ, ಅಕ್ಷತೆ ಹಾಕಿ, ಅರಿಶಿಣ ಕುಂಕುಮವನ್ನಿರಿಸುತ್ತಾರೆ. ನಂತರ ವರನ ಮತ್ತು ವಧುವಿನ ತಂದೆ ತಾಯಂದಿರು ಮಾವಂದಿರು ವಧು-ವರರಿಗೆ ಅಕ್ಷತೆ ಹಾಕಿ ಆಶೀರ್ವದಿಸುತ್ತಾರೆ. ನಂತರ ಎಲ್ಲರೂ ಉಡುಗೊರೆ ಹಾಗೂ ಅಕ್ಷತೆ ಹಾಕಿ ಆಶೀರ್ವಾದ ಮಾಡುತ್ತಾರೆ. ಬಂಧು ಬಾಂಧವರು ಇಷ್ಟ ವಿತ್ತು ಪಾಲ್ಗೊಳ್ಳುತ್ತಾರೆ. ಆರತಿಯನ್ನು ಮಾಡುವ ಸಂದರ್ಭದಲ್ಲಿ ಹರಿವಾಣದಲ್ಲಿದ್ದ ತಾಂಬೂಲವನ್ನು ವರನ ಕೈಗೆ ಕೊಟ್ಟು ಮೂರುಸಲ ಆರತಿ ಮಾಡಿ ಅಕ್ಷತೆಯನ್ನು ಹಾಕುತ್ತಾರೆ. ನಂತರ ಅವರೆಲ್ಲರೂ ಮುಂದೆ ಬಂದು ಕಲ್ಯಾಣನಡೆದಸ್ಥಳದಲ್ಲಿ ಕೈಮುಗಿದು ವಧು-ವರರಿಗೆ ಆಶೀರ್ವದಿಸಿ, ಊಟೋಪಾಚಾರಗಳನ್ನು ಸ್ವೀಕರಿಸುವಂತೆ ವಿನಂತಿಸಿಕೊಳ್ಳುತ್ತಾರೆ.

ಅಕ್ಷತೆ ತಳಿಯುವ ನುಡಿಗಟ್ಟು

ಇಂದಿನ ಬಾಸಿಂಗ

ಕಲಿಯಾಗಿ ಒಪ್ಪಲಿ
ಕಲಿಯೋ ಕಲಿಯೋ
ಕಲಿಯೋಕರ್ಜುನನಾಗು
ಪುಣ್ಯಾತ್ಮನಾಗು
ತಣ್ಣೀರಿಗೆ ಸಮನಾಗು
ಜಾತಿಗಂತೋನಾಗು
ಜೋತಿ ಮಾಣಿಕನಾಗು
ಕೃಷ್ಣ ನಂದನ ವನಕೆ
ಫಣಿಯಾಗಿ ಒಪ್ಪಲಿ
ಎಡಕೆ ಪಾರ್ವತಿ ದೇವಿ
ಬಲಕೆ ನಾರಾಯಣ ಸ್ವಾಮಿ
ಅದಕಿಂತ ಕೆಳಗೆ
ಹರಿಬ್ರಹ್ಮರು ಕುಳಿತು
ಕೈಗೆ ಕಂಕಣ ಕಟ್ಟ
ಬೆರಳಿಗೆ ಉಂಗ್ರವನಿಟ್ಟು
ವಜ್ರ ಮಾಣಿಕ್ಯದಿಂದ
ತೊಡಿಗೆಯ ತೊಟ್ಟು
ಎಸಳು ಕಬ್ಬಿನ ಕೋಲು
ದರ್ಶಿಯ ಮರೆ ಮಾಡಿ
ಬಂದಾವೆ ದಿಬ್ಬಣ
ನಿಂದಾವೇರಿ ಮೇಗೆ
ದೊರೆರಾಯರ ಕರಸಿ
ಸೆರೆ ಸೇರೆಗಟ್ಟಿಸಿ
ಹೆಣ್ಣು ಗಂಡಿನೋರು
ತರ ತರ ನಿಲ್ಲಲಿ
ಅಂಗಳ ಸಾರಿಸಿ
ರಂಗೋಲೆ ಬರೆಯಲಿ
ಮುತ್ತು ಮಾಣಿಕ್ಯದಿಂದ
ಚೌಕನೇ ತುಂಬಲಿ

ಬಂದ ಹಾರುವಯ್ಯ
ಲಗ್ನವ ಹೇಳಲಿ
ದಟ್ಟ ಸೂರನೆಂಬ
ಪಟ್ಟಿಗಳು ಬರಲಿ
ಸಾಲಿ ಸೂರನೆಂಬ
ಮೇಲ್ಗಟ್ಟು ಬರಲಿ
ಹತ್ತು ಮುತ್ತುಂಬ
ಬಾಸಿಂಗ ಬರಲಿ
ಐದು ಮುತ್ತುಂಬ
ತೊಂಡ್ಲವು ಬರಲಿ
ಕನ್ನಡಿ ತಡದಕ್ಕಿ
ಪನ್ನಂಗೆ ಗಟ್ಟಲಿ
ದೇವಿಣಿ ಪದ್ಮಣಿ
ಬೇಗ ಬಂದಪ್ಪಲಿ
ಬೇಳೆ ಬೆಲ್ಲದಿಂದ
ಬಿಳಿಯಕ್ಕಿ ಸೊಗಸಲಿ
ಕಾಮಧೇನು ಕರೆದಂತೆ
ಮದುವೆಗೆ ಸೊಗಸಲಿ
ದೇವ ಕನ್ನೆಯರು
ದೇವ ಚಂದ್ರಮ್ನ
ಒಡಗೊಂಡು ಬರಲಿ
ಬೆಳ್ಳಿ ಕಾಲುಂಗುರ
ನಲ್ಲೆಯರು ಇಡಲಿ
ಅಚ್ಚ ಕನ್ನೆಯರಿಗೆ
ನಿಚ್ಚ ಕುಸುಮದಂಡೆ
ನಿಚ್ಚ ಕುಸುಮದಂಡೆ
ಕ್ಷತ್ರಿಯರ ಕನ್ನೆಯರಿಗೆ
ಬಿಳಿಯ ಕುಸುಮದಂಡೆ
ಅಚ್ಚಗನ್ನೆಯರು

ಬಂದು ಆರತಿಯೆತ್ತಲಿ
ಕ್ಷತ್ರಿಯರ ಕನ್ನೆಯರು
ಬಂದು ಮಂತ್ರಾಕ್ಷೆ ಹೇಳಲಿ
ನಿತ್ಯಗನ್ನೆಯರು ಬಂದು
ನಿವಾಲಿ ತೆಗೆಯಲಿ
ಹರನಪ್ಪಿ ಮರನಪ್ಪಿ
ಶಿನಪ್ಪಿ ಕೇಳಲಿ
ಮದುಮಕ್ಕಳಿಬ್ಬರ
ಚಿನ್ನದ ಬಾಸಿಂಗಕೆ
ಮುತ್ತಿನ ಸೇಸೆ
ನಾವಿಟ್ಟಕ್ಕಿ ಅನುಚಂದ್ರಕಾಲ
ಸ್ಥಿರವಗಲಿ!

ಹಾಡಿದವರು ಯಶೋಧಮ್ಮ ಮತ್ತು ಸಂಗಡಿಗರು (ಮುತ್ತೈದೆಯರು ಇದನ್ನು ಹೇಳಿ ಮದುಮಕ್ಕಳ ತಲೆ ಮೇಲೆ ಅಕ್ಷತೆಯನ್ನಿಕ್ಕುವರು.)

ಸಪ್ತಪದಿಯ ನಂತರ ವಧು-ವರರು ಓಕುಳಿಯಾಡುವುದು ಸಂಪ್ರದಾಯ. ಪುರೋಹಿತರು ಒಂದು ಪಾತ್ರೆಯಲ್ಲಿ ಓಕುಳಿಗೆ ಬೇಕಾದ ಸಿದ್ಧತೆ ಮಾಡಿ ಅದರ ಎರಡೂ ಬದಿಗಳಲ್ಲಿ ಎರಡು ಮಣೆಗಳನ್ನು ಇಟ್ಟಿರುತ್ತಾರೆ. ವಧು-ವರರನ್ನು ಎದುರುಬದುರಾಗಿ ಕುಳ್ಳಿರಿಸಿ ಪುರೋಹಿತರು ಓಕುಳಿಯ ನೀರಿಗೆ ಒಂದು ಅಡಿಕೆ ಮತ್ತು ಒಂದು ಉಂಗುರವನ್ನು ಮಂತ್ರಾಕ್ಷತೆಯೊಂದಿಗೆ ಹಾಕುತ್ತಾರೆ. ವಧು-ವರರಲ್ಲಿ ಸ್ಪರ್ಧೆ ಏರ್ಪಟ್ಟು ಉಂಗುರ ಪಡೆದವರು ಅದನ್ನು ಪುರೋಹಿತರಲ್ಲಿ ಕೊಡುತ್ತಾರೆ. ಇದೇ ರೀತಿ ಮೂರು ಸಲ ಉಂಗುರವನ್ನು ಓಕುಳಿಗೆ ಹಾಕಲಾಗುತ್ತದೆ. ಈ ಉಂಗುರದಾಟವು ಒಂದು ತಮಾಷೆಯಾಗಿರದೆ ಉಂಗುರವನ್ನು ನೀರಿನಿಂದ ಹುಡುಕಿ ತೆಗೆದವರಿಗೆ ಉಂಗುರ ಸಿಗುವುದರಿಂದ ಇದು ವಧುವರರ ಅನ್ಯೋನ್ಯತೆಯ ಪ್ರತೀಕವೂ ಆಗಿದೆ. ಮಧುಮಕ್ಕಳಲ್ಲಿ ಬಾಂಧವ್ಯದ ಕೊಂಡಿ ಬೆಸೆಯುವಲ್ಲಿ ಸಹಾಯಕವಾದ ಪದ್ಧತಿಯಾಗಿ ಕಂಡುಬರುತ್ತದೆ.

ಇದೇ ರೀತಿಯಾಗಿ ಅನೇಕ ರೀತಿಯ ಅಟಗಳು ಮದುವೆಯ ಮನೆಯಲ್ಲಿ ವಧು-ವರರಿಗೆ ನಡೆಯುತ್ತವೆ. ಆದರೆ ಸಮಯವು ತುಂಬ ಮುಖ್ಯ ಪಾತ್ರವಹಿಸುತ್ತವೆ. ಅಲ್ಲಿ ಬಂದಿರುವ ಬಂಧುಬಗಿನೀಯರವನ್ನ ಸಮಾಧನದಿಂದ ಊಟ ಮಾಡಿಕಳುಹಿಸುವುದಕ್ಕೆ ಕಷ್ಟದಾಯಕವಾದ ಕೆಲಸವಾಗಿರುತ್ತದೆ. ಇತ್ತೀಚಿನ ದಿನಗಳಲ್ಲಿ ವಿವಾಹವು ಹಳ್ಳಿಮನೆಯಲ್ಲಿ ನಡೆಯುವುದೇ ಕಡಿಮೆಯಾಗಿದೆ. ಜೀವನದ ಶೈಲಿಯಿಂದ ಶಿಕ್ಷಣದ ಪ್ರಭಾವದಿಂದಾಗಿ ಜನರೆಲ್ಲ ಬದಲಾವಣೆಯನ್ನು ಬಯಸಿ ದುಂದುವೆಚ್ಚಕ್ಕೆ ಮುಂದಾಗಿ ಊರಿಗೆ ಸಮೀಪವಿರುವ ಕಲ್ಯಾಣ ಮಂಟಪದಲ್ಲಿ ವಿವಾಹ ಮಾಡಿಸುತ್ತಿದ್ದಾರೆ. ಆದರೆ ಇಂತಹ ಸಂಪ್ರದಾಯಗಳು ತುಂಬ ಮುಸುಕಾಗಿ ಮಾಯವಾಗುತ್ತಿವೆ ಎಂದು ಹೇಳಬಹುದು.

ನಂತರದಲ್ಲಿ ವಧು-ವರನು ತನ್ನ ಭಾವನೊಂದಿಗೆ ಬಂದು ಚಪ್ಪರದ ಮಂಟಪವನ್ನು ಪ್ರದಕ್ಷಿಣೆ ಮಾಡುತ್ತಾರೆ. ಪ್ರದಕ್ಷಣೆಯ ಸಂದರ್ಭದಲ್ಲಿ ವರನು ತನ್ನ ಬಲಗೈಯಿಂದ ಒಂದೊಂದೆ ಎಲೆಯನ್ನು ತೆಗೆದು ತನ್ನ ತಲೆಯ ಮೇಲಿರುವ ಮಾವಿನ ಎಲೆಯನ್ನು ಹಿಂದೆ ಹಾಕುತ್ತಾನೆ. ಈ ಶಾಸ್ತ್ರವೇ ಚಪ್ಪರದ ವಿಸರ್ಜನೆಯಾಗಿದೆ. ಬಾಗಿಲು ತಡೆದು ಅಕ್ಕ ತಂಗಿಯರಿಗೆ ಭಾಷೆ ನೀಡಿದ ನಂತರ ಕುಟುಂಬದ ಹಿರಿಯರಿಗೆ ದೇವರಿಗೆ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾರೆ. ನಂತರ ಮಧುಮಕ್ಕಳಿಗೆ ಪ್ರತ್ಯೇಕ ಎಲೆ ಹಾಕಿ ಊಟಬಡಿಸಿ ಒಬ್ಬರಿಗೊಬ್ಬರು ಸಿಹಿಯನ್ನು ತಿನ್ನಿಸುತ್ತಾ ವಧುವರರ ತಂದೆ-ತಾಯಿ ಹಾಗೂ ಕುಟುಂಬದವರೆಲ್ಲ ಒಟ್ಟಿಗೆ ಸೇರಿ ಊಟ ಮಾಡುತ್ತಾರೆ.

**೫.೪.೨೦. ಹೆಣ್ಣನ್ನು ಗಂಡಿನ ಮನೆಗೆ ಒಪ್ಪಿಸುವುದು**

ವಿವಾಹದ ಊಟೋಪಚಾರಗಳು ಮುಗಿದ ಬಳಿಕ ಹೆಣ್ಣನ್ನು ಒಪ್ಪಿಸಿಕೊಡುವ ಪದ್ಧತಿಗೆ ಚಪ್ಪರ ಇಳಿಸುವುದು ಎನ್ನುತ್ತಾರೆ. ಊಟದ ನಂತರ ಕೆಲ ನಿಮಿಷಗಳ ವಿಶ್ರಾಂತಿ ಪಡೆದು ಗಂಡು ಹೆಣ್ಣಿನ ಕಡೆಯವರು ಚಪ್ಪರದಲ್ಲಿ ಎದುರುಬದುರಾಗಿ ನಿಲ್ಲುತ್ತಾರೆ. ಈ ಸಂದರ್ಭದಲ್ಲಿ ಹೆಣ್ಣಿನ ತಂದೆ-ತಾಯಿ ಹಾಗೂ ಪುರೋಹಿತರು ಗಂಡನ ಮನೆಯಲ್ಲಿ ನಡೆದುಕೊಳ್ಳಬೇಕಾದ ವಿಧೇಯತೆಯ ಕುರಿತು ತಿಳಿಸಿ ಹೇಳುತ್ತಾರೆ. ಹುಡುಗನ ತಂದೆ-ತಾಯಿಯಂದಿರಲ್ಲಿ ವಧುವನ್ನು ಚೆನ್ನಾಗಿ ನೋಡಿಕೊಳ್ಳಬೇಕಾಗಿ ವಿನಂತಿಸುತ್ತಾರೆ. ತಾವು ಅವಳನ್ನು ಪ್ರೀತಿಯಿಂದ ಆದರದಿಂದ ನೋಡಿಕೊಳ್ಳಿ ಎಂದು ಬೇಡಿಕೊಳ್ಳುತ್ತೇವೆ ಎಂದು ವಧುವನ್ನು ಕೈ ಹಿಡಿದು ವರನಿಗೆ ಒಪ್ಪಿಸುತ್ತಾರೆ. ಈ ಸಂದರ್ಭದಲ್ಲಿ ಸೋಬಾನ ಹಾಡನ್ನು ಹಾಡುತ್ತಾರೆ. ಗುರುಹಿರಿಯರು ತಂದೆ ತಾಯಿಯರು ಮಧುಮಗಳಿಗೆ ಗಂಡ-ಹೆಂಡ್ತಿರಾದವರು ಜೀವನ ಪರ್ಯಂತ ಪರಸ್ಪರ ಒಬ್ಬರನ್ನೊಬ್ಬರು ಹಾಲು-ಜೇನಿನಂತೆ ಅನ್ಯೋನ್ಯವಾಗಿ ಅನುರಾಗದಿಂದ ಬದುಕಬೇಕು ಎಂದು ಹೇಳುವ ಬುದ್ಧಿಮಾತು ಔಚಿತ್ಯ ಪೂರ್ಣವಾದದ್ದು.

ಬಳುವಳಿಯಲ್ಲಿ ಹೆಣ್ಣು ತನ್ನ ಬದುಕನ್ನು ರೂಪಿಸಿಕೊಳ್ಳುವ ಆಶಯವಿದೆ. ವಧುವನ್ನು ತಂದೆ ತಾಯಿ ಬಂಧು-ಬಾಂಧವರು ಗಂಡನ ಮನೆಗೆ ಮುಹೂರ್ತವಾದ ಒಂದು ದಿನವಾದ ಮೇಲೆ ವರನ ಮನೆಗೆ ಕಳಿಸುವ ಪದ್ಧತಿ ಅಂದರೆ ವಧು-ವರರು ಅಂದು ವಧುವಿನ ಮನೆಯಲ್ಲಿ ತಂಗಬೇಕು. ಒಂದು ರಾತ್ರಿಯನ್ನು ಅಲ್ಲಿ ಕಳೆದ ನಂತರ ಮಧುಮಗಳನ್ನು ವರನ ಮನೆಗೆ ಕಳುಹಿಸಿಕೊಡುವುದಕ್ಕೆ ಸಿದ್ಧತೆಯನ್ನು ಮಾಡಲಾಗುವುದು. ಈ ಸಂದರ್ಭವು ಒಂದು ಭಾವುಕ ಸನ್ನಿವೇಶ. ವರನ ಮನೆಗೆ ವಧುವನ್ನು ಕಳುಹಿಸುವಾಗ ವಧುವಿನ ಹತ್ತಿರದ ಸಂಬಂಧಿಗಳು ಒಟ್ಟಿಗೆ ಹೋಗುತ್ತಾರೆ. ಹೆಚ್ಚಾಗಿ ಅಕ್ಕ ತಂಗಿಯ ಮಗಳು ಅಥವಾ ಇನ್ನಿತರ ಪ್ರಿಯವಾದ ಮಹಿಳೆಯನ್ನು ಕಳುಹಿಸುವ ಪದ್ಧತಿ ಇದೆ. ಅಪರಿಚಿತವಾದ ಸ್ಥಳದಲ್ಲಿ ಜೊತೆಯಾಗಿ ಹೋಗುವ ಸಂಬಂಧಿ ಹೆಣ್ಣು ಇವಳಿಗೆ ಸಹಾಯಕವಾಗುತ್ತಾಳೆ. ಮಗಳಿಗೆ ಉಡುಗೊರೆಯಾಗಿ ಗೃಹೋಪಯೋಗಿ ವಸ್ತುಗಳನ್ನು ಮತ್ತು ಎರಡು ತೆಂಗಿನ ಸಸಿಗಳನ್ನು ಮತ್ತು ಬಾಳೆಗೊನೆ ಇನ್ನಿತರೆ ವಸ್ತುಗಳನ್ನು ಉಡುಗೊರೆಯಾಗಿ ನೀಡಿ ಕಳುಹಿಸಿಕೊಡಲಾಗುತ್ತದೆ. ಈ ಸನ್ನಿವೇಶವು ವಧುವಿನ ತಂದೆ-ತಾಯಿಗೆ ತುಂಬ ದು:ಖಕರವಾದ ಸಂದರ್ಭವಾಗಿರುತ್ತದೆ. ವಧು-ವರರು ಗುರುಹಿಯರಿಗೆ ತಂದೆ-ತಾಯಿಗೆ ನಮಸ್ಕರಿಸಿ ಬರುತ್ತಾರೆ.

### ೫.೪.೨೧. ಮನೆ ತುಂಬಿಸಿಕೊಳ್ಳುವ ಶಾಸ್ತ್ರ

ಮದುವೆ ನಂತರ ವಧುವರರು ವಧುವಿನ ಮನೆಯಿಂದ ವರನ ಮನೆಗೆ ಬಂಧುಗಳೊಡಗೂಡಿ ಹೊರುಡುತ್ತಾರೆ. ಇದಕ್ಕೆ ದಿಬ್ಬಣ ಹೊರಡುವುದು ಎನ್ನುತ್ತಾರೆ. ಹೀಗೆ ಬಂದ ದಿಬ್ಬಣವು ಮೊದಲೆ ನಿಗಧಿಪಡಿಸಿದ ಸ್ಥಳದಲ್ಲಿ ಅಂದರೆ ಗ್ರಾಮಗಳಲ್ಲಿನ ಜೀವನವು ಹೆಚ್ಚಾಗಿ ನಂಬಿಕೆರುವುದೇ ದೇವಾಲಯಗಳು ಯಾವುದೇ ಶುಭಕಾರ್ಯಕ್ಕೆ ಮೊದಲ ಪ್ರಾಶಸ್ತ್ಯ ನೀಡುತ್ತಾರೆ. ಹಾಗಾಗಿ ದೇವಾಲಯದಲ್ಲಿ ದಿಬ್ಬಣವು ಬಂದು ತಲುಪುತ್ತದೆ. ನಂತರ ಅಲ್ಲಿಂದ ಮೆರವಣಿಗೆಯ ಮೂಲಕ ವಧು–ವರರನ್ನು ಊರಿನ ಹಲವು ಕೇರಿಗಳಲ್ಲಿ ಮೆರವಣಿಗೆ ಮಾಡಲಾಗುತ್ತದೆ. ಅಲ್ಲಿಂದ ಮೆರವಣೆಗೆಯು ಜೋಡಿ ಎತ್ತುಗಳ ಗಾಡಿಯ ಮೂಲಕ ವಧು–ವರರು ವರನ ಸ್ವಗೃಹಕ್ಕೆ ಇಳಿಯುತ್ತಿದ್ದಂತೆ ವಧು–ವರರಿಗೆ ಅರಿಶಿಣ–ಕುಂಕುಮ ಕರಿ ಈ ರೀತಿಯ ಮೂರು ಬಗೆಯ ಓಕಳಿಯನೀರನ್ನು ತೆಗೆದು ನಿಂಬೆಯ ಹಣ್ಣನ್ನು ನಿವಾಳಿಸಿ ಎಡಕ್ಕೆ ಬಿಸಾಡಿ ಆರತಿ ಮಾಡುತ್ತಾರೆ. ಹೀಗೆ ಕರೆದುಕೊಂಡು ಬರುವಾಗ ವರನ ಹೆಗಲಿಗೆ ಕೂರಿಗೆಯ(ಬಿತ್ತುವ)ನ್ನು ಇಟ್ಟಿರುತ್ತಾರೆ. ಹಾಗೆಯೇ ವಧುವಿನ ಮಡಿಲಿಗೆ ಜೋಳ ಅಥವಾ ಭತ್ತವನ್ನು ಹಾಕಿರುತ್ತಾರೆ. ಈ ರೀತಿಯಾದ ಸಂಪ್ರದಾಯವು ಕೃಷಿಗೆ ಸಂಬಂಧಿಸಿದಂತೆ ತಿಳುವಳಿಕೆಯನ್ನು ನೀಡುತ್ತದೆ. ಈ ರೀತಿಯ ಪದ್ಧತಿಗಳು ಹಳ್ಳಿಯಲ್ಲಿ ಜೀವಂತವಾಗಿವೆ.

### ೫.೪.೨೨. ಬಾಗಿಲು ತಡೆಯುವ ಶಾಸ್ತ್ರ

ಇದು ಮನೆದುಂಬಿಸಿಕೊಳ್ಳುವ ಶಾಸ್ತ್ರದ ಭಾಗವಾಗಿಯೇ ಬರುತ್ತದೆ. ಈ ಸಂದರ್ಭದಲ್ಲಿ ವಧು–ವರರ ಇಬ್ಬರು ಮನೆಬಾಗಿಲ ಮುಂದೆ ನಿಂತಿರುವಾಗ ಬಾಗಿಲ ಹೊಸ್ತಿಲ ಮೇಲೆ ಒಂದು ಸೇರುನೊಂದಿಗೆ ಅಕ್ಕಿ ಒಂದು ಅಚ್ಚು ಬೆಲ್ಲ ಇಟ್ಟಿರುತ್ತಾರೆ. ಅದನ್ನು ಆ ಮನೆಗೆ ಸೊಸೆಯಾಗಿ ಬರುವ ವಧು ಅದನ್ನು ಬಲ ಕಾಲಿನಿಂದ ಒದ್ದು ಹೊಸ್ತಿಲನಿಂದ ಒಳಗೆ ಕಾಲು ಇಡುವಾಗ ಬಲಗಾಲನ್ನು ಇಡಬೇಕಾಗುತ್ತದೆ. ಆ ಪದ್ಧತಿಯನ್ನು ಮಾಡುವ ಮುಂಚಿತವಾಗಿ ಮಳೆ ಬಡಿಸುವುದು ಕ್ರಮವಾಗಿದೆ. ಆ ಸಂದರ್ಭದಲ್ಲಿ ವರನ ಸಹೋದರಿ ನಿನಗೆ ಮಗಳಾದರೆ ನನ್ನ ಮಗನಿಗೆ ಕೊಡಬೇಕೆಂದು ಅಣ್ಣನ (ವರನ) ಕಾಲಿಡಿಯುತ್ತಾಳೆ. ಆಗ ಅವನು ಇಲ್ಲಮ್ಮ ನಿನಗೆ ಹೊನ್ನು, ಒಡವೆ, ಭೂಮಿ, ಬಂಗಾರ, ಕೊಡುತ್ತೇನೆಂದರೂ ಇಲ್ಲ. ನನಗೆ ಮಗಳನ್ನೆ ಕೊಡಬೇಕೆಂದು ಹಠ ಹಿಡಿಯುತ್ತಾಳೆ. ಆಗ ಆತ ಹೆಂಡ್ತಿಯ ಒಪ್ಪಿಗೆ ಪಡೆದು ತನ್ನ ಸಹೋದರಿಗೆ ಮಾತುಕೊಡುತ್ತಾನೆ. ಆಗ ಅಲ್ಲಿದ್ದವರಿಗೆ ಎಲೆ ಅಡಿಕೆಕೊಡುತ್ತಾರೆ. ಮುಂದೆ ಮಳೆ ಬಡಿಯುವ ಮೂಲಕ ಹೆಣ್ಣನ್ನು ಸೇರು ಒದಿಸಿ ಬಲಗಾಲಿಟ್ಟು ವಧುವರರು ಮನೆಯನ್ನು ಪ್ರವೇಶಿಸಿದ ಬಳಿಕ ಅಡಿಗೆ ಮನೆಯಲ್ಲಿ ಗಂಡು ಹೆಣ್ಣುಗಳಿಂದ ಹಸ್ತದ ಗುರುತು ಇರಿಸುತ್ತಾರೆ. ಇಲ್ಲಿ ಎರಡು ಕೈಗಳ ಮಧ್ಯೆ ಹೆಣ್ಣಿನ ಒಂದು ಕೈಯಿಂದ ಹಸ್ತ ಇರಿಸುತ್ತಾರೆ. ಈ ಮೂಲಕ ವೈವಾಹಿಕ ಬದುಕಿನ ಕರ್ತವ್ಯಗಳ ನಿರ್ವಹಣೆಗೆ ಈರ್ವರ ಒಪ್ಪಿಗೆಯನ್ನು ಪಡೆಯುವುದರ ಸಂಕೇತವಾಗಿ ಹಸ್ತವಿಡಿಸುವ ಪದ್ಧತಿ ಇರುವಂತೆ ಕಂಡುಬರುತ್ತದೆ. ವರನ ಮನೆಗೆ ಬಂಗಾರ ಆರತಿ ಎತ್ತಿ ವಧುವರರನ್ನು ಹೊಸ್ತಲ ಪೂಜೆ ಮಾಡಿಸಿ ಒಳಗೆ ಕರೆಯುತ್ತಾರೆ. ಮಂಗಳಾರತಿ ಬೇಗ ತಂದು ಬೆಳಗಿರೆ ಭಾಸುರಾಂಗನೆ ಶ್ರೀವಿಠಲಗೆ ವಾಸುದೇವನ ಕೇಶವರಾಯಗೆ ವರಮಡದಿಯರೆಲ್ಲ ಎಂದು

ಹಾಡುತ್ತಾರೆ. ಮದುವೆಯ ಮನೆಯಲ್ಲಿ ಕೆಲವೊಂದು ಶಾಸ್ತ್ರಗಳು ಪೂರ್ಣವಾಗದಿದ್ದ ಕಾರಣ ಉಳಿದಂತಹ ಆಟಗಳು ವರನ ಸ್ವಗೃಹದಲ್ಲಿ ಮುಂದುವರೆಸುತ್ತಾರೆ. ಬಂದಂತಹ ಬೀಗರಿಗೆ ಊಟೋಪಾಚಾರವಿರುತ್ತದೆ. ಊರಿನಲ್ಲಿನ ಬಂಧುಗಳು ಮತ್ತು ಮಿತ್ರರು ಬಂಧುಬಳಗದವರು ಉಡುಗೊರೆ ನೀಡಿ ಊಟ ಮಾಡಿಕೊಂಡು ಹೋಗುತ್ತಾರೆ. ವಧುವಿನ ಜೊತೆಯಲ್ಲಿ ಬಂದಂತಹ ದಿಬ್ಬಣವು ಅಂದಿನ ರಾತ್ರಿ ಇಲ್ಲವೆ ಬೆಳ್ಳಗೆ ಹೋಗುವ ಸಂಪ್ರದಾಯವಿದೆ. ಮರುದಿನ ಗಂಗೆ ಪೂಜೆಯನ್ನು ಮಾಡುತ್ತಾರೆ. ಈ ಸಂಪ್ರದಾಯವು ತುಂಬ ವಿಭಿನ್ನವಾದದು ಅಂದರೆ ಅ ಊರಿನ ಸೊಸೆಯಾಗುವ ಹುಡುಗಿಯು ಊರ ಮುಂದೆ ಇರುವ ಬಾವಿಗಳಿಂದ ನೀರನ್ನು ತರುವ ಶಾಸ್ತ್ರ ಅಂದರೆ ಗಂಗೆಹೊತ್ತು ತರುವುದು ಮನೆಯಲ್ಲಿರುವ ಮುತ್ತೈದೆಯರ ಜೊತೆಗೂಡಿ ಪೂಜಾ ಸಾಮಗ್ರಿಗಳೊಂದಿಗೆ ಬಾವಿ ಅಥವಾ ನೀರು ಇರುವ ಜಾಗಕ್ಕೆ ಹೋಗಿ ಪೂಜಿಸಿ ನೀರನ್ನು ತರುತ್ತಾರೆ. ಮುಖ್ಯವಾಗಿ ನವವಧು ಹೊತ್ತಿರುವ ಗಂಗೆಯನ್ನು ವರನು ಪೂಜೆಮಾಡಿ ಇಳಿಸಿಕೊಂಡು ದೇವರ ಕೋಣೆಯಲ್ಲಿರುಸುತ್ತಾನೆ. ಈ ರೀತಿಯಾದ ಪದ್ಧತಿಯೇ ಗಂಗೆ ಪೂಜೆ ಎಂದು ಕರೆಯುತ್ತಾರೆ. ನಂತರ ಅಲ್ಲಿ ಚಪ್ಪರವನ್ನು ವಿರ್ಸಜಿಸುವ ಶಾಸ್ತ್ರವನ್ನು ಐದು ಮತ್ತು ಒಂಭತ್ತು ಅಥವಾ ಹನ್ನೊಂದನೆ ದಿನಗಳಲ್ಲಿ ಮಾಡುತ್ತಾರೆ. ತದನಂತರ ಪ್ರಶಸ್ತ ದಿನದಂದು ಶೋಭನ/ಹಾಸಗೆ ಶಾಸ್ತ್ರ ಕಾರ್ಯವನ್ನು ನೆರವೇರಿಸುತ್ತಾರೆ. ಅಲ್ಲಿಂದ ಮುಂದೆ ನವ ದಂಪತಿಗಳು ವೈವಾಹಿಕ ಜೀವನಕ್ಕೆ ಕಾಲಿಡುತ್ತಾರೆ.

ಕ್ಷತ್ರಿಯ ಸಮುದಾಯದವರ ಮದುವೆ ಆಚರಣೆಯ ವಿಧಿವಿಧಾನಗಳನ್ನು ಅವಲೋಕಿಸಿದಾಗ ಇವರಲ್ಲಿರುವ ಶಾಸ್ತ್ರಗಳು ಸಾಂಸ್ಕೃತಿಕ ವೈಶಿಷ್ಟ್ಯತೆಯ ದ್ಯೋತಕಗಳಾಗಿರುವುದು ಕಂಡುಬರುತ್ತದೆ. ಇವರಲ್ಲಿರುವ ಅನೇಕ ಮದುವೆ ಆಚರಣೆಗಳು ಅವರ ಸಾಂಸ್ಕೃತಿಕ ಬದುಕಿನ ಮೇಲೆ ಬೆಳಕು ಚೆಲ್ಲುತ್ತವೆ. ಇವರು ಮಾಡುವ ನಿಶ್ಚಯದ ವಿಧಿ–ವಿಧಾನಗಳಲ್ಲಿ ಸಾಮಾಜಿಕ ಒಪ್ಪಿಗೆಯನ್ನು ಪಡೆಯುವುದು ಸಮುದಾಯಲ್ಲಿನ ಐಕ್ಯತೆಯನ್ನು ಸೂಚಿಸುತ್ತದೆ. ಇವರಲ್ಲಿ ತೆರ ಕೊಡುವ ಪದ್ಧತಿ, ವೀಳ್ಯದ ಪದ್ಧತಿ ಮತ್ತು ಬಾಸಿಂಗ ತಾಳಿ ಹಣವನ್ನು ಗಂಡಿನ ಕಡೆಯವರೆ ಭರಿಸಬೇಕಾಗುತ್ತದೆ. ಕ್ಷತ್ರಿಯ:ಕ್ಷತ್ರಿ (ಹಿಂದೂಕ್ಷತ್ರಿಯ)ಯರ ಔದಾರ್ಯತೆಯ ಪ್ರತೀಕವಾಗಿದೆ.

ಇವರ ಮದುವೆಗಳಲ್ಲಿ ಕಂಡುಬರುವ ಶಾಸ್ತ್ರಗಳು ದ್ರಾವಿಡ ವೈದಿಕ ಸಂಸ್ಕೃತಿಯ ಪ್ರತೀಕವಾಗಿದೆ. ವೀಳ್ಯ ಕೊಡುವ ಪದ್ಧತಿಯು ಅತ್ಯಂತ ಶಿಸ್ತು ಬದ್ಧವಾಗಿದೆ. ವೀಳ್ಯಗಳನ್ನು ಎತ್ತುವಾಗ ಸಮಸ್ತ ಕುಲದ ಹಿರಿಯರ ಯಜಮಾನರುಗಳ ಒಪ್ಪಿಗೆ ಪಡೆಯುತ್ತಿದ್ದುದು ಹಿರಿಯರ ಬಗೆಗಿನ ಗೌರವ, ಜನಾಂಗದ ಐಕ್ಯತೆ ಮತ್ತು ಉತ್ತಮ ಬಾಂಧವ್ಯ ನಿರ್ಮಾಣಕ್ಕೆ ಪೂರಕವಾಗಿದೆ. ವಧುವನ್ನು ಮನೆದುಂಬಿಸಿಕೊಳ್ಳುವ ಸಂದರ್ಭದಲ್ಲಿ ವರನ ಹೆಗಲ ಮೇಲೆ ಕೃಷಿ ಸಲಕರಣೆಗಳನ್ನು ಹಾಕಿರುವುದು ಮತ್ತು ವಧುವು ಬಿತ್ತುವಂತೆ ಮಾಡುವ ಪದ್ಧತಿಯನ್ನು ಗಮನಿಸಿದರೆ ಇವರ ವೃತ್ತಿಯಲ್ಲಿನ ಸ್ಥಿತ್ಯಂತರವನ್ನು ಗಮನಿಸಬಹುದು. ಮೂಲತಃ ಕ್ಷತ್ರಿಯರಾದವರು ಕೃಷಿಕರಾಗಿವುದನ್ನು ಗಮನಿಸಬಹುದು.

ಹೀಗೆ ವಿವಾಹ ಸಂಬಂಧವಾದ ಆಚರಣೆಗಳು, ಶಾಸ್ತ್ರ ಸಂಪ್ರದಾಯಗಳು 'ಹಿಂದಿನ ಕಾಲದ ವಿವಾಹಗಳಲ್ಲಿ ಮದುವೆಗಿಂತ ತಿಂಗಳಿಗೂ ಮೊದಲೆ ಆರಂಭಗೊಂಡು ನಿರಂತರವಾದ ಅನೇಕ

ಶಾಸ್ತ್ರಗಳಿಗೆ ಹೆಣ್ಣು ಗಂಡುಗಳನ್ನು ಒಳಪಡಿಸಲಾಗುತ್ತಿತ್ತು. ಆ ಮುಖೇನ ಅವರಿಗೆ ಇಡೀ ಬಾಳುವೆಯ ತಿರುಳನ್ನು ಮದುವೆಯ ಒಟ್ಟಿಗೆ ತುಂಬಿಕೊಡಲಾಗುತ್ತಿತ್ತು. ಇದು ಜೀವನ ಪರ್ಯಂತ ಉಳಿಯುವ ಪವಿತ್ರ ಬಂಧನವೆಂಬುದನ್ನು ಮನದಟ್ಟು ಮಾಡಿಕೊಡುವುದರ ಜೊತೆಗೆ ಪರ್ಯಾಂತ ಉಳಿಯುವ ಪವಿತ್ರ ಬಂಧನವೆಂಬುದನ್ನು ಮನದಟ್ಟು ಮಾಡಿಕೊಡುವುದರ ಜೊತೆಗೆ ಮುಂದಿನ ಅವರ ಜವಾಬ್ದಾರಿಗಳನ್ನು ಅನೇಕ ಕ್ರಿಯೆಗಳ ಮೂಲಕ ತಿಳಿಸಿಕೊಡಲಾಗುತ್ತಿತ್ತು. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯ ಸಮುದಾಯದಲ್ಲಿ ಮದುವೆಗಳು ತನ್ನದೇ ಆದ ವಿಶಿಷ್ಟತೆಯಿಂದ ಕೂಡಿದ್ದು, ತಾನು ರೂಢಿಸಿಕೊಂಡು ಬಂದಿರುವ ಆಚರಣೆಗಳು ತುಂಬ ಗಮನಾರ್ಹವಾಗಿವೆ.

**೫.೫. ವಿಧವಾ ವಿವಾಹ**

ಹಿಂದಿನಿಂದಲೂ ವಿಧವಾ ವಿವಾಹವನ್ನು ಒಪ್ಪಿಕೊಂಡು ಬಂದ ಜಾತಿಗಳಲ್ಲಿ ಅಥವಾ ಸಮುದಾಯಗಳಲ್ಲಿ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಕ್ಷತ್ರಿಯರು ಇಂತಹ ಪದ್ಧತಿಗೆ ಒಳಪಟ್ಟಿದ್ದಾರೆ. ವಿಧವಾ ವಿವಾಹವನ್ನು ಸೀರುಡಿಕೆ ಎಂದು ಸಹ ಕರೆಯಲಾಗುತ್ತದೆ. ಸೀರುಡಿಕೆ ಎಂದರೆ ಸೀರೆಯನ್ನು ಕೊಡುವುದರ ಮೂಲಕ ಮಾಡಿಕೊಳ್ಳುವ ಪುನರ್ವಿವಾಹ ವಿಧವೆ ಅಥವಾ ಗಂಡನನ್ನು ಬಿಟ್ಟವಳು ಇನ್ನೊಬ್ಬನೊಡನೆ ಮದುವೆಯಾಗುವುದನ್ನು ಕೂಡಾವಳಿ (ಕೂಡಿಕೆ) ಎಂದು ಸಹ ಕರೆಯಲಾಗುತ್ತದೆ. ವಿಧವಾ ವಿವಾಹವನ್ನು ಗ್ರಾಮೀಣ ಪರಿಸರದಲ್ಲಿ ಕೂಡಾವಳಿ ಎಂದು ಕರೆಯುತ್ತಾರೆ. ವಿಧವೆಯ ಮದುವೆಯ ಬಗ್ಗೆ ಮೊಟುಕುಗೊಳಿಸಿದ ವಿಧಿಯಿದೆ. ಅದನ್ನ ಉಡಿಕೆ ಅಥವಾ ಕೂಡಾವಳಿ ಅನ್ನುತ್ತಾರೆ (ಕರ್ನಾಟಕ ರಾಜ್ಯಗ್ಯಾಝೆಟಿಯರ್ ಭಾಗ-೧, ಪುಟ-೩೮೮). ಕೆಳಜಾತಿಗಳಲ್ಲಿ ವಿಧವಾ ವಿವಾಹ ಬಹಳ ಸಲೀಸಾಗಿ (ಕನ್ನಡವಿಶ್ವವಿದ್ಯಾಲಯ, ವಿಷಯ ವಿಶ್ವಕೋಶ-೩, ಪುಟ-೩೮೮, ೨೦೦೦). ನಡೆಯುತ್ತದೆ. ವಿಧವಾ ವಿವಾಹ ಅಸ್ತಿತ್ವದಲ್ಲಿದ್ದ ಬಗ್ಗೆ ಸಹಮತ ವ್ಯಕ್ತಪಡಿಸಿರುವ ವಿದ್ವಾಂಸರು ಅವುಗಳ ಬಗ್ಗೆ ಇದ್ದ ವಿಧಿ ನಿಷೇಧಗಳ ಬಗೆಯೂ ಪ್ರಸ್ತಾಪಿಸಿದ್ದಾರೆ. ಆ ಪ್ರಕಾರ ವಿಧವಾ ವಿವಾಹವನ್ನು ರಾತ್ರಿಯ ಹೊತ್ತು ವರನ ಸ್ವಗೃಹದಲ್ಲಿ ನೆರವೇರಿಸಲಾಗುತ್ತದೆ. ಈ ವಿಧಿಗೆ ವಿಧವೆಯರು, ಮರು ವಿವಾಹವಾದ ವಿಧವೆಯರು ಗಂಡ ಬಿಟ್ಟವರು ಸೀರುಡಿಕೆ ಮಾಡಿಕೊಂಡ ಹೆಂಗಸರು ಹಾಜರಾಗಿ ಈ ವಿವಾಹ ವಿಧಿಗಳನ್ನು ನೆರವೇರಿಸುತ್ತಾರೆ. ಸ್ತ್ರೀಗೆ ಮರುಜೀವನ ನೀಡುವಂತಹ ಈ ಪದ್ಧತಿಯನ್ನು ಅಂಗೀಕರಿಸಿರುವ ಕ್ಷತ್ರಿಯ ಸಮಾಜವು ಪ್ರತಿಗಾಮಿ ಚಿಂತನೆಗೆ ತನ್ನ ಅಳಿಲು ಸೇವೆ ನೀಡಿರುವುದನ್ನು ಗಮನಿಸಿದರೆ, ಈ ಜನಾಂಗದ ಸಾಂಸ್ಕೃತಿಕ ಔದಾರ್ಯತೆಯ ಅರಿವಾಗುತ್ತದೆ.

ಕ್ಷತ್ರಿಯ ಸಮಾಜದಲ್ಲಿ ವಿಧವೆಗೆ ಮರು ವಿವಾಹವಾಗಲು ಸಮಾಜ ಒಪ್ಪಿಗೆಯನ್ನು ನೀಡಿತ್ತಾದರೂ ಅನೇಕ ನಿರ್ಬಂಧಗಳನ್ನು ವಿಧಿಸಲಾಗಿತ್ತು. ವಿಧವೆಯು ಗತಿಸಿದ ತನ್ನ ಗಂಡನ ತಮ್ಮ ಅಥವಾ ಸಹೋದರನ್ನು ಹಾಗು ಅವನ ಸಂಬಂಧಿಕರನ್ನು ಮದುವೆಯಾಗುವಂತಿರಲಿಲ್ಲ. ಹಾಗೆಯೇ ಅವಿವಾಹಿತನಾದವನು ವಿಧವೆಯೊಂದಿಗೆ ಮದುವೆಯಾಗುವುದನ್ನು ನಿಷೇಧಿಸಲಾಗಿತ್ತು. ಒಂದು ಪಕ್ಷ ಅವಿವಾಹಿತನು ವಿಧವೆಯನ್ನು ಮದುವೆಯಾಗಲು ಇಚ್ಛಿಸಿದರೆ ಮೊದಲು ಎಕ್ಕೆಯ ಗಿಡದೊಂದಿಗೆ ಅವನ ವಿವಾಹವನ್ನು ನೆರವೇರಿಸಿ ಅನಂತರ ವಿಧವೆ ಹೆಣ್ಣೆನೊಂದಿಗೆ ಮದುವೆಯನ್ನು

ನೆರವೇರಿಸಲಾಗುತ್ತಿತ್ತು. 'ಎಕ್ಕ ಅಥವಾ ಎಕ್ಕೆಯ ಗಿಡದೊಂದಿಗೆ ಮದುವೆ ಮಾಡುವ ಸಂಪ್ರದಾಯವು ವೈದಿಕ ಸಂಪ್ರದಾಯದಿಂದ ಬಂದಿದೆ. ಮರುಮದುವೆ ಅಮಂಗಳಕರವೆಂದು ತಿಳಿದಿರುವುದರಿಂದ ಮತ್ತು ಸಾವಿನ ಸಂಕೇತವಾದ ಎಕ್ಕೆ ಗಿಡದೊಂದಿಗೆ ಮದುವೆ ಮಾಡಿದರೆ ಸಾವು ಸಂಭವಿಸಿದರೆ ಎಕ್ಕೆ ಗಿಡ ಸತ್ತು ಮದುವೆ ಆಗುವವರು ಉಳಿದುಕೊಳ್ಳಲಿ' ಎಂಬುದು ಈ ಸಂಪ್ರದಾಯದ ಹಿಂದಿನ ಆಶಯವಾಗಿದೆ.

ಇತ್ತೀಚಿಗೆ ವಿಧವಾ ವಿವಾಹಕ್ಕೆ ಮಾನ್ಯತೆ ನೀಡಿ ಯಾವ ದೋಷಾರೋಪಣೆಯನ್ನು ಮಾಡಕೊಡದೆಂಬುದಾಗಿ ಸಮುದಾಯ ತೆಗೆದುಕೊಂಡಿರುವ ತೀರ್ಮಾನ ಸುತ್ಯಾರ್ಹವಾಗಿದೆ. ಈ ಸಮಾಜದಲ್ಲಿ ವಿವಾಹ ವಿಚ್ಛೇದನಕ್ಕೆ ಸಮ್ಮತಿ ಇದ್ದರೂ ಇಂತಹ ಪ್ರಕರಣಗಳು ಅತಿವಿರಳ ಕಾರಣ ಕುಲ ಪಂಚಾಯಿತಿಯ ನಿಯಂತ್ರಣಾಧಿಕಾರ ಇದುವರೆಗೂ ಪ್ರಬಲವಾಗಿತ್ತು. ಆದರೆ ಪತಿ ಪತ್ನಿಯರಲ್ಲಿ ಹೊಂದಾಣಿಕೆ ಅಸಾಧ್ಯವೆನಿಸಿದಾಗ ಮಧ್ಯಸ್ಥಿಕೆಯಿಂದ ವಿಚ್ಛೇಧನ ನಡೆಯುತ್ತಿದ್ದವು. ಕುಲ ಪಂಚಾಯಿತಿಯು ವಿಧಿಸಿದ ದಂಡವನ್ನು ನೀಡಿ ವಿಚ್ಛೇಧನವನ್ನು ಪಡೆಯಬಹುದಾಗಿತ್ತು. ಆದರೆ ಈ ರೀತಿ ಮರುವಿವಾಹವಾದವಳು ಮೊದಲ ಗಂಡನು ಕಟ್ಟಿದ ತಾಳಿ ಮೊದಲಾದವುಗಳನ್ನು ಹಿಂತಿರುಗಿಸಿ ಕೂಡಿಕೆ ಮಾಡಿಕೊಳ್ಳಬಹುದಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಕಾನೂನಿತ್ಮಾಕವಾಗಿ ವಿಚ್ಛೇಧನವು ನಡೆಯುತ್ತಿದೆ.

**೫.೬. ಬಾಲ್ಯ ವಿವಾಹ**

ಪ್ರೌಢಪೂರ್ವ ವಿವಾಹಗಳನ್ನು ಬಾಲ್ಯವಿವಾಹ ಎಂದು ಕರೆಯುತ್ತಾರೆ. ಗ್ರಾಮೀಣ ಭಾಗದ ಒಳ ಸಮುದಾಯಗಳಲ್ಲಿ ಇಂದಿಗೂ ಬಾಲ್ಯವಿವಾಹ ಪದ್ಧತಿ ರೂಢಿಯಲ್ಲಿದೆ. ಕ್ಷತ್ರಿಯರಲ್ಲಿ ಬಾಲ್ಯ ವಿವಾಹ ಪದ್ಧತಿ ಪ್ರಚಲಿತದಲ್ಲಿತ್ತು. ಇದಕ್ಕೆ ಉದಾಹರಣೆಗಳನ್ನು ಇತಿಹಾಸವನ್ನು ತಿರುಗಿಸಿ ನೋಡಿದಾಗ ಲಭ್ಯವಾಗುತ್ತದೆ. ಕಾರಣ ಪರಕೀಯರ ದಾಳಿಯಿಂದ ಹೆಣ್ಣು ಮಕ್ಕಳ ಶೀಲವನ್ನು ಸಂರಕ್ಷಿಸಿಸುವ ಸಲುವಾಗಿ ಈ ಪದ್ಧತಿ ಜಾರಿಯಲ್ಲಿತ್ತು. ನಂತರದ ದಿನಗಳಲ್ಲಿ ಇದು ರೂಢಿಗತವಾಗಿ ಬೆಳೆದುಬಂತು. ಇದು ಹಿಂದಿನಿಂದಲೂ ಆಸ್ತಿತ್ವದಲ್ಲಿದೆ. ಆದರೆ ಕ್ರಮೇಣ ಈ ಪದ್ಧತಿ ಇಳಿಮುಖವಾಗುತ್ತಾ ಪ್ರೌಢವಿವಾಹ ಪದ್ಧತಿಯು ಬಳಕೆಗೆ ಬಂದಂತೆ ಕಂಡುಬರುತ್ತದೆ. ಇಂದಿನ ದಿನಮಾನದಲ್ಲಿ ಶೈಕ್ಷಣಿಕ ಪ್ರಗತಿ, ವೈಚಾರಿಕತೆ, ಮತ್ತು ಶಾಸನಾತ್ಮಕ ನಿಯಂತ್ರಣದಿಂದಾಗಿ ಬಾಲ್ಯವಿವಾಹವು ಕಣ್ಮರೆಯಾಗುತ್ತಿವೆ. ಆದರೂ ಸಹ ಕೆಲವೊಂದು ಸಮಯದಲ್ಲಿ ಪರಿಸ್ಥಿತಿಯ ಅನಾನುಕೂಲದಿಂದಾಗಿ ಬಾಲ್ಯವಿವಾಹಗಳು ಜರುಗುವುದು ದುರಂತದ ಸಂಗತಿಯಾಗಿದೆ.

ಮದುವೆಯಾಗಿ ೯ ದಿನಕ್ಕೆ ಒಳ್ಳೆಯ ಮುಹೂರ್ತ ನೋಡಿಕೊಂಡು ಬಂದು ನದಂಪತಿಗಳಿಗೆ ಹಾಸಗೆ(ಪ್ರಸ್ಥ) ಮಾಡಲಾಗುತ್ತದೆ. ಹೆಣ್ಣಿನ ಮನೆಯವರು ಹೊಸ ಹಾಸಿಗೆ, ಹೊದಿಕೆ ತಂದಿರುತ್ತಾರೆ. ಈ ರೀತಿಯಾದ ಸಂಪ್ರದಾಯವನ್ನು ವಧುವಿನ ಮನೆಯವರು ನಡೆಸಿಕೊಡುವುಂತಹದು. ಅದನ್ನು ಸಹೋದರನ ಅಕ್ಕ ಅಥವಾ ಸೊಸೆಯಾದವಳು ಹಾಸಿಗೆ ಹಾಕಿ ಬರಬೇಕಾಗುತ್ತದೆ. ಹೆಣ್ಣು ಗಂಡನ್ನು ಒಂದು ಮನೆಯಲ್ಲಿ ಬಿಟ್ಟು ಅಲ್ಲಿರಿವರು ಬೇರೆ ಮನೆಯಲ್ಲಿರುತ್ತಾರೆ. ಇದನ್ನು ಸರೆಗೆ ಹೋಳಿಗೆ

ಹಾಕುವುದು ಎಂದು ಸಹ ಕರೆಯುತ್ತಾರೆ. ಮುಂಜಾನೆ ಎದ್ದು ದಂಪತಿಗಳಿಗೆ ಸ್ನಾನ ಮಾಡಿ ದೇವಾಲಯಕ್ಕೆ ಹೋಗಿ ಪೂಜೆ ಮಾಡಿಕೊಂಡು ಬರುತ್ತಾರೆ. ಹಾಸಿದ ಹೊದಿಕೆಯ ಕೆಳಗೆ ವರನು ತನಗೆ ಎಷ್ಟು ಸಾಧ್ಯವೋ ಅಷ್ಟು ಹಣವನ್ನು ಇಟ್ಟಿರುತ್ತಾರೆ. ಅದು ಹಾಸಿಗೆ ಹಾಕಿದವಳಿಗೆ ಸೇರುತ್ತದೆ. ಅದು ಈ ಸಮುದಾಯದಲ್ಲಿ ಕಂಡುಬರುವ ಪದ್ಧತಿಯಾಗಿದೆ. ದೇವಾಲಯದಿಂದ ಬಂದ ದಂಪತಿಗಳು ದೇವರ ಕೋಣೆಯಲ್ಲಿ ಸಿಹಿ ಊಟವನ್ನು ಮಾಡುತ್ತಾರೆ. ಇಲ್ಲಿಗೆ ಮದುವೆಯ ಪದ್ಧತಿಗಳು ಮುಗಿಯುತ್ತವೆ. ಮುಂದಿನ ದಿನ ಆಷಾಢ ಮಾಸದಲ್ಲಿ ಅತ್ತೆ ಸೊಸೆಯರು ಒಂದೇ ಬಾಗಿಲಿನಲ್ಲಿ ಓಡಾಡಬಾರದೆಂದು ಸೊಸೆಯನ್ನು ತವರು ಮನೆಗೆ ಕಳಿಸುವ ಪದ್ಧತಿ ಇದೆ. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರ ಸಮುದಾಯದಲ್ಲಿ ಸಾಮಾನ್ಯವಾಗಿ ಸುಗ್ಗಿ ತಿಂಗಳಲ್ಲಿ (ಏಪ್ರಿಲ್/ಮೇ) ಮದುವೆ ಸಮಾರಂಭ ಜರುಗಿಸುತ್ತಾರೆ. ಮದುವೆಯಾಗಿ ಗಂಡನ ಮನೆಗೆ ಹೋದ ಮಗಳನ್ನು ಆಷಾಢಮಾಸ ತಿಂಗಳಲ್ಲಿ ತವರಿಗೆ ಕರೆತರುವ ಸಂಪ್ರದಾಯ ಇದೆ. ಶರೀರಶಾಸ್ತ್ರದ ಪ್ರಕಾರವೂ ಪೂರ್ವಜರು ಇದಕ್ಕೆ ಕಾರಣ ಕೊಟ್ಟಿದ್ದಾರೆ. ಜುಲೈ–ಆಗಸ್ಟ್, ತಿಂಗಳಲ್ಲಿ ದಂಪತಿಗಳ ಮಿಲನವಾಗಿ ಗರ್ಭಾಂಕುರವಾದರೆ, ನವಮಾಸಗಳು ತುಂಬಿ ಶಿಶುವಿನ ಜನನ ಬೇಸಿಗೆಯ ಸಮಯದಲ್ಲಾಗುತ್ತದೆ. ಬೇಸಿಗೆಯ ಈ ಬೇಗೆಯಲ್ಲಿ ಪ್ರಥಮ ಹೆರಿಗೆ ಎಂದರೆ ಮಗು ಮತ್ತು ಬಾಣಂತಿ ಇಬ್ಬರಿಗೂ ಕಷ್ಟವಾಗುತ್ತದೆ. ಪೂರ್ವಜರು ವೈಜ್ಞಾನಿಕವಾಗಿ ನವದಂಪತಿಗಳನ್ನು ಆಷಾಢ ಮಾಸದಲ್ಲಿ ದೂರ ಇಡುತ್ತಿದ್ದರು.

ಆಷಾಢ ತಿಂಗಳ ಧಾರಾಕಾರ ಮಳೆಯಿಂದಾಗಿ ಹೊರಗಡೆಯ ಓಡಾಟ ಸುಲಭವಲ್ಲ. ಆ ಕಾರಣಕ್ಕೆ ಪೂರ್ವಜರು 'ಆಷಾಢ ತಿಂಗಳನ್ನು ಶೂನ್ಯ ಮಾಸ' ಎಂದು ಕರೆದು ಹಬ್ಬ ಹರಿದಿನಗಳನ್ನು ನಿಷೇಧಗೊಳಿಸಿದ್ದರು. ಇದರೊಂದಿಗೆ, ಹೊಸ ಬಾಳುವೆಯ ಒಗಟು ಬಿಡಿಸಲಾರಂಭಿಸಲಾರದೆ ಪರಸ್ಪರರನ್ನು ಅರ್ಥಮಾಡಿಕೊಳ್ಳಲು ಈ ಒಂದು ತಿಂಗಳ ವಿರಹ ಸಹಾಯವಾಗುವುದೆಂಬ ಉದ್ದೇಶವಿದ್ದಿರಬಹುದು. ಗಂಡನು ಹೆಂಡತಿಯನ್ನು ಕರೆ ತರಲು ಶ್ರಾವಣ ಮಾಸದಲ್ಲಿ ಅತ್ತೆ ಮನೆಗೆ ಬರುತ್ತಾನೆ. ಮನೆಗೆ ಬಂದ ಅಳಿಯನನ್ನು ಆದರದಿಂದ ಸ್ವಾಗತಿಸಿ ಉಪಚಾರ ಮಾಡುತ್ತಾರೆ. ಮಗಳೊಂದಿಗೆ ಅಳಿಯ ಹತ್ತಿರದ ದೇವಸ್ಥಾನಕ್ಕೆ ಹೋಗಿ ಆಶೀರ್ವಾದ ಪಡೆಯುತ್ತಾರೆ. ನಂತರ ಮನೆಮಗಳು ತನ್ನ ಗಂಡನೊಡನೆ ಅತ್ತೆ ಮನೆಗೆ ಹೋಗುತ್ತಾಳೆ. ನಂತರ ದಿನದಲ್ಲಿ ಶುಭ ಸುದ್ಧಿ ತಿಳಿದುಬಂದರೆ, ಅಂದರೆ ಗರ್ಭಿಣಿ ಎಂದು ತಿಳಿದುಬಂದರೆ, ಮನೆಯವರಿಗೆಲ್ಲ ಸಂತೋಷ ಸಂಗತಿಯಾಗಿರುತ್ತದೆ. ಐದು ಅಥವಾ ಏಳನೇ ತಿಂಗಳಲ್ಲಿ ತವರು ಮನೆಗೆ ಕಳಿಸಲಾಗುತ್ತದೆ. ಐದನೇ ತಿಂಗಳಲ್ಲಿ ನೀರು ಬುತ್ತಿ ಮಾಡಿಕೊಂಡು ತವರು ಮನೆಯವರು ತೆಗೆದುಕೊಂಡು ಬಂಧುಗಳೊಂದಿಗೆ ಹೋಗುತ್ತಾರೆ. ಅವಳಿಗೆ ಸೀಮಂತ ಮಾಡಿ ೭ ನೇ ತಿಂಗಳಲ್ಲಿ ಅಥವಾ ೯ ನೇ ತಿಂಗಳಲ್ಲಿ ತವರಿಗೆ ಕರೆತರಲಾಗುತ್ತದೆ. ಹೆರಿಗೆಯಾಗಿ ೫ನೇ ತಿಂಗಳ ವರೆಗೆ ತವರು ಮನೆಯಲ್ಲಿ ಇರುತ್ತಾರೆ.

ಮಾನವ ಜೀವರಾಶಿ ಅಸ್ಥಿತ್ವ ಫಲವಂತಿಕೆಯ ಮೇಲೆ ನಿಂತಿದೆ. ಒಂದು ಜೀವ ಮತ್ತೊಂದು ಜೀವಕ್ಕೆ ಜನ್ಮನೀಡುವ ಶಕ್ತಿಯೇ ಫಲವಂತಿಕೆ. ಫಲವಂತಿಕೆ ಎಂದರೆ ಗರ್ಭಧಾರಣ ಶಕ್ತಿ. ಇದು ಪ್ರಾಣಿ, ಪಕ್ಷಿ, ಸಸ್ಯ, ಮಾನವ ಎಂಬ ಭೇದವಿಲ್ಲದೆ ಎಲ್ಲಾ ಜೀವರಾಶಿಗಳಲ್ಲಿಯೂ ಗೋಚರಿಸುವ

ಸಾಮಾನ್ಯ ಅಂಶ. ನಿಸರ್ಗದ ಅನಂತ ಜೀವರಾಶಿಗಳನ್ನು ಗಮನಿಸಿದಾಗ ಮಾನವ ಭೂಮಿಯನ್ನು ಅದ್ಭುತ ಫಲವಂತಿಕೆಯ ಮೊತ್ತವೆಂದು ಭಾವಿಸಿರುವ ಸಾಧ್ಯತೆಯನ್ನು ಬುಡಕಟ್ಟು ಸಂಸ್ಕೃತಿಯಲ್ಲಿರುವ ಕೆಲವೊಂದು ಆಚರಣೆಗಳಿಂದ ವ್ಯಕ್ತವಾಗುತ್ತದೆ. ಮಹಿಳೆಗೆ ನಿಸರ್ಗ ನೀಡಿದ ವಿಶಿಷ್ಟ ಕೊಡುಗೆಯೆಂದರೆ, ಗರ್ಭಧಾರಣಾ ಶಕ್ತಿ, ಆಕೆಗೆ ಸಮಾಜದಲ್ಲಿ ಸ್ಥಾನಮಾನವೇನಾದರೂ ದೊರೆತಿರುವುದು ಈ ಕಾರಣದಿಂದಲೇ ಎಂಬುದು ಸತ್ಯಸಂಗತಿ. ಫಲವಂತಿಕೆಯಿಂದಾಗಿ ಹೆಣ್ಣನ್ನು ನಿಸರ್ಗಕ್ಕೆ ಹೋಲಿಸಲಾಗುತ್ತದೆ. ಹೆಣ್ಣಿನ ಗರ್ಭಧಾರಣ ಶಕ್ತಿ ಮತ್ತು ಭೂಮಿಯ ಸಸ್ಯಧಾರ ಶಕ್ತಿಗೂ ಸಂಬಂಧವಿರುವುದನ್ನು ನಾನು ನೋಡುತ್ತವೆ.

ಹೊಲಕ್ಕೆ ಹಸಿರು ಚೆಂದ. ಹೆಂಗಸಿಗೆ ಬಸಿರು ಚೆಂದ, ಎಂಬಗಾದೆಯನ್ನು ನೋಡಬಹುದು. ಫಲಬಿಡುವ ವೃಕ್ಷಕ್ಕೆ ಹೆಣ್ಣನ್ನ ಹೋಲಿಸಲಾಗುತ್ತದೆ. ಒಂದು ಹೆಣ್ಣು ಋತುಮತಿಯಾದ ಮೇಲೆ ಮಧ್ಯವಯಸ್ಸಿನಲ್ಲಿ ಆಕೆಯ ಋತು ಚಕ್ರ ನಿಲ್ಲುವವರೆಗೆ ಇರುವ ಕಾಲವನ್ನು ಫಲವಂತಿಕೆಯ ಕಾಲ ಎಂದು ಗುರುತಿಸುತ್ತೇವೆ. ಜನಪದರು ತಮ್ಮ ಅನುಭವದಿಂದ ಹೆಣ್ಣಿನ ಸೃಷ್ಟಿ ಶಕ್ತಿಯನ್ನು ಗುರುತಿಸಿದ್ದರು. ಆದುದರಿಂದಲೇ ಋತುಮತಿ, ವಿವಾಹ ಗರ್ಭಧಾರಣೆಯಂಥ ಸಂದರ್ಭಗಳಲ್ಲಿ ಕೆಲವೊಂದು ಆಚರಣೆಗಳನ್ನು ಮಾಡಲಾಗುತ್ತದೆ.

ಸೀಮಂತ ಕಾರ್ಯ ಅಥವಾ ಬಯಕೆಯಶಾಸ್ತ್ರ ಮನುಷ್ಯನ ಜೀವನದಲ್ಲಿ ವಂಶವಾಹಿನಿಗೆ (ಸಂತಾನೋತ್ಪತ್ತಿ) ಅತ್ಯಂತ ಮಹತ್ವವಿದೆ. ಇದು ವಿವಾಹದ ಮೂಲ ಉದ್ದೇಶವೂ ಹೌದು. ಆರೋಗ್ಯಕರ ಸಂತಾನವನ್ನು ಎಲ್ಲರೂ ಬಯಸುವುದು ಸಹಜ. ಸಾಮಾನ್ಯವಾಗಿ ಮದುವೆಯಾದ ಹೆಣ್ಣು ವರ್ಷದೊಳಗೆ ಗರ್ಭಿಣಿಯಾಗಲೆಂದು ಆಶಿಸುತ್ತಾರೆ. ಹೆಣ್ಣು ಮಗಳಿಗೆ ಚೊಚ್ಚಲ ಹೆರಿಗೆಗೆ ಮುನ್ನ ಗಂಡನ ಮನೆಯವರು ಗರ್ಭಿಣಿಗೆ ೮ನೇ ತಿಂಗಳಲ್ಲಿ ಅಥವಾ ೯ ನೇ ತಿಂಗಳಲ್ಲಿ ಬಯಕೆ ತೀರಿಸುವುದಕ್ಕಾಗಿ ಸೀಮಂತಕಾರ್ಯ ನೆರವೇರಿಸುವ ಪದ್ಧತಿಗೆ ಸೀಮಂತ ಕಾರ್ಯ ಅಥವಾ ಬಯಕೆಯ ಶಾಸ್ತ್ರ ಎಂದು ಕರೆಯುವರು. ಬಸುರಿಗೆ ಬಯಕೆಗಳು ತುಸು ಹೆಚ್ಚು ತವರಿನ ತಿಂಡಿ ತಿನ್ನಬೇಕು. ತಾಯಿಯನ್ನು ಕಾಣಬೇಕು. ತನ್ನ ಕುಟುಂಬ ವರ್ಗದವರೆಲ್ಲ ಬರಬೇಕೆಂಬ ಆಸೆಗಳು ಸಹಜವಾಗಿದ್ದು, ಆ ಆಸೆಯನ್ನು ಪೂರೈಸದಿದ್ದಲ್ಲಿ ಆಕೆ ಹೆರುವ ಮಕ್ಕಳು ಆರೋಗ್ಯವಂತರಾಗಿರುವುದಿಲ್ಲ ಎಂಬ ನಂಬಿಕೆ ಇದೆ. ಈ ಮಾತಿನಲ್ಲಿ ಬಸುರಿಯ ಬಗ್ಗೆ ಹಾಗೂ ಹುಟ್ಟಲಿರುವ ಮಗುವಿನ ಆರೋಗ್ಯದ ಬಗ್ಗೆ ಇರುವ ಕಾಳಜಿ ವ್ಯಕ್ತವಾಗುತ್ತದೆ. ಈ ಕಾರಣಕ್ಕಾಗಿ ತಿಂಗಳು ತುಂಬುತ್ತಿದ್ದಂತೆ ಪುರೋಹಿತರಲ್ಲಿ ಒಳ್ಳೆಯ ದಿನವನ್ನು ವಿಚಾರಿಸಿ ಸೀಮಂತ ಕಾರ್ಯವನ್ನು ಏರ್ಪಡಿಸುತ್ತಾರೆ.

ಅಂದು ತವರಿನ ಬಂಧು-ಬಳಗದವರು ಫಲ ಪುಷ್ಪ ಸಿಹಿತಿಂಡಿಯೊಂದಿಗೆ ಅಂದರೆ ಆ ದಿನ ಗಂಡನ ಮನೆಯಿಂದ ಯಾವುದೇ ರೀತಿಯಾದ ಆಹಾರ ಪದಾರ್ಥಗಳು ಅಲ್ಲಿ ಇರುವುದಿಲ್ಲ. ಎಲ್ಲಾ ರೀತಿಯಾದ ಆಹಾರದ ವ್ಯವಸ್ಥೆಯನ್ನು ವಧುವಿನ ಕಡೆಯವರು ತೆಗೆದುಕೊಂಡು ಗಂಡನ ಮನೆಗೆ ಬರುತ್ತಾರೆ. ಸೀಮಂತದ ಮುಖ್ಯಭಾಗ ಉಡ್ಯಕ್ಕಿ(ಮಡ್ಲಕ್ಕಿ) ತುಂಬುವುದು, ಅಕ್ಕಿ, ಅಡಿಕೆ, ತೆಂಗಿನ ಕಾಯಿ, ವಿಳ್ಯದೆಲೆ, ಉತ್ತತ್ತಿ ಕೊಬ್ಬರಿಯನ್ನು ಹರಿವಾಣದಲ್ಲಿಟ್ಟು ಗರ್ಭಿಣಿಯನ್ನು ಐದು ಜನ

ಮುತ್ತೈದೆಯರು ಪೂರ್ವ ದಿಕ್ಕಿಗೆ ಮುಖಮಾಡಿ ನಿಂತು ಮಣೆಯ ಮೇಲೆ ಕುಳ್ಳಿರಿಸಿ ತಲೆಗೆ ಎಣ್ಣೆ, ಅರಿಶಿಣ, ಕುಂಕುಮದ ತಿಲಕವಿಟ್ಟು ಕೈಗೆ ಹಸಿರು ಬಳೆ ತೊಡಿಸಿದ ನಂತರ ಅಲ್ಲಿ ಸೇರಿದ ಮುತ್ತೈದೆಯರು ಗರ್ಭಿಣಿಯ ಉಡಿ ತುಂಬುತ್ತಾರೆ. ದೇವರಿಗೆ ವಿಳ್ಯದೆಲೆ ಇಟ್ಟು ನಮಸ್ಕರಿಸಿ, ಹಿರಿಯರ ಆಶೀರ್ವಾದವನ್ನು ಪಡೆಯುತ್ತಾಳೆ. ಅಕ್ಕಿ, ವಿಳ್ಯ, ತೆಂಗಿನಕಾಯಿ, ಸಮೃದ್ಧಿಯ ಸಂಕೇತ, ನಂತರ ದೇವರಿಗೆ ದೀಪವಿರಿಸಿ ಗರ್ಭಿಣಿಯಿಂದ ಕೈಮುಗಿಸಿ ಮನೆದೇವರಿಗೆ, ಕುಲದೇವರಿಗೆ ನಮಸ್ಕರಿಸಿದ ನಂತರ ಕುರ್ಚಿಯಲ್ಲಿ ಪೂರ್ವ ದಿಕ್ಕಿಗೆ ಮುಖಮಾಡಿ ಕುಳ್ಳಿರಿಸಲಾಗುತ್ತದೆ. ಬಾಳೆಎಲೆಗೆ ನೀರನ್ನು ಚಿಮುಕಿಸಿ ಗರ್ಭಿಣಿಗೆ ಬಯಕೆ ಪೂರೈಕೆಗೆ ಸಿದ್ಧಗೊಳಿಸಿದ ಭಕ್ಷ್ಯಗಳನ್ನು ಗರ್ಭಿಣಿಯ ಅತ್ತೆ ಬಡಿಸುತ್ತಾರೆ. ಸಾಮಾನ್ಯವಾಗಿ ಪಂಚಕಜ್ಜಾಯ, ಉಂಡೆಗಳನ್ನು, ಬೂಂದಿಲಾಡು, ಜಿಲೇಬಿ, ಹೋಳಿಗೆ, ಚಕ್ಕಲಿ ಕೂಡಬಳೆ ಜೋಡಿಸುತ್ತಾರೆ. ಈ ಭಕ್ಷ್ಯಗಳು ಅಲ್ಲದೆ ಮೊಟ್ಟೆ ಹಾಲು ತುಪ್ಪ ಬಾಳೆಹಣ್ಣು, ವಿವಿಧ ರೀತಿಯ ಹಣ್ಣು ಹಂಪುಲಗಳನ್ನು ಇರಿಸಲಾಗುವುದು. ನಂತರ ಐದು ಜನ ಮುತ್ತೈದೆಯರು ಆರತಿ ಎತ್ತಿ ಶುಭ ಹಾರೈಸುತ್ತಾರೆ. ನಂತರ ವಧುವಿನ ಕಡೆಯವರು ಅಳಿಯನಾದವನಿಗೆ ಹೊಸಬಟ್ಟೆ ಉಂಗುರ ಅಥವಾ ಆಭರಣವನ್ನು ಅಥವಾ ಬಂಗಾರವನ್ನು ಕೊಡುವ ಪದ್ಧತಿ ಇದೆ. ಈ ಎಲ್ಲಾ ಖರ್ಚನ್ನು ಹುಡಿಗಿಯ ಮನೆಯವರು ಭರಿಸುತ್ತಾರೆ. ತದನಂತರ ಗರ್ಭಿಣಿಯನ್ನು ಒಳಗೆ ಕರೆದುಕೊಂಡುಹೋಗಿ, ಸೇರಿದ ಸಭಿಕರಿಗೆ ಭೋಜನಕ್ಕೆ ಆಹ್ವಾನ ನೀಡಲಾಗುವುದು. ಭೋಜನದ ನಂತರ ಗರ್ಭಿಣಿಯನ್ನು ತವರು ಮನೆಗೆ ಕಳುಹಿಸಿಕೊಡುವ ಮುನ್ನ ಮಡಿಲು ತುಂಬುವ ಕ್ರಮವಿದೆ. ಇದನ್ನು ಮಡ್ಲಅಕ್ಕಿ ಕಟ್ಟುವುದು ಎನ್ನುತ್ತಾರೆ. ಹೀಗೆ ಮಡ್ಲಕ್ಕಿ ಕಟ್ಟಿಕೊಂಡು ತಾಯಿ ಮನೆಗೆ ಹೋದ ಮೇಲೆ ಹೆರಿಗೆಯಾದ ನಂತರವೇ ಹಿಂತಿರುಗಬೇಕು. ಒಂದು ವೇಳೆ ಹೆರಿಗೆ ಮಡಿಲುತುಂಬಿಸಿಕೊಳ್ಳದಿದ್ದರೆ ಮಾತ್ರ ಅತ್ತೆಮನೆಗೆ ಹೆರಿಗೆಯ ಮುನ್ನ ಬಂದು ಹೋಗಬಹುದು. ಬಸುರಿ ತವರಿಗೆ ಬಂದ ಮಗಳನ್ನು ಬಾಗಿಲಲ್ಲಿ ನಿಲ್ಲಿಸಿ ದೃಷ್ಟಿ ತಾಗದಿರಲಿ ಎಂದು ಭೂತ ಪಿಶಾಚಿಗಳು ತಾಗದಿರಲಿ ಎಂದು ಕೆಂಪು ಓಕಳಿ ನೀರನ್ನು ತೋರಿಸಿ ಹಣೆಗೆ ತಿಲಕ ಇಟ್ಟು ಒಳಗೆ ಬರಮಾಡಿಕೊಳ್ಳುವ ಸಂಪ್ರದಾಯವಿದೆ. ಈ ರೀತಿಯ ಆಚರಣೆಗಳಲ್ಲಿ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರು ಗರ್ಭಿಣಿಯ ಬಗ್ಗೆ ಹೊಂದಿರುವ ಕಾಳಜಿ ಹಾಗೂ ತಾವು ಆರ್ಥಿಕವಾಗಿ ಹಿಂದುಳಿದಿದ್ದರೂ ತಮ್ಮ ಸಂಸ್ಕೃತಿಯನ್ನು ತಪ್ಪದೆ ಪರಿಪಾಲಿಸುವುದನ್ನು ತಿಳಿಸುತ್ತದೆ. ಈ ಆಚರಣೆ ಗರ್ಭಿಣಿಯ ಹಿತದೃಷ್ಟಿಯಿಂದ ಮಹತ್ವ ಪೂರ್ಣವಾದದ್ದು.

**೫.೭. ಜನನ ಸಂಪ್ರದಾಯಗಳು**

"ಮನುಷ್ಯ ಆದಿ ಮಾನವ ಹಂತಗಳನ್ನು ದಾಟಿ ನಾಗರೀಕತೆಯ ಹಂತಕ್ಕೆ ಕಾಲಿಟ್ಟೊಡನೆ ಮಾನವ ಬದುಕಿಗೆ ಸಂಬಂಧ ಪಟ್ಟಂತೆ ಆಯಾ ಕಾಲದ ಜನರ ನಂಬಿಕೆ ಮತ್ತು ಆಲೋಚನೆಗಳಿಗೆ ಅನುಗುಣವಾಗಿ ಅನೇಕ ವಿಧಿವಿಧಾನಗಳು ಹುಟ್ಟಿಕೊಂಡವು" *(ಸಣ್ಣರಾಮ, ಲಂಬಾಣಿ ಸಂಸ್ಕೃತಿ, ಪುಟ-೬೮, ೧೯೯೯).* ಈ ಹಿನ್ನಲೆಯಲ್ಲಿ ಜನನಕ್ಕೆ ಸಂಬಂಧಪಟ್ಟ ಆಚರಣೆಗಳನ್ನು ಗಮನಿಸಿದಾಗ ಚೊಚ್ಚಲ ಹೆರಿಗೆ ಹೆಣ್ಣಿಗೆ ಪುನರ್ಜನ್ಮ ಇದ್ದಂತೆ ಎಂಬ ನಂಬಿಕೆ ಇರುವುದರಿಂದ ಹೆರಿಗೆ ಯಾವುದೇ ತೊಂದರೆಗಳು ಇಲ್ಲದೆ ಆಗಬೇಕೆಂಬ ಮನೋಭಾವ ಎಲ್ಲ ಸಮುದಾಯಗಳಲ್ಲೂ ಉಂಟು. ಹಾಗಾಗಿ ಪ್ರಸವಕ್ಕೆ ಯಾವುದೇ ತೊಂದರೆ ಆಗದಿರಲೆಂದು ಪ್ರಾರ್ಥಿಸುವುದು ಅವಶ್ಯಕ ಎಂದು ಭಾವಿಸಿದ

ಮಾನವ ಹಲವಾರು ವಿಧಿವಿಧಾನಗಳನ್ನು ಆಚರಣೆಗೆ ತಂದನು. ಹಾಗೆಯೇ ಹುಟ್ಟಿದ ಮಗುವಿನ ಉತ್ತಮ ಭವಿಷ್ಯಕ್ಕಾಗಿ ಅನೇಕ ಸಂಪ್ರದಾಯಗಳನ್ನು ಕಂಡುಕೊಂಡನು. ಈ ಹಿನ್ನಲೆಯಲ್ಲಿ ಜನನಕ್ಕೆ ಸಂಬಂಧಿಸಿದಂತೆ ಅನೇಕ ಆಚರಣೆಗಳು ರೂಪುಗೊಂಡಿವೆ.

ಹುಟ್ಟುವೆಂಬುದು ನಿಸರ್ಗದ ಸಹಜ ಕ್ರಿಯೆ ಮತ್ತು ಸಂತೋಷದಾಯಕ ಸಂಗತಿ. ಹಾಗಾಗಿ ಹುಟ್ಟಿನ ಸುತ್ತ ಒಂದಲ್ಲ ಒಂದು ರೀತಿಯ ಆಚರಣೆಗಳು ಎಲ್ಲ ಜನಾಂಗಗಳಲ್ಲೂ ಕಂಡುಬರುತ್ತವೆ. ಅದೇ ರೀತಿ ಜನನ ಸಂಸ್ಕಾರಗಳು ಸ್ತ್ರೀ ಗರ್ಭಿಣೆಯಾದ ದಿನದಿಂದಲೇ ಪ್ರಾರಂಭವಾಗುತ್ತವೆ. ಹುಟ್ಟಿನಿಂದಲೇ ಅನೇಕ ಬಗೆಯ ಆಚರಣೆಗಳು ನಡೆಯುತ್ತವೆ. ಹುಟ್ಟಿನ ಬಗೆಗಿನ ಸಂಸ್ಕಾರಗಳಲ್ಲಿ ಶುದ್ಧೀಕರಣ ವಿಧಿಯು ಒಂದಾಗಿರುವುದರಿಂದ ಮೈಲಿಗೆ/ಸೂತಕವನ್ನು ಕಳೆಯುವ ಸಲುವಾಗಿ ಜನನವಾದಾಗ ಇವರು ಅನೇಕ ಧಾರ್ಮಿಕ ಸಂಪ್ರದಾಯಗಳನ್ನು ಆಚರಿಸುತ್ತಾರೆ. ಬಹುತೇಕ ಸಮುದಾಯಗಳಲ್ಲಿ ಇರುವಂತೆ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರಲ್ಲೂ ಚೊಚ್ಚಲ ಹೆರಿಗೆ ತವರುಮನೆಯಲ್ಲಿ ಆಗಬೇಕೆಂಬ ನಿಯಮವಿದೆ.

ಹೆಂಡತಿ ಗರ್ಭಿಣಿಯಾಗಿದ್ದಾಗ ಯಾವುದೇ ಪ್ರಾಣಿಗಳನ್ನು ಗಂಡನಾದವನು ಕೊಲ್ಲಬಾರದೆಂಬ ನಂಬಿಕೆ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರಲ್ಲಿದೆ. ವಿಶೇಷವಾಗಿ ನಾಗರಹಾವನ್ನು ಗರ್ಭಿಣಿಯ ಪತಿ ಸಾಯಿಸಬಾರದೆಂದು ನಂಬುತ್ತಾರೆ. ಒಂದು ಪಕ್ಷ ಸಾಯಿಸಿದರೆ ಹುಟ್ಟಿದ ಮಗು ನಾಗದೋಷಕ್ಕೆ ಗುರಿಯಾಗುತ್ತದೆಂಬ ನಂಬಿಕೆ. ಹಾಗೆ ಗರ್ಭಿಣಿಯರು ಶವ ಸಂಸ್ಕಾರಕ್ಕೆ ಹೋಗುವುದಿಲ್ಲ. ಸಾಮಾನ್ಯವಾಗಿ ಅಮವಾಸ್ಯೆ ಮತ್ತು ಗ್ರಹಣದ ಸಂದರ್ಭದಲ್ಲಿ ಗರ್ಭಿಣಿ ಹೆಣ್ಣು ಮಕ್ಕಳು ಹೊರ ಹೋಗಬಾರದೆಂದು ನಂಬುತ್ತಾರೆ. ಹಾಗೂ ಗ್ರಹಣದ ವಿಚಾರದಲ್ಲಿ ಗರ್ಭಿಣೆಯರು ತುಂಬ ಮುಂಜಾಗ್ರತೆಯನ್ನು ವಹಿಸುವುದು ಒಳ್ಳೆಯದು ಎಂದು ತಿಳಿಸುತ್ತಾರೆ. ಯಾವುದೆ ತೊಂದರೆಗಳು ತಾಗದಿರಲೆಂದು ದೇವರಿಗೆ ಹರಕೆ ಕಟ್ಟಿಕೊಳ್ಳುತ್ತಾರೆ.

**೫.೭.೧. ಹೆರಿಗೆ/ಜನನ**

ಪ್ರಸವ ಕಾಲ ಸಮೀಪಿಸಿದಂತೆ ಹೆಚ್ಚಿನ ಕಾಳಜಿವಹಿಸುತ್ತಾರೆ. ಹೆರಿಗೆ ನೋವು ಬಂದ ತಕ್ಷಣ ಗ್ರಾಮೀಣ ಭಾಗದಲ್ಲಿ ಅನುಭವಿ ಸೂಲಗಿತ್ತಿಯರನ್ನು ಕರೆತರುತ್ತಾರೆ. ಆದರೆ ಇತ್ತೀಚಿನ ದಿನದಲ್ಲಿ ಈ ಸೂಲಗಿತ್ತಿಯರ ಕಾರ್ಯ ಕಡಿಮೆಯಾಗಿದೆ. ಕಾರಣ ಪ್ರಜ್ಞಾವಂತಿಕೆ ಜಾಸ್ತಿಯಾಗಿದೆ. ಆದರೆ ಈ ಸೂಲಗಿತ್ತಿಯು ತನಗೆ ತಿಳಿದಿರುವ ವಿಧಾನಗಳಿಂದ ಹೆರಿಗೆ ಮಾಡಿಸುತ್ತಾಳೆ. ಹೆರಿಗೆ ಆದನಂತರ ತಾಯಿಯ ಗರ್ಭದ ಮಾಸನ್ನು ಮತ್ತು ಹೊಕ್ಕುಳ ಬಳ್ಳಿಯನ್ನು ಕತ್ತರಿಸಿ ಕುಂಭವೊಂದರಲ್ಲಿ ಮನೆಯ ಹಿಂಭಾಗದ ಕೈ ತೋಟದಲ್ಲಿ ಅಥವಾ ತಿಪ್ಪೆಯಲ್ಲಿ ಹೂಳುತ್ತಾರೆ. 'ಮಾಸುಫಲವಂತಿಕೆಯ ಸಂಕೇತ' (ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ, ಹುಟ್ಟು ಸಾವಿನ ನಡುವೆ,ಪುಟ–೨೮, ೨೦೦೦). ಎಂಬ ನಂಬಿಕೆ, ಅನೇಕ ಜನಾಂಗಗಳಲ್ಲಿರುವುದರಿಂದ ಮಾಸನ್ನು ನಾಯಿಗಳು ಕಾಗೆ ತಿನ್ನಬಾರದೆಂದು ಆ ಜಾಗದಲ್ಲಿ ಬಾಳೆ ಅಥವಾ ತೆಂಗನ್ನು ನೆಡುತ್ತಾರೆ.

ಮಗು ಹುಟ್ಟಿದ ಸುದ್ದಿಯನ್ನು ತಮ್ಮ ಜಾತಿ ಭಾಂದವರಿಗೆ ತಿಳಿಸಲು ವಿಶಿಷ್ಟ ವಿಧಾನವನ್ನು ಅನುಸರಿಸುತ್ತಾರೆ. ಹೆಣ್ಣು ಹುಟ್ಟದರೆ ಸಿಬ್ಬಲು (ಬಿದಿರಿನಲ್ಲಿನ ಎಣೆದಿರುವ ಮುಚ್ಚಾಳ) ಮತ್ತು ಗಂಡು ಹುಟ್ಟದರೆ, ಕಂಚಿನ ಗಂಗಾಳವನ್ನು ಬಡಿಯುವ ಸಂಪ್ರದಾಯವಿದೆ. ಜನನವಾದ ಐದು, ಏಳು ಅಥವಾ ಹನ್ನೊಂದು ದಿನಗಳವರೆಗೆ ಸೂತಕ ಅಥವಾ ಮೈಲಿಗೆಯನ್ನು ಆಚರಿಸುತ್ತಾರೆ. ಸೂತಕ ಸಂದರ್ಭದಲ್ಲಿ ತಂದೆಯ ಅಣ್ಣ ತಮ್ಮಂದಿರ ಮನೆಗಳಲ್ಲಿ ಯಾವುದೆಪೂಜೆ ಪುನಸ್ಕಾರಗಳನ್ನು ಶುಭ ಸಮಾರಂಭಗಳನ್ನು ಮಾಡುವುದಿಲ್ಲ. ಈ ಮೈಲಿಗೆಯನ್ನು ಅಥವಾ ಸೂತಕವನ್ನು ತೊಳೆದುಕೊಳ್ಳುವ ಕಾರ್ಯವಿರುತ್ತದೆ. ಹನ್ನೊಂದನೆ ದಿನಕ್ಕೆ ಗೋಮೂತ್ರವನ್ನು ಹಾಕಿ ಸೆಗಣಿಯಿಂದ ನೆಲಸಾರಿಸಿ ಶುಭ್ರಗೊಳಿಸಿ ಎಲ್ಲರು ಮಿಂದು ಮನೆಯ ದೇವರಿಗೆ ಪೂಜೆಸಲ್ಲಿಸಿ ಶಂಖ ಜಾಗಟೆಯನ್ನು ಬಾರಿಸಿ ಮನೆದೇವರಿಗೆ ಕೈಮುಗಿದು ಸೂತಕವನ್ನು ಕಳೆದುಕೊಳ್ಳುತ್ತಾರೆ.

ಬಾಣಂತಿಗೆ ಬಾಣಂತನದಲ್ಲಿ ಮತ್ತು ಮಗುವಿಗೆ ಎಣ್ಣೆ ಹಚ್ಚಿ ಬಿಸಿ ನೀರಿನ ಸ್ನಾನ, ಮಾಡಿಸಿವ ಕ್ರಮವಿದೆ. ಬಾಣಂತಿಗೆ ಸಾಂಬಾರ ಪದಾರ್ಥ, ನೀರುಳ್ಳಿ, ಬೆಳ್ಳುಳ್ಳಿ, ಶುಂಠಿ, ಕಾಯಿ, ಹಾಲು, ಕಾಳು ಮೆಣಸು ಹಾಕಿ ಗಂಜಿ ಮಾಡಿ ಮೂರುದಿನ ತುಪ್ಪಹಾಕಿ ಕೊಡುತ್ತಾರೆ. ಎಲ್ಲಾ ಮಿಶ್ರಣವನ್ನು ಬೆಳಿಗ್ಗೆ ಬೇಗನೇ ಬರೀ ಹೊಟ್ಟೆಗೆ ತಿನ್ನಬೇಕು. ಮೆಂತೆ ಮದ್ದು ನೀರುಳ್ಳಿ ಅವಲಕ್ಕಿ ಮದ್ದು, ಮೆಂತೆಗಂಜಿ ಈ ಎಲ್ಲ ಮಿಶ್ರಣಕ್ಕೆ ಹಸುವಿನ ತುಪ್ಪ ಅತೀ ಮುಖ್ಯವಾಗಿದೆ.ಬಾಣಂತಿಯಾದವಳು ೪೦ನೇ ದಿನಕ್ಕೆ ದೇವಸ್ಥಾನಕ್ಕೆ ಹೋಗುವ ಕ್ರಮವಿದೆ. ಹತ್ತಿರದ ದೇವಸ್ಥಾನಕ್ಕೆ ಹೋಗುವ ಸಂದರ್ಭದಲ್ಲಿ ತಾಯಿ ಮಗುವನ್ನು ಕರಕೊಂಡುಹೋಗುವ ಅಥವಾ ಮಗುವನ್ನು ಮನೆಯಲ್ಲಿ ಬಿಟ್ಟುಹೋಗುವ ಕ್ರಮವೂ ಇದೆ. ದೇವಸ್ಥಾನಕ್ಕೆ ಹೋಗಿ ಬಂದ ಮೇಲೆ ಬಾಣಂತಿ ಎಲ್ಲ ಕೆಲಸವನ್ನು ಮಾಡಬಹುದು. ಬೇರೆಯವರಿಗೆ ಅಡಿಗೆಬಡಿಸುವಂತಿಲ್ಲ. ಮಗುವಿಗೆ ಐದು ತಿಂಗಳಾದ ಮೇಲೆ ಅಥವಾ ನಾಮಕರಣದ ನಂತರ ಗಂಡ ಬಂದು ಹೆಂಡತಿ ಮಗುವನ್ನು ತನ್ನ ಮನೆಗೆ ಕರಕೊಂಡು ಹೋಗಬಹುದು.

**೫.೭.೨. ನಾಮಕರಣ**

ಬೇಟೆ ಸಂಸ್ಕೃತಿಯ ಕಾಲಾವಧಿಯಲ್ಲಿ ವ್ಯಕ್ತಿಗೆ ಹೆಸರಿಡುವ ಸಂಪ್ರದಾಯ ರೂಢಿಯಲ್ಲಿ ಇದ್ದಿರಲಾರದು. ಅಲೆಮಾರಿಯಾಗಿದ್ದ ಮಾನವ ಕೃಷಿಯನ್ನು ಕಂಡುಕೊಂಡ ಮೇಲೆ ಅನೇಕ ಕುಟುಂಬಗಳು ಒಟ್ಟಿಗೆ ಸೇರಿಕೊಂಡು ಒಂದೆಡೆ ಸಾಂಘಿಕ ಜೀವನವನ್ನು ಆರಂಭಿಸಿದ್ದರ ಪರಿಣಾಮವಾಗಿ ಹೆಚ್ಚು ಜನರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶ ಪರಿಸರದಲ್ಲಿ ನೆಲಸುವಂತಾಯಿತು. ಹೀಗೆ ಜನರ ನೆಲೆಸುವಿಕೆಯ ಪ್ರಮಾಣ ಅಧಿಕವಾದಾಗ ಈ ಗೊಂದಲವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಹೆಸರಿನ ಅಗತ್ಯಕಂಡುಬಂದು ಹೆಸರಿಡುವ ಪದ್ಧತಿ ಅಸ್ತಿತ್ವಕ್ಕೆ ಬಂದಿರಬೇಕು. *(ಸಣ್ಣಪಾಪಯ್ಯ, ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು,ಪುಟ-೧, ೨೦೧೦).* ಸಮುದಾಯದಲ್ಲಿ ವ್ಯಕ್ತಿಯನ್ನು ಗುರುತಿಸುವ ಸಲುವಾಗಿ ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಗೂ ಹೆಸರಿಡುವುದು ಸರ್ವೇ ಸಾಮಾನ್ಯ ಸಂಗತಿ. ಪ್ರತಿಯೊಂದು ಸಮುದಾಯಗಳೂ ತಮ್ಮ ಸಾಂಸ್ಕೃತಿಕ ಹಿನ್ನೆಲೆಗೆ ಅನುಗುಣವಾಗಿ ಹೆಸರನ್ನು ನಿರ್ದೇಶನ ಮಾಡುವುದು

ಸಾಮಾನ್ಯವಾಗಿ ಕಂಡುಬರುತ್ತದೆ. ಆದರೆ ಚಾತುರ್ವರ್ಣಕ್ಕೆ ಸಂಬಂಧಪಟ್ಟಂತೆ ಚಾತುರ್ವರ್ಣಗಳ ಹೆಸರುಗಳನ್ನು ಕುರಿತಂತೆ ವಿಷ್ಣುಸ್ಮೃತಿಯಲ್ಲಿ 'ಬ್ರಾಹ್ಮಣರ ಹೆಸರು ಶುಭವನ್ನು, ಕ್ಷತ್ರಿಯರ ಹೆಸರು ಶೌರ್ಯವನ್ನು, ವೈಶ್ಯರ ಹೆಸರು ಐಶ್ವರ್ಯವನ್ನು ಮತ್ತು ಶೂದ್ರರ ಹೆಸರು ತಿರಸ್ಕಾರವನ್ನು ಸೂಚಿವಂತಿರಬೇಕು ಎಂದು ಹೇಳಲಾಗಿದೆ. ಈ ಹಿನ್ನಲೆಯಲ್ಲಿ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರ ಸಮುದಾಯದಲ್ಲಿನ ಹೆಸರಿಡುವ ಸಂದರ್ಭದ ಆಚರಣೆ ಅಥವಾ ಸಂಪ್ರದಾಯಗಳನ್ನು ಹಾಗೂ ಕ್ಷತ್ರಿಯರ ಹೆಸರುಗಳನ್ನು ಇಲ್ಲಿ ಪರಿಭಾವಿಸಲಾಗಿದೆ.

ನಾಮಕರಣವು ಮಗುವಿಗೆ ಹೆಸರಿಡುವ ಹಬ್ಬವಾಗಿದ್ದು, ಸಾಮಾನ್ಯವಾಗಿ ಮಗು ಜನಿಸಿದ ಹತ್ತು ಅಥವಾ ೧೨ನೇಯ ದಿನ ನಾಮಕರಣ ಮಾಡುವುದು ಬಹುತೇಕ ಸಮುದಾಯಗಳಲ್ಲಿ ಹಿಂದಿನ ಪದ್ಧತಿಯಾಗಿತ್ತು. ಮಕ್ಕಳಿಗೆ ಹೆಸರಿಡುವುದರ ಅಗತ್ಯವನ್ನು ಬಹಳ ಹಿಂದೆಯೆ ಕಂಡುಕೊಂಡ ಎಲ್ಲ ಸಮುದಾಯಗಳು ಇದನ್ನು ಒಂದು ಧಾರ್ಮಿಕ ಆಚರಣೆ ಎಂದು ಅಂಗೀಕರಿಸಿದ್ದರು. ನಾಮ ನಿರ್ದೇಶನದ ಆರಂಭಿಕ ಹಂತದಲ್ಲಿ ಬಹುಶಃ ಅನ್ವರ್ಥಕ ನಾಮಗಳನ್ನು ಇಡುತ್ತಿದ್ದರಬಹುದು. 'ಆದರೆ ನಾಗರಿಕತೆ ಬೆಳೆದಂತೆ ಅನ್ವರ್ಥಕ ನಾಮಗಳಿಗೆ ಬದಲಾಗಿ ಮಗುವಿನ ರಕ್ಷಕನಾದ ದೇವರ ಹೆಸರು ಇಲ್ಲವೆ ಗುರುವಿನ ಹೆಸರನ್ನು ಅಥವಾ ವಂಶದ ಹಿರಿಮೆ ಮತ್ತು ಪ್ರೀತಿಗಾಗಿ ವಂಶದ ಹಿರಿಯರ ಹೆಸರನ್ನೂ ಅಥವಾ ವ್ಯಕ್ತಿಯಲ್ಲಿ ನಿರೀಕ್ಷಿಸುವ ಸೌಭಾಗ್ಯ ಗುಣವನ್ನೇ ಅವನಿಗೆ ಅಂಕಿತ ನಾಮವಾಗಿ ನಿರ್ದೇಶನ ಮಾಡುವುದು ರೂಢಿಗೆ ಬಂದಿತು' (ಪುಟ್ಟಪ್ಪಕೆ ವಿ.(ಪ್ರಸಂ), ಯುಗಯಾತ್ರೀ ಭಾರತೀಯ ಸಂಸ್ಕೃತಿ,ಪುಟ-೨೯೬, ೧೯೭೦). ಹೀಗೆ ಸಮಾಜದಲ್ಲಿ ವ್ಯಕ್ತಿಯನ್ನು ಗುರುತಿಸುವ ನಾಮಕರಣದ ಆಚರಣೆಯು ಸಮುದಾಯದ ಆನಂದ ಕ್ಷಣವಾಗಿದ್ದು, ಅದನ್ನು ದೈವಿಕವಾಗಿ ಆಚರಿಸುತ್ತಾರೆ.

ಕ್ಷತ್ರಿಯರಲ್ಲಿ ನಾಮಕರಣ ಸಮಾರಂಭಗಳು ಸರಳಾಗಿವೆ. ಮಗುಹುಟ್ಟಿದ ಮೂರು ತಿಂಗಳು, ೫ನೇ ತಿಂಗಳು ಅಥವಾ ೯ನೇ ತಿಂಗಳಲ್ಲಿ ಈ ಹೆಸರಿಡುವ ಶಾಸ್ತ್ರವನ್ನು ನೆರವೇರಿಸುತ್ತಾರೆ. ಇದಕ್ಕೆ ಮಗುವನ್ನು ತೊಟ್ಟಿಲಿಗೆ ಹಾಕುವ ಶಾಸ್ತ್ರವೆಂದು ಕರೆಯುತ್ತಾರೆ. ಆ ದಿನ ಬೆಳಿಗ್ಗೆ ಸ್ನಾನ ಕರ್ಮಾದಿಗಳನ್ನು ಮುಗಿಸಿ ದೇವಸ್ಥಾನಕ್ಕೆ ಹೋಗಿ ದೇವರ ತೀರ್ಥವನ್ನು ತಂದು ದೇವರ ಕೋಣೆಯಲ್ಲಿರಿಸಿಲಾಗುವುದು. ಅಂದು ಬೆಳಿಗ್ಗೆ ಮಡಿವಾಳಗಿತ್ತಿ ಬಂದು ತಾಯಿ ಮತ್ತು ಮಗುವಿನ ಬಟ್ಟೆಯನ್ನು ಸ್ವಚ್ಛಮಾಡಿಕೊಡುತ್ತಾಳೆ. ನಂತರ ಮನೆಯನ್ನು ಶುದ್ಧಿಕರಿಸಿ, ದೇವರ ತೀರ್ಥವನ್ನು ಮನೆಯೊಳಗೆ ಪ್ರೋಕ್ಷಣೆ ಮಾಡಿದ ನಂತರ ದೇವರಿಗೆ ದೀಪ ಹಚ್ಚಲಾಗುವುದು. ಮಗುವನ್ನು ಎಣ್ಣೆಹಾಕಿ ತೀಡಿ ಸ್ನಾನ ಮಾಡಿಸಿ ಮಗುವನ್ನು ಸಾಂಬ್ರಣಿಸಿ ಮಲಗಿಸುವ ಸಂಪ್ರದಾಯವಿದೆ. ನಂತರ ನಾಮಕರಣಕ್ಕೆ ಬೇಕಾದ ಸಾಮಗ್ರಿಗಳನ್ನು ಸಿಹಿಯನ್ನು ತಂದೆಯಮನೆಯಿಂದ ತೆಗೆದುಕೊಂಡು ಹೋಗುತ್ತಾರೆ. ಕೆಲವೊಂದು ಕುಟುಂಬಗಳಲ್ಲಿ ತೊಟ್ಟಿಲಶಾಸ್ತ್ರವು ಕೇವಲ ಜೋಳಗೆಯಲ್ಲಿ ಮಾಡುವ ಪದ್ಧತಿಯಿದೆ. ಮತ್ತೆ ಕೆಲವರು ಮರದ ತೊಟ್ಟಿಲುಗಳಲ್ಲಿ ಮಾಡುತ್ತಾರೆ. ತೊಟ್ಟಿಲನ್ನು ಪೂರ್ವ ಪಶ್ಚಿಮವಾಗಿ ಕಟ್ಟುಲಾಗುತ್ತದೆ. ತೊಟ್ಟಿಲನ್ನು ಐದು ಬಗೆಯ ಹೂಗಳಿಂದ ಶೃಂಗರಿಸಿಲಾಗುತ್ತದೆ. ಮಗುವಿನ ಸಹೋದರತ್ತಗೆ ಹೆಸರಿಡುವ ಹಕ್ಕಿರುತ್ತದೆ. ಮಗುವಿನ ಜನ್ಮ ನಕ್ಷತ್ರಕ್ಕನುಗುಣವಾಗಿ ನಾಮಕರಣಮಾಡಲಾಗುತ್ತದೆ. ಮೂರು ಅಥವಾ ಐದು ಜನ

ಮುತ್ತೈದೆಯರು ತೊಟ್ಟಿಲ ಕೆಳಗೆ ಕೈ ಬದಲಾಯಿಸಿ ಮಗುವನ್ನು ಆಚೆ ಈಚೆಗೆ ತೆಗೆದುಕೊಂಡು ಮೂರುಸಲ ಈ ರೀತಿ ಮಾಡಿದ ನಂತರ ತೊಟ್ಟಿಲಿಗೆ ಹಾಕುತ್ತಾರೆ. ಮಗುವಿನ ಸಹೋದರತ್ತೆಯು ಹೆಸರಿಡುತ್ತಾಳೆ. ಹಾಗೆಯೇ ಪುರೋಹಿತರ ಮುಖೇನ ಹೆಸರಿಡುವ ಕಾರ್ಯವನ್ನು ಮಾಡುತ್ತಾರೆ.

ನಾಮಕರಣದ ದಿನ ಹೋಮಮಾಡಿಸಿ ಅದಕ್ಕೆ ಮಗುವಿನ ತಂದೆ ತಾಯಿ ಮಡಿಬಟ್ಟೆ ಉಟ್ಟು ಮಗುವಿಗೆ ಹೊಸ ಬಟ್ಟೆ ತೊಡಿಸಿ ಹೋಮಕ್ಕೆ ಕುಳಿತಕೊಳ್ಳುತ್ತಾರೆ. ಹರಿವಾಣದಲ್ಲಿ ಅಕ್ಕಿಯನ್ನು ತುಂಬಿ ಅರಿಶಿಣಕೊಂಬಿನಿಂದ ಮಗುವಿನ ಹೆಸರನ್ನು ಬರೆಯುತ್ತಾರೆ. ಮೊದಲು ದೇವರ ಹೆಸರನ್ನು ಅಜ್ಜ ಅಜ್ಜಿಯ ಹೆಸರನ್ನು ಇಟ್ಟು ನಂತರದಲ್ಲಿ ಸೋದರ ಅತ್ತೆಯು ಮಗುವಿನ ಬಲ ಕಿವಿಯಲ್ಲಿ ಜೋರಾಗಿ ಮೂರುಸಲ ಹೆಸರನ್ನ ಹೇಳುತ್ತಾಳೆ. ಬಳಿಕ ಮುತ್ತೈದೆಯರು ತೊಟ್ಟಲು ತೂಗಿ ಜೋಗುಳ ಹಾಡುತ್ತಾರೆ. ಜೋ ಜೋ ಗೋವಿಂದ ಮುದ್ದು ಕಂದ....., ಕಾಲು ಗೆಜ್ಜೆಯ ನಾದದಿ ಸೇಳೆದ ಓ ಕಂದನೇ ಜೋ ಜೋ" ಎಂದು ಹಾಡುತ್ತಾರೆ. ಅವರಿಗೆಲ್ಲ ಉಡಿತುಂಬಿ ನೆರೆದವರಿಗೆಲ್ಲ ಸಿಹಿ ಹಂಚುತ್ತಾರೆ. ನಂತರ ಬಂಧು ಮಿತ್ರರಿಗೆಲ್ಲ ಊಟದ ವ್ಯವಸ್ಥೆ ಇರುತ್ತದೆ. ಈ ಸಂದರ್ಭದಲ್ಲಿ ಮಗುವಿಗೆ ಬಟ್ಟೆಯನ್ನು ಬಂಗಾರದ ಒಡವೆಗಳನ್ನು ಉಡುಗೊರೆಯಾಗಿ ಕೊಡುತ್ತಾರೆ. ಹಿಂದೆ ಬಾಣಂತಿ ಮತ್ತು ಮಗುವನ್ನು ಕರೆಕೊಂಡು ಹೋಗುವ ತೊಟ್ಟಿಲು ಕೊಡುವ ಕ್ರಮವೂ ಇತ್ತು. ಮರದ ತೊಟ್ಟಿಲು ಕೊಡುವ ಕ್ರಮವೂ ಇತ್ತು. ಮರದ ತೊಟ್ಟಿಲು ಕಂಚಿನ ತೊಟ್ಟಿಲು ಸ್ಟಿಲಿನ ತೊಟ್ಟಿಲು ಮುಂತಾದವು ಬಳಕೆಯಲ್ಲಿವೆ. ಇದನ್ನು ಮಗು ತೊಟ್ಟಿಲು ಹೋಗುವುದು ಎಂದು ಕರೆಯುವರು ವಿಶೇಷವಾಗಿ ತವರು ಮನೆಯಿಂದ ಹೆಣ್ಣು ಮಕ್ಕಳು ಮಂಗಳವಾರ ಗಂಡನ ಮನೆಗೆ ಹೋಗುವುದು ನಿಷೀದ್ಧವಾಗಿದೆ. ಬೇರೆದಿನದಲ್ಲಿ ಮಾತ್ರ ಅವಳು ಗಂಡನ ಮನೆಗೆ ಹೋಗಬೇಕು,ಹಾಗೂ ಗಂಡನ ಮನೆಯಿಂದ ಶುಕ್ರವಾರ ತಾಯಿಯ ಮನೆಗೆ ಬರುವಂತಿಲ್ಲ.

### ೫.೭.೩. ಜವುಳ ತೆಗೆಯುವ ಶಾಸ್ತ್ರ

'ತಲೆಕೂದಲನ್ನು ಬೋಳಸಿಕೊಳ್ಳುವುದಕ್ಕೆ ಮುಡಿ ಕೊಡುವುದು ಅಥವಾ ತಲೆಮುಡಿ ತೆಗೆಸುವುದು ಎನ್ನುತ್ತಾರೆ. ಗೃಹ್ಯ ಸೂತ್ರದ ಪ್ರಕಾರ ಜವುಳ ಅಥವಾ ಚೌಲಕರ್ಮ ಕಾರ್ಯಕ್ರಮವನ್ನು ಮಗು ಹುಟ್ಟಿದ ಮೊದಲನೇ ವರ್ಷದ ಕೊನೆಯಲ್ಲಿ ಅಥವಾ ಮೂರು ವರ್ಷ ತುಂಬುವುದರೊಳಗೆ ನಡೆಸಬೇಕು. ಆದರೂ ಕೆಲವು ಸಂದರ್ಭದಲ್ಲಿ ಏಳುವರ್ಷದವರೆಗೂ ಮಾಡಬಹುದೆಂದು ಅಭಿಪ್ರಾಯವಿದೆ ಸೌಂದರ್ಯ ಹಾಗೂ ದೀರ್ಘಾಯುಷ್ಯವನ್ನು ಕೊಡುವುದು, ಇದರ ಗುರಿ ಚೌಲ ಕರ್ಮವನ್ನು ಮಾಡದಿದ್ದರೆ, ಆಯಷ್ಯ ಕ್ಷೀಣಿಸುವುದು. ಆದ್ದರಿಂದ ಇದನ್ನು ಆಚರಿಸಲೇಬೇಕು' *(ಪುಟ್ಟಪ್ಪಕೆ ವಿ,(ಪ್ರಸಂ), ಯುಗಯಾತ್ರೀ ಭಾರತೀಯ ಸಂಸ್ಕೃತಿ,ಪುಟ-೨೯೭, ೧೯೭೦).* ಮಾನವಶಾಸ್ತ್ರಕಾರರ ಪ್ರಕಾರ ಚೌಲಕರ್ಮವು ಒಂದು ರೀತಿಯ ಅರ್ಪಣಾ ವಿಧಾನವಾಗಿದ್ದು, ಕೂದಲನ್ನು ದೇವರಿಗೆ ಕಾಣಿಕೆಯಾಗಿ ಅರ್ಪಿಸಲಾಗುತ್ತದೆ. ತಲೆ ಮುಡಿಕೊಡುವ ಪದ್ಧತಿ ತುಂಬಾ ಪ್ರಚಲಿತವಾಗಿದ್ದು, ಸಾಂಕೇತಿಕವಾಗಿದೆ.

ಈ ಜವಳವನ್ನು ಮನೆಯ ದೇವರ ಹೆಸರಿನಲ್ಲಿ ತೆಗೆಯುತ್ತಾರೆ. ಕೆಲವೊಂದು ಕಡೆ ಹೆಣ್ಣು ದೇವರಿಗೆ ಮತ್ತು ಗಂಡು ದೇವರಿಗೆ ಮುಡಿಯನ್ನು ಬಿಡುತ್ತಾರೆ. ಜವಳ ತೆಗೆಯುವ ಕಾರ್ಯ

ಮಗುವಿನ ಮಾವ ಇಲ್ಲವೇ ತಾಯಿ ಸಂದಂಧವಿರುವ ಮಾವ ಅಥವಾ ಗಂಡಂದಿರ ತಂದೆಯ ಸಂಬಂಧಿಕರಿಂದ ಈ ಕಾರ್ಯ ನೆರವೇರುವುದು, ತವರು ಮನೆಯವರು ತಾಯಿ ಮಗುವಿಗೆ ಹೊಸ ಬಟ್ಟೆಯನ್ನು ತಂದು ಉಡಿಸುತ್ತಾರೆ. ಇದೆ ಸಮಯದಲ್ಲಿ ಸಹೋದರ ಮಾವನಿಗೆ ಹೊಸಬಟ್ಟೆಯನ್ನು ಕೊಡುತ್ತಾರೆ. ಸಾಮಾನ್ಯವಾಗಿ ಮನೆದೇವರ ಅಥವಾ ಸ್ಥಳೀಯ ದೇವರುಗಳ ಸನ್ನಿಧಿಯಲ್ಲಿ ಈ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಇತ್ತೀಚಿಗೆ ತಾವು ಹರಸಿಕೊಂಡ ಬೇರೆ ಬೇರೆ ದೇವರುಗಳಿಗೂ ಮುಡಿಕೊಡುತ್ತಾರೆ. ಮುಡಿ ತೆಗೆಸುವ ದಿನದಂದು ಬಂಧುಮಿತ್ರರ ಸಮೇತ ದೇವರ ಸನ್ನಿಧಿಗೆ ಹೋಗಿ ಮಡಿಯಿಂದ ದೇವರಿಗೆ ಕೊಡಬೇಕಾದ ಪೂಜಾ ಸಾಮಾಗ್ರಿಗಳನ್ನು ಮೊದಲು ಕೊಡುತ್ತಾರೆ. ಅರ್ಚಕನು ಅಂದು ದೇವರಿಗೆ ಎಡೆ ಬಿಡಾರಗಳನ್ನು ಮಾಡಿಕೊಂಡು ವಿಶೇಷವಾಗಿ ಅಲಂಕರಿಸಿ ಪೂಜೆ ಸಲ್ಲಿಸುತ್ತಾನೆ. ಪೂಜಾ ಕಾರ್ಯಕ್ರಮದಲ್ಲಿ ಎಲ್ಲರೂ ಭಾಗಿಗಳಾಗಿರುತ್ತಾರೆ.

ಪೂಜೆಯ ನಂತರ ಕರಿಕಂಬಳಿ ಗದ್ದಿಗೆ ಮಾಡಿ ಕಳಸ ಪಂಚಾರತಿ ಇರಿಸಿ ಪೂಜೆ ಸಲ್ಲಿಸುತ್ತಾರೆ. ನಂತರ ತೆಗೆಸುವ ಮಗುವಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆಯನ್ನು ತೊಡಿಸಿ ಮಗುವನ್ನು ಕರಿಕಂಬಳಿಯ ಗದ್ದಿಗೆಯ ಮೇಲೆ ಸೋದರ ಮಾವನ ಜೊತೆಯಲ್ಲಿಕೂರಿಸಿ ಮುಡಿ ತೆಗೆಸುತ್ತಾರೆ. ಸೋದರ ಮಾವನು ಹುಟ್ಟುಕೂದಲನ್ನು ಮೂರು ಸಲ ಕತ್ತರಿಸಿದ ನಂತರ ಕ್ಷೌರಿಕನು ಕೂದಲನ್ನು ಕತ್ತರಿಸುತ್ತಾನೆ. ನಂತರ ಮಗುವಿಗೆ ಸ್ನಾನ ಮಾಡಿಸಿ ಹೊಸಬಟ್ಟೆ ತೊಡಿಸುತ್ತಾರೆ. ಆಗ ಬಂಧು ಮಿತ್ರರು ಮಗುವಿಗೆ ಉಡುಗೊರೆಯಾಗಿ ಬಟ್ಟೆ ಒಡವೆಗಳನ್ನು ಕೊಡುತ್ತಾರೆ. ಸಹೋದರ ಮಾವನಿಗೆ ಮಗುವಿನ ಕಡೆಯವರು ಅಂದರೆ ಮಗುವಿನ ತಂದೆಯು ಬಟ್ಟೆಗಳನ್ನು ಉಡುಗೊರೆಯಾಗಿ ಕೊಡುತ್ತಾನೆ. ಜವುಳಕಾರ್ಯಕ್ಕೆ ಬಂದಂತಹ ಕ್ಷೌರಿಕನಿಗೂ ಬಟ್ಟೆ, ದಕ್ಷಣೆ, ಬೆಲ್ಲ, ಅಕ್ಕಿ, ಕಾಯಿ ಕೊಡುತ್ತಾರೆ. ಕಾರ್ಯಕ್ರಮವು ಮುಗಿದ ನಂತರ ಬಂದವರಿಗೆ ಊಟದ ವ್ಯವಸ್ಥೆಯನ್ನು ಮಾಡುತ್ತಾರೆ. ಸಾಮಾನ್ಯವಾಗಿ ಸಿಹಿ ಅಡುಗೆಯನ್ನು ಮಾಡಿರುತ್ತಾರೆ. ಪ್ರಧಾನ ದೇವರಿಗೆ ಮುಡಿಕೊಟ್ಟ ಬಳಿಕ ಎಲ್ಲಾ ಕಾರ್ಯಗಳು ಮುಗಿದ ನಂತರ ಅಲ್ಲಿರುವಂತಹ ಭೂತಪ್ಪ, ಕಾಳಿಕದೇವಿ, ಮಾರಿದೇವಾಲಯಕ್ಕೆ ಮುಂತಾದ ದೇವತೆಗಳಿಗೆ ಹರಕೆ ಹೇಳಿಕೊಂಡಿದ್ದರೆ, ಪ್ರತ್ಯೇಕವಾಗಿ ಕುರಿ, ಕೋಳಿ ಬಲಿಯನ್ನು ಕೊಟ್ಟು ಮಾಂಸದ ಅಡುಗೆಯನ್ನು ಮಾಡುತ್ತಾರೆ. ಮುಡಿಯನ್ನು ತೆಗೆಸಿದ ನಂತರ ಆ ಮುಗುವಿನ ಕೂದಲುಗಳನ್ನು ಒಂದು ಹೊಸ ಬಟ್ಟೆಯಲ್ಲಿ ಗಂಟು ಕಟ್ಟಿ ಹರಿಯುವ ನೀರಿನಲ್ಲಿ ತೇಲಿ ಬಿಡುತ್ತಾರೆ. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯ ಸಮುದಾಯದವರು ಅಂತಹ ಸಂಪ್ರದಾಯವನ್ನು ಬಿಡದೆ ಪಾಲಿಸುತ್ತಾರೆ.

**೫.೭.೪. ಕಿವಿ ಚುಚ್ಚುವುದು**

ಇದು ಮಗುವಿಗೆ ಕಿವಿ ಚುಚ್ಚುವ ಕರ್ಮ ಸಂಸ್ಕಾರ ಇದರಲ್ಲಿ ಆಯುರ್ವೇದಶಾಸ್ತ್ರದ ಆರೋಗ್ಯ ತತ್ವ, ಶೃಂಗಾರತತ್ವ ಮತ್ತು ಪ್ರಕೃತಿಯಲ್ಲಿರುವ ದುಷ್ಟಶಕ್ತಿಗಳಿಂದ ಪಾರಾಗುವ ರಕ್ಷಣಾ ತತ್ವ, ಅಡಕವಾಗಿದೆ. ಮಗುವಿಗೆ ನಾಲ್ಕು ಅಥವಾ ಐದನೇಯ ತಿಂಗಳಿನಲ್ಲಿ ಕಿವಿ ಚುಚ್ಚುವ ಸಂಸ್ಕಾರವನ್ನು ಮಾಡುತ್ತಾರೆ. ಸಹೋದರ ಮಾವನಿಗೆ ಶಕ್ತ್ಯಾನುಸಾರ ಹಣ ಹಾಗೂ ಉಡುಗೊರೆ ಕೊಡುತ್ತಾರೆ. ಹೆಣ್ಣು ಮತ್ತು

ಗಂಡು ಮಗುವಿಗೆ ಕಿವಿಯನ್ನು ಚುಚ್ಚುತ್ತಾರೆ. ಮಗು ಕ್ರೀಯಾಶೀಲನಾಗಬೇಕು ಎಂಬ ದೃಷ್ಟಿಯಿಂದ ಅಕ್ಕಸಾಲಿಗನಿಂದ ಈ ಕಾರ್ಯ ನಡೆಯುತ್ತದೆ.

### ೫.೭.೫. ಅನ್ನಪ್ರಾಶನ

ಐದರಿಂದ ಆರು ತಿಂಗಳವರೆಗೆ ತಾಯಿಯ ಎದೆ ಹಾಲು ಮಗುವಿಗೆ ಆಹಾರವಾಗಿರುತ್ತದೆ. ಮಗು ಬೆಳೆಯುತ್ತ ಅದರ ಶರೀರವು ತುಂಬ ಚಲನಶೀಲವಾಗಿರುತ್ತದೆ. ಅದಕ್ಕೆ ಮಗುವಿಗೆ ಆರು ತಿಂಗಳ ನಂತರ ಅನ್ನವು ಮುಖ್ಯ ಪಾತ್ರವಹಿಸುತ್ತದೆ. ಮಗುವಿನ ಶಾರೀರಿಕ, ಮಾನಸಿಕ ಆರೋಗ್ಯವನ್ನು ರಕ್ಷಿಸುವ ಶಕ್ತಿ ಇದೆ. ಅದಕ್ಕಾಗಿ ಮಗುವಿಗೆ ಆರು ತಿಂಗಳಾದಾಗ ಪೂಜೆ ಪ್ರಾರ್ಥನೆಗಳ ಸಹಿತ ಪ್ರಥಮ ಬಾರಿ ಅನ್ನ ನೀಡಲಾಗುತ್ತದೆ. ಈ ಸಂಸ್ಕಾರವನ್ನು ದೇವಸ್ಥಾನ ಅಥವಾ ಮನೆಯಲ್ಲಿ ಮಾಡಲಾಗುತ್ತದೆ. ವಿದ್ಯಾರಂಭ ಇದೊಂದು ಮಗುವಿಗೆ ಪ್ರಥಮವಾಗಿ ಅಕ್ಷರ ಬರೆಯಲು ಕಲಿಸುವ ಸಂಸ್ಕಾರ. ಇದನ್ನು ದೇವಸ್ಥಾನಕ್ಕಿಂತ ಮನೆಯಲ್ಲೇ ಹೆಚ್ಚಾಗಿ ಮಾಡಿಸುತ್ತಾರೆ. ಮಗುವಿನ ಕೈ ಹಿಡಿದು ಅಕ್ಕಿಯಲ್ಲಿ ಓಂ ಅಕ್ಷರವನ್ನು ಬರೆಸುತ್ತಾರೆ. ಈ ಸಂಪ್ರದಾಯವನ್ನು ಶೃಂಗೇರಿ ಮಠದಲ್ಲಿ, ಕೊಲ್ಲುರು ಮೂಕಾಂಬಿಕ ದೇವಾಲಯದಲ್ಲಿ ಅಕ್ಷರಾಭ್ಯಾಸವನ್ನು ಮಾಡಿಸುತ್ತಾರೆ.

### ೫.೭.೬. ಉಪನಯನ/ಉಪಕ್ರಮ

ಉಪಯನಯ ಪದ್ಧತಿಯು ಕ್ಷತ್ರಿಯರಲ್ಲಿ ೮ನೇ ವರ್ಷದಿಂದ ೧೨ನೇ ವರ್ಷದ ಒಳಗೆ ಗಂಡು ಮಕ್ಕಳಿಗೆ ಯಜ್ಞೋಪವೀತ ಧಾರಣೆ ಮಾಡುವ ಪದ್ಧತಿಯಾಗಿದೆ. ಕೆಲವರು ಲಗ್ನದ ದಿನದ ಮೊದಲು ಉಪನಯನ ಮಾಡಿಸುತ್ತಾರೆ. ಇದಕ್ಕೆ ಹಿಂದಿನ ಕಾಲದಲ್ಲಿ ಉಪನಯನವೆಂಬ ಸಂಸ್ಕಾರವಿರಲಿಲ್ಲದಿರುವುದೆ ಕಾರಣವಾಗಿದೆ. ಮಠಗಳಲ್ಲಿ ವಿದ್ಯಾರಂಭ ಪ್ರಥಮ ಸಂಸ್ಕಾರಕ್ಕೆ 'ಉಪನಯನದ' ಎನ್ನುತ್ತಿದ್ದರು. ವಿದ್ಯೆ ಕಲಿಯಲು ಬಂದ ಶಿಷ್ಯನಿಗೆ ಗುರುಗಳು 'ಅಶ್ವಾರೋಹಣ' ಮತ್ತು 'ದಂಡಧಾರಣೆ' ಮಾಡಿಸುತ್ತಿದ್ದರು. ಬ್ರಹ್ಮಚರ್ಯಾಶ್ರಮವನ್ನು ಮುಗಿಸಿ ಶಾಲೆ ಬಿಟ್ಟು ಹೋಗುವ ವಿದ್ಯಾರ್ಥಿಗಳಿಗೆ, ಸಮಾವರ್ತನ ಎಂಬ ಹೋಮವನ್ನು ಮಾಡಿಗುರುಗಳು ಆಶೀರ್ವದಿಸಿ ಗುರುದಕ್ಷಣೆ ಸ್ವೀಕರಿಸಿ ಬೀಳ್ಕೊಡುತ್ತಿದ್ದರು.

ಉಪವೀತ ಧರಿಸುವುದು ಅಹಂಕಾರ ಸೂಚಕವಲ್ಲ, ತನ್ನ ಕರ್ತವ್ಯ ಪಾಲನೆಗಾಗಿ ಕಟ್ಟಿಬದ್ಧವಾದ ವಿನಮ್ರ ವೈದಿಕ ಧರ್ಯಾನುಯಾಯಿಯ ಸ್ವರೂಪದ ಅಭಿವ್ಯಕ್ತಿ ಮಾತ್ರ ಯಜ್ಞೋಪಮೀತ ಸತ್ಕರ್ಮದೊಂದಿಗೆ ಉದ್ಭವಿಸುವಂತದ್ದು. ಕ್ಷತ್ರಿಯ ಸಮುದಾಯದಲ್ಲಿ ಉಪನಯದಂತೆ ಮುದ್ರೆ ಹಾಕಿಸುವ ಪದ್ಧತಿ ಇದೆ. ಈ ಮುದ್ರೆಯನ್ನು ಅವರು ಮನೆದೇವರ ಸ್ಥಳದ ಹೋಗಿ ಈ ಸಂಪ್ರದಾಯವನ್ನು ಮಾಡಿಕೊಳ್ಳುವರು. ಮುಖ್ಯವಾಗಿ ವೆಂಕಟೇಶ್ವರನ ಸನ್ನಿಧಿಯಲ್ಲಿ ಅಂದರೆ ತಿರುಪತಿಗೆ ಹೋಗುವರ ಆರ್ಥಿಕವಾಗಿ ಸದೃಢವಾಗಿಲ್ಲದವರು ಹತ್ತಿರವಿರುವ ಪುರಾತನವಾದ ದೇವಾಲಯಕ್ಕೆ ಹೋಗಿ ಮುದ್ರೆ ಕಾರ್ಯವನ್ನು ಮಾಡಿಕೊಳ್ಳುವರು. ಇಲ್ಲಿ ಮುಖ್ಯವಾಗಿ ಮುದ್ರೆಯನ್ನು ಹಾಕಿಸಿಕೊಳ್ಳುವ ಹುಡುಗನು ಅಥವಾ ಪುರುಷನಿಗೆ ಬಲ ಭಜಕ್ಕೆ ಚಕ್ರದ ಗುರುತನ್ನು ಎಡಕ್ಕೆ ಶಂಖ ಇರುವ ಗುರುತನ್ನು ಬ್ರಾಹ್ಮಣ ಪುರೋಹಿತರು ಹೋಮ ಕುಂಡಲದಲ್ಲಿ  ಈ ಎರಡು ರೀತಿಯ ಮುದ್ರೆಯನ್ನು ಕೆಂಪಾಗಿ ಕಾಯಿಸಿ

ಮುದ್ರೆಯನ್ನು ಮಾಡುತ್ತಾರೆ. ಇಲ್ಲಿ ಈರೀತಿಯಾದ ಪದ್ಧತಿಯು ಕ್ಷತ್ರಿಯರ ಸಮುದಾಯದ ಕೆಲ ಕುಟುಂಬಗಳಲ್ಲಿ ಇಂದು ಸಹ ಜಾರಿಯಲ್ಲಿದೆ. ಮೊದಲು ಹೂ ಮುದ್ರೆಯಾದ ನಂತರ ದೊಡ್ಡ ಮುದ್ರೆಯನ್ನು ಮಾಡುವ ಕ್ರಮವಿದೆ.

ಮುದ್ರೆಯ ಸಂಪ್ರದಾಯ ಮುಗಿದ ನಂತರ ಆ ಹುಡಗನಿಗೆ ಜನಿವಾರ ಹಾಕಿಸುವುದಾಗಿದೆ. ಇಲ್ಲಿ ಮುಖ್ಯವಾಗಿ ಮೂರು ಎಳೆಗಳು ಮನ:ಶುದ್ಧಿ, ವಚನ ಶುದ್ಧಿ, ಕಾರ್ಯಶುದ್ಧಿ, ಈ ಮೂರು ಪಾವಿತ್ರತೆಯನ್ನು ಸೂಚಿಸುತ್ತದೆ. ಶುಭವೂ ಪ್ರಗತಿಶೀಲವೂ ಆದ ಜೀವನ ನಡೆಸುತ್ತೆನೆಂಬ ವಾಗ್ದಾನದ ಸಂಕೇತವಾಗಿರುತ್ತದೆ. ಮೂರೆಳೆಯ ಜನಿವಾರವು ಸ್ಥೂಲಕಾರಣ ಸೂಕ್ಷ್ಮಶರೀರಗಳ ಪ್ರತೀಕ, ಮೂರು ಎಳೆಯ 'ದೇವಯಜ್ಞ, ಋಷಿಯಜ್ಞ ಮತ್ತು ಪಿತೃಯಜ್ಞ, ತೀರಿಸುತ್ತೇನೆ ಎಂಬ ಪ್ರತಿಜ್ಞೆಯ ಪ್ರತೀಕ. ಗೃಹಸ್ಥನಾದೊಡನೆ ಅವನ ಸಹಧರ್ಮಿಣೀಯ ಪೂರೈಸಬೇಕಾದ ಸಂಸಾರಯಜ್ಞ ಭೂತಯಜ್ಞ ಮತ್ತು ಮಾನವಯಜ್ಞ ಇವುಗಳನ್ನು ತಾವಿಬ್ಬರು ಸಹಭಾಗಿಗಳಾಗಿ ಪೂರೈಸುತ್ತೇವೆ ಎಂಬ ಸಂಕಲ್ಪದ ಸಂಜ್ಞೆಯಾಗಿ ಆರು ಎಳೆಯ ಜನಿವಾರವನ್ನು ಧರಿಸುತ್ತಾನೆ. ಕ್ಷತ್ರಿಯರಲ್ಲಿ ಮದುವೆಯ ಮೊದಲು ಉಪನಯನವನ್ನು ಕಡ್ಡಾಯವಾಗಿ ಮಾಡಿಸುತ್ತಾರೆ. ಅನುಕೂಲವಿದ್ದವರೂ ಬಾಲ್ಯಯ ವ್ಯವಸ್ಥೆಯಲ್ಲಿ ಮಾಡಿದರೆ, ಆರ್ಥಿಕವಾಗಿ ಹಿಂದುಳಿದವರು ಮದುವೆಯ ಮೊದಲು ಮಾಡುವ ಕ್ರಮವಿದೆ. ಈ ಸಂಸ್ಕಾರದ ನಂತರ ತಪ್ಪದೆ ಜನಿವಾರ ಧರಿಸಬೇಕು.

### ೫.೮. ಶವಸಂಸ್ಕಾರ ಅಥವಾ ಮರಣ ಸಂಬಂಧಿ ಆಚರಣೆಗಳು

'ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಂದು ಜೀವಿಗೂ ಸಾವು ಅನಿವಾರ್ಯ. ಇದು ಸೃಷ್ಟಿಯ ನಿಯಮ. ಮನುಷ್ಯ ಜೀವನದ ಎರಡು ಪ್ರಮುಖ ಘಟ್ಟಗಳಲ್ಲಿ ಒಂದು ಬದುಕಿಗೆ ನಾಂದಿ ಹಾಡಿದರೆ, ಇನ್ನೊಂದು ಮಂಗಳವನ್ನು ಹಾಡುತ್ತದೆ. ಮನುಷ್ಯನು ಹುಟ್ಟಿನಿಂದ ಸಾವಿನವರೆಗಿನ ಜೀವತಾವಧಿಯಲ್ಲಿ ಅನೇಕ ಆಚರಣೆ, ಸಂಪ್ರದಾಯ ಮತ್ತು ಸಂಸ್ಕಾರಗಳಿಗೆ ಒಳಗಾಗುತ್ತಾನೆ. ಹೀಗೆ ಹುಟ್ಟಿನಿಂದ ಮೊದಲುಗೊಂಡು ಆಚರಿಸುವ ಸಂಸ್ಕಾರಗಳನ್ನು ಪರಲೋಕದ ಸುಖಕ್ಕೆ ಕಾರಣವಾಗುತ್ತವೆಂಬ ನಂಬಿಕೆ' *(ಪುಟ್ಟಪ್ಪಕೆ ವಿ,(ಪ್ರಸಂ), ಯುಗಯಾತ್ರೀ ಭಾರತೀಯ ಸಂಸ್ಕೃತಿ,ಪುಟ-೩೦೩, ೧೯೭೦).* ಇದು ಎಲ್ಲಾ ಜನಾಂಗಗಳಲ್ಲಿ ಇದೆ. ಆದರೆ 'ಮನುಷ್ಯನ ಜೀವಿತಾವಧಿಯ ಆಚರಣೆಗಳಿಗಿಂತಲೂ ಸಾವಿನ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ವಿಶಿಷ್ಟವಾಗಿರುತ್ತವೆ ಮತ್ತು ಚಾಚೂ ತಪ್ಪದೆ ಆಚರಿಸಲ್ಪಡುತ್ತವೆ *(ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ, ಹುಟ್ಟು ಸಾವಿನ ನಡುವೆ,ಪುಟ-೯೬, ೨೦೦೦).* ಏಕೆಂದರೆ, ಸಾವಿನ ಭಯ ಮನುಷ್ಯನನ್ನು ಅನಾದಿ ಕಾಲದಿಂದಲೂ ಕಾಡುತ್ತಾ ಬಂದಿದೆ. ಸಾವಿಗೆ ಸಂಬಂಧಿಸಿದ ಆಚರಣೆಗಳಲ್ಲಿ ಹೆಚ್ಚೂ ಕಡಿಮೆಗಳಾದರೆ ಸತ್ತ ವ್ಯಕ್ತಿಯ ಆತ್ಮ ಬದುಕಿದ್ದವರನ್ನು ಕಾಡುತ್ತದೆ *(ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ, ಹುಟ್ಟು ಸಾವಿನ ನಡುವೆ,ಪುಟ-೯೬, ೨೦೦೦).* ಎಂಬ ನಂಬಿಕೆ ಇರುವುದರಿಂದ ಸಾವಿನ ಸಂದರ್ಭದ ಮತ್ತು ಸಾವಿನ ನಂತರದ ಆಚರಣೆಗಳನ್ನು ಚಾಚೂ ತಪ್ಪದೆ ಆಚರಿಸುವ ಪರಂಪರೆ ಬೆಳೆದುಬಂದಿದೆ. ಈ ಆಚರಣೆಗಳನ್ನು ದೇಹ ಸಂಸ್ಕಾರದ

ಆಚರಣೆಗಳು, ಅಂತ್ಯಸಂಸ್ಕಾರದ ಆಚರಣೆಗಳೆಂದು ಗುರುತಿಸಿಕೊಳ್ಳಬಹುದು *(ಗಂಗಾಧರ ದೈವಜ್ಞ, ಒಬಡಕಟ್ಟು ಸಮಾಜ, ಹುಟ್ಟು ಸಾವಿನ ನಡುವೆ,ಪುಟ-೯೭, ೨೦೦೦).* ಈ ಆಚರಣೆಗಳು ಪ್ರದೇಶ, ಜನಾಂಗ, ಜಾತಿ ಮತ್ತು ಅವರವರ ನಂಬಿಕೆ, ಆಚಾರ, ವಿಚಾರ, ಹಾಗೂ ಆರ್ಥಿಕ ಸ್ಥಿತಿಗತಿಗನುಗುಣವಾಗಿ ವಿಭಿನ್ನವಾಗಿರುವುದನ್ನು ಕಾಣುತ್ತೇವೆ. ಸ್ವರ್ಗ, ನರಕ, ಭೂತ, ಪ್ರೇತ, ಪುನರ್ಜನ್ಮಗಳಲ್ಲಿ ತಮ್ಮದೇ ಆದ ನಂಬಿಕೆಯುಳ್ಳ ಕ್ಷತ್ರಿಯರಲ್ಲಿ ಸಾವಿನ ಮತ್ತು ಸಾವಿನ ನಂತರದ ಆಚರಣೆಗಳು ಅವರ ನಂಬಿಕೆಗಳ ಹಿನ್ನೆಲೆಯಲ್ಲಿ ಆಚರಣೆಗೊಳ್ಳುತ್ತವೆ.

ಜೀವನ ಚಕ್ರದ ಕೊನೆಯ ಹಂತ ಅಂತ್ಯ ವಿಧಿ, ಇದನ್ನು ಮರಣ ಎಂದು ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರು ಕರೆಯುತ್ತಾರೆ. ಜೀವನ ನಶ್ವರವಾಗಿದ್ದು, ಪಾಪ ಕೃತ್ಯ ಮಾಡಿದರೆ ಕೆಟ್ಟ ಸಾವು ಪ್ರಾಪ್ತವಾಗುತ್ತದೆ ಎಂದು ನಂಬಿದ್ದಾರೆ. ಧರ್ಮ ಮಾರ್ಗದಲ್ಲಿ ನಡೆದು ಬಾಳಬೇಕೆಂಬುದು ಇವರ ತತ್ವ. ಹುಟ್ಟಿದ ಪ್ರತಿಯೊಬ್ಬನಿಗೂ ಸಾವು ಇದ್ದೆ ಇದೆ. ಸತ್ತವನಿಗೆ ಪುನರ್‌ಜನ್ಮ ಇದ್ದೆ ಇದೆ ಎಂದು ನಂಬಿದ್ದಾರೆ. ವ್ಯಕ್ತಿಯ ಕೆಲಸ ಕಾರ್ಯಗಳ ಮೇಲೆ ಸ್ವರ್ಗ, ನರಕಕ್ಕೆ ಹೋಗುತ್ತಾರೆ ಎಂದು ತಿಳಿದಿದ್ದಾರೆ. ಹುಟ್ಟಿಗೆ ಕೊಟ್ಟಷ್ಟೆ ಮಹತ್ವವನ್ನು ಸಾವಿಗೂ ಕೊಡುತ್ತಾರೆ ವಯಸ್ಸಾದವರಿಗೆ ಸಾವಿಗಿಂತ ಮೊದಲು ಅವರು ಇಷ್ಟ ಪಟ್ಟ ತಿಂಡಿ ಮಾಡಿ ತಿನ್ನಲು ಕೊಡುತ್ತಾರೆ. ಬಂಧು-ಬಳಗವೆಲ್ಲ ಸಾವಿನ ಪೂರ್ವದಲ್ಲಿ ಅವರನ್ನು ನೋಡಿಹೋಗುತ್ತಾರೆ. ಮುಕ್ತಿಗೆ ಸಾವು ಸನ್ನಿಹಿತವಾಗುವ ಸಂದರ್ಭದಲ್ಲಿ ಆತನಿಗೆ ಪ್ರಿಯರಾದವರು ಮಕ್ಕಳು ಮೊಮ್ಮಕ್ಕಳು ಸಾಯುವ ಕಾಲದಲ್ಲಿ ಬಾಯಲ್ಲಿ ನೀರು ಇಲ್ಲವೆ ತುಳಸಿ ತೀರ್ಥವನ್ನು, ಕಾಶಿಯಾತ್ರೆ ಮಾಡಿದವರಿದ್ದಲ್ಲಿ, ಶೇಖರಿಸಿಟ್ಟ ಗಂಗಾಜಲವನ್ನು ಬಾಯಿಯಲ್ಲಿ ಹಾಕುತ್ತಾರೆ.

ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರಲ್ಲಿ ಯಾವುದೆ ವ್ಯಕ್ತಿ ಮೃತನಾದರೆ ಮರಣಿಸಿದ ತಕ್ಷಣ ಕೈ ಕಾಲುಗಳನ್ನು ಮಡಚಿ ಮೃತದೇಹವನ್ನು ಮನೆಯ ಹೊರ ಚಾವಡಿಗೆ ಅಥವಾ ಪಡಸಾಲೆಗೆ ತಂದು ಮಲಗಿಸುತ್ತಾರೆ. ನಂತರ ಸತ್ತ ಸುದ್ದಿಯನ್ನು ಬಂಧು ಮಿತ್ರರಿಗೆ ತಿಳಿಸುತ್ತಾರೆ. ಸತ್ತ ವ್ಯಕ್ತಿಯ ತಲೆದಿಂಬಿನಲ್ಲಿ ದೀಪವನ್ನು ಹಚ್ಚಿಡುತ್ತಾರೆ. ಮನೆಯ ಮುಂದೆ ಮರದ ದಿಮ್ಮಿಯಿಂದ ಬೆಂಕಿ ಹಾಕುತ್ತಾರೆ. ಕೆಲವರು ರಾತ್ರಿ ವೇಳೆಯಲ್ಲಿ ಸತ್ತರೆ, ಭಜನೆಯನ್ನು ಮಾಡಲಾಗುತ್ತದೆ. ನಂತರ ದೀಪ ಮತ್ತು ಊದಬತ್ತಿ ಹಚ್ಚಿಡುತ್ತಾರೆ, ಆ ದೀಪವು ಅವರನ್ನು ಮಣ್ಣು ಮಾಡುವವರೆಗೆ ಹಾಗೆಯೇ ಇರುತ್ತದೆ. ಕ್ಷತ್ರಿಯರಲ್ಲಿ ಹೆಣವನ್ನು ಸುಡುವ ಮತ್ತು ಹೂಳುವ ಎರಡೂ ಪದ್ಧತಿಗಳಿವೆ. ಅಪ್ರಾಪ್ತ ಮಕ್ಕಳು ಮತ್ತು ಅವಿವಾಹಿತರು ಸತ್ತರೆ ಸುಡದೆ ಹೂಳುತ್ತಾರೆ. ಮೂರನೇ ದಿನಕ್ಕೆ ಗುಡ್ಡೆಗೆ ಹಾಲೆರೆಯುತ್ತಾರೆ ಮತ್ತು ಕೆಲವರು ಹಾಲೆರೆಯುವುದಿಲ್ಲ. ಇವರಿಗೆ ತಿಥಿ ಮುಂತಾದ ಅಪರಕರ್ಮಗಳನ್ನು ಮಾಡುವುದಿಲ್ಲ. ಅಪರಕರ್ಮಗಳನ್ನು ಮಾಡಿದರೆ ಮೋಕ್ಷ ಪ್ರಾಪ್ತಿಯಾಗಿ ಮರುಹುಟ್ಟು ಪಡೆಯುವುದಿಲ್ಲ *(ಸಣ್ಣರಾಮ. ಲಂಬಾಣಿ ಸಂಸ್ಕೃತಿ. ಪುಟ-೧೧೬. ೧೯೯೯).* ಎಂಬ ನಂಬಿಕೆ ಕ್ಷತ್ರಿಯರಲ್ಲಿ ಇರುವುದರಿಂದ ಅಪರಕರ್ಮಾದಿ ವಿಧಿಗಳನ್ನು ಮಾಡುವಂತೆ ಕಾಣುವುದಿಲ್ಲ. ಮಕ್ಕಳು ಮರುಹುಟ್ಟು ಪಡೆದು ತಮ್ಮ ಆಸೆ ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲಿ ಎಂಬ ಆಶಯದಿಂದ ಅಪರಕರ್ಮಗಳನ್ನು ಮಾಡುವುದಿಲ್ಲವೋ,

ಅಥವಾ ವಿವಾಹವಾಗದೆ ಮೃತನಾದರೆ ಅವನಿಗೆ ಮೋಕ್ಷ ಪ್ರಾಪ್ತಿಯಾಗುವುದಿಲ್ಲ ಎಂಬ ವೈದಿಕ ನಂಬಿಕೆ ಕ್ಷತ್ರಿಯರಲ್ಲಿದೆ.

ಮರಣ ಹೊಂದಿದ ಕೂಡಲೆ ಒಂದು ಹಸೆಯ ಮೇಲೆ ಹೆಣವನ್ನು ದಕ್ಷಿಣ ದಿಕ್ಕಿಗೆ ತಲೆ ಮಾಡಿ ಮಲಗಿಸಿ ಒಂದು ಬಿಳಿಯ ಬಟ್ಟೆಯಿಂದ ಮುಚ್ಚುತ್ತಾರೆ. ಸತ್ತ ವ್ಯಕ್ತಿಯ ಹೊಟ್ಟೆಯ ಮೇಲೆ ಉಪ್ಪಿನ ಗಂಟು ಮತ್ತು ಕಬ್ಬಿಣದಕುಡ, ಮಚ್ಚು/ಕಂಡ್ಲಿ, ಇಡುತ್ತಾರೆ. ಬಂಧು ಬಳಗ ಮಿತ್ರರಿಗೆ ತಿಳಿಸುತ್ತಾರೆ. ಬಂದವರೆಲ್ಲ, ಹೂವು, ಕಾಯಿ, ಕರ್ಪೂರ, ಊದಿನ ಕಡ್ಡಿಗಳನ್ನು ಮಂಡಕ್ಕಿ, ತರುತ್ತಾರೆ, ಶವವಾದ ವ್ಯಕ್ತಿಯನ್ನು ಪೂಜಿಸುತ್ತಾರೆ. ಅಂದುಶವವಾದ ಮನೆಯಲ್ಲಿ ಅಣ್ಣತಮ್ಮಂದಿರ ಯಾರು ಸಹ ಅಡುಗೆ ಮಾಡುವುದಿಲ್ಲ. ಅಕ್ಕ ಪಕ್ಕದವರ ಅವರಿಗೆ ಉಪಹಾರ ಟೀ ಕಾಫಿ ತಂದು ಕೊಡುತ್ತಾರೆ. ಬಂದವರೆಲ್ಲವೂ ದುಃಖತಪ್ತರಾದ ಕುಟುಂಬಕ್ಕೆ ಸಮಾಧಾನ ಮಾಡುತ್ತಿರುತ್ತಾರೆ. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರ ಸಮುದಾಯದಲ್ಲಿ ಶವವನ್ನು ದಹನ ಮಾಡುವ ಸಂಪ್ರದಾಯವಿರುವುದರಿಂದ ದಹನಕ್ಕೆ ಸಿದ್ಧತೆ ನಡೆಸಲಾಗುವುದು. ಕ್ಷತ್ರಿಯ ಸಮುದಾಯದವರು ಸ್ವಂತ ಜಮೀನಿನಲ್ಲಿ ಮತ್ತು ಸ್ಮಶಾನದ ಅಥವಾ ಮಸಣದಲ್ಲಿ ನೆರವೇರಿಸುತ್ತಾರೆ ಹಾಗೂ ನಗರ ಪಟ್ಟಣಗಳಲ್ಲಿ ಸಾರ್ವಜನಿಕ ಸ್ಮಶಾನಗಳಲ್ಲಿ ಮತ್ತು ವಿದ್ಯುತ್ ಚಿತಾಗಾರದಲ್ಲಿ ಅಂತ್ಯ ಸಂಸ್ಕಾರಗಳನ್ನು ನೆರವೇರಿಸುತ್ತಾರೆ.

ಸತ್ತ ವ್ಯಕ್ತಿಯನ್ನು ನೋಡಲು ಬಂಧು-ಬಳಗವೆಲ್ಲಾ ಸೇರುತ್ತಾರೆ. ಎಲ್ಲರೂ ಕಣ್ಣೀರು ಸುರಿಸುತ್ತಾರೆ. ಹೆಣಸುಡಲು ಎಲ್ಲ ಸಾಮಗ್ರಿಗಳನ್ನು ಒಟ್ಟು ಗೂಡಿಸುತ್ತಾರೆ. ಶವಕಟ್ಟಲು ಬಿದಿರಿನ ಗಳ ಹುರಿ ಹಗ್ಗ ಚಟ್ಟದ ಮೇಲೆ ಇಡಲು ಉದ್ದನೆಯ ಪೂರ್ಣ ಬಾಳೆ ಎಲೆ ಬಿಳಿಯ ಹತ್ತಿಬಟ್ಟೆ ಗಂಧದ ಕಟ್ಟಿಗೆ, ಮಡಿಕೆ, ಹುರಿಹಗ್ಗ, ಜನಿವಾರ ಜೋಡಿ ಊದುಬತ್ತಿ ಸುಗಂಧ ದ್ರವ್ಯ, ಹೂವು ತುಳಸಿಕುಡಿ ಸಗಣಿಯ ಬೆರಣಿ ವಿಳ್ಯದಲೆ, ಅಡಿಕೆ, ಬಾಳೆಹಣ್ಣು ಕುಂಕುಮ, ಅರಿಶಿಣ, ತೆಂಗಿನಕಾಯಿ, ಸಿಗೆಪುಡಿ, ಸಾಬೂನು, ತೆಂಗಿನ ಎಣ್ಣೆ, ಕಪ್ಪು ಎಳ್ಳು ಇತ್ಯಾದಿ ಸಾಮಗ್ರಿಗಳು ಬೇಕಾಗಿರುತ್ತದೆ. ಹೆಣದ ಎದುರು ಊದುಬತ್ತಿ ಹಚ್ಚಿಡುತ್ತಾರೆ. ಕಾಲಿನ ಬುಡದಲ್ಲಿ ಅಕ್ಕಿಹಾಕಿ ದೀಪ ಉರಿಸುತ್ತಾರೆ. ಕಣ್ಣುರೆಪ್ಪೆ ತೆರೆದಿದ್ದರೆ, ರೆಪ್ಪೆಯನ್ನು ಮುಚ್ಚಿ ಎರಡು ಕೈಗಳನ್ನು ಹೊಟ್ಟೆಯ ಕಡೆಗೆ ಎಳೆದು ಹೆಬ್ಬೆರಳನ್ನು ಬಟ್ಟೆಯ ತುಂಡಿನಿಂದ ಕಟ್ಟುತ್ತಾರೆ. ಎರಡು ಕಾಲಿನ ಹೆಬ್ಬೆರಳನ್ನು ಜೋಡಿಸಿ ಕಟ್ಟಿ ದವಡೆ ಕೂಡಿಸಿ ಕುತ್ತಿಗೆ ಸರಿಸಿ ತಲೆಗೆ ಬಟ್ಟೆ ಕಟ್ಟುತ್ತಾರೆ. ಮೂಗಿನ ಹೊಳ್ಳೆಗೆ ಹತ್ತಿ ಇಡುತ್ತಾರೆ. ಶವಕ್ಕೆ ಬಿಸಿನೀರಿನ ಸ್ನಾನ ಮಾಡಿಸುತ್ತಾರೆ.

ಸತ್ತ ವ್ಯಕ್ತಿಗೆ ಮಂಗಳಸ್ನಾನ ಮಾಡುಸಿವಾಗ ಮನೆಯ ಹೆಣ್ಣು ಮಕ್ಕಳು ಒಬ್ಬೊಬ್ಬರಾಗಿ ಶವದ ತಲೆಗೆ ಎಣ್ಣೆ ಅರಿಶಿಣ ಸಾಬೂನು ಹಚ್ಚಿ ನೀರು ಹಾಕುತ್ತಾರೆ. ಗಂಡಸರು ಸ್ನಾನ ಮಾಡಿಸಿ ಹೊಸ ಬಟ್ಟೆ ತೊಡಿಸುತ್ತಾರೆ. ಹೆಂಗಸಿನ ಶವವಾದರೆ ಎಲ್ಲ ರೀತಿಯ ಸ್ನಾನ ಮಾಡಿಸಿ ಸೀರೆ ಉಡಿಸುವ ಪದ್ಧತಿ ಇದೆ. ಬಟ್ಟೆ ಉಡಿಸಿಹಣೆಗೆ ವಿಭೂತಿ ನಾಮ ಇಟ್ಟು ಕುಂಕುಮ ತಿಲಕವಿಟ್ಟು ಸಿಂಗಾರ ಮಾಡಲಾಗುತ್ತದೆ. ಬಾಯಿಗೆ ಎಲೆ ಅಡಿಕೆ ಕುಟ್ಟಿ ಇಟ್ಟಿರುತ್ತಾರೆ. ಉತ್ತರಾಭಿಮುಖವಾಗಿ ಕೂರಿಸಿ ಹಣ್ಣು ಕಾಯಿ, ಎಲೆ, ಅಡಿಕೆಗಳನ್ನು ಇಟ್ಟು ಪೂಜೆ ಸಲ್ಲಿಸುತ್ತಾರೆ. ಹೆಂಡ್ತಿಯನ್ನು ಸ್ನಾನಮಾಡಿಸಿ ಗಂಡನ ಶವದ ಪಕ್ಕಕ್ಕೆ ಕೂರಿಸಿ ಆಕೆಗೆ ತವರು ಮನೆಯಿಂದ ಮಡಿಲಕ್ಕಿ ತಂದಿರುತ್ತಾರೆ. ಆ ಉಡಿಯಕ್ಕಿಯು

ಮುತ್ತೈದೆಯ ಕೊನೆಯ ಉಡಿಯಕ್ಕಿ (ಮಡ್ಲಕ್ಕಿ) ಇದಾಗಿದೆ. ಶವವನ್ನು ಮನೆಯ ಪ್ರತಿಯೊಬ್ಬರು ಪೂಜಿಸುತ್ತಾರೆ ಮತ್ತು ರಣವಾದ್ಯವು ಅಲ್ಲಿ ಇರುತ್ತದೆ. ನಂತರ ಶವದ ಮನೆಯ ಮುಂದೆ ಹಾಕಿದ ಬೆಂಕಿಯಲ್ಲಿ ಮಣ್ಣಿನ ಪಾತ್ರೆಯಲ್ಲಿ ಅನ್ನ ಮಾಡಿರುತ್ತಾರೆ. ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಲು ಬಿದಿರಿನ ಚಟ್ಟ ಮಾಡಿರುತ್ತಾರೆ. ಅಂದರೆ ಎರಡು ೧೦ ಅಡಿಯಷ್ಟು ಉದ್ದ ಬಂಬೂನಿಂದ ಏಣಿಯಾಕಾರದಲ್ಲಿ ಮಾಡಿ ಅದರ ಕೆಳಗೆ ಅಡ್ಡವಾದ ಬಿದಿರಿನ ಪಟ್ಟಿ ಇಟ್ಟು ಭತ್ತದ ಹುಲ್ಲನ್ನ ಅಥವಾ ಜೋಳದ ಸಪ್ಪೆ ದಂಟನ್ನು ತಡೆಯನ್ನು ಹೊಂದಿಸಿರುತ್ತಾರೆ. ಸ್ಮಶಾನದಲ್ಲಿ ಹೆಣ ಸುಡಲು ಸಿದ್ದಗೆ ಸಿದ್ಧವಾದ ನಂತರ ಎಲ್ಲಾ ಬಂಧುಗಳಿಗೆ ಮಿತ್ರರಿಗೆ ಸಂಬಂಧಿಕರಿಗೆ ಕೊನೆಯ ನಮಸ್ಕಾರ ಮಾಡಲು ತಿಳಿಸುತ್ತಾರೆ.

ಶವವನ್ನು ಚಟ್ಟದ ಮೇಲೆ ಮಲಗಿಸಿದ ಮೇಲೆ ಆ ಮನೆಯ ಸಂಬಂಧಿಕರು ಎಲ್ಲಾರು ಶವದ ಬಾಯಿಗೆ ಎಳ್ಳುನೀರು ಹಾಕುತ್ತಾರೆ. ಹಿರಿಯ ಮಗನು ಬಿಳಿ ಪಂಚೆಯನ್ನು ಉಟ್ಟು ತಲೆಯ ಮೇಲೆ ಬಿಳಿ ವಸ್ತ್ರದ ಮುಸುಕು ಹಾಕಿ ನೀರಿನಿಂದ ಪ್ರೋಕ್ಷಣೆ ಮಾಡುತ್ತಾ ನಂತರ ಹಿರಿಯ ಮಗ ಅಥಾವ ಕಿರಿಯ ಮಗನಿಗೆ ಕಿಚ್ಚಿನಲ್ಲಿ ಬೆಂದ ಅನ್ನದ ಚಟ್ಟಗೆಯನ್ನು ತ್ರಿಕೋನಕಾರದ ಅಗ್ಗದಲ್ಲಿ ಕಟ್ಟಿ ಬೆಂಕಿ ಮಡಿಕೆಯನ್ನು ಅವನ ಕೈಯಲ್ಲಿ ಕೊಡುತ್ತಾರೆ. ಅವನಿಗೆ ಕರಿ ಕಂಬಳಿಯನ್ನು ಗೊಪ್ಪೆ ಮಾಡಿ ತಲೆಗೆ ಪೇಟ ಕಟ್ಟಿಕೊಂಡ ಮೇಲೆ ಶವದ ಮುಂದೆ ಹೋಗಲು ಸಿದ್ಧನಾಗುತ್ತಾನೆ. ಶವವನ್ನು ಚಟ್ಟದ ಮೇಲೆ ಮಲಗಿಸಿದ ನಂತರ ನಾಲ್ಕು ಕಡೆ ಅದಕ್ಕೆ ಹೆಗಲು ಕೊಡಲು ಅವರ ಸಂಬಂಧಿಕರು ಬರುತ್ತಾರೆ. ಬಂಧು-ಬಾಂಧವರು ಹೆಣ ಹೊರುತ್ತಾರೆ. ಮೂರು ಬಾರಿ ಹಿಂದಕ್ಕೆ ಮುಂದಕ್ಕೆ ಹೋಗಿ ಹೆಗಲು ಬದಲಾಯಿಸುತ್ತಾರೆ. ಹಿರಿಯ ಮಗನು ಮುಂದೆ ಮೂರುಬಾರಿ ಹಿಂದೆ ಮೂರು ಬಾರಿ ಹೆಣ ಹೊತ್ತು ನಂತರ ಮತ್ತೆ ಬೆಂಕಿಯ ಮಡಕೆಯನ್ನು ತೆಗೆದುಕೊಳ್ಳುತ್ತಾನೆ. ಹೆಣ ಹೊರುವಾಗ ಶವದ ಕಾಲುಗಳು ಸ್ಮಶಾನ ಕಡೆಗೆ ಇರುವಂತೆ ಮಲಗಿಸುತ್ತಾರೆ. ರಾಮ, ರಾಮ, ರಾಮ, ಗೋವಿಂದ, ಗೋವಿಂದ ಗೋವಿಂದ ಎಂದು ಹೇಳುತ್ತಾ ಬೆಂಕಿಯ ಮಡಿಕೆ ಹಿಡಿದವನ ಹಿಂದೆ ಹೆಣ ಅದರ ಹಿಂದೆ ಬಂಧು ಬಾಂಧವರು ಶವದ ಜೊತೆಯಲ್ಲಿ ಹೆಂಡ್ತಿ ಸತ್ತರೆ ಗಂಡನು ಜೊತೆಯಲ್ಲಿರುತ್ತಾನೆ. ಗಂಡ ಸತ್ತರೆ ಹೆಂಡ್ತಿ ಚಟ್ಟದ ಜೊತೆ ಶೃಂಗಾರಿಸಿಕೊಂಡು ಮಡ್ಲಕ್ಕಿ ಹಾಕಿಕೊಂಡು ದಾರಿಉದ್ದಕೂ ಶವದ ಮೇಲೆ ಮಂಡಕ್ಕಿ ಮತ್ತು ಅಕ್ಕಿ ಹಾಕಬೇಕಾಗುತ್ತದೆ. ಮನೆಯಲ್ಲಿ ಮಕ್ಕಳು ಆರೋಗ್ಯ ಸರಿಯಿಲ್ಲದವರು ಇರುತ್ತಾರೆ. ದಾರಿಯುದ್ದಕ್ಕೂ ಹಣ ಹೂವು, ಎಲೆ, ಮಂಡಕ್ಕಿ, ಹೆಣಕ್ಕೆ ಉಗ್ಗಿಕೊಂಡು ಸ್ಮಶಾನಕ್ಕೆ ಹೋಗುತ್ತಾರೆ.

### ೫.೮.೧. ಶವಕ್ಕೆ ಅಗ್ನಿ ಸ್ಪರ್ಶ

ಸ್ಮಶಾನದಲ್ಲಿ ಚಿತೆಯನ್ನು ಕಟ್ಟಿಗೆಯ ಮೇಲೆ ಇಟ್ಟು ಬಾಳೆ ಎಲೆ ಹಾಸಿ ನಂತರ ಗೋಮಯ ಸಂಪ್ರೋಕ್ಷಿಸಿ ಶವದ ಸಮೇತ ಪ್ರದಕ್ಷಿಣೆ ಮಾಡಿ ಹೆಣವನ್ನು ದಕ್ಷಿಣಕ್ಕೆ ಅಭಿಮುಖವಾಗಿ ಇಡುತ್ತಾರೆ. ತುಳಸಿ ಹಾರವೊಂದನ್ನು ಬಿಟ್ಟು ಉಳಿದ ಎಲ್ಲವನ್ನು ತೆಗೆದು ಹಾಕಿ ಹೆಣದ ಮೇಲೆ ಕಟ್ಟಿಗೆಗಳನ್ನು

ಜೋಡಿಸುತ್ತಾರೆ.ಬಿದಿರಿನ ಚಟ್ಟದ ಮೇಲೆ ಬಾಳೆಯ ಎಲೆ ಹಾಸಿ ಬಿಳಿವಸ್ತ್ರ ಹಾಕುತ್ತಾರೆ. ಇನ್ನುಳಿದ ವಸ್ತ್ರವನ್ನು ಕಾಲಿನ ಬದಿ ಇರುತ್ತದೆ. ಇದನ್ನು ಶವದ ಮೇಲೆ ಹೊದಿಸಿ ಶವವನ್ನು ಸಿಂಗಾರಿಸಿ ಹಾರ ಹಾಕಿ ನೀರಿನಲ್ಲಿ ತುಳಸಿದಳವನ್ನು ಹಾಕಿ ತಲೆಯ ಹತ್ತಿರ ಇಡುತ್ತಾರೆ. ತುಳಸಿ ನೀರನ್ನು ಬಲಗೈನಿಂದ ಮೂರು ಬಾರಿ ಶವದ ಬಾಯಿಗೆ ಹಾಕುತ್ತಾರೆ ಸರ್ವರು ಕಾಲಿಗೆ ನಮಸ್ಕರಿಸುತ್ತಾರೆ. ತಲೆ ಕಾಲಿನ ಬಳಿ ತೆಂಗಿನಕಾಯಿ ಹೋಳನ್ನು ಮತ್ತು ಅಕ್ಕಿಯನ್ನು ಕಟ್ಟುತ್ತಾರೆ. ಅ ಅನ್ನದಿಂದ ಐದು ಪಿಂಡಗಳನ್ನು ಕಟ್ಟಿಡುತ್ತಾರೆ. ಗಂಡ ಸತ್ತಾಗ ಮುತ್ತೈದೆತನದ ಕೊನೆಯ ದಿನವೆಂದು ಸತ್ತವರ ಹೆಂಡತಿ ಬದುಕಿದ್ದರೆ ಅವರಿಗೆ ಹಸಿರು ಬಳೆ ತೋಡಿಸಿ ಹೂವು ಮುಡಿಸಿ ಶವದ ಬಳಿ ಕರೆತಂದು ಗಂಡನ ದರ್ಶನವಾದ ನಂತರ ಗಂಡನಿಗೆ ನಮಸ್ಕರಿಸುತ್ತಾಳೆ. ನಂತರ ವಿಧವೆಯರು ಅವಳ ಬಳೆ ಒಡೆದು, ಕುಂಕುಮ ಒರೆಸಿ ತಲೆಯ ಹೂವು ಕರಿಮಣಿ, ಮಂಗಳ ಸೂತ್ರ ತಗೆದು ಗಂಡನ ಹೆಣದ ಮೇಲೆ ಹಾಕುತ್ತಾರೆ. ಹೆಂಡತಿಯನ್ನು ಬಿಳಿವಸ್ತ್ರದ ಮುಸುಕು ಹಾಕಿ ವಿಧವೆಯರೆ ಕರೆದುಕೊಂಡು ಹೋಗುತ್ತಾರೆ.

ಬಂಧು–ಬಾಂಧವರು ಕಟ್ಟಿಗೆಯನ್ನು ಹಾಕಿ ತುಳಸಿ ಮಾಲೆಯನ್ನು ತೆಗೆಯದೆ ಚಿತೆಗೆ ಬೆಂಕಿ ಹಚ್ಚುವ ಕಾರ್ಯ ಹಿರಿಯ ಮಗ ಮಾಡುತ್ತಾನೆ. ಬೆಂಕಿ ಚೆನ್ನಾಗಿ ಉರಿಯುವ ತನಕ ಯಾರು ಸ್ಮಶಾನದಿಂದ ಹೋಗುವಂತಿಲ್ಲ. ಬೆಂಕಿ ತಂದ ಮಡಕೆಯನ್ನು ಬೆನ್ನಿನ ಹಿಂಬದಿಯಿಂದ ಒಡೆದು ಹೋಗುವಂತೆ ಬಿಡುತ್ತಾರೆ. ಬೆಂಕಿ ಧಗಧಗಿಸಿ ಉರಿಯುತ್ತಿರುವಾಗ ನೀರಿನ ಮಡಕೆಯನ್ನು ಮಗನು ಎಡ ಹೆಗಲಲ್ಲಿ ಹೊತ್ತು ಹೆಣದ ಕಾಲಿನ ಭಾಗದಿಂದ ಅಪ್ರದಕ್ಷಿಣವಾಗಿ ಮೂರು ಬಾರಿ ಸುತ್ತುತ್ತಾನೆ. ನಂತರ ಮನೆಯಿಂದ ತಂದ ಮಚ್ಚಿನಿಂದ ಮಡಕೆಗೆ ರಂಧ್ರವನ್ನು ಮಾಡುತ್ತಾರೆ. ಮೂರನೆ ಸುತ್ತಿಗೆ ಮಡಕೆಯ ನೀರು ಖಾಲಿಯಾಗುತ್ತದೆ. ಕಾಲಿನ ಹತ್ತಿರ ನಿಂತು ಮಡಕೆಯನ್ನು ಚಿತೆಗೆ ಹಾಕುತ್ತಾರೆ. ಬೆಂಕಿ ಧಗ ಧಗಿಸಿ ಉರಿಯುವಾಗಲೆ ನೆಂಟರಿಷ್ಟರು ಒಂದೊಂದು ಕಟ್ಟಿಗೆ ತುಂಡನ್ನು ಸ್ವರ್ಗಕ್ಕೆ ಹೋಗಲೆಂದು ಹೇಳುತ್ತಾ ಎಡಗೈಯಿಂದ ಚಿತೆಗೆ ಹಾಕುತ್ತಾರೆ. ನಂತರ ಅಲ್ಲೆ ಪಕ್ಕದಲ್ಲಿರುವ ನದಿ ಅಥವಾ ಕರೆಯಲ್ಲಿ ಸ್ನಾನ ಮಾಡಿ ನಮಗೆ ಹಿಂದಿರುಗುವ ಸಂಪ್ರದಾಯವಿದೆ.

**೫.೮.೨. ಶವ ಸುಟ್ಟ ನಂತರದ ಕ್ರಿಯೆ**

ಸತ್ತವರ/ಳ ಮನೆಯ ಮುಂದಿ ನಡೆದಾಡುವ ಸ್ಥಳದಲ್ಲಿ ಒಂದು ಚಿಕ್ಕ ಹಾಸು ಕಲ್ಲನ್ನು ತೆಗೆದು ಇಡುತ್ತಾರೆ. ಹಾಗೆ ಶವವು ಸ್ಮಶಾನಕ್ಕೆ ಹೋಗುವಾಗ ಮನೆಯ ಎರಡು ಹೆಂಚುಗಳನ್ನು ತಿರುವಿ ಹಾಕುತ್ತಾರೆ. ಮನೆಯ ಮುಂದೆ ಹಿಂದೆ ಸುತ್ತಲೂ ಮಾದಿಗರು ಸ್ವಚ್ಛಗೊಳಿಸಿ ನೀರುಹಾಕುತ್ತಾರೆ. ಮನೆಯಲ್ಲಿ ಹೆಣ ಇಟ್ಟು ಸ್ಥಳವನ್ನು ಸಗಣಿಯಿಂದ ಶುದ್ಧ ಮಾಡುತ್ತಾರೆ. ನೀರಿನಲ್ಲಿ ತುಳಸಿ ಗರಿಕೆಹಾಕಿ ತುಳಸಿ ಕಟ್ಟೆ ಬಳಿ ಇಡುವ ಪದ್ಧತಿ ಇದೆ. ಈ ನೀರಿನಿಂದ ಶವ ಸಂಸ್ಕಾರಕ್ಕೆ ಬಂದ ಬಂಧು ಬಾಂಧವರು ಪ್ರೋಕ್ಷಣೆ ಮಾಡಿಕೊಂಡು ಶುದ್ಧರಾಗುತ್ತಾರೆ. ಮನೆ ಹೊರಗೆ ಸ್ನಾನ ಮಾಡಿ ದೇವರ ದರ್ಶನವನ್ನು ಪಡೆದು ಹಿಂಬಾಗಿಲನಿಂದ ಒಳಗೆ ಹೋಗುತ್ತಾರೆ. ಸತ್ತದಿನ ಮನೆಯಲ್ಲಿ ಅಡುಗೆ ಮಾಡುವಂತಿಲ್ಲ. ಇನ್ನು ವ್ಯಕ್ತಿಯು ಸತ್ತ ಕೂಡಲೇ ಪಂಚಾಂಗವನ್ನು ನೋಡಲಾಗುವುದು. ಪಂಚಾಗದ

ತಿನಿಸುಗಳನ್ನು ಮಾಡಿಕೊಂಡು ಮನೆಯವರೆಲ್ಲರೂ ಹತ್ತಿರದ ಬಂಧು ಮಿತ್ರರು ಮತ್ತು ಅಣ್ಣ ತಮ್ಮಂದಿರೊಂದಿಗೆ ಶವ ಸಂಸ್ಕಾರ ನೆರವೇರಿಸಿದ ಸ್ಥಳಕ್ಕೆ ತೆರಳಿ ಮನೆಯಿಂದ ತೆಗೆದುಕೊಂಡು ಹೋಗಿದ್ದ ಪದಾರ್ಥ ಮತ್ತು ಹಣ್ಣು ಕಾಯಿಗಳನ್ನು ಇಟ್ಟು ಪೂಜಿಸಿ ಹಾಲೆರೆಯುತ್ತಾರೆ. ನಂತರ ಕಾಗೆಗಳು ಮುಟ್ಟುವವರೆಗೆ ಕಾಯುತ್ತಾರೆ. ಕಾಗೆಗಳು ಪಿಂಡ ತಿಂದರೆ ಸತ್ತವನ ಆತ್ಮಕ್ಕೆ ಮುಕ್ತಿ ಸಿಗುತ್ತದೆ *(ಸಣ್ಣರಾಮ, ಲಂಬಾಣಿ ಸಂಸ್ಕೃತಿ, ಪುಟ-೧೧೬, ೧೯೯೯)*. ಎಂಬ ನಂಬಿಕೆ ಬುಡಕಟ್ಟು ಸಮುದಾಯಗಳಲ್ಲಿ ಇರುವಂತೆ ಕ್ಷತ್ರಿಯರಲ್ಲೂ ಇರುವುದು ಕಂಡುಬರುತ್ತದೆ.

**೫.೮.೪. ತಿಥಿ**

ಸತ್ತ ದೇಹಕ್ಕೆ ಮಾಡುವ ಸಂಸ್ಕಾರಗಳನ್ನು ಶವಸಂಸ್ಕಾರವೆನ್ನವಂತೆ, ಸತ್ತವನ ಆತ್ಮಕ್ಕೆ ಶಾಂತಿ ಸಿಗಲೆಂದು ಉತ್ತರ ಕ್ರಿಯೆಗಳನ್ನು ಮಾಡುತ್ತಾರೆ. ಸತ್ತ ಕ್ಷಣದಿಂದ ಸತ್ತವನ ಆತ್ಮವನ್ನು ಪೂರ್ವಜರ ಆತ್ಮಗಳೊಂದಿಗೆ ಸೇರಿಸುವವರೆಗೆ ಹಲವಾರು ಆಚರಣೆಗಳನ್ನು ನಡೆಸುತ್ತಾರೆ. ಅಂತಹ ಆಚರಣೆಗಳಲ್ಲಿ ತಿಥಿಯು ಪ್ರಧಾನ ಆಚರಣೆಗಳಲ್ಲಿ ಒಂದಾಗಿರುತ್ತದೆ. ತಿಥಿಯನ್ನು ಇತ್ತೀಚಿನ ದಿನಗಳಲ್ಲಿ ಕೈಲಾಸ ಸಮಾರಾಧನೆ ಅಥವಾ ವೈಕುಂಠ ಸಮಾರಾಧನೆ ಎಂದು ಕರೆಯುವರು. ಈ ಕಾರ್ಯವನ್ನು ಸಾಮಾನ್ಯವಾಗಿ ಐದನೇಯ ದಿನದಿಂದ ಇಪ್ಪತ್ತೊಂದನೇ ದಿನಗಳೊಳಗೆ ಯಾವುದಾದರೂ ಬೆಸ ದಿನಗಳಂದು ಮಾಡಿ ಮುಗಿಸುತ್ತಾರೆ. ಈ ಕಾರ್ಯವನ್ನು ಅಮಾವಾಸ್ಯೆ ಅಥವಾ ಹುಣ್ಣಿಮೆಗಳಂದು ಮಾಡುವುದಿಲ್ಲ. ಮನೆಯಲ್ಲಿ ಯಾವುದೇ ಹಬ್ಬ ಹರಿದಿನ ಅಥವಾ ಶುಭ ಸಮಾರಂಭಗಳು ಮೊದಲೆ ನಿಗದಿಯಾಗಿದ್ದರೆ ಆದಷ್ಟು ಬೇಗ ಮಾಡಿ ಮುಗಿಸುತ್ತಾರೆ.

ಬೂದಿರಾಶಿ ಮಾಡುವ ಕ್ರಮವನ್ನು ವ್ಯಕ್ತಿಯು ಗತಿಸಿದ ಗಳಿಗೆಯಿಂದ ಇಡಿದು ಐದನೆಯ ದಿನಕ್ಕೆ ಅಥವಾ ತಿಥಿಯ ದಿನದಂದು ಮಾಡಲಾಗುವುದು. ಅಂದು ಭಂಡಾರಿ (ಕ್ಷೌರಿಕ) ದೇವಸ್ಥಾನದಿಂದ ತಂದ ದೇವರ ತೀರ್ಥವನ್ನು ತುಳಸಿಕಟ್ಟೆಯಲ್ಲಿ ಇಟ್ಟಿರುತ್ತಾರೆ. ಎಲ್ಲರೂ ಸೇರಿದ ಮೇಲೆ ಕ್ಷೌರಿಕ ದೇವರ ತೀರ್ಥವನ್ನು ಮೃತನ ಮಗನಮೇಲೆ ಅಂದರೆ ಮೃತವ್ಯಕ್ತಿಯ ಶವಸಂಸ್ಕಾರದ ದಿನ ಕಿಚ್ಚು ಹಿಡಿದ ವ್ಯಕ್ತಿಯ ಮೇಲೆ ಪ್ರೋಕ್ಷಿಸಿ ಶುದ್ಧಿಕರಿಸಿದ ನಂತರ ಕ್ಷೌರಿಕನು ಅವನಿಗೆ ತಲೆ ಬೋಳಿಸಿ ಗಡ್ಡ ಮೀಸೆ, ಕಣ್ಣಿನ ಉಬ್ಬು ತಗೆಯುತಾನೆ. ನಂತರ ಅವನಿಗೆ ದಕ್ಷಿಣೆ ನೀಡಿದ ಮೇಲೆ ಅವನು ಹೋಗುತ್ತಾನೆ. ಈ ವ್ಯಕ್ತಿಯ ಎಲ್ಲ ಕೂದಲುಗಳನ್ನು ರಾಶಿ ಮಾಡಿದ ಬೂದಿಯ ಜೊತೆಯಲ್ಲಿ ಇಡಲಾಗುತ್ತದೆ. ಬೂದಿರಾಶಿಯನ್ನು ತೆಗೆದುಕೊಂಡು ಹೋಗವ ಕಾರ್ಯವನ್ನು ಮಾವಂದಿರು ಅಥವಾ ಅಳಿಯರು ಮಾಡಬೇಕಾಗುತ್ತದೆ. ಆ ದಹನದ ರಾಶಿಯನ್ನು ಚೀಲದಲ್ಲಿ ತುಂಬಿಕೊಂಡು ಹರಿಯುವ ಹೊಳೆ ಅಥವಾ ನದಿಯಲ್ಲಿ ಹಾಕುತ್ತಾರೆ. ಈ ಅಸ್ತಿಯನ್ನು ವಿಸರ್ಜನೆಯನ್ನು ಮಾಡಲು ಮಗನು ಹೋಗುವುದಿಲ್ಲ. ಶವ ಸಂಸ್ಕಾರ ನಡೆದ ಜಾಗದಲ್ಲಿ ಅನುಕೂಲಸ್ಥರು ಆ ವ್ಯಕ್ತಿಯ ನೆನಪಿಗಾಗಿ ಸಮಾಧಿಗಳನ್ನು ಕಟ್ಟಿಸುತ್ತಾರೆ ಅಥವಾ ಅವರ ಹೆಸರನ್ನು ಹುಟ್ಟಿದ ದಿನಾಂಕ ಮತ್ತು ಸತ್ತ ದಿನಾಂಕವನ್ನು ಬರೆಸುವರು. ಈ ಸಮುದಾಯದಲ್ಲಿ ಮುಖ್ಯ ಉತ್ತರ ಕ್ರಿಯೆಯನ್ನು ಪುರೋಹಿತರಿಂದಲೂ ಮಾಡಿಸುವರು ಇದ್ದಾರೆ. ಹಾಗೆ ಕುಲದ ಹಿರಿಯವರಿಂದ ಮಾಡುವವರು ಇದ್ದಾರೆ. ಏಕೆಂದರೆ, ಪುರೋಹಿತರ ಅಭಾವ ಮತ್ತು

ಹಣಕಾಸಿನ ತೊಂದರೆ ಇರುತ್ತದೆ ಅದ ಕಾರಣ ಅವರವರ ಅನುಕೂಲಕ್ಕೆ ತಕ್ಕಂತೆ ಮಾಡುವರು. ಹಾಗೆ ತಿಥಿಯ ಕಾರ್ಯದಲ್ಲಿ ಸಿಹಿ ಊಟಕ್ಕಿಂತ ಮಾಂಸದ ಊಟವನ್ನು ಹೆಚ್ಚು ಮಾಡಿಸುತ್ತಾರೆ.

**೫.೮.೫. ಹನ್ನೊಂದನೆಯ ದಿನದ ಕ್ರಿಯೆ**

ಮಕ್ಕಳು ಅಳಿಯಂದಿರು ದಾಯಾದಿಗಳು ಇನ್ನಿತರ ಸಂಬಂಧಿಕರು ಸ್ನಾನ ಮಾಡಿ ಆದ ನಂತರ ಹಿಂದಿನ ದಿನ ಕ್ರಿಯೆ ನಡೆದ ಸ್ಥಳಕ್ಕೆ ಬರುತ್ತಾರೆ. ಪುರೋಹಿತರು ಮುಖಾಂತರ ಏಕೋದೆಷ್ಟ ಶ್ರಾದ್ಧ ನಡೆಸುತ್ತಾರೆ. ಕುಟುಂಬದವರು ಪಂಚಗವ್ಯ ಸೇವಿಸಿ ಶವ ಹೊತ್ತವರ ಹೆಗಲು ತೊಳೆದು ಮಂತ್ರ ವಿಧಿಯಿಂದ ಹಿರಿಯ ಮಗನ್ನು ಶುದ್ಧಿಗೊಳಿಸುತ್ತಾರೆ. ಮೊದಲು ಶವ ಹೊತ್ತ ನಾಲ್ಕು ಜನರಿಗೆ ಬೈರಾಸು ಮತ್ತು ಅಡ್ಡ ಪಂಚೆಯನ್ನು ನೀಡುವ ಪದ್ಧತಿ ಇದೆ. ಮನೆಗೆ ಬಂದ ನಂತರ ಪುರೋಹಿತರು ಕೊಟ್ಟ ಪಂಚಗವ್ಯದಿಂದ ಮಾವಿನ ಎಲೆಗಳನ್ನು ಬಳಸಿ ಮನೆಯಲ್ಲಿ ಪಂಚಗವ್ಯವನ್ನು ಪ್ರೋಕ್ಷಿಸಿ ಶುದ್ಧೀಕರಿಸುತ್ತಾರೆ. ಪಂಚಗವ್ಯವನ್ನು ಎಲ್ಲರು ತೀರ್ಥದಂತೆ ಸೇವಿಸುತ್ತಾರೆ. ನಂತರ ಎಲ್ಲರೂ ಸೇರಿ ಅಡಿಗೆ ಸಿದ್ಧಪಡಿಸುತ್ತಾರೆ. ಅಂದು ಬಾಳೆಕಾಯಿ, ಕುಂಬಳಕಾಯಿ, ಒಟ್ಟಿಗೆ ತರುತ್ತಾರೆ. ಅದನ್ನು ಮನೆಯ ಹಿಂದಿನ ಮೆಟ್ಟಿಲಿನಲ್ಲಿ ಕುಳಿತು ಕತ್ತಿಯಿಂದ ಭಾಗಮಾಡಿ ಅಡಿಗೆ ಮಾಡಲು ಕೊಡುತ್ತಾರೆ. ಆ ದಿನ ಶೋಡಷ ಮಾಸಿಕ ಅಂದರೆ ೧೬ ಎಲೆ ಪಡಿ, ೧೬ ಬಾಳೆ ಅದರ ಮೇಲೆ ಬೆಳ್ತಕ್ಕಿ, ತೆಂಗಿನಕಾಯಿ, ತರಕಾರಿ, ಉಪ್ಪು, ಹುಳಿ, ಬೆಲ್ಲ, ವಿಳ್ಯದೆಲೆ ಇಪ್ಪತ್ತೈದು, ಅಡಿಕೆ ಐದು ಹೀಗೆ ಎಲ್ಲ ಎಲೆಗಳ ಮೇಲೆ ಬಡಿಸುತ್ತಾರೆ. ಈ ಪಡಿಯ ಖರ್ಚನ್ನು ಹೆಣ್ಣು ಮಕ್ಕಳು ಭರಿಸುವ ಪದ್ಧತಿ ಇರುವುದರಿಂದ ಸತ್ತವರು ಸ್ವರ್ಗಕ್ಕೆ ಹೋಗುತ್ತಾರೆ ಎಂಬ ನಂಬಿಕೆ ಇವರಲ್ಲಿದೆ.

**೫.೮.೬. ಹನ್ನೆರಡನೆಯ ದಿನ**

ಈ ದಿನದಂದು ಸಹ ಪಿಂಡಕರಣ ಶ್ರಾದ್ಧವನ್ನು ಮಾಡುತ್ತಾರೆ. ಇದನ್ನು ಮೃತನ ಮನೆಯಲ್ಲಿ ಅಥವಾ ಪುರೋಹಿತರ ಮನೆಯಲ್ಲಿ ಮಾಡುತ್ತಾರೆ. ಹನ್ನೆರಡನೇಯ ದಿನದಂದು ಬಂಧು ಬಾಂಧವರೆಲ್ಲಾ ಪಿಂಡಕ್ಕೆ ಎಳ್ಳು ನೀರು ಬಿಡುತ್ತಾರೆ. ಆದರೆ ತಂದೆ-ತಾಯಿಗಳಿದ್ದವರು ತೀಲೋದಕ ಬಿಡಬಾರದು ಎಂಬ ನಂಬಿಕೆ ಇದೆ. ಆ ದಿನ ದವಸದಾನ ಕೊಡುತ್ತಾರೆ. ಈ ದಾನವನ್ನು ಬ್ರಾಹ್ಮಣರು, ಪುರೋಹಿತರು ಮಾತ್ರ ತೆಗೆದುಕೊಳ್ಳಬೇಕು. ಆ ದಾನಗಳೆಂದರೆ, ೧. ಗೋಧಾನ, ೨. ಭೂದಾನ, ೩. ಊದಾಕುಂಬದಾನ, ೪. ದೀಪದಾನ, ೫. ವಸ್ತ್ರದಾನ, ೬. ಶಯ್ಯಾದಾನ, ೭. ಪಾದರಕ್ಷೆ, ೮. ಹಾಲು, ೯. ತುಪ್ಪ, ೧೦. ಬೆಲ್ಲ, ೧೧. ಉಪ್ಪು, ಈ ಮುಂತಾದವುಗಳನ್ನು ದಾನ ಮಾಡುತ್ತಾರೆ. ನಂತರ ಹದಿಮೂರನೇಯ ದಿನ ವೈಕುಂಠ ಸಮಾರಾಧನೆ ನಡೆಸುತ್ತಾರೆ. ಆಕಳು ಮತ್ತು ಕಾಗೆಗಳಿಗೆ ಎಲೆಯಲ್ಲಿ ಬಡಿಸಿ ಅವು ತಿಂದ ನಂತರ ಇಷ್ಟ ಮಿತ್ರರು ಬಂಧು ಬಾಂಧವರಿಗೆ ಊಟ ಹಾಕುತ್ತಾರೆ. ಈ ಬೊಜ್ಜದ ಊಟದಲ್ಲಿ ಕುಂಬಳ, ಬಾಳೆಪಲ್ಯ, ಕಡುಬು, ಉದ್ದಿನವಡೆ ಉಂಡೆ, ರವೆ, ಪಾಯಸ, ಹಾಗಲಕಾಯಿ, ಬೆಂಡೆಕಾಯಿ, ಈ ಮೊದಲಾದವುಗಳನ್ನು ಉಪಯೋಗಿಸುತ್ತಾರೆ. ವಿಶೇವಾಗಿ ಸತ್ತವರಿಗೆ ಇಷ್ಟವಾದ ಅಡುಗೆಯನ್ನು ಮಾಡುತ್ತಾರೆ. ಮತ್ತು ಅದನ್ನು ಪ್ರಸಾದವಾಗಿ ಎಲ್ಲರಿಗೂ ಹಂಚುವ ಕ್ರಮ ಇವರಲ್ಲಿದೆ.

ಆರ್ಥಿಕವಾಗಿ ಸಧೃಡವಿಲ್ಲದವರು ತಿಥಿಯ ದಿನ ಮಾಂಸದ ಊಟವನ್ನು ಮಾಡುವರು. ಕುರಿ, ಮೇಕೆ, ಕೋಳಿಗಳನ್ನು ಬಲಿಕೊಡುತ್ತಾರೆ. ಮಾಂಸ ಊಟವು ಸಿದ್ಧ ಗೊಂಡ ತಕ್ಷಣವೇ ಕುಲಬಾಂಧವರನ್ನು ಕರೆದುಬರುತ್ತಾರೆ. ಈ ವಿಶೇಷವಾದ ಅಡುಗೆಯನ್ನು ಮಧ್ಯಾಹ್ನದ ಅಥವಾ ರಾತ್ರಿಯಲ್ಲಿ ಬಂದ ಕುಲಬಾಂಧವರಿಗೆ ಮಿತ್ರರಿಗೆ ಮತ್ತು ಊರಿನ ಅಥವಾ ಗ್ರಾಮದವರು ಸಹ ಬರುತ್ತಾರೆ. ಇಲ್ಲಿ ಮುಖ್ಯವಾಗಿ ಈ ಅಡುಗೆಯನ್ನು ಕುಲ-ಬಾಂಧವರು ಕೇವಲ ಸಮುದಾಯದವರು ಮಾತ್ರ ಹತ್ತರಿಂದ ಹದಿನೈದು ಜನರು ಸೇರಿಕೊಂಡು ಅಂತ್ಯ ಸಂಸ್ಕಾರ ನಡೆದ ಸ್ಥಳಕ್ಕೆ ಎಡೆಯನ್ನು ಹಾಕಲು ತೆಗೆದುಕೊಂಡು ಹೋಗುತ್ತಾರೆ. ಅಲ್ಲಿ ಕುಲಸ್ಥರು ಮತ್ತು ಕುಟುಂಬ ಅಣ್ಣ ತಮ್ಮಂದಿರು ಮಾತ್ರ ಹೋಗುವರು. ಯಾವುದೇ ರೀತಿಯಲ್ಲಿ ಹೆಣ್ಣು ಮಕ್ಕಳು ಪ್ರವೇಶ ಮಾಡುವಂತಿಲ್ಲ. ತಿಥಿಯ ದಿನದ ಬೆಳ್ಳಿಗೆ ಅಂತ್ಯ ಸಂಸ್ಕಾರದ ಸ್ಥಳದಲ್ಲಿ ಒಂದು ಗೂಡು ಮಾಡಿಬಂದಿರುತ್ತಾರೆ. ಅದು ದೀಪವನ್ನು ಹಚ್ಚಿಡಲು ಹಾಗೇ ತುಳಸಿಯನ್ನು ನೆಟ್ಟಿರುತ್ತಾರೆ. ಆ ಸ್ಥಳಕ್ಕೆ ಕೊಳ್ಳಿ ಹಿಡಿದ ಅಥವಾ ಕಿಚ್ಚ ಹಿಡಿದ ಮಗನು ಸಹ ಹೋಗಿರುತ್ತಾನೆ. ಅಲ್ಲಿ ಈ ಮಾಂಸದ ಎಡೆಯನ್ನು ಅಂದರೆ ಅದು ಅನ್ನ ಸಾಂಬಾರು ಮುದ್ದೆ ಇರುತ್ತದೆ. ಬಾಳೆಯ ಎಲೆಯ ಮೇಲೆ ಎಡೆಯನ್ನು ಹಾಕಿರುತ್ತಾರೆ. ಅಲ್ಲಿಗೆ ಹೋದ ಕುಲಬಾಂಧವರಿಗೆ ಎಡಗೈಯ ಬೆರಳಿಗೆ ದರ್ಬೆಯನ್ನು ಉಂಗುರದ ಆಕಾರದಂತೆ ಮಾಡಿಕೊಟ್ಟಿರುತ್ತಾರೆ. ಅವರು ಆ ದರ್ಬೆಯ ಉಂಗರವನ್ನು ಹಾಕಿಕೊಳ್ಳಬೇಕು. ಕೊಳ್ಳಿ ಇಟ್ಟು ಅಥವಾ ಕಿಚ್ಚು ಹಿಡಿದ ಮಗನು ಅಂಗಿ ಬಿಚ್ಚಿಕೊಂಡು ಅಂದು ಶವವನ್ನು ಸುಡಲು ಸಿದ್ಧಗೆ ಮಾಡಿದ ಜಾಗದ ಹತ್ತಿರ ನಿಂತಿರಬೇಕು. ಆ ಜಾಗದಲ್ಲಿ ರಂಗವನ್ನು ಬರೆಯಲಾಗಿರುತ್ತದೆ ಮತ್ತು ಅಲ್ಲಿ ಒಂದು ಎಡೆಯನ್ನು ಹಾಕಿರುತ್ತಾರೆ. ಆ ಸಿದ್ಧಗೆಯನ್ನು ಕಿಚ್ಚು ಹಿಡಿದವನು ೩ ಸಲ ಸುತ್ತ ಹಾಕಬೇಕಾಗುತ್ತದೆ. ಹಾಗೇ ಈ ಒಂದು ಸಮಯದಲ್ಲಿ ಅಪ್ಪ ಅಪ್ಪ ನಮಗೆ ಕಾಣಿಸಬೇಡಪ್ಪ, ಅಪ್ಪ ಅಪ್ಪ ನೀನು ಸ್ವರ್ಗಕ್ಕೆ ಹೋಗಪ್ಪ ಎಂದು ಹೇಳಲು ಕುಲದವರು ಹೇಳಿಕೊಡುತ್ತಾರೆ. ನಂತರ ದೀಪವನ್ನು ಹಚ್ಚಿಡುವ ಸ್ಥಳದಲ್ಲಿ ಎಡೆಯನ್ನು ಹಾಕಿರುತ್ತಾರೆ. ಅಲ್ಲಿ ಆ ಸಮಾಧಿಯ ಸ್ಥಳಕ್ಕೆ ಬಂದ ಕುಲದವರು ಎಲ್ಲರು ಪೂಜಿಸುತ್ತಾರೆ. ಎಡೆಯ ನೈವೆದ್ಯವು ಆದ ನಂತರ ಆ ವ್ಯಕ್ತಿಯ ಮಗ ಮತ್ತು ಅಣ್ಣ ತಮ್ಮಂದಿರು ಕೇವಲ ಆ ನೈವ್ಯದದ ಎಡೆಯನ್ನು ಸೇವಿಸುತ್ತಾರೆ. ಸಿದ್ಧಿಯ ಹತ್ತಿರ ಹಾಕಿದ ಎಡೆಯನ್ನು ಹಾಗೆ ಬಿಡುತ್ತಾರೆ. ಹಾಗೆ ಈ ಎಲ್ಲಾ ಕಾರ್ಯವು ಮುಗಿದ ನಂತರ ಎಲ್ಲಾ ಕುಲ-ಬಾಂಧವರು ದರ್ಬೆಯನ್ನು ಅಲ್ಲಿಯೇ ಬಿಟ್ಟು ಕೈಯನ್ನು ತೊಳೆದುಕೊಂಡು ಎಲ್ಲರು ಆ ಸಮಾಧಿಯ ಕಡೆ ಹಿಂದಿರಗಿ ನೋಡದೆ ಬರುತ್ತಾರೆ.

ಸಮಾಧಿಯ ಪೂಜೆಯಾದ ನಂತರ ಮನೆಗೆ ಬರುವ ಕುಲಬಾಂಧವರಿಗೆ ಕಾಲು ಕೈ ತೊಳೆಯಲು ನೀರು ಕೊಡುತ್ತಾರೆ. ಯಥಾ ಪ್ರಕಾರ ಮನೆಯೊಳಗೆ ವ್ಯಕ್ತಿಯು ಸತ್ತಜಾಗದಲ್ಲಿ ಒಂದು ಎಡೆಯನ್ನು ಹಾಕಿರುತ್ತಾರೆ. ಇಲ್ಲಿಯು ಸಹ ಪೂಜೆ ಮಾಡಲಾಗುತ್ತದೆ. ಎಲ್ಲಾ ಕುಲ-ಬಾಂಧವರು, ಬಂಧು – ಬಾಂಧವರು ನೆರೆಹೊರೆಯರನ್ನು ಪಂಕ್ತಿಯಲ್ಲಿ ಕೂರಿಸಿ ಊಟವನ್ನು ಕೊಡಲಾಗುತ್ತದೆ.

ತಿಥಿಯು ಆದ ಎರಡನೇಯ ದಿನದಲ್ಲಿ ಸತ್ತವರ ಆತ್ಮವನ್ನು ಮನೆಯೊಳಗೆ ಕರೆಯುವುದು, ಈ ಸಂಪ್ರದಾಯವು ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯ ಸಮುದಾಯದಲ್ಲಿ ತುಂಬ ಅಚ್ಚುಕಟ್ಟಾಗಿ

ಅಂದರೆ ಇದನ್ನು ಒಳಗೆಕರೆದುಕೊಳ್ಳುವುದು ಎಂದು ಸಹ ಕರೆಯುತ್ತಾರೆ. ಸತ್ತ ವ್ಯಕ್ತಿಯ ಭಾವಚಿತ್ರವನ್ನು ಮಾಡಿಸಿಕೊಂಡು ಬಂದಿರುತ್ತಾರೆ. ಆ ಭಾವಚಿತ್ರವನ್ನು ಮನೆಯಲ್ಲಿಟ್ಟು ಹೂವುಗಳಿಂದ ಅಲಂಕಾರಿಸಿ ವಿಶೇಷ ಭಕ್ಷ್ಯಭೋಜನವನ್ನು ತಯಾರಿಸಿರುತ್ತಾರೆ. ಅಂದು ಸಿಹಿ ಊಟದ ಜೊತೆ ಖಾರದ ಊಟವನ್ನು ಮಾಡಿರುತ್ತಾರೆ. ಭಾವಚಿತ್ರದ ಎದುರು ವಿಳ್ಯದಲೆಯಲ್ಲಿ ಕಳಸಮಾಡಿ ಅದಕ್ಕೆ ಹೊಸ ಬಟ್ಟೆಯನ್ನು ಹೇರಿಸಿ, ಕಳಸದ ಮುಂದೆ ಬಾಳೆಯ ಎಲೆ ಎಡೆಯನ್ನು ಹಾಕುತ್ತಾರೆ. ಹಾಗೆ ಅಂದು ಲೂಬಾನ ಹಾಕಲು ಬೆಂಕಿಯ ಕೆಂಡವನ್ನು ತಂದು ಪಕ್ಕದಲ್ಲಿಯೇ ಇಟ್ಟಿರುತ್ತಾರೆ. ಕುಟುಂಬದ ಸದಸ್ಯರು ಮತ್ತು ಬಂಧು ಮಿತ್ರರು ಅಂದು ಸಹ ಮೃತ ವ್ಯಕ್ತಿಗೆ ಪೂಜೆಯನ್ನು ಸಲ್ಲಿಸಿ ಲೋಬಾನ ಹಾಕುತ್ತಾರೆ. ಇದೇ ಸಮಯದಲ್ಲಿ ಮೃತ ವ್ಯಕ್ತಿಯ ಮಗನನ್ನು ಕೊಳ್ಳಿ ಇಟ್ಟ ಅಥವಾ ಕಿಚ್ಚು ಹಿಡಿದವನಿಗೆ ಮನೆಯ ಬಾಗಿಲ ಹೊಸ್ತಿಲನಿಂದ ಹೊರಗೆ ನಿಲ್ಲಿಸಿ ಅವನಿಗೆ ಮೈಮೇಲೆ ನೀರು ಹಾಕಿ ಹೊಸ ಬಟ್ಟೆಯನ್ನು ಕೊಟ್ಟು ಪೂಜೆಯನ್ನು ಮಾಡಿ ಮನೆಯೊಳಗೆ ಕರೆದುಕೊಳ್ಳುವಶಾಸ್ತ್ರವನ್ನು ಆ ದಿನದಲ್ಲಿ ಮಾಡುವ ಶಾಸ್ತ್ರವಿದೆ. ನಂತರ ಬಂದಂತಹ ಬಂಧು–ಮಿತ್ರರನ್ನು ಕೈತೊಳಿಸಿ ಅಥವಾ ಊಟೋಪಚಾರ ಮಾಡಿ ಕಳುಹಿಸುತ್ತಾರೆ. ಹಾಗೆ ಆ ಎಡೆಯನ್ನು ಕುಟುಂಬದ ಎಲ್ಲಾರೂ ಪ್ರಸಾದವಾಗಿ ಸ್ವೀಕರಿಸುತ್ತಾರೆ. ತಿಥಿಯು ಮುಗಿದ ಮೇಲೆ ಮೃತ ವ್ಯಕ್ತಿಯ ಹೆಂಡತಿ ಮತ್ತು ಕಿಚ್ಚು ಹಿಡಿದವನಿಗೆ ಮೊದಲು ಹೆಣ್ಣಿನ ತವರು ಮನೆಯವರ ಬಟ್ಟೆ ಹಾಕಬೇಕು. ನಂತರ ಅವರಿಗೆ ಇತರ ಹತ್ತಿರದ ಸಂಬಂಧಿಕರು ಬಟ್ಟೆಹಾಕುತ್ತಾರೆ. ಅ ನಂತರ ಅವರು ಯಾವುದೇ ಮನೆಗಳಿಗೂ ಹೋಗಬಹುದು ಮತ್ತು ಎಲ್ಲ ಕಾರ್ಯಗಳಲ್ಲೂ ಭಾಗಿಗಳಾಗಬಹುದು. ಅಲ್ಲಿಯವರಿಗೂ ಅವರು ಯಾರ ಮನೆಗೂ ಹೋಗುವಂತಿಲ್ಲ. ಈ ಸಮುದಾಯದಲ್ಲಿ ತಿಂಗಳಿಗೆ ಒಂದು ದಿನಕ್ಕೆ ಕಡಿಮೆ ಇದ್ದಂತೆ ತಿಂಗಳ ತಿಥಿ ಮಾಡುತ್ತಾರೆ.

**೫.೮.೭. ವರ್ಷದ ತಿಥಿ**

ಸಾವನ್ನಪ್ಪಿದ ಒಂದು ವರ್ಷವಾದ ನಂತರ ಕೂಡಿ ಬರುವ ತಿಥಿಯನ್ನು ಪುಣ್ಯತಿಥಿಯೆಂದು ವಾರ್ಷಿಕ ಶ್ರಾದ್ಧ ಮಾಡುತ್ತಾರೆ. ಆ ದಿನ ಪಿತೃರಿಗೆ ತೃಪ್ತಿಯಾಗಲೆಂದು ಮಾಡುವ ಕ್ರಿಯೆಗೆ ವರ್ಷಾಂತಿಕ ಶ್ರಾದ್ಧ ಎಂದು ಕರೆಯುತ್ತಾರೆ. ಇದು ಪುರೋಹಿತರ ಮಾರ್ಗದರ್ಶನದಲ್ಲಿ ನಡೆಯುತ್ತದೆ. ಅಂದು ಪುರೋಹಿತರಿಗೆ ದಶದಾನ, ಬಂಧು ಬಾಂಧವರಿಗೆ ಆತ್ಮೀಯರಿಗೆ ನೆರೆಯವರಿಗೆ ಸಿಹಿ ಅಡುಗೆ ಬೇರೆ ಬೇರೆ ತರಕಾರಿಯ ಪದಾರ್ಥದ ಅಡುಗೆ ಮಾಡಿ ಬಡಿಸುತ್ತಾರೆ. ಎರಡು ಮೂರು ಜನ ಬ್ರಾಹ್ಮಣರಿಗೆ ಕರೆದು ಅವರಿಗೆ ದಾನ ಮಾಡಿ ಹೊಟ್ಟೆ ತುಂಬ ಊಟ ಹಾಕಿ ಗೌರವದಿಂದ ಕಾಣುವ ಸಂಪ್ರದಾಯವಿದೆ. ಹಾಗೇ ಹಿಂದುಳಿದ ಕ್ಷತ್ರಿಯ ಬಾಂಧವರು ಈ ಪುರೋಹಿತರ ಕಾರ್ಯಮಾಡದೆ ತಮ್ಮ ಶ್ಯಕ್ತನುಸಾರ ವರ್ಷಾದ ತಿಥಿ ಮಾಡುತ್ತಾರೆ. ಇಲ್ಲಿಯೂ ಸಹ ಮಾಂಸದ ಊಟ ಮತ್ತು ಸಿಹಿ ಊಟವನ್ನು ಮಾಡಿ ಕುಲ–ಬಾಂಧವರಿಗೆ ಊಟೋಪಚಾರ ಮಾಡುತ್ತಾರೆ.

ಶವ ಸಂಸ್ಕಾರದ ವಿಧಿಗಳು ಮತ್ತು ಉತ್ತರ ಕ್ರಿಯೆಯ ಆಚರಣೆಗಳು ಪ್ರತಿಯೊಂದು ಸಮುದಾಯಗಳಿಗೂ ವಿಶಿಷ್ಟವಾಗಿರುವಂತೆ, ಕ್ಷತ್ರಿಯರಲ್ಲಿ ತನ್ನದೇ ಆದ ವಿಶಿಷ್ಟತೆ ಹೊಂದಿದೆ. ಹತ್ತಿರದ ಸಂಬಂಧಿಗಳು ಸತ್ತರೆ ಸಹೋದರ ಕುಲದವರು ಸೂತಕವನ್ನು ಆಚರಿಸುತ್ತಾರೆ. ಮೃತ ವ್ಯಕ್ತಿಗಳಿಗೆ ಪ್ರತ್ಯೇಕ ವಾರ್ಷಿಕ ತಿಥಿ ಅಥವಾ ಶ್ರಾದ್ಧ ಮಾಡುವ ಪದ್ಧತಿ ಇತ್ತೀಚಿಗೆ ವೈದಿಕ ಸಂಪ್ರದಾಯಗಳು

ಇವರ ಶವ ಸಂಸ್ಕಾರದ ವಿಧಿ ವಿಧಾನಗಳಲ್ಲಿ ನಿಧಾನವಾಗಿ ಸೇರಿಕೊಳ್ಳುತ್ತಿವೆ. ಶವ ಸಂಸ್ಕಾರಕ್ಕೆ ಸಂಬಂಧಪಟ್ಟ ಸಂಪ್ರದಾಯಗಳಲ್ಲಿ ಮದುವೆ ಸಂಪ್ರದಾಯಗಳಲ್ಲಿ ಆಗಿರುವಷ್ಟು ಬದಲಾವಣೆಗಳು ಆಗಿಲ್ಲ. ಆದರೆ ಇತ್ತೀಚಿನ ದಿನದಲ್ಲಿ ವಾರ್ಷಿಕ ಶ್ರಾದ್ಧ, ಮಾಡುವ ಸಂಪ್ರದಾಯವು ನಗರ ವಾಸಿಗಳಲ್ಲಿ ಕಾಣುತ್ತದೆ. ತಿಥಿಯಾದ ನಂತರ ಮಹಿಳೆಗೆ ತವರು ಮನೆಯವರು ೨೧ನೇ ದಿನದಂದು ದೇವಾಲಯಕ್ಕೆ ಕರೆದುಕೊಂಡು ಹೋಗಿ ಪುಣ್ಯ ಸ್ನಾನ ಮಾಡಿಸಿ ಅವರಿಗೆ ತವರು ಮನೆ ಸೀರೆಯನ್ನು ನೀಡಲಾಗುತ್ತದೆ. ನಂತರ ತಿಂಗಳ ಒಳಗೆ ಮನೆ ಮಗಳಿಗೆ ಸೀರೆ ನೀಡಿ, ತಾಯಿಗೆ ಐದು ತಿಂಗಳು ಅಥವಾ ಒಂದು ವರ್ಷದಗಳವರೆಗೆ ಸೀರೆ ನೀಡಲಾಗುತ್ತದೆ. ಆ ಮಹಿಳೆಗೆ ಶಾಂತಿ ಮಾಡಲಾಗುತ್ತದೆ. ಬಳೆ ತೊಡಿಸುತ್ತಾರೆ. ಹಿಂದಿನ ಕಾಲದವರು ಹಣೆಯಲ್ಲಿ ಕುಂಕುಮ ಮುಡಿಯಲ್ಲಿ ಹೂವು ಕೈಯಲ್ಲಿ ಬಳೆ ಇಡುತ್ತಿರಲಿಲ್ಲ. ಇಂದಿನ ಕಾಲದಲ್ಲಿ ಕೆಲವರಲ್ಲಿ ಇಮದು ಬದಲಾವಣೆಯಾಗುತ್ತಿವೆ.

ವ್ಯಕ್ತಿ ಸತ್ತ ಮೇಲೆ ಸಂಪ್ರದಾಯದಂತೆ ಎಲ್ಲ ಕಾರ್ಯಗಳು ಮಾಡಿದ ಮೇಲೆ ಸತ್ತವರು ನಮ್ಮನ್ನು ಕಾಡುವುದಿಲ್ಲ. ಅಂತ್ಯಕ್ರಿಯೆ ಎಲ್ಲವೂ ಸರಿಯಾಗಿ ಮಾಡಿದ್ದೇವೆ ಎಂದು ತಿಳಿದುಬಂದರೆ, ಸತ್ತ ವ್ಯಕ್ತಿಯ ಆತ್ಮವನ್ನು ಆ ವರ್ಷದ ಹಿರಿಯರ ಹಬ್ಬದಲ್ಲಿ ಸೇರಿಸಿಕೊಳ್ಳಲಾಗುತ್ತದೆ. ಅಂದರೆ ತನ್ನ ಪೂರ್ವಜರ ಆತ್ಮಗಳೊಂದಿಗೆ ಸೇರಿಸುವುದು ಕೆಲವರು ಮಹಾನವಮಿಯಲ್ಲಿ ಹಿರಿಯರನ್ನು ಸೇರಿಸಿಕೊಂಡರೆ ಕೆಲವರು ದೀಪಾವಳಿ, ಯುಗಾದಿಯ ಹಬ್ಬದಲ್ಲಿ ಸೇರಿಸಿಕೊಳ್ಳುತ್ತಾರೆ. ಹಬ್ಬಗಳ ದಿನ ವ್ಯಕ್ತಿ ಸತ್ತರೆ ಹಬ್ಬವನ್ನು ಆಚರಿಸುವುದು ಬಿಡುತ್ತಾರೆ. ಪ್ರತಿ ವರ್ಷಕ್ಕೊಮ್ಮೆ ಹಿರಿಯರ ಪೂಜೆಯನ್ನು ಮಾಡಿ ಅವರಿಗೆ ಅಂದು ಹೊಸ ಬಟ್ಟೆಯನ್ನು ಇಟ್ಟು ಪೂಜಿಸಿ, ಸಿಹಿ ತಿಂಡಿಯನ್ನು ಇಟ್ಟು ಪೂಜೆ ಮಾಡುತ್ತಾರೆ.

**೫.೯. ವಾರ್ಷಿಕಾವರ್ತನ ಆಚರಣೆಗಳು**

ಹಬ್ಬ ಹರಿದಿನಗಳಿಗೆ ಸಮುದಾಯದ ಧಾರ್ಮಿಕ ಮನೋಭಾವ, ನಂಬಿಕೆ ಮತ್ತು ವೃತ್ತಿಗಳ ಹಿನ್ನಲೆ ಅವರ ಆಚರಿಸುವ ಹಬ್ಬ ಜಾತ್ರೆಗಳ ಆಚರಣೆಯಲ್ಲಿ ಸೂಚ್ಯವಾಗಿ ಅಡಕವಾಗಿರುತ್ತದೆ. ಈ ಹಿನ್ನಲೆಯಲ್ಲಿ ಇವರು ಆಚರಿಸುವ ಹಬ್ಬ ಮತ್ತು ಜಾತ್ರೆಗಳನ್ನು ಪರಿಭಾವಿಸಬೇಕಾಗಿದೆ. ಭಾರತೀಯ ಸಾಂಸ್ಕೃತಿಕ ನೆಲೆ ಶ್ರೀಮಂತವಾಗಿರುವುದೆ ಹಬ್ಬ ಉತ್ಸವಗಳ ಮೂಲಕ, ವಿವಿಧ ಧರ್ಮಗಳ ಬೀಡಾಗಿರುವ ಭಾರತದಲ್ಲಿ ತಮ್ಮ ಭಾಷೆ, ಧರ್ಮ, ಸಂಸ್ಕೃತಿಗೆ ಅನುಗುಣವಾಗಿ ಹಲವು ಹಬ್ಬಹರಿದಿನಗಳನ್ನು ಆಚರಿಸಲಾಗುತ್ತದೆ. ಹಬ್ಬವೆಂದರೆ, ಅದೊಂದು ಪರ್ವಕಾಲ. 'ಹಬ್ಬ' ಎನ್ನುವ ಶಬ್ಧ, ಸಂಸ್ಕೃತದ 'ಪರ್ವ' ಪದದ ತದ್ಭವ, ನಂಬಿಕೆ ಮತ್ತು ಸಂಪ್ರದಾಯಗಳ ಕ್ರಿಯಾರೂಪವೆ ಹಬ್ಬಗಳು, ನಿಸರ್ಗವನ್ನು ಆರಾಧಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಫಲವಾಗಿ ಹಬ್ಬಗಳು ಹುಟ್ಟುಪಡೆದವು. ಸಂಪ್ರದಾಯ ಮತ್ತು ಆಚರಣೆಗಳು ಹಬ್ಬಗಳಿಗೆ ಪ್ರೇರಕಗಳಾಗಿವೆ. ಪ್ರತಿವರ್ಷ ಸಾಮಾಜಿಕ ಕ್ಷೇಮಕ್ಕಾಗಿ ವಿಶೇಷ ಸಂದರ್ಭದಲ್ಲಿ ಆಚರಿಸುವ ಜಾನಪದ ಸಂಸ್ಕೃತಿಗಳ ಉತ್ಸವವು ಹಬ್ಬಗಳಾಗಿವೆ. ಸಂದರ್ಭ ಒದಗಿ ಬಂದಾಗ ಸುಖಕರವಾದ ಪರಿಸರ ಆಹ್ಲಾದಕರವಾದ ಸೊಬಗು ಕಂಗೊಳಿಸುವುದು ನಿಸರ್ಗದ ಧರ್ಮವಾಗಿದೆ. ಭೂಮಿ ತಾಯಿಯ ಚೊಚ್ಚಲ ಮಗನ್ನೆಸಿದ ನಿಸರ್ಗದ ಒಡಲಿನಲ್ಲಿ ಪವಡಿಸುವ

ಒಕ್ಕಲ ಮಗ ಚಳಿ, ಮಳೆ, ಬಿಸಿಲುಗಳ ಸವಿಯುಂಡು ಸಚೇತನನಾಗಿ ಆನಂದದಿಂದ ಹಾಕಿ ಕುಣಿದು ನಲಿಯುವುದಕ್ಕೆ ಪುಷ್ಟಿಕರವಾದ ಸವಿಯವನ್ನು ಉಂಡು ಪ್ರಸಿದ್ಧನಾಗಲು ಒದಗಿಸಿಕೊಂಡು ಹಲವು ಸಂದರ್ಭಗಳೇ ಹಬ್ಬಗಳು *(ಸಿಂಪಿಲಿಂಗಣ್ಣ, ಅವಲೋಕನ, ಕರ್ನಾಟಕದ ಹಬ್ಬಗಳು, ಪುಟ ೩೪೩).* ತನ್ನ ಬದುಕಿನ ಎಲ್ಲ ಆಗುಹೋಗುಗಳಿಗೂ ದೈವವೇ ಕಾರಣವೆಂದು ನಂಬಿದ ಮಾನವ ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನ ನಡೆಸಿದುದರ ಫಲವಾಗಿ ಹಬ್ಬಗಳು ಹುಟ್ಟಿಕೊಂಡವು *(ಅಂಬಳಿಕೆ ಹಿರಿಯಣ್ಣ, ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ,ಪುಟ–೧೯೭, ೧೯೯೯).*

ಹಬ್ಬಗಳ ಆಚರಣೆಯಲ್ಲಿ ಧಾರ್ಮಿಕ ಮನೋಭಾವ ಇರುವುದಾದರೂ ಮುಖ್ಯವಾಗಿ ಧಾರ್ಮಿಕ ನೆಲೆಗಿಂತ ಜೀವಾಧಾರಿತ ಮತ್ತು ವೃತ್ತಿಯಾಧಾರಿತ ನೆಲೆಗಳು ಹಬ್ಬದ ಆಚರಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಮನುಷ್ಯನ ಅಗತ್ಯ ಮತ್ತು ಆರಾಧನೆಯ ನಡುವೆ ಪರಸ್ಪರ ಸಂಬಂಧವಿದೆ. ತನಗೆ ಯಾವ ವಸ್ತು ಪವಿತ್ರವೋ ಅದರಲ್ಲೆಲ್ಲ ದೇವರನ್ನು ಕಂಡು ಪೂಜಿಸುವುದು ಇಂದು ನಿನ್ನೆಯದಲ್ಲಿ ಮನುಷ್ಯನ ಜೀವನ ಪ್ರಕೃತಿಯೊಡನೆ ಬೆಸಿದುಕೊಂಡಂದಿನಿಂದ ಅದು ಬೆಳೆದುಕೊಂಡು ಬಂದಿದೆ. ಇದರ ಪ್ರಕಟಿತ ರೂಪಗಳೇ ಹಬ್ಬ ಉತ್ಸವ ಮೊದಲಾದವುಗಳು. ಈ ಹಿನ್ನೆಲೆಯಲ್ಲಿ ಆಚರಣೆಗೊಳ್ಳುತ್ತಿರುವ ಹಬ್ಬ–ಹರಿದಿನಗಳು ನಮ್ಮ ಬದುಕಿನ ಸಂತಸದಲ್ಲಿ ಹಾಸು–ಹೊಕ್ಕಾಗಿರುತ್ತವೆ. ಗ್ರಾಮಗಳ ಜನರ ಮನಸ್ಸನ್ನು ಬೆಸೆಯುವ ಮೂಲಕ ಗ್ರಾಮೀಣ ಸಾಂಸ್ಕೃತಿಕ ವೈಭವವನ್ನು ಅನಾವರಣಗೊಳಿಸುತ್ತವೆ. ಹಬ್ಬಗಳು ಸಾಮಾನ್ಯವಾಗಿ ಸಾಮೂಹಿಕ ಸ್ವರೂಪದ ಆಚರಣೆಗಳಾಗಿದ್ದು, ಸಮಾಜ ನಿಯಮಿತವಾದ ಕೆಲ ವಿಧಿವತ್ತಾದ ಕ್ರಿಯಾ ವಿಧಿಗಳನ್ನು ಒಳಗೊಂಡಿರುತ್ತವೆ. ಅಲ್ಲದೆ ಪ್ರತಿಯೊಂದು ಹಬ್ಬಗಳ ಆಚರಣೆಯ ಹಿಂದೆ ಕೆಲವೊಂದು ಮೂಲ ಉದ್ದೇಶಗಳಿರುತ್ತವೆ. ಆದರೆ ಈಗ ಆಚರಣೆಗೊಳ್ಳುತ್ತಿರುವ ಹಬ್ಬಗಳು ಹಿಂದಿನ ಮೂಲ ಉದ್ದೇಶ ಮತ್ತು ಅರ್ಥಗಳನ್ನು ಕಳೆದುಕೊಂಡು ಆಚರಣೆಗೊಳುತ್ತಿವೆ.

ಹಬ್ಬಗಳನ್ನು ಪ್ರಧಾನವಾಗಿ ಸಾರ್ವತ್ರಿಕ ಮತ್ತು ಸಾಂಘಿಕ ಎಂದು ಎರಡು ರೀತಿಯಲ್ಲಿ ವಿಂಗಡಿಸಿಕೊಳ್ಳಬಹುದು. 'ಏಕಕಾಲದಲ್ಲಿ ಏಕ ರೀತಿಯಲ್ಲಿ ಏಕರೂಪದ ಕಟ್ಟುಪಾಡುಗಳಿಗೆ ಅನುಸಾರವಾಗಿ ನಡೆಸುವಂತಹ ಸಾರ್ವತ್ರಿಕ ಹಬ್ಬಗಳು (ಉದಾ: ಯುಗಾದಿ, ದೀಪಾವಳಿ ಮುಂತಾದವು) ಏಕಕಾಲದಲ್ಲಿ ಮನೆಯೊಳಗೆ ಮತ್ತು ಹೊರಗೆ ನಡೆಯುವಂಥವು ಸಾಂಘಿಕ ಹಬ್ಬಗಳು (ಉದಾ: ಮಾರಿಹಬ್ಬಗಳು, ದುರ್ಗಾಂಬಿಕ ಹಬ್ಬಗಳು) ಇವು ಪರಿಷೆ ರೂಪದಲ್ಲಿ ನಡೆಯುವುದರಿಂದ ಊರಿನ ಜನರೆಲ್ಲರ ಸಹಕಾರವು ಬೇಕಾಗುತ್ತದೆ *(ಅಂಬಳಿಕೆ ಹಿರಿಯಣ್ಣ, ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ,ಪುಟ–೧೯೭, ೧೯೯೯).* ಹಬ್ಬಗಳು ಹಿಂದೂ ಧರ್ಮದ ಯಾವುದೇ ಜನಾಂಗದ ಸಾಂಸ್ಕೃತಿಕ ಮುಖಗಳಲ್ಲಿ ಮುಖ್ಯವಾಗಿರುತ್ತವೆ *(ಸಣ್ಣರಾಮ,ಲಂಬಾಣಿ ಸಂಸ್ಕೃತಿ, ಪುಟ–೧೩೫, ೧೯೯೯).* ಹಾಗಾಗಿ ಹಬ್ಬಗಳನ್ನು ಅಧ್ಯಯನ ಮಾಡುವುದು ಆ ಜನಾಂಗದ ಸಂಸ್ಕೃತಿಯ ಅಧ್ಯಯನ ದೃಷ್ಟಿಯಿಂದ ಅಗತ್ಯವಾಗುತ್ತದೆ. ಕ್ಷತ್ರಿಯ ಸಮುದಾಯವು ಇತರ ಸಮುದಾಯದವರು ಆಚರಿಸುವಂತೆ ತಮ್ಮದೇ ಆದ ಕೆಲವು ವೈಶಿಷ್ಟ್ಯ ಪೂರ್ಣ ಹಬ್ಬಗಳನ್ನು ಆಚರಿಸುತ್ತಾರೆ. ಅವುಗಳಲ್ಲಿ ಮುಖ್ಯವಾದವುಗಳು ಇಂತಿವೆ.

## ೫.೯.೧. ಉಗಾದಿ ಅಥವಾಯುಗಾದಿ

ಉಗಾದಿ ಹಬ್ಬವು ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರು ಆಚರಿಸುವ ಹೊಸ ವರ್ಷದ ಹಬ್ಬವಾಗಿದೆ. ಮೂಲತಃ ಕ್ಷತ್ರಿಯರಾದ ಮತ್ತು ವರ್ಣಾಶ್ರಮದಲ್ಲಿ ಎರಡನೆಯ ವರ್ಣವಾಗಿ ಕಂಡುಬರುವ ಕ್ಷತ್ರಿಯರು ಕಾಲಾನಂತರದಲ್ಲಿ ಮೂಲ ವೃತ್ತಿಯಿಂದ ಸ್ಥಿತ್ಯಂತರ ಹೊಂದಿ ನಂತರದ ದಿನಗಳಲ್ಲಿ ರೈತಾಪಿ ಅಥವಾ ಕೃಷಿಕರಾಗಿದ್ದಾರೆ. ಇವರು ಇಲ್ಲಿ ಯುಗಾದಿಯ ದಿನ ಹೊಸ ಬೇಸಾಯವನ್ನು ಮೊದ್ಲಬೇಸಾಯ ಅಥವಾ ಆರಂಭವನ್ನು ಆರಂಭಿಸುತ್ತಾರೆ. ವರ್ಷದ ಮೊದಲ ಹಬ್ಬವಾದ ಉಗಾದಿಹಬ್ಬದ ನಂತರ ಆವರ್ಷದಲ್ಲಿ ಬರುವ ಹಬ್ಬಗಳೊಂದಿಗೆ ಮತ್ತು ದೈವಜಾತ್ರೆಗಳು ಪ್ರಾರಂಭವಾಗುತ್ತದೆ. ಸಾಮಾನ್ಯವಾಗಿ ಸುಗ್ಗಿ ಕೆಲಸ ಕಾರ್ಯಗಳು ಮುಗಿದ ಮೇಲೆ ಬರುವ ಹಬ್ಬಗಳಲ್ಲಿ ಉಗಾದಿಯು ದೊಡ್ಡ ಹಬ್ಬವೆನ್ನಿಸಿದೆ. ಹೊಸ ವರ್ಷದ ದಿನದಲ್ಲಿ ಹೊಸ ಬೇಸಾಯವನ್ನು ಆರಂಭಿಸುವ ಪದ್ಧತಿಯು ಎಲ್ಲಾ ಸಮುದಾಯದ ಜನರಲ್ಲಿದೆ.

ಚೈತ್ರ ಶುದ್ಧ ಶುಕ್ಲ ಪಕ್ಷದ ಮೊದಲ ದಿನದಂದು ಹೊಸ ವರುಷ ಆರಂಭವಾಗುತ್ತದೆ. ಆ ದಿನವೇ ಯುಗಾದಿ. ಈ ಹಬ್ಬವನ್ನು ಹಿಂದೂಗಳು ಪಂಚಾಂಗದ ಪ್ರಕಾರ ಹಿಂದೂಗಳಿಗೆ ಮೊದಲ ಹೊಸ ವರ್ಷವೆನ್ನಿಸಿಕೊಳ್ಳುತ್ತದೆ. ಈ ಹಬ್ಬ ಆಚರಣೆಯ ಮುಂಚೆಯೆ ಮನೆಯುನಲ್ಲ ಶುದ್ಧಗೊಳಿಸಿಕೊಳ್ಳುತ್ತಾರೆ. ಸೆಗಣಿಯಿಂದ ನೆಲಸಾರಿಸಿ, ಸುಣ್ಣಬಣ್ಣಗಳಿಂದ ಬಳಿದು ಒಪ್ಪ ಓರಣಗೊಳಿಸಿಕೊಂಡು ಮನೆಯನ್ನು ಸ್ವಚ್ಛಗೊಳಿಸಿಕೊಳ್ಳುತ್ತಾರೆ. ಹಬ್ಬದ ಮನೆಯು ಸುಂದರ ರಂಗೋಲಿಯಿಂದ ಕಂಗೊಳಿಸುತ್ತಿರುತ್ತದೆ. ಮನೆಯ ಬಾಗಿಲುಗಳಿಗೆ ಮಾವಿನ ತೋರಣ, ಬೇವಿನ ಸೊಪ್ಪಿನಿಂದ ಸಿಂಗಾರಿಸುತ್ತಾರೆ. ಅದೇ ತಾನೆ ವಸಂತ ಕಾಲದಲ್ಲಿ ಚಿಗುರುವೊಡಿದ ಚಿಗುರು ತಳಿರುಗಳಿಂದ ಮಾವಿನ ಎಲೆಗಳು ಮತ್ತು ಬೇವಿನ ಸೊಪ್ಪು ನಳನಳಿಸುತ್ತಿರುತ್ತದೆ. ಅಂದಿನ ದಿನ ಮನೆಯ ಎಲ್ಲರೂ ಮೈಗೆ ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡಿ, ಮಡಿ ಮಾಡಿದ ಅಥವಾ ಹೊಸ ಬಟ್ಟೆಯನ್ನು ಧರಿಸುತ್ತಾರೆ.

ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯರು ಈ ಹಬ್ಬವನ್ನು ಎರಡು ದಿನ ಆಚರಿಸುತ್ತಾರೆ. ಮೊದಲನೇಯ ದಿನ ಮೊದಲು ಬೇಸಾಯ ಮಾಡುವ ಪದ್ಧತಿ ಇದೆ. ಅಂದು ಬೇಸಾಯ ಮಾಡುವ ಮನೆಯಲ್ಲಿ ಎತ್ತುಗಳಿಗೆ ಮೈತೊಳೆದು, ಕೂಡುಗಳಿಗೆ, ಬಣ್ಣ ಹಚ್ಚಿ, ಸಿಂಗಾರಿಸಿಕೊಳ್ಳುತ್ತಾರೆ. ನೇಗಿಲನ್ನು ಸ್ವಚ್ಛಗೊಳಿಸಿಕೊಂಡು, ಸಿದ್ಧ ಮಾಡಿಕೊಂಡಿರುತ್ತಾರೆ. ಈ ಬೇಸಾಯವನ್ನು ಮಾಡಲು ಒಳ್ಳೆಯ ಕಾಲವನ್ನು ಪುರೋಹಿತರ ಹತ್ತಿರ ಕೇಳುತ್ತಾರೆ. ಅದೇ ಸಮಯಕ್ಕೆ ಸರಿಯಾಗಿ ಮೊದಲು ಬೇಸಾಯ ಮಾಡಲು ಸಿದ್ಧರಾಗುತ್ತಾರೆ. ಅಂದು ಬೆಳ್ಳಿಗೆ ಕೇವಲ ಸೊಪ್ಪಿನ ಸಾರು ಅನ್ನ ಮಾಡಿರುತ್ತಾರೆ. ಈ ಬೇಸಾಯ ಮಾಡಲು ಮುಂಚೆ ರೈತರು ಊಟ ಮಾಡಿ ಹೊರಡಬೇಕಾಗುತ್ತದೆ. ಬೇಸಾಯಕ್ಕೆ ಹೊರಡುವ ಮುನ್ನ ಕಳಸ ಅಥವಾ ಕೇಲು ತೆಗೆದುಕೊಂಡು ಹೋಗುತ್ತಾರೆ. ಮತ್ತು ಭೂಮಿ ತಾಯಿಗೆ ಅಂದು ಮಾಡಿ ವಿಶೇಷ ಅಡುಗೆಯನ್ನು ಎಡೆಯ ಮಾಡಿಕೊಂಡು ಹೋಗಿ ಪೂಜಿಸಿ ನಂತರ ಹೊಲವನ್ನು ಹೊಡೆಯಲು ಅರಗಲು ಪ್ರಾರಂಭಿಸುತ್ತಾರೆ. ಕೇವಲ ಐದು ತಿರಾ ಅಥವಾ ೭ ತಿರಾಗಳ ನೇಗಿಲ ಸಾಲನ್ನು ಬಿಡುತ್ತಾರೆ. ಈ ರೀತಿಯಾದ ಕ್ರಮವನ್ನು ಮುಗಿಸಿ ತಕ್ಷಣ ಮನೆಗೆ ಹಿಂದಿರುಗುತ್ತಾರೆ. ಈ

ವಿಧಾನವೆ ಮೊದಲ ಬೇಸಾಯ ಎಂದು ಕರೆಯಬಹುದು. ನಂತರ ಹಬ್ಬದ ಮೊದಲ ದಿನ ಕೇವಲ ಗೋಧಿಶ್ಯಾವಿಗೆಯ ಸಿಹಿಯನ್ನು ಮಾಡುತ್ತಾರೆ. ಯಾರು ಬೇಸಾಯ ಅಥವಾ ಕೃಷಿ ಮಾಡುವುದಿಲ್ಲವೊ ಅವರ ಮನೆಯಲ್ಲಿ ಹೋಳಿಗೆ ಮಾಡುತ್ತಾರೆ. ಅದಕ್ಕೆ ಕಾರಣವೆಂದರೆ, ಬೇಸಾಯ ಮಾಡುವವರು ಒಲೆಯ ಮೇಲೆ ಹಂಚು ಇಡುವಂತ್ತಿಲ್ಲ. ಈ ಕಾರಣಕ್ಕೆ ಇವರು ಕೇವಲ ಶ್ಯಾವಿಗೆ ಸಿಹಿ ಮಾಡುತ್ತಾರೆ. ಬೇವು ಬೆಲ್ಲವು ಸೇವನೆಯೆ ಈ ಹಬ್ಬದ ವೈಶಿಷ್ಟ್ಯ. ಇಡೀ ವರ್ಷದ ಕಷ್ಟ ಸುಖಗಳ ಪ್ರತೀಕ ಈ ಬೇವು ಬೆಲ್ಲ. ಬೇವು ಬೆಲ್ಲವನ್ನು ಅರೆದು ದೇವರಿಗೆ ನೈವೇದ್ಯ ಮಾಡಿ ನಂತರ ತಿನ್ನುತ್ತಾರೆ. ಅಂದು ಕುಟುಂಬದೆಲ್ಲವರೂ ವಿಶೇಷ ಅಡುಗೆಯನ್ನು ಅಂದು ಒಟ್ಟಾಗಿ ಕುಳಿತು ಊಟಮಾಡುತ್ತಾರೆ.

ಎರಡನೇಯ ದಿನದಂದು ಚಂದ್ರದರ್ಶನವನ್ನು ಮಾಡುವ ಪದ್ಧತಿಯಿದೆ. ಅಮಾವಾಸ್ಯೆಯಾಗಿ ಎರಡನೇಯ ದಿನದಲ್ಲಿ ಚಂದ್ರನು ಆಕಾಶದಲ್ಲಿ ತುಂಬ ಸೂಕ್ಷ್ಮವಾಗಿ ಕಾಣಿಸುತ್ತಾನೆ. ಹಿಂದೂ ಸಂಪ್ರದಾಯ ಪ್ರಕಾರ ಹಿಂದೂಗಳು ಚಂದ್ರ ದರ್ಶನ ಮಾಡಿ ಮನೆಯಲ್ಲಿನ ಗುರು-ಹಿರಿಯರಿಗೆ ನಮಸ್ಕಾರಿಸುವ ಪದ್ಧತಿ ಇದೆ. ಈ ಹಬ್ಬದಲ್ಲಿ ಜೊಕಾಲಿಯನ್ನು ಕಟ್ಟುವ ಪದ್ಧತಿಯು ಕೆಲವು ಕಡೆ ಇದೆ. ಚಂದ್ರದರ್ಶನ ಮಾಡಿ ಗುರು-ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದುಕೊಂಡ ನಂತರ ಬೇವು ಬೆಲ್ಲವನ್ನ (ಬೆಲ್ಲ ಮತ್ತು ಬೇವಿನ ಹೂವಿನಿಂದ, ಕಡ್ಲೆ ಪುಡಿ), ತಿನ್ನುತ್ತಾರೆ. ಹಾಗೆ ಗ್ರಾಮದಲ್ಲಿ ದೇವಸ್ಥಾನಕ್ಕೆ ಹೋಗಿ ದೇವರ ದರ್ಶನ ಪಡೆಯುತ್ತಾರೆ. ಹಬ್ಬದ ನಂತರ ಉಲ್ಲಾಸ ಉತ್ಸಾಹ ವಿನೋದಕ್ಕಾಗಿ ಆಡುತ್ತಿದ್ದ ಸ್ಪರ್ಧೆಗಳು ಜೂಜಿನ ರೂಪವನ್ನು ಪಡೆದುಕೊಳ್ಳುತ್ತವೆ, ಮತ್ತು ಚಿನ್ನಿ ದಾಂಡು ಆಟವನ್ನು ಈ ಹಬ್ಬದಲ್ಲಿ ಆಡುತ್ತಾರೆ. ಈ ಯುಗಾದಿಯ ಹಬ್ಬ ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯಾಗಿ ವಿಶಿಷ್ಟತೆಯಿಂದ ಕೂಡಿದೆ. ಕೆಲವು ಕಡೆ ಕೇವಲ ಒಂದೇ ದಿನ ಯುಗಾದಿ ಹಬ್ಬ ಮಾಡುತ್ತಾರೆ. ಕೆಲವು ಕಡೆ ಚಂದ್ರದರ್ಶನ ಮಾಡುವ ಬದಲು ರತ್ನ ಪಕ್ಷಿಯನ್ನು ಊರಿನ ಒಳಗೆ ಕರೆತಂದು ಅದರ ದರ್ಶನ ಪಡೆದುಕೊಳ್ಳುತ್ತಾರೆ. ಒಟ್ಟಾರೆಯಾಗಿ ಹಿಂದೂಗಳ ಹಬ್ಬವಾದ ಯುಗಾದಿಯು ತುಂಬ ವಿಶಿಷ್ಟವೆಂದು ಹೇಳಬಹುದು.

### ೫.೯.೨. ಬಸವನ ಹಬ್ಬ ಮತ್ತು ಕಾರದ ಹುಣ್ಣಿಮೆ

ಕೃಷಿಯನ್ನ ಪ್ರಧಾನವಾಗಿಸಿ ಕೊಂಡಿರುವ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರು ಮತ್ತು ಕೃಷಿಯಲ್ಲಿ ತೊಡಗಿಲ್ಲದವರು ಸಹ ಈ ಹಬ್ಬಗಳನ್ನು ಆಚರಿಸುತ್ತಾರೆ. ಈ ಹಬ್ಬವನ್ನು ಅಕ್ಷಯ ತೃತೀಯ ಎಂದು ಇತ್ತೀಚಿನ ದಿನದಲ್ಲಿ ಕರೆಯಲಾಗುತ್ತದೆ. ಅಕ್ಷಯ ತೃತೀಯ ದಿನದಂದು ಬಂಗಾರ ಮತ್ತು ಬೆಳ್ಳಿಯನ್ನು ಖರದಿಸಿದರೆ ಶುಭವಾಗುತ್ತದೆ ಎಂದು ತಿಳಿಸಿ ಅವರಿಗೆ ಬಂಗಾರ ಮತ್ತು ಬೆಳ್ಳಿಯ ಆಸೆಯನ್ನು ಹೆಚ್ಚು ಮಾಡಿದ್ದಾರೆ. ಬಂಗಾರ ಮಾರುವ ಅಕ್ಕಸಾಲಿಗರು ಈ ಹಬ್ಬವು ಜೇಷ್ಠ ಮಾಸದಲ್ಲಿ ಮತ್ತು ಅಕ್ಷಯ ತೃತೀಯದಲ್ಲಿ ಆಚರಿಸುತ್ತಾರೆ. ಕೃಷಿಕರು ತಮ್ಮ ಅನ್ನಕ್ಕೆ ಸಾಕ್ಷಿಯಾಗಿರುವ ಎತ್ತುಗಳನ್ನು ಅಥವಾ ಬಸವಗಳನ್ನು ಶುಭ್ರಗೊಳಿಸಿ ಮನೆಗೆ ಕರೆತಂದು ಪೂಜಿಸುತ್ತಾರೆ. ಮತ್ತು ಕೆಲವು ಕೃಷಿಕರು ಕಾರದ ಹುಣ್ಣಿಮೆ ಅಥವಾ ಕಾರಹಬ್ಬದ ದಿನ ಕೃಷಿ ಉಪಕರಣಗಳನ್ನು ಪೂಜಿಸುವ ಕ್ರಮವಿದೆ.

### ೫.೯.೩. ನಾಗರ ಪಂಚಮಿ

ಶ್ರಾವಣ ಮಾಸದ ಶುಕ್ಲ ಪಕ್ಷದ ಪಂಚಮಿ ಒಂದು ಪವಿತ್ರ ದಿನ. ನಾಗರ ಪಂಚಮಿಯನ್ನು ವಿಶೇಷವಾಗಿ ಆಚರಿಸುತ್ತಾರೆ. ಅಂದು ಸಹೋದರ ಸಹೋದರಿಯರು ಒಂದು ಗೂಡಿ ಈ ಹಬ್ಬವನ್ನು ಆಚರಿಸುತ್ತಾರೆ. ಅದೇ ರೀತಿ ಮದುವೆಯಾಗಿ ಗಂಡನ ಮನೆಗೆ ಹೋಗಿರುವ ಹೆಣ್ಣು ಮಕ್ಕಳನ್ನು ತಮ್ಮ ತೌರುಮನೆಗೆ ಕರೆದುಕೊಂಡು ಬರುತ್ತಾರೆ. ಶ್ರಾವಣ ಮಾಸದಲ್ಲಿ ಬರುವ ಈ ಹಬ್ಬದಲ್ಲಿ ನಾಗಪೂಜೆಯು ಇಡೀ ಹಬ್ಬದ ವೈಶಿಷ್ಟ್ಯತೆಯಿಂದ ಕೂಡಿರುತ್ತದೆ. ಅಂದು ಶ್ರದ್ಧಾಭಕ್ತಿಯಿಂದ ತಮ್ಮ ಹೊಲಗಳಲ್ಲಿರುವ ಅಥವಾ ಊರ ಹೊರವಲಯಗಳಲ್ಲಿ ಮತ್ತು ದೇವಾಲಯದಲ್ಲಿನ ನಾಗರ ಕಲ್ಲಿಗೆ ಮತ್ತು ಹುತ್ತಗಳಿಗೆ ಹೋಗಿ ಹಾಲು ತುಪ್ಪವನ್ನೆರದು ಭಕ್ತಿಯಿಂದ ಪೂಜಿಸಿ ಮಾಡಿದ ಅಡುಗೆಯನ್ನು ನೈವೇದ್ಯವನ್ನಾಗಿ ಅರ್ಪಿಸುತ್ತಾರೆ. ನಾಗನನ್ನು ಆರಾಧಿಸುವುದರಿಂದ ಮನೆಯಲ್ಲಿ ಆಯುರಾರೋಗ್ಯ ಲಭಿಸುವುದರಿಂದ ಜೊತೆಗೆ ಮಕ್ಕಳಿಲ್ಲದವರು ಸಂತಾನ ಭಾಗ್ಯವನ್ನು ಪಡೆಯುತ್ತಾರೆ ಎಂಬ ಬಲವಾದ ನಂಬಿಕೆ ಇವರಲ್ಲಿದೆ.

ಕ್ಷತ್ರಿಯ ಸಮುದಾಯದಲ್ಲಿ ನಾಗರ ಹಬ್ಬದ ಸಂದರ್ಭದಲ್ಲಿ ಪ್ರಚಲಿತವಿರುವ ಒಂದು ವಿಶೇಷ ಪದ್ಧತಿಯೆಂದರೆ, ಆ ವರ್ಷದಲ್ಲಿ ಮದುವೆಯಾದ ವಧುವರರು ಕಡ್ಡಾಯವಾಗಿ ನಾಗರ ಪಂಚಮಿಗೆ ಎಲ್ಲಿದ್ದರೂ ಬರುವ ಸಂಪ್ರದಾಯ ಕಂಡುಬರುತ್ತದೆ. ಮದುವೆಯಾದ ಹೆಣ್ಣಿನ ತೌರುಮನೆಯಿಂದ ಹೊಸದಾಗಿ 'ಬಾಗಣ' ತೆಗೆದುಕೊಂಡು ಹಬ್ಬಕ್ಕೆ ಒಂದು ದಿನ ಮುಂಚಿತವಾಗಿಯೇ ಬರುತ್ತಾರೆ. ಇದಕ್ಕೆ "ಪೆಟ್ಟಿಗೆ" ತರುವುದು ಎನ್ನುತ್ತಾರೆ. ಇಲ್ಲವೆ ಈ ದಿನ ನಮ್ಮ ಮನೆಗೆ ಪೆಟ್ಟಿಗೆ ಬರುತ್ತದೆ ಎನ್ನುತ್ತಾರೆ. ಈ ಹಬ್ಬದಲ್ಲಿ ನವ ವಧು ಗಂಡನ ಮನೆಗೆ ಬಂದು ನಾಗರ ಪೂಜೆಯನ್ನು ಮಾಡಿಕೊಂಡು ಬರುವ ಸಂಪ್ರದಾಯವಿದೆ. ನಾಗರಪಂಚಮಿಯಾದ ತಕ್ಷಣವೇ ಶ್ರಾವಣ ಮಾಸವು ಆರಂಭವಾಗುವುದು. ಶ್ರಾವಣ ಮಾಸದಲ್ಲಿ ದೇವಾನುದೇವತೆಗಳಿಗೆ ಮುಖ್ಯವಾಗಿ ಸೋಮವಾರ, ಮಂಗಳವಾರು, ಶುಕ್ರವಾರು, ಶನಿವಾರದಲ್ಲಿ ವಿಶೇಷ ಪೂಜಾಲಂಕಾರ ಮಾಡುತ್ತಾರೆ. ಈ ಹಬ್ಬದ ವಿಶೇಷವೆಂದರೆ, ದೇವತೆಗಳನ್ನು ಒಲಿಸಿಕೊಳ್ಳುವುದಾಗಿದೆ. ಇದರಲ್ಲಿ ಮೊದಲ ಶನಿವಾರ ಮತ್ತು ಕಡೆಯ ಶನಿವಾರದ ಶ್ರಾವಣವೆಂದರೆ ವಿಶೇಷತೆ ಇದೆ.

### ೫.೯.೪. ಗೌರಿ ಗಣೇಶ ಹಬ್ಬ

ಮಹಿಳೆಯರಿಗೆ ಗೌರಿಹಬ್ಬವು ಮುಖ್ಯವಾಗಿರುತ್ತದೆ. ಮದುವೆಯಾದ ಮೇಲೆ ಗೌರಿಹಬ್ಬದ ದಿನ ಸಹೋದರರು ಹೆಣ್ಣು ಮಕ್ಕಳನ್ನು ತೌರುಮನೆಗೆ ಕರೆದುಕೊಂಡು ಹೋಗುತ್ತಾರೆ. ಹೊಸ ಬಟ್ಟೆಯನ್ನು ತಂದು ಹೆಣ್ಣು ಮಕ್ಕಳು ಸಹೋದರರಿಗೆ ಶುಭವಾಗಲಿ ಎಂದೂ ಯಾವಾಗಲು ಸುಖವಾಗಿರಲಿ ಎಂದು ಹಾರೈಸುತ್ತಾರೆ. ಪ್ರತಿಯೊಂದು ಮಂಗಳಕಾರ್ಯದಲ್ಲಿ ಗಣಪತಿಗೆ ಅಗ್ರಪೂಜೆ ಸಲ್ಲುತ್ತದೆ. ಈ ಹಬ್ಬವು ಭಾದ್ರಪದ ಮಾಸ ಶುಕ್ಲ ಪಕ್ಷ ಚುತುರ್ದಶಿಯಂದು ಆಚರಿಸುತ್ತಾರೆ. ಮನೆಯನ್ನು ಗೋವಿನ ಸೆಗಣಿಯಿಂದ ನೆಲ ಸಾರಿಸಿ ರಂಗೋಲಿ ಹಾಕಿ ತೋರಣ ಕಟ್ಟಿ ಗಣಪತಿ, ಇಡುವ ಜಾಗದಲ್ಲಿ ಬೇರೆ

ಬೇರೆ ತರಕಾರಿಗಳ ಫಲಾವಳಿ ಕಟ್ಟಿ ಶೃಂಗರಿಸುತ್ತಾರೆ. ಪಂಚಕಜ್ಜಾಯ, ಪಾಯಸ, ವಡೆ, ಚಕ್ಕುಲಿ, ಮೋದಕ, ಪಂಚಪತ್ರೆಯ ಪದಾರ್ಥ ಕಡುಬು, ಹೋಲಿಗೆ ಮಾಡುತ್ತಾರೆ. ಈ ದಿನದಂದು ಗಣಪತಿಯನ್ನು ಆರಾಧಿಸುವುದರಿಂದ ಸಕಲ ತೊಂದರೆಗಳಿಂದ ಪಾರಾಗಿಸುಖ ಸಮೃದ್ಧಿ ಸಿಗುತ್ತದೆ ಎಂಬ ನಂಬಿಕೆ ಈ ಸಮುದಾಯದಲ್ಲಿದೆ. ಕೆಲವೊಂದು ಮನೆಯಲ್ಲಿ ಗೌರಿಯನ್ನು ಪ್ರತಿಸ್ಥಾಪಿಸುತ್ತಾರೆ. ಕೆಲವರು ಈ ಗಣಪತಿಯನ್ನು ತಮ್ಮ ಮನೆಯಲ್ಲಿ ಪ್ರತಿಷ್ಠಾಪಿಸಿದರೆ ಮಾತ್ರ ಕೆಲವರ ಕೇರಿ ಕೇರಿಗಳಲ್ಲಿ ಯಾವುದೇ ಜಾತಿ ಪರವಾಗಿ ಅಲ್ಲದೆ ಸಂಘಸಂಸ್ಥೆಗಳು ಪ್ರತಿಷ್ಠಾಪಿಸಿ ತಮ್ಮ ಸ್ಥಿತಿಗತಿಗಳಿಗೆ ತಕ್ಕಂತೆ ಒಂದು ದಿನ, ಮೂರು ದಿನ ೯ ದಿನಗಳವರಗೆ ಪೂಜಿಸಿ ಆರಾಧಿಸಿ ನಂತರ 'ವಿಸರ್ಜನೆ'ಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ.

### ೫.೯.೫. ಮಹಾನಮಿ ಅಥವಾ ಮಾರ್‍ನಾಮಿ

ಭಾದ್ರಪದ ತಿಂಗಳ ಕೃಷ್ಣ ಪಕ್ಷದಲ್ಲಿ ಬರುವ ಪಿತೃಪಕ್ಷ ಪಿತೃರಿಗೆ ತರ್ಪಣ ಕೊಡುವ ದಿನ ಸ್ವರ್ಗಸ್ಥರಾದ ಹಿರಿಯರ ಸದ್ಗತಿ ಆತ್ಮತೃಪ್ತಿಗೆ ಪೂರಕವಾದ ಆಚರಣೆ, ಗತಿಸಿದ ಹಿರಿಯ ಸ್ಮರಣಾ ಕ್ಷತ್ರಿಯರು ಈ ದಿನ ಆಚರಿಸುತ್ತಾರೆ. ಪುರೋಹಿತರಿಂದ ಪಡಿ ಹಾಕಿಸಿ ಪಿಂಡ ಪ್ರಧಾನ ಮಾಡಿಸಿ ಎಳ್ಳುನೀರು ಬಿಟ್ಟು ತರ್ಪಣ ಮಾಡುತ್ತಾರೆ. ಆ ದಿನದ ವಡೆಪಾಯಸ ಪದಾರ್ಥ ಪಿಂಡಾದಿಗಳನ್ನು ಕಾಗೆಗೆ ಹಾಕಿ ಹಸುವಿಗೆ ಗೋಗ್ರಾಸಕೊಟ್ಟು ನೆಂಟರಿಷ್ಟರು, ನೆರೆಹೊರೆಯವರನ್ನು ಕರೆದು ಊಟ ಹಾಕಿ ಪಿತೃ ಆತ್ಮಕ್ಕೆ ಶಾಂತಿಯನ್ನು ಕೋರುವ ದಿನವಾಗಿ ಈ ಮಹಾಲಯ ಅಮವಾಸ್ಯೆ ಆಚರಿಸುತ್ತಾರೆ.

ಹಿಂದೂ ಧರ್ಮದ ಸಂಸ್ಕೃತಿಯ ವೈಶಿಷ್ಟ್ಯ ಪೂರ್ಣವಾದ ಹಬ್ಬ ಮಹಾನವಮಿ, ಅಶ್ವಯುಜ ಮಾಸದ ಶುಕ್ಲಪಕ್ಷ ಪ್ರತಿಪದೆಯಿಂದ ಆರಂಭವಾಗಿ ಒಂಭತ್ತು ದಿನಗಳಕಾಲ ನಡೆಯುವ ಈ ಹಬ್ಬ ಮಳೆಗಾಲದ ಕೊನೆ ಮತ್ತು ಚಳಿಗಾಲದ ಆರಂಭದ ಹೊಸ್ತಿಲಲ್ಲಿ ಬರುತ್ತದೆ. 'ನವರಾತ್ರಿ ಅಥವಾ ಮಹಾನವಮಿ (ಮಾರ್‍ನಾಮಿ) ದಸರಾ, ಎಂತಲೂ ಮತ್ತು ವಿಜಯ ದಶಮಿ ಎಂದು ಸಹಕರೆಯುತ್ತಾರೆ. ಹೀಗೆ ಬೇರೆ ಬೇರೆ ಹೆಸರುಗಳಿಂದ ಆಚರಿಸಲ್ಪಡುವ ಈ ಹಬ್ಬ ಅಪ್ಪಟ ದೇಶಿ ಹಬ್ಬವಾಗಿದೆ. ತನ್ನದೇ ಆದ ಪೌರಾಣಿಕ ಹಿನ್ನೆಲೆಯನ್ನು ಹೊಂದಿರುವ ಇದು ದುಷ್ಟ ಶಕ್ತಿಯ ವಿರುದ್ಧದ ವಿಜಯದ ಸಂಕೇತವಾಗಿ ಆಚರಣೆಗೊಳ್ಳುತ್ತದೆ.

ಶಕ್ತಿ ಪೂಜೆಯ ಹಬ್ಬವಾದ ಇದು ಸ್ತ್ರೀ ದೇವತೆಯ ಆರಾಧನೆಯು ತುಂಬ ವಿಶಿಷ್ಟತೆಯಿಂದ ಕೂಡಿದೆ. 'ಹೊರ ನೋಟಕ್ಕೆ ಸಾರ್ವತ್ರಿಕ ಸ್ವರೂಪದಲ್ಲಿ ಕಾಣಿಸಿಕೊಳ್ಳುವ ಈ ಹಬ್ಬದಾಚರಣೆಯ ಒಳನೋಟ ಕ್ಷತ್ರಿ ಧರ್ಮಕ್ಕೆ ಸಂಬಂಧಿಸಿದ್ದಾಗಿದೆ. ಆದ್ದರಿಂದಲೇ ಅದು ಆಯುಧ ಪೂಜೆಯಾಗಿ ಬೆಳೆದು ಬಂದಿದೆ. ಮನುಷ್ಯನ ಅಗತ್ಯ ಮತ್ತು ಆರಾಧನೆಯ ನಡುವೆ ಪರಸ್ಪರ ಸಂಬಂಧವಿದೆ. ತನಗೆ ಯಾವ ಯಾವ ವಸ್ತು ಪವಿತ್ರವೋ ಅದರಲ್ಲೆಲ್ಲ. ದೇವರನ್ನು ಕಂಡು ಪೂಜಿಸುವುದು ಪ್ರಾಚೀನ ಕಾಲದಿಂದಲೂ ಬಂದ ಪದ್ಧತಿಯಾಗಿದೆ. ಇದರ ಪ್ರಕಟಿತ ರೂಪಗಳೇ ಹಬ್ಬಗಳು, ಮಣ್ಣಿನ ಸಂಬಂಧವಾಗಿ ಗಣೇಶ ಹಬ್ಬ ನೀರಿನ ಕಾರಣಕ್ಕಾಗಿ ಗಂಗೆ ಗೌರೀಹಬ್ಬ, ದನಕರುಗಳ ಕಾರಣಕ್ಕಾಗಿ ಸಂಕ್ರಾಂತಿ ಬೆಳೆ ಸಮೃದ್ಧಿಯನ್ನು ಸೂಚಿಸುವ ಸಲುವಾಗಿ ದೀಪಾವಳಿಯಂತೆ ಆಯುಧಗಳ ಸಲುವಾಗಿ ಆಯುಧ

ಪೂಜೆಯ ಹಬ್ಬವಾಗಿದೆ ಅಥವಾ ಮಹಾನಮಿಯ ಹಬ್ಬವಾಗಿದೆ. ಪೌರಾಣಿಕ ಹಿನ್ನಲೆಯಿರುವ ಈ ಹಬ್ಬವು ಕಾಲಾಂತರದಲ್ಲಿ ಬೇರೆ ಬೇರೆ ಆಯಾಮಗಳನ್ನು ಪಡೆದುಕೊಂಡಿದೆ. ಅರಸೊತ್ತಿಗೆ ಇದ್ದ ಕಾಲದಲ್ಲಿ ಕ್ಷತ್ರಿಯರಿಗಷ್ಟೇ ಸೀಮಿತವಾಗಿದ್ದ ಆಯುಧ ಪೂಜಾ ಪದ್ಧತಿ ಇಂದು ಸಾರ್ವತ್ರಿಕವಾಗಿ ಚಾಲ್ತಿಗೆ ಬಂದಿದೆ.

ಯಾವುದು ತಮ್ಮ ಬದುಕನ್ನು ಕಟ್ಟಿಕೊಳ್ಳಲು ನೆರವಾಗುತ್ತದೋ ಅಂತಹ ಸಲಕರಣೆಗಳನ್ನು ಪೂಜಿಸುವುದು ವಾಡಿಕೆ. ಯಾರಿಗೆ ಯಾವುದು ಅನಿವಾರ್ಯ ಆಯುಧವಾಗಿದೆಯೋ, ಅದನ್ನು ಪೂಜಿಸುವ ಮೂಲಕ ತಾವು ಬಳಸುವ ಆಯುಧಗಳಿಂದ ಮುಂದಾಗಬಹುದಾದ ತೊಂದರೆಗಳಿಂದ ರಕ್ಷಣೆ ಪಡೆಯುವ ಸಲುವಾಗಿ ಆಯುಧ ಪೂಜೆ ಮಾಡುತ್ತಾರೆ. ಹೀಗೆ ನಿತ್ಯ ಬಳಕೆಯ ಸಲಕರಣೆಗಳಿವೂ ದೇವರನ್ನು ಕಾಣುತ್ತಾ ಇವನ್ನು ತಮ್ಮ ಕರ್ತವ್ಯ ಪಾಲನೆಗೆ ದೇವರು ಕೊಟ್ಟ ಪ್ರತಿರೂಪವೆಂದು ಭಾವಿಸಿ ಪೂಜಿಸುವ ಮೂಲಕ ಅವುಗಳಿಗೆ ಕೃತಜ್ಞತೆ ಸಲ್ಲಿಸುತ್ತಾರೆ. ಈ ಹಿನ್ನಲೆಯಲ್ಲಿ ಮಾರ್‍ನಾಮಿ ಹಬ್ಬದ ಸಂದರ್ಭದಲ್ಲಿ ಆಚರಿಸುವ ಆಯುಧ ಪೂಜೆಯಲ್ಲಿ ಕಾಣವು ಸಾಮಾಜಿಕ ಸಾಂಸ್ಕೃತಿಕ ಸಾಮರಸ್ಯಗಳು ಇಂದಿಗೂ ಪ್ರಸ್ತುತವಾಗಿವೆ. ನಮ್ಮ ಹಿರಿಯರು ಈ ಬಗೆಯ ಸಂಪ್ರದಾಯಗಳಿಗೆ ಜೀವನ ಮುಖ ಆಶಯಗಳನ್ನು ತುಂಬಿರುವುದನ್ನು ಕಾಣಬಹುದಾಗಿದೆ.

ಹಬ್ಬದ ಮೊದಲನೆಯ ದಿನದಂದು ಘಟಸ್ಥಾಪನೆ ಮಾಡುತ್ತಾರೆ. ಅಂದು ಒಂಭತ್ತು ಎಣ್ಣೆ ದೀಪವನ್ನು ನಿರಂತರ ಬೆಳಗಿಸುವ ಶಾಸ್ತ್ರವಿದೆ. ಗ್ರಾಮದಲ್ಲಿ ದುರ್ಗಾಂಬಿಕ ಮತ್ತು ಕಾಳಿಕಾಂಬ ದೇವಿ ಇದ್ದಾರೆ. ಅಲ್ಲಿ ಈ ವಿಜಯದಶಮಿ ಅಥವಾ ಮಹಾನವಮಿ ಹಬ್ಬವು ತುಂಬ ಮಹತ್ವದಿಂದ ಕೂಡಿರುತ್ತದೆ. ಈ ಹಬ್ಬವು ಶಕ್ತಿ ದೇವತೆಗಳ ಹಬ್ಬವಾಗಿದೆ. ಮನೆಯಲ್ಲಿ ಮಹಾನವಮಿ ಹಬ್ಬದಲ್ಲಿದೇವರಿಗೆ ಬತ್ತಿ ಹಾಕುವ ಕಾರ್ಯವನ್ನು ಮಾಡುತ್ತಾರೆ. ಇದು ಸಹ ಒಂಭತ್ತು ದಿನ ಕಾಲ ದೀಪವು ಉರಿಯುತ್ತಿರುತ್ತದೆ. ಪ್ರತಿ ಒಂಭತ್ತು ದಿನಕಾಲ ಬೆಳ್ಳಗೆ ಮತ್ತು ಸಂಜೆ ಪೂಜಾ ಕಾರ್ಯ ನಡೆಯುತ್ತದೆ. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಕ್ಷತ್ರಿಯ ಸಮುದಾಯದವರು ಈ ಹಬ್ಬವನ್ನು ಮಡಿಯಿಂದ ಶ್ರದ್ಧೆಯಿಂದ ಭಕ್ತಿ ಪೂರಕವಾಗಿ ಮಾಡುತ್ತಾರೆ. ಒಂಭತ್ತು ದಿನ ಮುಗಿದ ಮೇಲೆ ಹತ್ತನೇ ದಿನ ವಿಜಯ ದಶಮಿ ಹಬ್ಬವನ್ನು ಕೊನೆಯದಾಗಿ ತಾಯಿ ದುರ್ಗಾಂಬ ಅಥವಾ ಚಾಮುಂಡಿ ದೇವಿಗೆ ಕೊನೆಯ ಪೂಜಿಸಲ್ಲಿಸುತ್ತಾರೆ.

ವಿಜಯ ದಶಮಿಯ ದಿನದಂದು ಸಿಹಿಅಡುಗೆ ಮಾಡುವ ಪದ್ಧತಿ ಇದೆ. ಇದರ ಜೊತೆಯಲ್ಲಿ ರೊಟ್ಟಿ ಬುತ್ತಿಯನ್ನು ಮಾಡುತ್ತಾರೆ. ಅಂದು ಕೆಲವೊಂದು ಮನೆಯಲ್ಲಿ ಊಟವು ಸಿದ್ಧವಾಗಿ ಪೂಜೆ ಕ್ರಮ ಮುಗಿದ ನಂತರ ದಾಸಪ್ಪ ಮತ್ತು ಜೋಗತಿ ಜೋಗಪ್ಪರನ್ನು ಕರೆತಂದು, ಗೋವಿಂದ ಅಥವಾ ಊದೂ ಎನ್ನಿಸುವ ಕಾರ್ಯ ನಡೆಯುತ್ತದೆ. ನಂತರ ಮನೆಯವ ಅವರ ಜೊಳಗೆ ತುಂಬಿಸಿ ದಕ್ಷಣೆ ಕೊಟ್ಟು ಕಳುಹಿಸುತ್ತಾರೆ. ಗ್ರಾಮದಲ್ಲಿ ದಸರಾ ಅಥವಾ ಮರ್‍ನಾಮಿ ಹಬ್ಬವನ್ನು ವಿಶಿಷ್ಟ ರೀತಿಯಿಂದ ಆಚರಿಸುತ್ತಾರೆ. ಅಶವಯುಜ ಮಾಸದ ಶುಕ್ಲ ಪಕ್ಷದ ಪ್ರಥಮೆಯಿಂದ ದಶಮಿಯವರೆಗೆ ನಡೆಯುವ ಈ ಹಬ್ಬದ ಆಚರಣೆಗಳು ಮಹಾಲಯ ಅಮವಾಸ್ಯೆ ನಂತರ ಪ್ರಾರಂಭಗೊಳ್ಳುತ್ತವೆ. ಈ ಭಾಗದಲ್ಲಿ

ಈ ಹಬ್ಬವನ್ನು ಸಾಮೂಹಿಕ ಆಚರಣೆಯ ರೂಪದಲ್ಲಿ ನಡೆಸಲಾಗುತ್ತದೆ. ಹಾಗಾಗಿ ಗ್ರಾಮದ ಸಮಸ್ತರು ಪಾಲ್ಗೊಳ್ಳುವಿಕೆಯು ಹಬ್ಬದ ಸಂದರ್ಭದಲ್ಲಿ ಕಂಡುಬರುತ್ತದೆ. ಹಬ್ಬದ ಆರಂಭಕ್ಕೂ ಮುನ್ನ ಜನಾಂಗದ ಮುಖಂಡರ ಮತ್ತು ಯಜಮಾನರುಗಳ ಸಭೆ ನಡೆಯುತ್ತವೆ. ಸಭೆಯಲ್ಲಿ ಹಬ್ಬದ ಆಚರಣೆಯ ವಿಧಿ ವಿಧಾನಗಳನ್ನು ನಿರ್ಧರಿಸಲಾಗುತ್ತದೆ. ದೇವಾಲಯದಲ್ಲಿ ದೀಪವೂ ಸದಾ ಕಾಲ ಉರಿಯುವಂತೆ ದೇವಾಲಯದ ಪುರೋಹಿತರು ನೋಡಿಕೊಳ್ಳಬೇಕು. ಈ ಅವಧಿಯಲ್ಲಿ ದೇವರ ಸನ್ನಿಧಿಯಲ್ಲಿ ಪ್ರತಿ ದಿನವೂ ವಿಶೇಷ ಪೂಜೆ ನಡೆಯುತ್ತದೆ.

ವಿಜಯ ದಶಮಿಯಂದು ಸಂಜೆ ಹಬ್ಬದ ಮುಖ್ಯ ಭಾಗವಾದ 'ಬನ್ನಿಪೂಜೆ' ಅಂಬು ಹೊಡೆಯುವುದನ್ನು ಸಿದ್ಧತೆ ಮಾಡಿಕೊಳ್ಳುತ್ತಾರೆ. ಅಂದು ಗ್ರಾಮದ ಎಲ್ಲ ದೇವರಗಳು ಅಲಂಕರಿಸಿಕೊಂಡು 'ಬನ್ನಿ ಪೂಜೆ ಮತ್ತು ಅಂಬು ಹೊಡೆಯುವುದಕ್ಕೆ ತೆರಳುತ್ತಾರೆ. ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯದವರು ಈ ರೀತಿ ಹೇಳುತ್ತಾರೆ. 'ಮಹಾಭಾರತದ ಕಾಲದಲ್ಲಿ ಪಾಂಡವರು ವನವಾಸಕ್ಕೆ ಹೋಗಿದ್ದಾಗ ತಮ್ಮಲ್ಲಿರುವಂತಹ ವಸ್ತುಗಳು ಮತ್ತು ಯುದ್ಧ ವಸ್ತುಗಳನ್ನು ಬನ್ನಿಮರದಲ್ಲಿ ಕಟ್ಟಿ ನಾವು ಮರಳಿ ಬರುವವರೆಗೆ ಈ ವಸ್ತುಗಳನ್ನು ರಕ್ಷಣೆ ಮಾಡಬೇಕೆಂದು ಬನ್ನಿಗಿಡಕ್ಕೆ ಪೂಜಿಸಲ್ಲಿಸಿ ವನವಾಸಕ್ಕೆ ಹೋಗಿ ಬರುವವರೆಗೂ ರಕ್ಷಿಸಿದ ಕಾರಣ ಈ ಪೂಜೆಯನ್ನು ರಕ್ಷಣಾ ದೃಷ್ಟಿಯಿಂದ ಆಚರಿಸುವ ಪದ್ಧತಿ ಈಗಲೂ ಇದೆ. ಈ ಕಾರಣಕ್ಕಾಗಿ ಗ್ರಾಮದ ದೇವರುಗಳೆಲ್ಲ ಮರವಣೆಗೆಯಲ್ಲಿ ಪಾಲ್ಗೊಂಡು ಬನ್ನಿ ಮರ ಇರುವ ಸ್ಥಳಕ್ಕೆ ಹೋಗುತ್ತಾರೆ. ಅಲ್ಲಿ ಬನ್ನಿಮರಕ್ಕೆ ಪೂಜೆಸಲ್ಲಿಸಿ ಬನ್ನಿಯನ್ನು ಸಂಗ್ರಹಿಸಿಕೊಂಡು ದೇವರಿಗೆ ಸಮರ್ಪಿಸಿದ ಬಳಿಕ ದೇವರಿಗೆ ನಮಸ್ಕರಿಸುತ್ತಾರೆ. ನಂತರ ಮಿತ್ರರರಿಗೆ ಗ್ರಾಮಸ್ಥರಿಗೆ ಬನ್ನಿ ಕೊಟ್ಟು ಬಾಳು ಬಂಗಾರವಾಗಲಿ ಎಂದು ಕಿರಿಯರು ಹಿರಿಯರಿಗೆ ಕಾಲಿಗೆ ನಮಸ್ಕರಿಸುತ್ತಾರೆ. ಬನ್ನಿ ಮುಡಿಯಲೂ ಬಂದಂತಹ ದೇವರುಗಳು ಒಂದು ಸ್ಥಳದಲ್ಲಿ ಅಸೀನವಾದನಂತರ ಪೂಜಾ ವಿಧಿವಿಧಾನಗಳನ್ನು ನೆರವೇರಿಸಿದ ನಂತರ ಯಜಮಾನನು ಬಾಣವನ್ನು ಹೂಡಿ ಮೂರು ಬಾಣಗಳನ್ನು ಎಡಕ್ಕೆ ಬಲಕ್ಕೆ ಮತ್ತು ಮಧ್ಯ ಬಿಡಿತ್ತಾನೆ. ದುಷ್ಟಶಕ್ತಿಯವಿರುದ್ಧದ ಸಾತ್ವಿಕ ಶಕ್ತಿಯ ವಿಜಯದ ಸಂಕೇತವಾದ ಬನ್ನಿಪೂಜೆ ಮತ್ತು ಅಂಬಿನೋತ್ಸವನ್ನು ನೆರವೇರಿಸಿಕೊಂಡು ಪುನಃ ದೇವರನ್ನು ಮೆರವಣೆಗೆಯಲ್ಲಿ ಕರೆತರುತ್ತಾರೆ. ಮರೆವಣೆಗೆ ತೆರಳಿದವರು ಬನ್ನಿಯನ್ನು ತೆಗೆದುಕೊಂಡು ಬಂದು ಮನೆಯಲ್ಲಿರುವ ಗುರು-ಹಿರಿಯರಿಗೆ ತಂದೆ-ತಾಯಿರಿಗೆ ಬನ್ನಿಕೊಟ್ಟು ಕಾಲಿಗೆ ನಮಸ್ಕರಿಸುತ್ತಾರೆ.

**೫.೯.೬. ದೀಪಾವಳಿ**

ಅಶ್ವಯುಜ ಮಾಸದ ಅಂತ್ಯ ಮತ್ತು ಕಾರ್ತೀಕ ಮಾಸದ ಆರಂಭದಲ್ಲಿ ಆಚರಿಸುವ ಹಬ್ಬವೇ ದೀಪಾವಳಿ, ಹಲವು ಪೌರಾಣಿಕ ಘಟನೆಗಳೊಂದಿಗೆ ಬೆಸೆದುಕೊಂಡಿರುವ, ದೀಪಗಳ ಹಬ್ಬವಾದ ದೀಪಾವಳಿಯು ನಮ್ಮ ಗ್ರಾಮೀಣರಿಗೆ ಇಂದಿಗೂ 'ಹಟ್ಟಿಹಬ್ಬ'ವೆಂದೇ ಚಿರಪರಿಚಿತವಾಗಿದೆ. ಹೊಲಗದ್ದೆಗಳಲ್ಲಿ ಬೆಳೆದ ಪೈರುದವಸ ಧಾನ್ಯಗಳಾಗಿ 'ಧಾನ್ಯಲಕ್ಷ್ಮಿ'ಯ ರೂಪದಲ್ಲಿ ಮನೆಗೆ ಆಗಮಿಸುವ ಕಾಲಘಟ್ಟದಲ್ಲಿ ಬರುವ ಹಬ್ಬವಿದು. ಬೆಳೆ ಸಮೃದ್ಧಿಯನ್ನು ಸೂಚಿಸುವ ಈ ಹಬ್ಬವು ಅಪ್ಪಟ ಕೃಷಿ

ಸಂಸ್ಕೃತಿಯ ಪ್ರತೀಕವಾಗಿದೆ. ಕೃಷಿಯನ್ನೇ ಅವಲಂಬಿಸಿರು ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯದವರು ಕೃಷಿಯ ಹಿನ್ನೆಲೆಯಲ್ಲಿರುವ ದೀಪಾವಳಿಯನ್ನು ಆಚರಿಸುತ್ತಾರೆ. ನರಕ ಚತುರ್ದಶಿ, ಅಮವಾಸ್ಯೆ, ಬಲಿಪಾಡ್ಯಮಿ ಎಂಬ ಹಬ್ಬಗಳಲ್ಲಿ ಬಲಿಪಾಡ್ಯಮಿಯನ್ನ ಹೆಚ್ಚಾಗಿ ಆಚರಿಸುತ್ತಾರೆ. ಇವರು ಆಚರಿಸುವ ಈ ಹಬ್ಬದ ಆಚರಣೆಯ ವಿಧಾನ ಮತ್ತು ಹಬ್ಬವನ್ನು ಆಚರಿಸುವ ದಿನಗಳಲ್ಲಿ ಭಿನ್ನತೆ ಕಂಡುಬರುತ್ತದೆ. ವಿಶೇಷವಾಗಿ ಕೆಲವು ಭಾಗಗಳಲ್ಲಿನ ಕ್ಷತ್ರಿಯ ಸಮುದಾಯದವರು ವಿಶಿಷ್ಟ ರೀತಿಯಿಂದ ಆಚರಿಸುತ್ತಾರೆ. "ಶಿಷ್ಟ ಸಂಸ್ಕೃತಿಯಲ್ಲಿ ನರಕ ಚತುರ್ದಶಿ, ಅಮವಾಸ್ಯೆ, ಬಲಿಪಾಡ್ಯಮಿ ಎಂದು ಮೂರು ದಿನಗಳ ಕಾಲ ಆಚರಿಸುವ ಈ ಹಬ್ಬವನ್ನು ನಮ್ಮ ಜನಪದ ಸಂಸ್ಕೃತಿಯಲ್ಲಿ ಹಟ್ಟಿಹಬ್ಬ ಹಟ್ಟಿಲಕ್ಕವನ ಹಬ್ಬ, ಕೆರಕನ ಹಬ್ಬ, ಎಂದು ಬೇರೆ ಬೇರೆ ಹೆಸರುಗಳಿಂದ ಆಚರಿಸುವ ಇದು ಅಪ್ಪಟ ಜಾನಪದ ಹಬ್ಬವಾಗಿದೆ. ಕೃಷಿ ಸಂಸ್ಕೃತಿಯ ಅನಾವರಣ ಹಾಗೂ ತಮ್ಮ ರಾಸುಗಳ(ಹಸು ಮತ್ತು ಎತ್ತುಗಳು) ಶಕ್ತಿ ಪ್ರದರ್ಶನ ಮತ್ತು ಪೂಜೆ ಈ ಹಬ್ಬದ ಬಹುಮುಖ್ಯ ವೈಶಿಷ್ಟ್ಯವಾಗಿದೆ.

ಹಬ್ಬದ ದಿನ ತಯಾರಿಯು ಒಂದು ವಾರದ ಮುಂಚಿತವಾಗಿ ಆರಂಭವಾಗುತ್ತದೆ. ಹಬ್ಬವನ್ನು ಮಾಡುವ ಸಲುವಾಗಿ ಮನೆಯ ಮುಂದೆ ಮತ್ತು ಮನೆಯ ಹಿಂದಿನ ಜಾಗವನ್ನು ಸ್ವಚ್ಛಗೊಳಿಸುತ್ತಾರೆ. ಮತ್ತೆ ಹೊಸ ಮಣ್ಣು ತಂದು ಹರಡುತ್ತಾರೆ. ಮನೆಗೆ ಸುಣ್ಣ-ಬಣ್ಣ ಬಳಿಯುವುದು ಮಾಡುತ್ತಾರೆ. ವ್ಯವಸಾಯ ಮಾಡುವ ಗಳೇವು ಮತ್ತು ಎತ್ತಿನಗಾಡಿ, ಚಕ್ರದಬಂಡೆ ಇವುಗಳನ್ನು ತೊಳೆದು, ಒಂದು ಕಡೆ ಇಡುತ್ತಾರೆ. ಹಾಗೆ ಗಳೇವುಗಳಿಗೆ ಸುಣ್ಣ ಮತ್ತು ಉರುಮಂಜು ಅಥವಾ ಕೆಮ್ಮಣ್ಣ ಈ ಹಬ್ಬದಲ್ಲಿ ಬಳಸಲಾಗುತ್ತದೆ. ಇಲ್ಲಿ ಮುಖ್ಯವಾಗಿ ಬಲಕ್ಕೆ ಮತ್ತು ಎಡಕ್ಕೆ ಸುಣ್ಣದ ಪಟ್ಟೆಯನ್ನು ಮಧ್ಯದಲ್ಲಿ ಕೆಮ್ಮಣ್ಣಿನ ಪಟ್ಟಿಯನ್ನು ಹಚ್ಚುತ್ತಾರೆ. ಹಾಗೆ ಮನೆಯ ಸುತ್ತ ಮರಗಳು ಇದ್ದಾರೆ, ಆ ಮರಗಳಿಗೆ ಸುಣ್ಣ ಮತ್ತು ಕೆಮ್ಮಣ್ಣಿನ ಪಟ್ಟಿ ಹೊಡೆಯುತ್ತಾರೆ. ವ್ಯವಸಾಯಕ್ಕೆ ಬಳಸುವ ಪ್ರತಿಯೊಂದು ವಸ್ತುಗಳನ್ನು ಈ ಹಬ್ಬದಲ್ಲಿ ತೊಳೆದು ಇಟ್ಟ ಪಟ್ಟಿ ಹೊಡೆಯುವ ಸಂಪ್ರದಾಯವಿದೆ. ಈ ಗಳೇವುಗಳನ್ನು ಮನೆಯ ಮುಂದೆ ಅಥವಾ ದನಕೊಟ್ಟಿಗೆಯ ಗೊಡೆಯ ಪಕ್ಕ ಇಡುವ ಸಂಪ್ರದಾಯವಿದೆ. ಈ ರೀತಿಯಾಗಿ ಹಬ್ಬದ ತಯಾರಿ ನಡೆಯುತ್ತದೆ. ಅಲ್ಲದೆ ಹಟ್ಟಿಯನ್ನು ಇಡಲು ಹಬ್ಬದ ಹಿಂದಿನ ದಿನದ ಸಂಜೆ ಹೊಲಕ್ಕೆ ಹೋಗಿ ಕಾಚಿಕಡ್ಡಿ, ಉತ್ರಾಣಿ, ಬ್ರಹ್ಮದಂಡೆ, ಅಣ್ಣೆಹೂವು, ತುಂಬೆಗಿಡದ ಹೂವು, ತಾವರೆ ಹೂವು, ಮಾವಿನ ಎಲೆ, ರಾಗಿ ತೆನೆ, ಇವುಗಳನ್ನು ತಂದು ಜಡೆಯ ರೀತಿಯಲ್ಲಿ ಎಣೆದು ಈ ಎಲ್ಲಾ ತರದ ಹೂವುಗಳನ್ನು ಎಲೆಗಳನ್ನು ಅದರಲ್ಲಿಟ್ಟು ಸಿದ್ಧಗೊಳಿಸಿರುತ್ತಾರೆ.

'ಮೊದಲದಿನಗಳೇವು ಪೂಜೆ' ಅಂದರೆ ಕೃಷಿಗೆ ಸಹಕರಿಸಿದ ರಾಸುಗಳ ಮತ್ತು ಕೃಷಿ ಉಪಕರಣಗಳ ಪೂಜೆಯ 'ಗಳೇವು' ಪೂಜೆ, ರೈತರಾದ ನಮಗೆ ಸಹಾಯ ಮಾಡಿದ ಕೃಷಿ ಸಾಮಗ್ರಿಗಳಿಗೆ ಹಾಗೂ ದನಕರುಗಳಿಗೆ ಆರಾಧನೆ ಸಲ್ಲಿಸುವ ವಿಧಾನವಾಗಿದೆ. ಹಾಗೆಯೆ ಭೂಮಿಯ ಫಲವತ್ತತೆಗೆ ಕಾರಣವಾಗುವ ಗೊಬ್ಬರವನ್ನು 'ಲಕ್ಷ್ಮಿ' ಎಂದು ಭಾವಿಸಿ ಮನೆಯ ಮುಂದೆ ದೀಪ ಹಚ್ಚಿಡುವಂತೆ ತಮ್ಮ ತಮ್ಮ ತಿಪ್ಪೆಗಳಿಗೂ ಹೋಗಿ ದೀಪ ಹಚ್ಚಿಟ್ಟು ಪೂಜಿಸುವುದು ಬಹುತೇಕ ಜಿಲ್ಲೆಯ ಎಲ್ಲೆಡೆಗಳಲ್ಲೂ ಇತ್ತೀಚಿನವರೆಗೂ ಕಂಡುಬರುತ್ತಿತ್ತು. ಬಹುಶಃ ಸಗಣಿಗೆ ಅತಿ ಹೆಚ್ಚಿನ ಪ್ರಾಧಾನ್ಯತೆ ಮತ್ತು ಗೌರವ

ಸಿಗುವುದು. ಈ ಹಬ್ಬದಲ್ಲಿ ಮಾತ್ರ ಎಂದರೆ, ಅತಿಶಯೋಕ್ತಿಯಲ್ಲ. ಸಂಜೆಯ ವೇಳೆಗೆ ಮನೆಯ ಬಾಗಿಲ ಮುಂದೆ ಸಗಣಿಯ ದೊಡ್ಡ ಉಂಡೆಯನ್ನು ಮಾಡಿ (ಕೆಲವು ಕಡೆ ಇದನ್ನೇ ಹಟ್ಟಿ ಲಕ್ಕವ್ವ ಎಂದು ಸಹ ಕರೆಯುತ್ತಾರೆ). ಅದನ್ನು ದನಕಟ್ಟುವ ಕೊಟ್ಟಗೆಯ ಮನೆಯಲ್ಲಿ ಇಟ್ಟಿರುತ್ತಾರೆ. ಅದಕ್ಕೆ ಸುಣ್ಣ ಮತ್ತು ಕೆಮ್ಮಣ್ಣಿನ ಪಟ್ಟಿ ಹಚ್ಚುತ್ತಾರೆ. ಹಾಗೇ ಚಿಕ್ಕ ಚಿಕ್ಕದಾಗಿ ಬೆನಕಪ್ಪಗಳನ್ನು ಮಾಡಿ ಅವುಗಳಿಗೆ ಅರಿಶಿಣ ಕುಂಕುಮ ಹಚ್ಚಿ ಪೂಜಿಸುತ್ತಾರೆ. ಹೂವುಗಳಿಂದ ಅಲಂಕಾರಿಸಿ ಮನೆಯ ಪ್ರತಿಯೊಂದು ಮೂಲೆ, ಬಾಗಿಲು, ಉಪಯೋಗಿಸುವ ವಸ್ತುಗಳಿಗೂ ಸಹ ಒಂದೊಂದು ಬೆನಕಪ ಮತ್ತು ಎಣಿದಿರುವ ಕಾಚಿಕಡ್ಡಿಯನ್ನು ಇಡುತ್ತಾರೆ. ಹಾಗೆ ಇದನ್ನು ಹಟ್ಟಿ ಇಡುವ ಶಾಸ್ತ್ರವೆಂದು ಕರೆಯುತ್ತಾರೆ. ಹಾಗೆ ದನದಮನೆಯಲ್ಲಿ ಅಥವಾ ಕೊಟ್ಟಗೆ ಮನೆಯಲ್ಲಿರುವ ಹಟ್ಟಿಲಕ್ಕವ್ವನಿಗೆ ಸಹ ಕಾಚಿಕಡ್ಡಿ ಇಡುತ್ತಾರೆ. ಮತ್ತು ಗಳೇವುಗಳಿಗೆ ತಿಪ್ಪೆಗೆ ಸಹ ಹಟ್ಟಿ ಇಡುತ್ತಾರೆ. ಹಟ್ಟಿ ಇಟ್ಟ ನಂತರ ಅಡುಗೆ ತಯಾರಿಗೊಳ್ಳುತ್ತಿರುತ್ತದೆ. ಸಂಜೆಯ ಹೊತ್ತಿಗೆ ಅಡುಗೆ ಸಿದ್ದಗೊಂಡನಂತರ ಹಟ್ಟಿ ಲಕ್ಕವ್ವನ ಪೂಜೆ ಮತ್ತು ಈ ದೀಪಾವಳಿಯಲ್ಲಿ ಹಿರಿಯರ ಪೂಜಿಸುವ ಸಂಪ್ರದಾಯ ರೂಢಿಗತವಾಗಿದೆ. ಅಲ್ಲದೆ ಲಕ್ಷ್ಮಿ ಪೂಜೆಯನ್ನು ಮಾಡುತ್ತಾರೆ.

ದೀಪಾವಳಿ ಹಬ್ಬದಲ್ಲಿ ಕೃಷಿಕರ ಮನೆಯಲ್ಲಿ ಹಟ್ಟಿ ಲಕ್ಕವ್ವನ ಪೂಜೆಯನ್ನು ವಿಶಿಷ್ಟ ರೀತಿಯಲ್ಲಿ ಮಾಡುವ ಪದ್ಧತಿ ಇದೆ. ಈ ಪೂಜೆಯನ್ನು ಮನೆಯ ಯಜಮಾನನು ಮಾಡುವ ಸಂಪ್ರದಾಯವಿದೆ. ಮನೆಯಿಂದ ತಯಾರಾದಂತಹ ಸಿಹಿ ಅಡುಗೆಯನ್ನು ಅಂದರೆ ಎಡೆ ಮತ್ತು ಆ ಯಜಮಾನನಿಗೆ ಊಟವನ್ನುಇಡುತ್ತಾರೆ. ಪೂಜೆಗೆ ಬೇಕಾದ ಸಾಮಗ್ರಿಗಳು ಮತ್ತು ವಿಶೇಷವಾಗಿ ಒಂದು ಮಣ್ಣು ಕುಡಿಕೆ ಮತ್ತು ಎತ್ತುಗಳಿಗೆ ಅಥವಾ ಹಸುಗಳಿಗೆ ಹಾಕು ಮುಖವಾಡದಂತಹ ಒಂದು ಚಿಕ್ಕ ಮಾದರಿಯನ್ನು ತಯಾರಿಸಿ ಕೊಂಡಿರುತ್ತಾರೆ. ಅದನ್ನು ಈ ಪೂಜಾ ಸಾಮಗ್ರಿಯ ಜೊತೆ ಇಟ್ಟುಕೊಡುತ್ತಾರೆ. ಅಲ್ಲಿಗೆ ಮುಖ್ಯವಾಗಿ ಬಳೆಬಿಚ್ಚಲೆ ತಾಳಿ, ಓಲೆ, ಹೊಸ ಬಟ್ಟೆಯನ್ನು ಸಹ ಕೊಡುತ್ತಾರೆ. ಇವೆಲ್ಲವನ್ನು ತೆಗೆದುಕೊಂಡು ಬಂದು ದನದ ಕೊಟ್ಟಿಗೆಯಲ್ಲಿ ಆ ಯಜಮಾನ ಒಬ್ಬನೆ ಅಥವಾ ಇಬ್ಬರು ಬಂದು ಸಂಪ್ರದಾಯ ಪದ್ಧತಿಯ ಪ್ರಕಾರ ಪೂಜೆಯನ್ನು ಸಲ್ಲಿಸುತ್ತಾರೆ. ಈ ಪೂಜೆಗೆ ಯಾವುದೆ ರೀತಿಯಾಗಿ ಸ್ತ್ರೀಯರು ಬರುವಂತಿಲ್ಲ. ಮತ್ತು ಪೂಜೆ ಸಮಯದಲ್ಲಿ ಅಲ್ಲಿಗೆ ಹೋದವರ ಮಾತ್ರ ಮಾತಾನಾಡುವುದು ಬದಲಾಗಿ ಯಾವುದೆ ರೀತಿಯಲ್ಲಿ ಬೇರೆಯವರು ಅವರನ್ನು ಆ ಸಮಯದಲ್ಲಿ ಮತಾನಾಡಿಸುವಂತಿಲ್ಲ. ಹಾಗೆ ಗಳೇವು ಮತ್ತು ತಿಪ್ಪೆಗೆ ಅಂದು ರಾತ್ರಿಯೆ ಪೂಜೆ ಸಲ್ಲಿಸಿ ಎಡೆಕಾಸು ಮಾಡುತ್ತಾರೆ.

ನಂತರ ಅಲ್ಲಿಗೆ ಹೋಗಿ ಪೂಜೆ ಮಾಡಿಕೊಂಡ ಬಂದ ಮೇಲೆ ಮನೆಯಲ್ಲಿರುವರು ಇಲ್ಲಿ ಹಿರಿಯರ ಮತ್ತು ಲಕ್ಷ್ಮಿ ಪೂಜೆ ಮಾಡಿ ದೇವರಿಗೆ ನೈವೇದ್ಯ ಮಾಡಿ ಊಟ ಮಾಡುತ್ತಾರೆ. ಮರುದಿನ ಸೂರ್ಯೋದಯಕ್ಕೆ ಮುಂಚೆ ಎದ್ದು ಬೆನಕಪ್ಪಗಳನ್ನು ಮತ್ತು ಕಾಚಿಕಡ್ಡಿಗಳನ್ನೂ ಮನೆಯ ಮೇಲೆ ಹಾಕುವರು. ಹಟ್ಟಿ ಲಕ್ಕವ್ವನ ಸಹ ತಿಪ್ಪೆಯಲ್ಲಿ ಅಥವಾ ದನಕೊಟ್ಟಿಗೆಯ ಮೇಲೆ ಇರಿಸುತ್ತಾರೆ. ಆ ಮೂಲಕ ಇಡೀ ವರ್ಷ ತಮ್ಮನ್ನು ಕಾಪಾಡುವಳೆಂಬ ನಂಬಿಕೆ ನಮ್ಮ ಗ್ರಾಮೀಣ ಜನರಲ್ಲಿ ಮನೆ ಮಾಡಿದೆ. ಮೊದಲನೆಯ ದಿನದಲ್ಲಿ ದನಕರುಗಳನ್ನು ಸಿಂಗಾರಿಸಿಕೊಂಡು ಹೋರಿ ಬೆದರಿಸುವ ಸಲುವಾಗಿ ಊರಿನ ಅಕ್ಕಸೆ ಬಾಗಿಲಿಗೆ ಎಲ್ಲಾರು ಜಮಾಯಿಸುತ್ತಾರೆ. ಬೆಳಿಗ್ಗೆಯಿಂದ ಮಧ್ಯಾಹ್ನದವರೆಗೆ

ಹೋರಿಗಳನ್ನು ಬೆದರಿಸಿ ಅವುಗಳನ್ನು ಕೈಬಿಡುತ್ತಾರೆ. ಸಂಜೆಯ ಹೊತ್ತಿನಲ್ಲಿ ಆ ದನಕರುಗಳು ಮನೆಯ ಸೇರಿದಾಗ ಪೂಜೆಸಲ್ಲಿಸಿ ಎಡೆ ತಿನ್ನಿಸುವ ಪದ್ಧತಿ ಇದೆ. ರಾತ್ರಿ ಹುಡುಗರು ಪಂಜು ಹಚ್ಚಿಕೊಂಡು ಪಂಜಿನ ಹಾಡುಗಳನ್ನು ಹಾಡುತ್ತಾ ಊರಾಡುತ್ತಾರೆ. ಹೆಣ್ಣು ಮಕ್ಕಳು ದೀಪಗಳನ್ನು ಓಡಿದು ಮನೆ ಮನೆಗೆ ತೆರಳಿ ದೀಪ ಬೆಳಗಿಸುವ ಕೆಲಸವನ್ನು ಮಾಡುತ್ತಾರೆ. ಇದನ್ನೆ ಅಂಡಿಗೆ ದೀಪವೆಂದು ಅಥವಾ ಅಂಟಿಗೆ ಪಿಂಟಿಗೆ ಆಡುವುದು ಎಂದು ಕರೆಯುತ್ತಾರೆ.

ಎರಡನೆಯ ದಿನ ಕೆರೆವು ಅಂದರೆ ವಿಶ್ರಾಂತಿ ಮೊದಲನೆಯ ದಿವಸದ ಹಬ್ಬದಾಚರಣೆಯ ವಸ್ತುಗಳನ್ನೆಲ್ಲ ತೆಗೆದು ಸ್ವಚ್ಛ ಮಾಡಿ ಮೂರನೆ ದಿವಸದ ಹಬ್ಬಕ್ಕೆ ತಯಾರಾಗುತ್ತಾರೆ. ಈ ಎರಡನೇಯ ದಿವಸವು ಪೂರ್ತಿ ದಿನ ಹೋರಿ ಬೆದರಿಸುವ ಸ್ಪರ್ಧೆಯು ತುಂಬ ಜೋರಾಗಿರುತ್ತದೆ. ಈ ಎರಡನೇಯ ದಿನ ವಿಶ್ರಾಂತಿಯ ದೃಷ್ಟಿಯಿಂದ ಮನೋರಂಜನೆಯುಕ್ತವಾಗಿ ಕೃಷಿಕರು ಕೃಷಿಕರದಲ್ಲದವರು ಸಹ ಹೋರಿ ಬೆದರಿಸುವ ಸ್ಪರ್ಧೆಯನ್ನು ನೋಡಿ ಖುಷಿಪಡುತ್ತಾರೆ.

ಮೂರನೆಯ ದಿನವೇ 'ವರ್ಷದಡುಕು' ಅಥವಾ ಭೂಮಿ ಪೂಜೆ ಎಂದು ಕರೆಯುವರು. ಕೆಲವೊಂದು ಭಾಗದಲ್ಲಿ ಈ ವರ್ಷದಡುಕನ್ನು ಹಿರಿಯರ ಪೂಜೆ ಎಂದು ಕರೆಯುವುದುಂಟು. ಈ ಮೂರನೆ ದಿನದಲ್ಲಿ ಮನೆಯನ್ನು ಮತ್ತೆ ಒಮ್ಮೆ ಶುಭ್ರಗೊಳಿಸಿಕೊಂಡು ಮನೆಯ ಮಹಿಳೆಯರು ಮುಂಜಾನೆಯೇ ಎದ್ದು ಮಡಿಯಿಂದ ಅಡುಗೆ ಮಾಡಲು ಪ್ರಾರಂಭಿಸಿತ್ತಾರೆ. ಅಡುಗೆಯು ತಯಾರಾದ ನಂತರ ಊರಿನಲ್ಲಿರುವ ಎಲ್ಲಾ ದೇವರಗಳಿಗೆ ಎಡೆಕಾಸು ಮಾಡಿ ಪೂಜಿಸುವ ಪದ್ಧತಿ ನಡೆದು ಕೊಂಡುಬಂದಿದೆ. ಈ ಎಲ್ಲಾ ದೇವರಗಳ ಪೂಜೆ ಕಾರ್ಯ ಮುಗಿದ ನಂತರ ಮನೆಯವರೆಲ್ಲಾ ಹೊಸ ಬಟ್ಟೆಗಳನ್ನು ಧರಿಸಿಕೊಂಡು ಸಿದ್ಧರಾಗಿರುತ್ತಾರೆ. ಸಹಕುಟುಂಬದಲ್ಲಿರುವ ಎಲ್ಲರು ಹೊಲಕ್ಕೆ ಅಥವಾ ತೋಟಗಳಿಗೆ ಮತ್ತು ಗದ್ದೆಗಳಿಗೆ ಹೋಗಿ ಅಲ್ಲಿ ಪೂಜೆಯನ್ನು ಅಂದರೆ ಭೂಮಿ ತಾಯಿಯ ಪೂಜಿಸಿಸುವ ಕ್ರಮವಿದೆ. ಮನೆಯಲ್ಲಿ ತಯಾರಾದ ಭಕ್ಷ್ಯಭೋಜನವನ್ನು ಭೂಮಿಯ ಪೂಜೆಯಾದ ನಂತರ ಅಲ್ಲಿಯೇ ಊಟ ಮಾಡಿಕೊಂಡು ಮನೆಗೆ ಹಿಂದುರಿಗಿ ಬರುತ್ತಾರೆ. ಖುಷಿಗೆ ಪಟಾಕಿ ಸಿಡಿಸಿ ಬರುತ್ತಾರೆ, ಸಂಜೆಯ ಹೊತ್ತಿಗೆ ಹಬ್ಬಕ್ಕೆ ತೆರೆ ಬಿಳುವುದು.

ದೀಪಾವಳಿ ಹಬ್ಬದ ಸಂದರ್ಭದಲ್ಲಿನ ಇವರ ಆಚರಣೆಗಳನ್ನು ಗಮನಿಸಿದಾಗ ಇಲ್ಲಿ ಯಾವುದೇ ರೀತಿಯಾಗಿ ಜಾತಿ ಜಾತಿಗಳ ನಡುವೆ ಭೀನ್ನತೆಯು ಕಂಡುಬರುವುದಿಲ್ಲ. ಆಚರಿಸುವ ಪದ್ಧತಿಗಳು ಒಂದೇ ತೆರನಾಗಿರುತ್ತದೆ. ಇತ್ತೀಚಿನ ದಿನಗಳಲ್ಲಿ ನಗರ ಮತ್ತು ಪಟ್ಟಣದಲ್ಲಿ ಈ ದೀಪಾವಳಿಯನ್ನು ಲಕ್ಷ್ಮೀಪೂಜೆ ಹೆಸರಿನಲ್ಲಿ ಆಚರಿಸುವುದು ಮತ್ತು ಆಧುನಿಕತೆಯ ಪ್ರವೇಶವಾಗಿರುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಶಿಷ್ಟತೆಯ ಶೋಕಿನಿಂದಾಗಿ ಹಟ್ಟಿಹಬ್ಬವು ದೀಪಾವಳಿಯಾಗಿ ಬದಲಾಗಿದೆ. ಇದು ಮೊಟ್ಟಮೊದಲಿಗೆ ದನಗಾರರ ಹಬ್ಬ. ಧನವು ದನಗಾರರಿಂದ ಮೇಲೆ ಒಕ್ಕಲರ ಕೈಯಿಂದ ಜಾತಿ ವರ್ತಕರಲ್ಲಿ ಸೇರುತ್ತಲೇ ಹಟ್ಟಿಹಬ್ಬವು ದೀಪಾವಳಿ ಹಬ್ಬವಾಗಿ ಬದಲಾಗಿದೆ. ಅದಕ್ಕೆ ಈಗಿನ ಸ್ವರೂಪವು ಪ್ರಾಪ್ತವಾಯಿತು *(ಶಂಬಾ ಜೋಶಿ, ಮಲ್ಲೇಪುರಂ ಜಿ ವೆಂಕಟೇಶ, (ಸಂ). ಸಂಪುಟ–*

೩. *ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ, ಪುಟ-೨೧೦, ೧೯೯೯).* ಅನಂತರವೇ ನರಕ ಚತುರ್ದಶಿ, ಬಲಿಪಾಡ್ಯಮಿ ಮುಂತಾದ ಹೆಸರು ಚಲಾವಣೆಗೆ ಬಂದಿರಬೇಕು ಎಂಬ ಈಶ್ವರಪ್ಪ ಎಂ ಜಿ ನವರ ಮಾತುಗಳು ಅಪ್ಪಟ ಕೃಷಿ ಸಂಸ್ಕೃತಿಯ ಹಬ್ಬದಲ್ಲಾಗಿರುವ ಸ್ಥಿತ್ಯಂತರ ಸೂಚಿಯಾಗಿವೆ. ಮೇಲಿನ ಎಲ್ಲಾ ಬದಲಾವಣೆಗಳೊಂದಿಗೆ ಇಂದು ದೀಪಾವಳಿ ಶ್ರೀಮಂತರ ಶ್ರೀಮಂತಿಕೆಯನ್ನು ಮೆರೆಯುವ ಸಡಗರದ ಹಬ್ಬವಾಗಿದೆ. ಅದೇ ರೀತಿ ಈ ಎಲ್ಲಾ ಸ್ಥಿತ್ಯಂತರಗಳೊಂದಿಗೆ ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರು ಇಂದು ಸಹ ದೀಪಾವಳಿಯನ್ನು ಸಡಗರದಿಂದ ಆಚರಿಸುತ್ತಾರೆ. ಈ ಎಲ್ಲಾ ಬದಲಾವಣೆಗಳ ಭರಾಟೆಯಲ್ಲೂ ಇವರು ಆಚರಿಸುವ ದೀಪಾವಳಿಯಲ್ಲಿ ಇನ್ನೂ ಹಟ್ಟಿ ಹಬ್ಬದ ಸೊಗಡು ಕಣ್ಮರೆಯಾಗದೆ ಉಳಿದುಕೊಂಡಿರುವುದು ದೇಸಿತನದ ಸತ್ವವಾಗಿದೆ.

### ೫.೯.೭. ಮಹಾಶಿವರಾತ್ರಿ

ಮಹಾಶಿವರಾತ್ರಿಯು ಮಾಘ-ಫಾಲ್ಗುಣ ಮಾಸದಲ್ಲಿ ಬರುತ್ತದೆ. ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರು ಈ ಹಬ್ಬದ ದಿನದಂದು ಉಪವಾಸವಿದ್ದು, ದೇವರಿಗೆ ಪೂಜೆಯನ್ನು ಸಲ್ಲಿಸಿ ಮರುದಿನ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬವನ್ನು ಭಾರತದ್ಯಾಂತ ಆಚರಣೆಯನ್ನು ಮಾಡುವ ಹಬ್ಬವಾಗಿದೆ. ಹಿಂದೂಗಳು ವಿಶೇಷವಾಗಿ ಆಚರಣೆ ಮಾಡುವ ಹಬ್ಬವೆನಿಸಿದೆ. ಶೈವ ಪಂಥದ ಮತ್ತು ವೈಷ್ಣವ ಪಂಥದವರು ಆಚರಿಸುವಂತಹ ಹಬ್ಬವಾಗಿದೆ. ಇದು ವಿಶೇಷವಾಗಿ ಕೇವಲ ಶಿವನನ್ನು ಸ್ಮರಿಸುವ ಹಬ್ಬವೆನ್ನಿಸಿದೆ. ಈ ಹಬ್ಬವನ್ನು ಸಹ ಹಿಂದೂ ಸಂಪ್ರದಾಯದಂತೆ ಮನೆಯನ್ನು ಶುಭ್ರಮಾಡಿಕೊಂಡು ಮಡಿಯಿಂದ ಆಚರಿಸುವಂತಹ ಹಬ್ಬವಾಗಿದೆ. ಮನೆಯಲ್ಲಿ ಶಿವನಿಗೆ ಅಭಿಷೇಕ ಮಂತ್ರಾರ್ಚಣೆಯನ್ನು ಮಾಡುತ್ತಾರೆ. ಕೆಲವರು ಶಿವನ ದೇವಾಲಯಕ್ಕೆ ಹೋಗಿ ಆಚರಿಸುತ್ತಾರೆ.

ಶಿವರಾತ್ರಿಯ ದಿನದಂದು ರಾತ್ರಿಯಿಂದ ಮುಂಜಾನೆಯವರೆಗೆ ವಿಶೇಷ ಪೂಜಾ ಕಾರ್ಯಕ್ರಮ ನಡೆಯುತ್ತದೆ. ಉಪವಾಸ ವ್ರತ, ರಾತ್ರಿ ಜಾಗರಣೆ, ಶಿವಸ್ತೋತ್ರ ಪಠಣ, ಭಜನೆ, ಶಿವದರ್ಶನ ಶಿವನಿಗೆ ಬಿಲ್ವಪತ್ರ ಅರ್ಪಿಸಿ ಪೂಜೆ ಮಾಡುವುದು, ಶಿವರಾತ್ರಿಯ ಸಾಂಪ್ರದಾಯಕ ಆಚರಣೆಯಾಗಿದೆ. ಈ ಹಬ್ಬದ ರಾತ್ರಿಯಂದು ಮನೆಯ ಹಿರಿಯರು ಮತ್ತು ಕಿರಿಯರು ಮಹಿಳೆ ಮತ್ತು ಪುರುಷ ಎಂಬ ಬೇಧವಿಲ್ಲದೆ, ಜಾಗರಣೆ ಮಾಡುವ ಪದ್ಧತಿಯಿದೆ ಜಾಗರಣೆ ಎಂದರೆ ಯಾವುದೇ ರೀತಿಯಾಗಿ ಅನ್ನ ಮತ್ತು ಚಪಾತಿ, ಇನ್ನಿತರ ಆಹಾರವನ್ನು ಸೇವಿಸುವಂತಿಲ್ಲ. ಕೇವಲ ಹಣ್ಣು ಹಂಪಲುಗಳನ್ನು ಮಾತ್ರ ಉಪಯೋಗಿಸತಕ್ಕದ್ದು, ಉಳಿದಂತೆ ಪೂಜೆ ಪುರಸ್ಕಾರಗಳೆಲ್ಲ ಶಿಷ್ಟ ಪದ್ಧತಿಯಂತೆ ನಡೆಯುವುದು. ಅಂದು ಪೂಜೆ ಆದೊಡನೆ ಪ್ರಸಾದವನ್ನು ಪ್ರತಿಯೊಬ್ಬರಿಗೂ ಹಂಚಲಾಗುತ್ತದೆ. ಜಾಗರಣೆಯ ನಂತರದ ದಿನದಲ್ಲಿ ಅಂದರೆ, ಜಾಗರಣೆಯಾದ ಮೇಲೆ ಸೂರ್ಯೋದಯ ನಂತರ ಅಡುಗೆ ತಯಾರಾಗುತ್ತದೆ. ವಿಶೇಷ ಭೋಜನ ಅದೂಡನೆ ಎಲ್ಲಾರು ಭೋಜನ ಕೂಟದಲ್ಲಿ ಒಂದಾಗಿ ಊಟಮಾಡುತ್ತಾರೆ. ಈ ಶಿವರಾತ್ರಿಯಲ್ಲಿ ವಿಶೇಷವಾಗಿ ಪಾನಕ ಮತ್ತು ಹೆಸರುಬೇಳೆಯ ಕೊಸಂಬರಿ ಮಾಡಿ ಭಕ್ತಾಧಿಗಳಿಗೆ ಹಂಚುತ್ತಾರೆ. ಹಾಗೇ ಜಾಗರಣೆಯನ್ನು ಮಾಡುವರು ಹರಿಯುವ ನದಿ ಮಿಂದೆ ಎದ್ದು ಜಾಗರಣೆಯಲ್ಲಿ ಮಡಿಯಿಂದ ಪಾಲ್ಗೊಳ್ಳವರು.

## ೫.೯.೮. ಮಕರಸಂಕ್ರಾಂತಿ

ಮಕರಸಂಕ್ರಾಂತಿಯು ಪುಷ್ಯ–ಮಾಘ ಮಾಸದಲ್ಲಿ ಆಚರಿಸಲಾಗುತ್ತದೆ. ಮಕರಸಂಕ್ರಾಂತಿಯು ಕೆಲವೊಂದು ಭಾಗದಲ್ಲಿ ತುಂಬ ವಿಶೇಷವಾಗಿ ಮಾಡುವ ಹಬ್ಬವಾಗಿದೆ. ಕಾಲ್ಯೆಂಡರ್ ವರ್ಷದಲ್ಲಿ ಮೊದಲನೆಯ ಹಬ್ಬವೆಂದರೆ, ಮಕರಸಂಕ್ರಾಂತಿಯಾಗಿದೆ. ಇದು ದ್ರಾವಿಡ ಜನಾಂಗಕ್ಕೆ ಹೊಸ ವರ್ಷದ ಹೊಸ ಹಬ್ಬವೆನ್ನಿಸಿದೆ. ಈ ಹಬ್ಬವನ್ನು ಕರ್ನಾಟಕದ ಕೆಲವು ಭಾಗಗಳಲ್ಲಿ ವಿಶಿಷ್ಟತೆಯಿಂದ ಆಚರಣೆ ಮಾಡುತ್ತಾರೆ. ಈ ಹಬ್ಬವು ಜನವರಿ ತಿಂಗಳಲ್ಲಿ ಮಾಡಲಾಗುವುದು. ಈ ಮಕರ ಸಂಕ್ರಾಂತಿ ಹಬ್ಬದ ದಿನದಂದು ಸೂರ್ಯನು ಮಕರ ರಾಶಿಗೆ ಪ್ರವೇಶ ಮಾಡಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಸಂಚಾರಿಸುವನು. ಈ ಸಂಚಾರವು ಆರು ತಿಂಗಳವರೆಗೆ ಇರುತ್ತದೆ. ಸೂರ್ಯನು ದಕ್ಷಿಣದಿಂದ ಉತ್ತರಾಭಿಮುಖವಾಗಿ ಸಂಚರಿಸುವ ದಿನವನ್ನೆ ಮಕರ ಸಂಕ್ರಾಂತಿ ಎಂದು ಕರೆಯುವರು. ಈ ಹಬ್ಬವನ್ನು ಕರ್ನಾಟಕದಲ್ಲಿ ಕೇವಲ ಒಂದೇ ದಿನ ಆಚರಿಸುವರು. ಆದರೆ ನಮ್ಮ ಪಕ್ಕದ ತಮಿಳುನಾಡಿನಲ್ಲಿ ೫ ದಿನಗಳವರೆಗೆ ಈ ಹಬ್ಬವನ್ನು ಮಾಡುತ್ತಾರೆ. ಮಕರಸಂಕ್ರಾತಿ ಹಬ್ಬದಲ್ಲಿ ವಿಶೇಷವಾಗಿ ಹಂಚಲ್ಪಡುವ ವಸ್ತುವೆಂದರೆ, ಎಳ್ಳು–ಬೆಲ್ಲ–ಕಬ್ಬು. ಈ ಹಬ್ಬವನ್ನು ತಮಿಳುನಾಡಿನಲ್ಲಿ ಪೊಂಗಲ್ ಹಬ್ಬ ಎಂದು ಆಚರಿಸುತ್ತಾರೆ. ಹೆಣ್ಣು ಮಕ್ಕಳು ಹೊಸ ಬಟ್ಟೆ ಉಟ್ಟು, ಎಳ್ಳು–ಬೆಲ್ಲ ಹಂಚುವ ಸಂಪ್ರದಾಯವಿದೆ. ಆದರೆ ಇದು ಕರ್ನಾಟಕ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದಲ್ಲಿ ಕ್ರಮೇಣ ಸ್ವಲ್ಪ ಹೆಚ್ಚಿನ ಪ್ರಮಾಣದ ಜನರು ಈ ಹಬ್ಬವನ್ನು ಆಚರಿಸುವರು. ಕ್ಷತ್ರಿಯರು ಕರ್ನಾಟಕದ್ಯಾಂತ ಹಂಚಿ ಹೋಗಿರುವುದರಿಂದ ಕೆಲವರು ಈ ಹಬ್ಬವನ್ನು ಆಚರಿಸುವುದು ಕಂಡುಬರುತ್ತದೆ.

ಮೇಲ್ಕಂಡ ಹಬ್ಬಗಳಲ್ಲದೆ ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರು ಹಿಂದೂಗಳ ಆಚರಿಸುವ ಎಲ್ಲಾ ಹಬ್ಬಗಳನ್ನು ಮತ್ತು ಸ್ಥಳೀಯ ದೇವರು, ದೇವತೆಗಳಾದ, ದುರ್ಗಮ್ಮ, ಮಾರಮ್ಮ, ಚೌಡಮ್ಮ ಜಾತ್ರೆಗಳು, ಹಳದಮ್ಮ, ಮಾರಿಕಾಂಬದೇವಿ ಜಾತ್ರೆ, ಬೂತಪ್ಪನ ಸೇವೆ, ಆಚರಿಸುವರು. ಹಿಂದೂಕ್ಷತ್ರಿಯರು ದಿನನಿತ್ಯ ಹಬ್ಬ–ಹರಿದಿನಗಳನ್ನು ಆಚರಿಸುವುದು ಕಂಡುಬರುತ್ತದೆ. ವಾರದ ಲೆಕ್ಕದಲ್ಲಿ ಅಂದರೆ, ಏಳು ದಿನಗಳಲ್ಲಿ ಮುಖ್ಯವಾದ ವಾರಗಳನ್ನು ಆಯ್ಕೆ ಮಾಡಿಕೊಂಡಿರುತ್ತಾರೆ. ಹೆಚ್ಚಾಗಿ ಈ ಸಮುದಾಯದವರು ಆಂಜನೇಯ, ತಿರುಪತಿ ತಿಮ್ಮಪ್ಪ ಅಥವಾ ವೆಂಕಟೇಶ್ವರ, ರೇಣುಕ ದೇವಿ, ದುರ್ಗಾಂಬಿಕಾ, ಚಂದ್ರಗುತ್ತಿ, ರಂಗನಾಥ ಸ್ವಾಮಿ, ಮೈಲಾರಲಿಂಗ, ಶ್ರೀರಾಮ, ದೂಳಿಲಿಂಗೇಶ್ವರ, ಮಂಜುನಾಥ ಇವೆ ಮುಂತಾದ ದೇವರುಗಳಿಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿರುವಂತೆ ಇತರೆ ಎಲ್ಲ ಹಿಂದೂಧರ್ಮೀಯರ ದೇವರನ್ನು ನಂಬಿ ಆರಾಧಿಸುತ್ತಾರೆ.

ಕೆಲವೊಂದು ಹಬ್ಬಹರಿದಿನಗಳು ವ್ಯಕ್ತಿಯ ಆರ್ಥಿಕ ಸ್ಥಿತಿಗತಿಗಳಿಗೆ ಅನುಗುಣವಾಗಿ ಆಚರಿಸಲ್ಪಡುವುದರಿಂದ ಆರ್ಥಿಕವಾಗಿ ಹಿಂದುಳಿದ ಕ್ಷತ್ರಿಯರು ತಮ್ಮದಿನ ನಿತ್ಯ ಆಚರಿಸುವ ಧಾರ್ಮಿಕ ಹಬ್ಬಗಳನ್ನು ಆಚರಿಸುವುದಿಲ್ಲ. ತಮಗೆ ಮುಖ್ಯವೆನಿಸಿದ ಅಥವಾ ಅವರ ಪೂರ್ವಿಕರು ಆಚರಿಸಿಕೊಂಡು ಬಂದಂತಹ ಹಬ್ಬ–ಹರಿದಿನಗಳನ್ನು ಮಾತ್ರ ಆಚರಿಸುತ್ತಾರೆ. ಹಾಗೆ ತುಂಬ ಬಡವರು ಹಬ್ಬಹರಿದಿನಗಳನ್ನು

ತಮ್ಮ ಆರ್ಥಿಕ ಸ್ಥಿತಿಗತಿಗೆ ತಕ್ಕಂತೆ ಆಚರಿಸುವರು. ಕೆಲವರು ದಿನನಿತ್ಯ ಪೂಜೆ ಪುನಸ್ಕಾರಗಳನ್ನು ಮಾಡುವರು. ಕೆಲವರು ದಿನನಿತ್ಯ ಪೂಜೆ ಪುನಸ್ಕಾರಗಳನ್ನು ಮಾಡುವರು. ಒಂದು ವೇಳೆ ಊರುಗಳಲ್ಲಿ ಎಲ್ಲರೂ ಕೂಡಿ ಆಚರಿಸುವಂತಹ ಹಬ್ಬಗಳೂ ಬಂದರೆ ಜಾತಿ ಮತ ಬೇಧವಿಲ್ಲದೆ ಎಲ್ಲರೂ ಕೂಡಿ ಹಬ್ಬವನ್ನು ಆಚರಿಸುತ್ತಾರೆ. ಇದರ ಜೊತೆಯಲ್ಲಿ ತಮ್ಮ ವೈಯಕ್ತಿಕವಾದ ಹಬ್ಬಗಳನ್ನು ಆಚರಿಸುತ್ತಾರೆ.

ಇಂಥ ಹಬ್ಬಗಳು ಮಾನವನ ಸಂಬಂಧ ಹೊಂದಿದ ಮತ್ತು ಸತ್ತವರ ಹಬ್ಬಗಳು ಆಗಿವೆ. ಆದ್ದರಿಂದ ಮಾನವ ತನ್ನ ದಿನನಿತ್ಯ ಹಬ್ಬ-ಹರಿದಿನಗಳನ್ನು ಆಚರಿಸುವುದು ಕಂಡುಬರುತ್ತದೆ. ಅಲ್ಲದೆ ತುಳಸಿ ಪೂಜೆ, ನೂಲಹುಣ್ಣಿಮೆ ಕದಿರುತುಂಬುವ ಹಬ್ಬ, ಕಾರ್ತಿಕ ಹುಣ್ಣಿಮೆ, ರಾಮನವಮಿ, ಷಷ್ಟಿ, ಶ್ರೀಕೃಷ್ಣಜನ್ಮಾಷ್ಟಮಿ, ಸಂಕ್ರಾಂತಿ, ಬಂಡಿಹಬ್ಬ, ಭೂತಾರಾಧನೆ, ಹೋಳಿಹಬ್ಬ, ಭರತ ಹುಣ್ಣಿಮೆ, ಆಷಾಡ ಏಕಾದಶಿ, ಭೀಮನ ಅಮವಾಸ್ಯೆ, ರಕ್ಷಾಬಂಧನ, ಹೊಸ್ತಿಲ ಹುಣ್ಣಿಮೆ, ಯಳ್ಳು ಅಮವಾಸ್ಯೆ, ಮಹಾಲಯ ಪಕ್ಷ, ಇನ್ನು ಮುಂತಾದ ಹಬ್ಬಗಳನ್ನು ಈ ಸಮುದಾಯದಲ್ಲಿ ಕೆಲವರು ಶ್ಯಕ್ತನುಸಾರ ಆಚರಿಸುವ ಪದ್ಧತಿ ಇದೆ. ಕೆಲವೊಂದು ಊರುಗಳಲ್ಲಿ ಕೆಲವೊಂದು ಭಾಗದಲ್ಲಿ ಕೆಲವೊಂದು ಹಬ್ಬಗಳ ಆಚರಣೆಯು ಇರುವುದಿಲ್ಲ. ಕೆಲವು ಕಡೆ ವಿಶಿಷ್ಟವಾದ ಸಂಪ್ರದಾಯದ ಆಚರಣೆ ಮಾಡುತ್ತಾರೆ.

**೫.೧೦. ಧಾರ್ಮಿಕ ಆಚರಣೆಗಳು**

ಆಚರಣೆಗಳು ಮನುಷ್ಯನ ಬದುಕಿನಲ್ಲಿ ಮುಖ್ಯವಾಗಿ ಎರಡು ನೆಲೆಗಳಲ್ಲಿರುತ್ತವೆ. ಒಂದು ಜೀವನದಲ್ಲಿ ಸ್ವಾಭಾವಿಕವಾಗಿ, ಅಂದರೆ ಜೈವಿಕ ಸ್ವರೂಪದಲ್ಲಿ ಬದಲಾವಣೆಗಳಾಗುವ ಸಂದರ್ಭದಲ್ಲಿ ಆಚರಣೆಗಳು, ಇವು ಹುಟ್ಟು ನಾಮಕರಣ, ಜವಳ, ಮದುವೆ, ಸಾವು ಮೊದಲಾದ ರೂಪಗಳಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಮನುಷ್ಯನಿಗೆ ಅನಿವಾರ್ಯವಾದವುಗಳೆಂದರೆ, ಹುಟ್ಟು ಮತ್ತು ಸಾವು, ಉಳಿದವುಗಳು ಮನುಷ್ಯ ತನ್ನ ಸಂತೋಷಕ್ಕಾಗಿ ಮಾಡಿಕೊಂಡಂತವುಗಳು, ಇಂತಹ ಆಚರಣೆಗಳಲ್ಲಿ ಮನುಷ್ಯ, ತನ್ನ ಸಂತೋಷ ಸುಖವನ್ನೆ ಸಂಭ್ರಮಿಸುತ್ತಾನೆ. ಆನಂದೋಲ್ಲಾಸದ ಸಂಭ್ರಮ ಆಚರಣೆಗಳ ಮೂಲನೆಲೆ. ಮಾನವ ಎಂದು ಈ ಭೂಮಿಯ ಮೇಲೆ ಅವತರಿಸಿದನೋ ಅಂದಿನಿಂದಲೂ ಪ್ರಕೃತಿಯ ವಿಚಿತ್ರಗಳು ಆದಿಮಾನವನಲ್ಲಿ ಭಯ ಭಕ್ತಿಯನ್ನು ಹುಟ್ಟಿಸಿದವು. ತನ್ನ ಜೀವನವನ್ನು ಯಾವುದೋ ಕಾಣದ ಕೈ ನಿಯಂತ್ರಿಸುತ್ತದೆ.

ಆದಿಮಾನವ ತನ್ನ ಸುತ್ತಲಿನ ನೆಲ, ಜಲ, ಪಶು, ಪಕ್ಷಿ, ಗಾಳಿ, ಅಗ್ನಿ, ಸೂರ್ಯ, ಚಂದ್ರಾದಿಗಳಿಗೆಲ್ಲ ಯಾವುದೋ ಒಂದು ಆಗೋಚರಶಕ್ತಿ ಇದೆ. ಆ ಶಕ್ತಿಯಿಂದ ಬದುಕಿನಲ್ಲಿ ಕಷ್ಟ-ನಷ್ಟ ರೋಗ ರುಜಿನಗಳು ಬರುತ್ತದೆ ಎಂದು ದೃಷ್ಟಿಯಿಂದ ಆಮೂರ್ತ ಶಕ್ತಿಗೆ ಮೂರ್ತ ರೂಪಗಳನ್ನು ಕೊಟ್ಟು ದೇವರೆಂದು ಪೂಜಿಸಿದ್ದನ್ನು ಕಾಣುತ್ತೇವೆ. ಈ ಶಕ್ತಿಗಳನ್ನು ಪೂಜೆ ಮಾಡದಿದ್ದಲ್ಲಿ ಅದು ಆಗೋಚರವಾಗಿನಿಂತು ನಮಗೆ ಪೀಡೆಯನ್ನು ಕೊಡುತ್ತಾನೆಂದು ಅವುಗಳಿಗೆ ಪೂಜೆ ನೈವೆದ್ಯ ಕಾಣಿಕೆ ಬಲಿ ಅರ್ಪಿಸಿ ತನ್ನ ಸುಖ ಸಮೃದ್ಧಿಗಾಗಿ ಪ್ರಾರ್ಥಿಸಿಕೊಳ್ಳುತ್ತಿದ್ದನು. ಹೀಗೆ ಮನುಷ್ಯನಲ್ಲಿನ ಭಯದಿಂದ ಹತ್ತು ಹಲವು ದೇವತೆಗಳು ಸೃಷ್ಟಿಯಾದವು. ದೇವರೊಡನೆ ಮಾನವ ಬೆಳೆಸಿದ ಆತ್ಮೀಯ ಸಂಬಂಧವನ್ನು ಅಭಿವ್ಯಕ್ತ ಮಾಡುವ ಸಾಧನಗಳಾಗಿ ಹಬ್ಬ ಜಾತ್ರೆಗಳು ಆಚರಣೆಯಲ್ಲಿ ಬಂದವು. ನಿಗದಿತ ದಿನದಂದು

ಹಬ್ಬ ಹರಿದಿನಗಳನ್ನು ಆಚರಿಸಿ ತನ್ನ ದೈನಂದಿನ ಜೀವನದ ನೋವುಗಳನ್ನು ನಿವಾರಿಸಿ, ಶಾರೀರಿಕ ಹಾಗೂ ಮಾನಸಿಕ ನೆಮ್ಮದಿ ಸಾಮಾಜಿಕ ಸೌಹಾರ್ದತೆ ಭಾವೈಕ್ಯತೆಯನ್ನು ಸಾಧಿಸಿ ಶಾಂತಿಯುತ ಬದುಕಿಗೆ ಭದ್ರ ಬುನಾದಿಯನ್ನು ಹಾಕಿಕೊಂಡನು. ಹಲವಾರು ಜಾತಿ, ಮತ, ಪಂಥಗಳ ಬೀಡಾದ ನಮ್ಮ ನಾಡಿನಲ್ಲಿ ಪ್ರತಿಯೊಂದು ಸಮುದಾಯದಕ್ಕೆ ಅವರದೇ ಆದ ವಿಶಿಷ್ಟ ದೇವತೆಗಳು ಆಚರಿಸುವ ಹಬ್ಬ ಹರಿದಿನಗಳಿವೆ. ಅದಕ್ಕೆ ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯದ ಹೊರತಾಗಿಲ್ಲ. ಇವರ ದೈವೋಪಾಸನೆಯ ಕೆಲವು ಹೆಜ್ಜೆ ಗುರುತುಗಳನ್ನು ನೋಡಬಹುದು.

ಅಗೋಚರ ಶಕ್ತಿಯನ್ನು ಸಂಪ್ರೀತಗೊಳಿಸುವ ಯತ್ನದಲ್ಲಿ ತೊಡಗಿದ ಆ ಶಕ್ತಿಗಳು ತನಗೆ ಒಳಿತು ಕೆಡುಕುಗಳನ್ನು ಉಂಟುಮಾಡುತ್ತವೆ. ಅವುಗಳನ್ನು ಒಲಿಸಿಕೊಂಡರೆ ತನಗೆ ಒಳಿತಾಗುತ್ತದೆಂದು ಭಾವಿಸಿದ ಆದಿಮಾನವ ಒಲಿಸಿಕೊಳ್ಳುವ ಅನೇಕ ಮಾರ್ಗೋಪಾಯಗಳನ್ನು ಕಂಡುಕೊಂಡ ಆ ಪ್ರಯತ್ನದ ಫಲಗಳ ಸಲುವಾಗಿಯೇ ಅನೇಕ ರೀತಿಯ ಆಚರಣೆಗಳು ಹುಟ್ಟುಕೊಂಡು ಧಾರ್ಮಿಕ ಸ್ವರೂಪವನ್ನು ಪಡೆದುಕೊಂಡಿವೆ. ಆರಂಭದಲ್ಲಿ ನಿರಾಡಂಬರವಾಗಿದ್ದ ಈ ಆಚರಣೆಗಳು ಆಧುನಿಕತೆಯ ಗೀಳನ್ನು ಅಂಟಿಸಿಕೊಂಡು ಬೇರೆ ಬೇರೆ ಸ್ವರೂಪವನ್ನು ಪಡೆದುಕೊಂಡು ಕ್ರಮೇಣ ಧಾರ್ಮಿಕತೆಯ ಭಾಗವಾಗಿ ಪರಿಣಮಿಸಿ ಧಾರ್ಮಿಕ ಸ್ವರೂಪವನ್ನು ಪಡೆದುಕೊಂಡಿರುವುದನ್ನು ಕಾಣುತ್ತೇವೆ.

ಬುಡಕಟ್ಟು ಸಮುದಾಯಗಳು ತಾವು ರೂಢಿಸಿಕೊಂಡಿದ್ದ ಆಚರಣೆಗಳನ್ನು ಇಂದಿಗೂ ಕೆಲವು ಬದಲಾವಣೆಗಳೊಂದಿಗೆ ತನ್ನ ಮೂಲ ಸ್ವರೂಪದಲ್ಲಿ ಆಚರಿಸಿಕೊಂಡು ಬರುತ್ತಿವೆ. ಪ್ರಕೃತಿಯಲ್ಲಾಗುವ ವೈಚಿತ್ರತೆಯನ್ನು ಗಮನಿಸಿದ ಆದಿಮಾನವ ಅದರ ಹಿಂದಿರುವ ಅಗೋಚರ ಶಕ್ತಿಯನ್ನು ಒಲಿಸಿಕೊಳ್ಳುವ ಸಲುವಾಗಿ ಆ ಶಕ್ತಿಯನ್ನು ಕುರಿತುಪೂಜೆ ಪ್ರಾರ್ಥನೆ ಮುಂತಾದ ರೀತಿಯಲ್ಲಿ ಆರಾಧಿಸತೊಡಗಿದ ಈ ಬಗೆಯ ಆರಾಧನೆಗಳು ಹಬ್ಬ–ಹರಿದಿನ ಜಾತ್ರೆ ಉತ್ಸವಗಳ ಸಂದರ್ಭದಲ್ಲಿ ಧಾರ್ಮಿಕ ನೆಲಗಟ್ಟಿನಲ್ಲಿ ಆಚರಣೆಗೊಳ್ಳುತ್ತವೆ. ಕ್ಷತ್ರಿಯರ ಧಾರ್ಮಿಕ ಆಚರಣೆಗಳನ್ನು ಗುರುತಿಸುವುದೆಂದರೆ, ಅವರ ಸಾಂಸ್ಕೃತಿಕ ಅನನ್ಯತೆ ಹಾಗೂ ಸಾಮಾಜಿಕ ಸ್ಥಾನಮಾನಗಳನ್ನು ಅರಿಯುವುದಾಗಿದೆ. ಧರ್ಮ ಎಂಬ ಪದಕ್ಕೆ ಇರುವ ಅನೇಕ ಅರ್ಥಗಳಲ್ಲಿ ಜೀವನ ವಿಧಾನ ಎಂಬ ಅರ್ಥವೂ ಇರುತ್ತದೆ. ಪ್ರಪಂಚದಲ್ಲಿರುವ ಧರ್ಮಗಳೆಲ್ಲವೂ ತಮ್ಮದೇ ಆದ ಆಚರಣೆಗಳನ್ನು ಹೊಂದಿವೆ. ಆಯಾಯ ಧರ್ಮಕ್ಕೆ ಸಂಬಂಧಪಟ್ಟ ಜಾತಿ ಮತ್ತು ಉಪಜಾತಿಗಳು ತಮ್ಮ ಪ್ರಾದೇಶಿಕ ವ್ಯಾಪ್ತಿಗನುಗುಣವಾಗಿ ಆಚರಣೆಗಳನ್ನು ಆಚರಿಸಿಕೊಂಡು ಬರುತ್ತವೆ. ಈ ಹಿನ್ನಲೆಯಲ್ಲಿ ಕರ್ನಾಟಕದಲ್ಲಿರುವ ಕ್ಷತ್ರಿಯ ಸಮುದಾಯವು ಆಚರಿಸಿಕೊಂಡು ಬರುತ್ತಿದ್ದ ಧಾರ್ಮಿಕ ಆಚರಣೆಗಳ ಅಧ್ಯಯನವನ್ನು ಮಾಡಲಾಗಿದೆ.

ಪ್ರತಿಯೊಂದು ಧರ್ಮವು ಆಸ್ತಿಕತೆಯಿಂದ ಕೂಡಿರುತ್ತದೆ. ಹಾಗೆಯೇ ನಮ್ಮ ಧರ್ಮವು ಆಸ್ತಿಕ ಧರ್ಮವಾಗಿದೆ. ಆಸ್ತಿಕ ಮನೋಭಾವ ಹೊಂದಿರುವ ಕ್ಷತ್ರಿಯರಲ್ಲಿ ಶೈವ ಮತ್ತು ವೈಷ್ಣವ ಎಂಬ ಎರಡು ಸಂಪ್ರದಾಯಗಳಿವೆ. ಆಯಾ ಸಂಪ್ರದಾಯಕ್ಕೆ ಅನುಗುಣವಾದ ಆಚರಣೆಗಳು ಇವರಲ್ಲಿ ಕಂಡುಬರುತ್ತವೆ. ವೈಷ್ಣವ ಸಂಪ್ರದಾಯದ ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರ

ವಿಷ್ಣುವಿನ ಮೂಲವಾದ ಶ್ರೀರಾಮ, ವೆಂಕಟೇಶ್ವರ, ರಂಗನಾಥ, ಲಕ್ಷ್ಮೀದೇವತೆ ಇವೆ ಮುಂತಾದ ದೇವರಗಳನ್ನು ಒಳಗೊಂಡಂತೆ ಆಯಾ ಭಾಗದ ಸ್ಥಳೀಯ ದೇವರುಗಳಾದ ದುರ್ಗಾಂಬ, ಹಳದಾಂಬ, ಚಾಮುಂಡಿ, ಮಾರವ್ವ, ಯಲ್ಲಮ್ಮ ಅಥವಾ ರೇಣುಕಾದೇವಿ, ಚಂದ್ರಗುತ್ತಿ ಯಲಮ್ಮ, ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಶೈವ ಸಂಪ್ರದಾಯದ ಕ್ಷತ್ರಿಯರು ಶೈವ ಮೂಲದ ದೂಳಲಿಂಗೇಶ್ವರ, ಮಲ್ಲಿಕಾರ್ಜುನ, ಮೈಲಾರಲಿಂಗೇಶ್ವರ, ಮಲೆಮಹದೇಶ್ವರ, ನಂಜುಂಡೇಶ್ವರ, ಮಂಜುನಾಥ, ಮುಂತಾದ ದೇವರಗಳನ್ನು ಆರಾಧನೆ ಜೊತೆಯಲ್ಲಿ ಪರಮೇಶ್ವರಿ, ಕನ್ಯಾಕ ಪರಮೇಶ್ವರ, ದ್ರೌಪದಿಯಮ್ಮ, ಕೊಲ್ಲೂರು ಮೂಕಾಂಬಿಕೆಯನ್ನು ಆರಾಧಿಸುತ್ತಾರೆ. ಹಾಗೆ ಅವರ ಕಲ್ಪನೆ ಅಥವಾ ನಂಬಿಕೆಯನ್ನು ಕಟ್ಟಿಕೊಟ್ಟಂತಹ ಎಲ್ಲಾ ದೇವರಗಳನ್ನು ಅಂದರೆ, ಹೆಣ್ಣು ದೇವರಾಗಲಿ ಅಥವಾ ಗಂಡು ದೇವರಾಗಲಿ ಮೇಲ್ಕಂಡ ಎಲ್ಲಾ ದೈವಗಳನ್ನು ಪೂಜನೀಯ ಭಕ್ತಿಯಿಂದ ಪೂಜಿಸುತ್ತಾರೆ. ತಾವು ವಾಸಿಸುವ ಪ್ರಾದೇಶಿಕ ಸ್ಥಳದಲ್ಲಿ ಆಚರಣೆಗೊಳ್ಳುವ ಹಬ್ಬ-ಹರಿದಿನ ಜಾತ್ರೆ ಉತ್ಸವಗಳಲ್ಲಿ ಭಾಗಿಯಾಗುತ್ತಾರೆ. ಮನುಷ್ಯನ ಬದುಕಿನಲ್ಲಿ ಅವನ ನಿರೀಕ್ಷೆಗಳನ್ನು ಮೀರಿ ಸಂಭವಿಸುವ ಸಾವು-ನೋವು, ರೋಗ-ರುಜಿನಗಳಂತಹ ಒತ್ತಡಗಳಿಂದ ಪಾರಾಗುವ ಸಲುವಾಗಿ ದೇವರ ಮೊರೆ ಹೋಗುವುದು, ಸಾಮಾನ್ಯ ಸಂಗಾತಿಯಾಗಿದ್ದು, ತನ್ನ ಆಗುಹೋಗುಗಳಿಗೆ ಸ್ಪಂದಿಸುವ ವಸ್ತು, ಕಲ್ಲು, ಮರ, ಗಿಡ, ಪ್ರಾಣಿ ಪಕ್ಷಿಗಳನ್ನು ಭಕ್ತಿಭಾವದಿಂದ ಪೂಜಿಸುವ ಇವರು ಒಂದರ್ಥದಲ್ಲಿ ಸರ್ವದೇವೋಪಾಸಕರ ಆಗಿದ್ದಾರೆಂದು ಹೇಳಿದರು ತಪ್ಪಾಗಲಾರದು.

ವೈಷ್ಣವ ಸಂಪ್ರದಾಯ ಅಥವಾ ಪಂಥವರಾದ ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರು ನಾಮಧಾರಿಗಳಾಗಿದ್ದೂ ಒಂದು ನಾಮ, ಎರಡು ನಾಮ ಮತ್ತು ಮೂರು ನಾಮವನ್ನು ಧರಿಸುವರಾಗಿದ್ದಾರೆ. ಇವರು ಮುಖ್ಯವಾಗಿ ಗಂಧದ ನಾಮವನ್ನು ಮತ್ತು ಬಿಳಿನಾಮವನ್ನು ಹಾಗೂ ಕುಂಕುಮದ ನಾಮವನ್ನು ಧರಿಸುವರಾಗಿದ್ದಾರೆ. ವಾರದ ಏಳು ದಿನಗಳಲ್ಲಿ ಶನಿವಾರದ ದಿನವನ್ನು ವಿಶೇಷವಾಗಿ ಆಚರಿಸುತ್ತಾರೆ. ಗಂಡು ದೇವರದ ಕುಲದವರಾದರೆ ಅಥವಾ ಒಕ್ಕಲುವರಾದರೆ ಶನಿವಾರವನ್ನು ಹೆಣ್ಣು ದೇವರು ಅಥವಾ ಹೆಣ್ಣು ದೇವರ ಒಕ್ಕಲಗಳಾದರೆ ಶುಕ್ರವಾರ ಅಥವಾ ಮಂಗಳವಾರ ಪೂಜಿಸುವ ವಿಶೇಷ ದಿನಗಳಾಗಿವೆ. ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರಲ್ಲಿ ಮುದ್ರ ಪದ್ಧತಿ ಇದೆ. ಅಂದರೆ ಎರಡು ರೀತಿಯಾದ ಮುದ್ರೆಗಳನ್ನು ಶಾಸ್ತ್ರೋಕ್ತವಾಗಿ ಮಾಡಿಸಿಕೊಳ್ಳುತ್ತಾರೆ. ಜನಿಸಿದ ಮೇಲೆ ನಾಮಕರಣವನ್ನು ಮಾಡುವಾಗಲೇ ಹೂವು ಮುದ್ರೆಯನ್ನು ಮಾಡುತ್ತಾರೆ ಮತ್ತು ಮದುವೆ ಮುಂಚಿತವಾಗಿ ದೊಡ್ಡ ಮುದ್ರೆಯನ್ನು ಮಾಡಿಸಿಕೊಳ್ಳುವರು. ಇಲ್ಲಿ ಮುಖ್ಯ ಪ್ರಾಣನಾದ ಆಂಜನೇಯನ ಸನ್ನಿಧಿಯಲ್ಲಿ ಕೆಲವರು ಮಾಡಿಸಿಕೊಂಡರೆ ಮತ್ತೆ ಕೆಲವರು ತಿರುಪತಿಯ ವೆಂಕಟೇಶ್ವರನ ಸನ್ನಿಧಿಯಲ್ಲಿ ಮಾಡಿಸಿಕೊಳ್ಳುವರು ಹಾಗೂ ರಂಗನಾಥ ಸ್ವಾಮಿಯ ಸನ್ನಿಧಿಯಲ್ಲಿ ಮುದ್ರೆಯನ್ನು ಮಾಡಿಸಿಕೊಳ್ಳುವರು ಇದ್ದಾರೆ. ಮುದ್ರೆಗಳನ್ನು ಮಾಡಿಕೊಂಡವರು ವಿಶೇಷ ಸ್ಥಾನವನ್ನು ಪಡೆದುಕೊಳ್ಳುತ್ತಾರೆ. ಅಂದರೆ ಈ ಮುದ್ರೆಯಾದ ಮೇಲೆ ಅವರನ್ನು ಪೂಜನೀಯ ಸ್ಥಾನದಲ್ಲಿರಿಸಿ ನೋಡುವ ಪದ್ಧತಿ ಇದೆ. ಅವರನ್ನು ದಾಸಯ್ಯ ಎಂದು ಸಹ ಕರೆಯುತ್ತಾರೆ.

ಕ್ಷತ್ರಿಯ ಅಥವಾ ಕ್ಷತಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರಲ್ಲಿ ದಾಸಯ್ಯ ಇದ್ದರು ಅವರು ಬೇರೆ ಜಾತಿಯ ಅಂದರೆ ದೇವಾಂಗದವರಲ್ಲಿರುವ ದಾಸಯ್ಯನ್ನು ಕರೆತರುತ್ತಾರೆ. ಹಬ್ಬ-ಹರಿದಿನಗಳಂದು ಅಥವಾ ಶ್ರಾವಣ ಶನಿವಾರಗಳಂದು ಮುದ್ರೆ ಹೊತ್ತ ದಾಸಯ್ಯಗಳನ್ನು ತಮ್ಮ ಮನೆಗೆ ತಪ್ಪದೆ ಕರೆದುಕೊಂಡು ಬರುತ್ತಾರೆ. ಅಂದು ಕೆಲವು ಭಾಗದ ಕಡೆ ಮೊದಲ ಶನಿವಾರ ಮಾಂಸದ ಅಡುಗೆಯನ್ನು ಮಾಡಿ ದಾಸಯ್ಯನ ಎಡೆಹಾಕಿ ಗೋವಿಂದ ಎನ್ನಿಸಿ ದಾಸಯ್ಯ/ದಾಸಪ್ಪನಿಗೆ ದಕ್ಷಣೆ ಕೊಟ್ಟು ಕಾಲಿಗೆ ನಮಸ್ಕರಿಸಿ ಆಶೀರ್ವಾದನ್ನು ಪಡೆಯುತ್ತಾರೆ. ನಂತರ ಬಳಿಕ ದಾಸಪ್ಪ ಜಾಗಟೆಯನ್ನು ಬಡಿಯುತ್ತಾ ಶಂಖನ್ನು ಊದಿ ವೆಂಕಟರಮಣ ನೆನಯುತ್ತಾ ತಿರುಮಂತ್ರವನ್ನು ಹೇಳಿದ ಬಳಿಕ ದಾಸಪ್ಪನಿಗೆ ಮೊದಲು ಊಟಕ್ಕೆ ಬಡಿಸುತ್ತಾರೆ. ದಾಸಪ್ಪನ ಊಟವಾದ ಬಳಿಕ ಮನೆಯವರೆಲ್ಲ ಊಟ ಮಾಡುವ ಪದ್ಧತಿ ಇದೆ. ಆದರೆ ಕೆಲವೊಂದು ಭಾಗದ ಕ್ಷತ್ರಿಯರು ಈ ಶ್ರಾವಣ ಶನಿವಾರಗಳಂದು ಯಾವುದೇ ರೀತಿಯಾಗಿ ಮಾಂಸದ ಅಡುಗೆಯನ್ನು ಮಾಡುವುದಿಲ್ಲ ಹಾಗೂ ತಿನ್ನುವುದಿಲ್ಲ. ಆದರೆ ಶ್ರಾವಣದ ಮೊದಲ ಶನಿವಾರ ಮಾಂಸ ಮಾಡಿತಿಂದವರು ಮುಂದೆ ಬರುವ, ಗೌರಿಗಣೇಶ ಹಬ್ಬ ನಂತರ ತಿನ್ನುತ್ತಾರೆ. ಒಂದೇ ಸಮುದಾಯದಲ್ಲಿ ವಿಭಿನ್ನ ಆಚರಣೆಗಳು ಇರುವುದನ್ನು ಅಧ್ಯಯನದಿಂದ ತಿಳಿದುಕೊಳ್ಳಬಹುದಾಗಿದೆ.

ಮನೆಗಳಲ್ಲಿ ಜನನ, ನಾಮಕರಣ, ಜವಳ, ಗೃಹಪ್ರವೇಶ ಹಾಗೂ ಋತುಮತಿ, ಸಾವು ತಿಥಿ, ಮುಂತಾದ ಸಂದರ್ಭದ ಮೈಲಿಗೆಯನ್ನು ಮತ್ತು ಶುಭದಾಯಕ ದಿನಗಳಿಗೆ ತಪ್ಪದೇ ದಾಸಪ್ಪನನ್ನು ತಮ್ಮ ಮನೆಗೆ ಕರೆದುಕೊಂಡುಬಂದು ಪೂಜೆ ಸಲ್ಲಿಸುತ್ತಾರೆ. ಅವನು ನೀಡುವ ತೀರ್ಥವನ್ನು ಮನೆಗೆಲ್ಲಾ ಸಂಪ್ರೋಕ್ಷಿಸಿ ಸೂತಕ ಕಳೆದುಕೊಳ್ಳುತ್ತಾರೆ. ಈ ಎಲ್ಲಾ ದಿನಗಳಲ್ಲೂ ಮನೆಯನ್ನು ಗುಡಿಸಿ ಸಾರಿಸಿ ಸ್ವಚ್ಚಗೊಳಿಸಿರುತ್ತಾರೆ. ದಾಸಪ್ಪ ಎಂದಿನಂತೆ ಮನೆಗೆ ಬಂದಾಗ ಮೊದಲು ಕಾಲಿಗೆ ನೀರಾಕಿ ಊದಬತ್ತಿ ಬೆಳಗಿ ಒಳಗೆ ಕರೆದುಕೊಳ್ಳುತ್ತಾರೆ. ಮನೆಯಲ್ಲಿ ದಾಸಪ್ಪನಿಗೆ ಪೂರ್ವಾಭಿಮುಖವಾಗಿ ಕುಳಿತುಕೊಳ್ಳಲು ಕಂಬಳಿಯ ಮಡಿಯನ್ನು ಹಾಕಿ ಅದರ ಮೇಲೆ ಕೂರಿಸಿಲಾಗುತ್ತದೆ. ಎಂದನಂತೆ ಎಲ್ಲರೂ ಮಡಿಲ್ಲಿದ್ದು ದಾಸಪ್ಪನಿಂದ ನಾಮ ಇಡಿಸಿಕೊಂಡು ಕಾಲಿಗೆ ಬಿದ್ದು, ಆಶೀರ್ವಾದ ಪಡೆಯುತ್ತಾರೆ. ಒಟ್ಟಿನಲ್ಲಿ ಈ ಸಂಪ್ರದಾಯದವರು ಆಚರಿಸುವ ಯಾವುದೇ ಧಾರ್ಮಿಕ ಆಚರಣೆಗಳಲ್ಲಿ ದಾಸಪ್ಪನ ಅಥವಾ ದಾಸಯ್ಯನ ಪಾತ್ರ ಪ್ರಮುಖವಾಗಿರುತ್ತದೆ.

ಶೈವ ಸಂಪ್ರದಾಯ ಸಾಮಾನ್ಯವಾಗಿ ವಿಭೂತಿ ಧರಿಸುತ್ತಾರೆ. ಇವರಲ್ಲಿ ದೂಳಿಲಿಂಗೇಶ್ವರ ಮಲ್ಲಿಕಾರ್ಜುನ ಮೈಲಾರಲಿಂಗನ ಒಕ್ಕಲಿನವರು ವಿಶೇಷವಾಗಿ ಭಂಡಾರವನ್ನು ಧರಿಸುತ್ತಾರೆ. ಭಾನುವಾರವನ್ನು ಇವರು ವಿಶೇಷವಾಗಿ ಆಚರಿಸುತ್ತಾರೆ. ಕೆಲವರು ಶನಿವಾರವನ್ನು ಶುಕ್ರವಾರವನ್ನು ವಿಶೇಷ ದಿನವಾಗಿ ಆಚರಿಸುತ್ತಾರೆ. ಹಾಗೇ ತಮ್ಮ ಮನೆಗೆ ಗೊರವಯ್ಯಗಳನ್ನು ಕರೆದುಕೊಂಡುಬಂದು ಆ ದಿನವನ್ನು ವಿಶೇಷವಾಗಿ ಆಚರಿಸುತ್ತಾರೆ. ಇವರು ಸಹ ಶ್ರಾವಣ ಮಾಸದಲ್ಲಿ ಹಬ್ಬ-ಹರಿದಿನಗಳಂದು ಗೊರವಯ್ಯನವರನ್ನು ಮನೆಗೆ ಕರೆದುಕೊಂಡು ಭಕ್ತಿಯಿಂದ ಪೂಜೆ ಸಲ್ಲಿಸುತ್ತಾರೆ. ಅದೇ ರೀತಿ ತಮ್ಮ ಮನೆಗಳನ್ನು ಸೂತಕಗಳಾದರೆ, ಬ್ರಾಹ್ಮಣ ಅಥವಾ ಪುರೋಹಿತರನ್ನು ಕರೆತಂದು ಸೂತಕವನ್ನು

ಕಳೆದುಕೊಳ್ಳುತ್ತಾರೆ. ಅಂತೆಯೇ ನಾಮಕರಣ, ಗೃಹಪ್ರವೇಶ, ಮದುವೆ ಇವೇ ಮುಂತಾದ ಶುಭ ಸಂದರ್ಭಗಳಲ್ಲಿ ಇವರನ್ನು ಮನೆಗೆ ಕರೆದುಕೊಂಡುಬಂದು ಪೂಜೆ ಮಾಡಿಸುತ್ತಾರೆ.

ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರ ಸಮುದಾಯದಲ್ಲಿ ಮುಖ್ಯವಾಗಿ ವೈಷ್ಣವ ಮತ್ತು ಶೈವ ಸಂಪ್ರದಾಯಗಳಂತೆ ಕ್ಷತ್ರಿಯರಲ್ಲಿ ಬೇರೆ ಒಕ್ಕಲಿನವರಿದ್ದಾರೆ. ಅಂದರೆ ಗಂಡು ಒಕ್ಕಲಿನವರು ಮತ್ತು ಹೆಣ್ಣು ಒಕ್ಕಲಿನವರು. ಇಲ್ಲಿ ಮುಖ್ಯ ಗಂಡು ಒಕ್ಕಲಿನವರು ಶನಿವಾರವನ್ನು ಹೆಣ್ಣು ಒಕ್ಕಲಿನವರು ಶುಕ್ರವಾರ ಮತ್ತು ಮಂಗಳವಾರವನ್ನು ವಿಶೇಷವಾಗಿ ಪೂಜಿಸುತ್ತಾರೆ. ದಾಸಯ್ಯ ಮತ್ತು ಜೋಗಪ್ಪ/ಜೋಗವರು ಸಹ ಇಂತಹ ಮನೆತನದಲ್ಲಿ ನಡೆಯುವ ಶೋಭಕಾರ್ಯಕ್ಕೆ ಬರುತ್ತಾರೆ. ಆದರೆ ಹೆಚ್ಚಾಗಿ ಶನಿವಾರ ಆಂಜನೇಯ ವಾರನ್ನಾಗಿ ಆಚರಿಸುವ ಅತೀ ಹೆಚ್ಚಾಗಿರುವುದು ಅಧ್ಯಯನದಿಂದ ಕಂಡುಬರುತ್ತದೆ ಮತ್ತು ಭಾನುವಾರವನ್ನು ವಿಶೇಷ ದಿನವನ್ನಾಗಿ ಆಚರಿಸುವರಿಗೆ ಕಡಿಮೆಯೇನು ಇಲ್ಲ.

### ೫.೧೧. ದೈವಾರಾಧನೆ

ದೇವತಾರಾಧನೆ ಎಲ್ಲ ಮಾನವ ಸಮೂಹದಲ್ಲಿಯೂ ಕಂಡುಬರುತ್ತದೆ. ಮಾನವ ಭೂಮಿಯ ಮೇಲೆ ಆವತರಿಸಿದ ಅಂದಿನಿಂದ ದೇವತಾರಾಧನೆಗೆ ತೊಡಗಿದ್ದಾನೆ. ಮಾನವನ ವಿಕಾಸದ ಹಾದಿಯಲ್ಲಿ ದೇವತಾರಾಧನೆ ವಿವಿಧ ರೂಪಗಳಲ್ಲಿ ಬೆಳೆದು ಬಂದಿರುವುದನ್ನು ಕಾಣಬಹುದು. ಸಮುದಾಯಗಳ ಸಂಸ್ಕೃತಿಯ ಅಧ್ಯಯನದ ಸಂದರ್ಭದಲ್ಲಿ ಆ ಸಮುದಾಯಗಳು ಆಚರಿಸುವ ಧರ್ಮ ಮತ್ತು ಪೂಜಿಸವ ದೈವ ಅಥವಾ ದೇವತೆಗಳ ಅಧ್ಯಯನವೂ ಮುಖ್ಯವಾಗಿರುವ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಶೈವ ಮತ್ತು ವೈಷ್ಣವ ಸಂಪ್ರದಾಯಿಗಳಾಗಿರುವ ಇವರು ಸರ್ವದೇವೋಪಾಸಕರಾಗಿದ್ದಾರೆ. ಹಿಂದೂಗಳು ಪೂಜಿಸುವ ಎಲ್ಲ ದೇವತೆಗಳನ್ನು ಪೂಜಿಸುತ್ತಾರೆ. ಇವರು ಪೂಜಿಸುವ ದೇವರುಗಳನ್ನು ಗ್ರಾಮ ದೇವತೆ, ಮನೆದೇವತೆ, ಕುಲದೇವತೆ ಹಾಗೂ ಇಷ್ಟದೇವತೆಗಳೆಂದು ವಿಂಗಡಿಸಿಕೊಳ್ಳಬಹುದು. ಎಲ್ಲಾ ಮಾನವ ಸಮಾಜದ ಧರ್ಮಗಳನ್ನು ಪಾಲಿಸುತ್ತಿರುವುದು ಸರ್ವೇಸಾಮಾನ್ಯ ಧರ್ಮರಹಿತ ಸಮಾಜ ಸಮಾಜವೆಂದೆನಿಸುವುದಿಲ್ಲ. ಧರ್ಮವಿಲ್ಲದ ಸಮಾಜ ತನ್ನ ಅಸ್ತಿತ್ವವನ್ನು ನೆಲೆಯನ್ನು ಬೇಗನೇ ಕಳೆದುಕೊಳ್ಳುತ್ತದೆ. ಒಂದು ಸಮಾಜವನ್ನು ಸುಸ್ಥಿತಿಯಲ್ಲಿಡಲು ಧರ್ಮ ಅತ್ಯವಶ್ಯಕ. ಪುರಾತನ ಕಾಲದಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಮಾನವನು ಧರ್ಮದ ಆಚರಣೆಯಲ್ಲಿ ಬಂದಿರುವುದು ಕಂಡುಬರುತ್ತದೆ. ಮಾನವಶಾಸ್ತ್ರಜ್ಞರು ಧರ್ಮವನ್ನು ಒಂದು ವಿಧಾನ ಮಾರ್ಗವಾಗಿ ಅನುಸರಿಸಿ ಅಧ್ಯಯನ ಮಾಡಿರುವರು. ಹಾಗೇ ಸಮಾಜಶಾಸ್ತ್ರಜ್ಞರು ಧರ್ಮವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿದ್ದಾರೆ.

ರಾಷ್ಟ್ರದ ಸಾಮಾಜಿಕ ಪ್ರಗತಿಯಲ್ಲಿ ಧಾರ್ಮಿಕ ಸಂಸ್ಥೆಗಳು ಮಹತ್ವದ ಪಾತ್ರ ನಿರ್ವಹಿಸುತ್ತವೆ. ಮಾನವ ಸಮಾಜ ಜೀವಿಯಾಗಿರುವುದರಿಂದ ಆತನು ಧಾರ್ಮಿಕ, ಭಾವನಾತ್ಮಕ ನಂಬಿಕೆಯುಳ್ಳವನು, ಅದರಂತೆ ಧರ್ಮವು ಮಾನವನ ಅವಿಭಾಜ್ಯ ಅಂಗವಾಗಿದೆ. ಧರ್ಮವು ಸಮಾಜಕ್ಕೆ ಅವಶ್ಯಕವಾಗಿದೆ.

ಪ್ರತಿಯೊಂದು ಸಮಾಜದಲ್ಲಿ ಧರ್ಮವು ಕಂಡುಬರುತ್ತದೆ. ಸಮಾಜ ಮತ್ತು ಧರ್ಮವು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ಒಂದಕ್ಕೊಂದು ಪೂರಕವಾಗಿರುವುದನ್ನು ಕಾಣುತ್ತೇವೆ. ಪ್ರಮುಖ ಧರ್ಮಗಳು ಜನ್ಮತಾಳಿ ಬೆಳೆದನಂತರ ನಶಿಸಿರುವುದರ ಉದಾಹರಣೆಗಳಿವೆ. ಹಾಗೆಯೇ ಕೆಲವು ಧರ್ಮಗಳು ಇಂದಿಗೂ ಸಹ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಲಿವೆ. ಧರ್ಮವು ಮಾನವನ ನಡುವಳಿಕೆಗಳನ್ನು ನಿಯಂತ್ರಿಸುವ ಸಾಧನವಾಗಿದೆ. ಇದು ಸಾಮಾನ್ಯವಾಗಿ ನಂಬಿಕೆಯ ಒಂದು ವ್ಯವಸ್ಥೆಯಾಗಿ ಗುರುತಿಸಲ್ಪಟ್ಟಿರುತ್ತದೆ. ಮತ್ತು ವೈಜ್ಞಾನಿಕವಾಗಿ ತರ್ಕಕ್ಕೆ ಒಳಪಟ್ಟ ಕಲ್ಪಿತ ಅಥವಾ ಊಹಿತ ವ್ಯವಸ್ಥೆಯಾಗಿದೆ. ಆದರೆ ಇದು ಅನಿಯಂತ್ರಣ ಸಾಧನವಾಗಿ ಮಾನವ ವರ್ತನೆ ನಿಯಂತ್ರಿಸುವ ಸಾಧನವು ಹೌದು. ಆದುದರಿಂದ ಇದು ಮಹತ್ವದ ಸಂಸ್ಥೆಯಾಗಿ ಮಾನವನ ನಡಾವಳಿಕೆಯನ್ನು ನಿಯಂತ್ರಿಸುವ ವ್ಯವಸ್ಥೆಯಾಗಿದೆ. ಧರ್ಮದ ಬಗ್ಗೆ ಅನೇಕ ಸಮಾಜ ಚಿಂತಕರು ವೈಜ್ಞಾನಿಕವಾಗಿ ಅಧ್ಯಯನ ನಡೆಸಿ ಧರ್ಮಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಉದಾಹರಣೆಗೆ ಡರ್ಖಿಂ, ವೇಬರ್, ಬಸವೇಶ್ವರ, ಇ.ಬಿ.ಟೈಲರ್, ಮ್ಯಾಕ್ಸ್ ಮುಲ್ಲರ್, ಇತ್ಯಾದಿ ಅನೇಕರ ಹೆಸರುಗಳ ಪಟ್ಟಿಯು ಹೆಚ್ಚುತ್ತ ಹೋಗುತ್ತದೆ. ಧರ್ಮವು ವ್ಯಕ್ತಿಗಳನ್ನು ಕ್ರಿಯಾತ್ಮಕ ಚಲನಶೀಲತೆಯನ್ನು ಹೇಗೆ ತೊಡಗಿಸುತ್ತದೆ ಎಂಬುದನ್ನು ಅಭ್ಯಸಿದ್ದಾರೆ.

ಮಾನವ ಅನುಭವ ಜೀವನಮಾರ್ಗ ಆತನ ಆಂತರಿಕ ಬಾಹ್ಯಶುದ್ಧಿ, ವರ್ತನೆ, ಇವುಗಳೆಲ್ಲವನ್ನೂ ರೂಪಿಸುವ ಸಾಧನವಾಗಿರುವುದನ್ನು ಅನೇಕ ಸಮಾಜ ಚಿಂತಕರು ಅಧ್ಯಯನದಿಂದ ಕಂಡುಕೊಂಡಿದ್ದಾರೆ. ಆದುದರಿಂದ ಆಧುನಿಕ ಔದ್ಯೋಗಿಕ ಸಮಾಜದಲ್ಲಿ ಧರ್ಮವು ಮಾನವನ್ನು ನಿಯಂತ್ರಿಸುವ ಕೊಂಡಿಯಾಗಿರುವುದನ್ನು ಬಲವಾಗಿ ನಂಬಿದ್ದಾರೆ. ಆರ್ಥಿಕ, ರಾಜಕೀಯ, ಭೌಗೋಳಿಕ, ಶೈಕ್ಷಣಿಕ, ಭಾವನಾತ್ಮಕ ಕ್ಷೇತ್ರಗಳ ಮೇಲೆ ಧರ್ಮವು ಪ್ರಭಾವ ಬೀರಿದೆ. ಮಾನವ ತನ್ನ ಹಲವಾರು ರಂಗಗಳಲ್ಲಿ ಸಾಧನೆ ಕಂಡುಕೊಳ್ಳಲು ಧರ್ಮವು ಬಹಳ ಉಪಯುಕ್ತವಾಗಿದೆ. ಸೈದ್ಧಾಂತಿಕ ವಿಚಾರಗಳನ್ನು ವೈಚಾರಿಕ ಬೆಳವಣಿಗೆ ಕಲಾತ್ಮಕ ಹಾಗೂ ಸಾಹಿತ್ಯ ಸಾಧನೆಗೆ ಧರ್ಮವು ಉಪಯುಕ್ತವಾಗಿದೆ.

ಧರ್ಮದ ಬಗ್ಗೆ ಅನೇಕ ಚಿಂತಕರು ತಮ್ಮದೇ ಆದ ವ್ಯಾಖ್ಯಾನವನ್ನು ನೀಡಿದ್ದಾರೆ. ಇ.ಬಿ.ಟೈಲರ್ (೧೮೭೧)ರವರ ಪ್ರಕಾರ 'ಮಾನವನ ಅಲೌಕಿಕ ಶಕ್ತಿಯಲ್ಲಿ ನಂಬಿಕೆಯೇ ಧರ್ಮವೆಂದು ವ್ಯಾಖ್ಯಾನಿಸಿದ್ದಾರೆ. ಮತ್ತೊಬ್ಬ ಸಮಾಜಶಾಸ್ತ್ರರಾದ ಎಮಿಲಿ ಡರ್ಖಿಂರವರ ಪ್ರಕಾರ 'ಪ್ರತ್ಯೇಕವಾಗಿರಿಸಿದ ಹಾಗೂ ನಿಷೇಧಿಸಲ್ಪಟ್ಟಿರುವ ಪವಿತ್ರ ವಸ್ತುಗಳಿಗೆ ಸಂಬಂಧಿಸಿದಂತೆ ಮಾನವನ ನಂಬುಗೆಗಳು ಹಾಗೂ ಆಚರಣೆಗಳ ಒಟ್ಟು ವ್ಯವಸ್ಥೆಯೇ ಧರ್ಮವಾಗಿದೆ'. ಅಲ್ಲದೆ ಮ್ಯಾಕ್ಸ್ ಮುಲ್ಲರ್ ಪ್ರಕಾರ 'ಅನಂತವಾದ ದಿವ್ಯ ಶಕ್ತಿಯನ್ನು ಗ್ರಹಿಸಲು ಮಾನವನಿಗೆ ಸಹಾಯಕವಾಗುವ ಆತನ ಪ್ರವೃತ್ತಿ ಅಥವಾ ಮನಃ ಶಕ್ತಿಯೇ ಧರ್ಮವಾಗಿದೆ' ಎಂದು ವ್ಯಾಖ್ಯಾನ ನೀಡಿದ್ದಾರೆ. ಒಟ್ಟಾರೆ ಇವೆಲ್ಲವನ್ನೂ ಪರಿಶೀಲಿಸಿದಾಗ ಧರ್ಮವು ಧಾರ್ಮಿಕ ಹಾಗೂ ಸಾಮಾಜಿಕ ಜೀವನಕ್ಕೆ ಒಂದು ವ್ಯವಸ್ಥಿತ ಜೀವನ ಕ್ರಮವನ್ನು ನೀಡಿ ಸಾಮಾಜಿಕ ಸಂಸ್ಥೆಯಾಗಿ ಬೆಳೆದಿದೆಯೆಂದು ಹೇಳಬಹುದು. ಧರ್ಮದ ಈ ಎಲ್ಲಾ ವ್ಯಾಖ್ಯೆನಗಳನ್ನು ನಾವು ಗಮನಿಸಿದಾಗ ಕ್ಷತ್ರಿಯ ಸಮುದಾಯವು ಸಹ ಇದರಿಂದ ಹೊರತಾಗಿಲ್ಲವೆಂದೆನಿಸುತ್ತದೆ. ಏಕೆಂದರೆ,

ಈ ಸಮುದಾಯವು ಕೂಡ ದೇವರು ಧರ್ಮ, ಸ್ವರ್ಗ, ನರಕ, ಪಾಪ, ಪುಣ್ಯಗಳನ್ನು ಅತಿಯಾಗಿ ನಂಬಿರುವ ಸಮುದಾಯವಾಗಿರುವುದು ಎಂದು ತಿಳಿದುಬರುತ್ತದೆ. ಈ ಸಮುದಾಯದ ಜನರು ತಮ್ಮ ದೈನಂದಿನ ಕೆಲಸ ಕಾರ್ಯಗಳನ್ನು ಮಾಡುವಾಗ ದೇವರನ್ನು ನೆನೆಯದೆ ಇರುವುದಿಲ್ಲ. ಮತ್ತು ಯಾವ ಶುಭಕಾರ್ಯದ ನೆರವೇರಿಸಿದರೆ, ತಮಗೆ ಮೋಕ್ಷ ಸಿದ್ಧಿಸುತ್ತದೆ ಎಂಬುದಾಗಿಯೂ ಸಹ ಗೊತ್ತಿದ್ದು, ವಿಶೇಷವಾದ ಸಂದರ್ಭಗಳಾದ ಮದುವೆ, ಮನೆಕಟ್ಟುವುದು, ಹೊಸದಾಗಿ, ಸಂಬಂಧ ಮಾಡುವುದು, ಮನೆಯಲ್ಲಿ ನಡೆಯುವ ಎಲ್ಲಾ ಶುಭಕಾರ್ಯಗಳನ್ನು ಪ್ರಾರಂಭಿಸುವುದಕ್ಕಿಂತ ಮುಂಚೆ ತಮ್ಮ ಆರಾಧ್ಯ ದೇವರಲ್ಲಿ ಹೋಗಿ ತಮ್ಮ ಅವಶ್ಯಕತೆಗಳ ಅನುಸಾರವಾಗಿ ಪೂಜೆ ಮಾಡಿ ದೇವರವರನ್ನು ಪಡೆಯುವ ರೂಢಿ ಇಂದಿಗೂ ಈ ಸಹ ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರ ಸಮುದಾಯದಲ್ಲಿ ಕಾಣಬಹುದು. ಅಲ್ಲದೆ ಅನಾರೋಗ್ಯ ಪೀಡತರಾಗಿದ್ದರು ಸಹ ಈ ದೈವದ ನಂಬಿಕೆಯ ಮೇಲೆ ಜೀವನ ನಡೆಸುವರು ಸಹ ಇದ್ದಾರೆ.

ಸಮುದಾಯದ ಜನರಲ್ಲಿ ಒಳ್ಳೆಯದು, ಕೆಟ್ಟದ್ದು, ಇವುಗಳನ್ನು ಬೇರ್ಪಡಿಸಿ ನೋಡುವ ಕಲೆಯೂ ಅವರಿಗೆ ಕರಗತವಾಗಿದೆ. ತಾವಾಗಲೀ ತಮ್ಮ ಜನಾಂಗವಾಗಲೀ ಆ ಧರ್ಮದಿಂದ ನಡೆದುಕೊಳ್ಳಲು ಬಯಸುವುದಿಲ್ಲ. ಅಷ್ಟೇ ಅಲ್ಲದೆ ಹಿಂದೂ ಧರ್ಮದ ಪರಮ ಆರಾಧಕರಾದ ನಾವು ಮಾಡುವ ಕೆಲಸ ಧರ್ಮಬದ್ಧವಾಗಿರಬೇಕೆಂದು ಬಯಸುತ್ತಾರೆ. ಈ ರೀತಿಯಾಗಿ ಮಾಡುವುದರಿಂದ ಮುಂದಿನ ಜನ್ಮದಲ್ಲಿ ಮತ್ತೆ ಮನುಷ್ಯನಾಗಿ ಹುಟ್ಟಬಹುದು ಎಂಬ ಪುನರ್ ಜನ್ಮದ ಭಾವನೆಯನ್ನು ವ್ಯಕ್ತಪಡಿಸುತ್ತಾರೆ. ಆಚಾರ–ವಿಚಾರಗಳನ್ನು ಚೆನ್ನಾಗಿ ಬಲ್ಲವರು ಉಳಿದ ಜಾತಿಗಳಂತೆ ತಮ್ಮಲ್ಲಿಯೂ ಸಹ ಧಾರ್ಮಿಕ ಸಂಘಟನೆ, ದೇವರು ಧರ್ಮ ಎಂಬ ವಿಶಾಲ ಮನೋಭಾವನೆ ಬೆಳೆಸಿಕೊಂಡಿರುವುದರ ಜೊತೆಗೆ ಅಧರ್ಮಿಗಳನ್ನು ಸಹಿಸುವುದಿಲ್ಲ. ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರ ಸಮುದಾಯದಲ್ಲಿ ನಡೆಯುವ ಪೂಜೆ ಪುನಸ್ಕಾರ ಹಬ್ಬ ಹರಿದಿನಗಳನ್ನು ನೋಡಿದಾಗ ಭಯ, ಭಕ್ತಿ ಶ್ರದ್ಧೆ ನಂಬಿಕೆ, ನಡೆನುಡಿ, ವಿನಯ ದೇವರಲ್ಲಿ ಅಚಲವಾದ ನಂಬಿಕೆ ಸಂಪ್ರದಾಯಗಳ ಬದ್ಧವಾಗಿ ನೋಡಬಹುದಾಗಿದೆ. ಇವರು ಸಕಲ ಜೀವಿಗಳಲ್ಲಿ ಒಳ್ಳೆಯ ನಡತೆ ಮತ್ತು ಸಂಸ್ಕಾರವನ್ನು ಕಲಿಸುವ ಏಕೈಕ ಮಾರ್ಗ ಎಂದು ಭಾವಿಸಿ ಅದರಂತೆ ನಡೆದುಕೊಳ್ಳುತ್ತಾರೆ. ಕ್ಷತ್ರಿಯರಲ್ಲಿ ಮೊದಮೊದಲು ಮಾತೃದೇವತೆಯ ಆರಾಧಕರಾಗಿದ್ದರು. ಕಾಲಾಂತರದಲ್ಲಿ ನಡೆದ ಬೆಳವಣಿಗೆಯಲ್ಲಿ ಇವರಲ್ಲಿ ಗಂಡು ದೇವರು ಮತ್ತು ಹೆಣ್ಣು ದೇವರ ಒಕ್ಕಲುವೆಂಬುದಾಗಿ ಆರಾಧನೆಯಲ್ಲಿ ತೊಡಗಿದ್ದಾರೆ.

ಇಂದಿನ ಭಾರತೀಯ ಸಂಸ್ಕೃತಿಯೆಂದರೆ, ದ್ರಾವಿಡ–ಆರ್ಯ ಸಂಸ್ಕೃತಿಗಳ ಮಿಶ್ರಣದ ಸಂಕೀರ್ಣ ಸಂಸ್ಕೃತಿಯೆನ್ನಬಹುದು. ಈ ಸಂಸ್ಕೃತಿಯನ್ನು ಪ್ರತಿನಿಧಿಸುವ ಅನಂತ ರೂಪ–ನಾಮಗಳಿಂದ ಕೂಡಿದ ಇಂದಿನ ದೇವ–ದೇವತೆಗಳ ಕಲ್ಪನೆಗೆ ಪುರಾಣೇತಿಹಾಸಗಳು ಆಧಾರವಾಗಿವೆ. ಮಾನವನ ಸೃಷ್ಟಿಗಳೆಂಬುದು ಸರ್ವವಿಧಿತ. ಪ್ರಕೃತಿಪ್ರಿಯರು ಮತ್ತು ಆರಾಧಕರು ಅವರು ಪ್ರತಿಯೊಂದನ್ನೂ ಪ್ರಕೃತಿಜನ್ಯವಾಗಿಯೇ ರೂಪಿಸಿಕೊಂಡಿದ್ದಾರೆ. ತಮಗೆ ಜನ್ಮಕೊಟ್ಟ, ಲಾಲಿಸಿ, ಪಾಲಿಸಿ, ಪೋಷಿಸಿದ 'ತಾಯಿ'ಯನ್ನೇ ದೇವರೆಂದು ಮೊದಲು ಗುರುತಿಸಿದರು. ಇದಕ್ಕೆ ಕಾರಣ ಆದಿಮಾನವ ಆಹಾರನ್ವೇಷ್ಣೆಯಾಗಿ ಬಹುಕಾಲ ಮನೆಯಿಂದ

ಹೊರಗುಳಿದು, ಅನೇಕ ಕ್ರೂರ ಮೃಗಗಳ ಬಾಯಿಗೆ ಸಿಕ್ಕಿ ಬಲಿಯಾಗಿ ಮನೆ ಸೇರದೆ ಮಾಯವಾಗಿ ಮನೆಯಲ್ಲಿದ್ದ ಮಗುವಿನ ಮೇಲೆ ಯಾವುದೇ ನೇರ ಪ್ರಭಾವ ಬೀರಲು ಸಾಧ್ಯವಾಗದೇ ಹೋದುದೇ ಆಗಿದೆ. ತಾಯಿ ಮಗುವನ್ನು ರಕ್ಷಿಸಿ ಪೋಷಿಸಿ, ಸದಾಕಾಲ ತನ್ನತೊಡೆಯ ಮೇಲಾಡಿಸಿ, ಮೊಲೆಯುಣಿಸಿ, ಅಪ್ಪಿ, ಮುದ್ದಾಡಿ, ವಾತ್ಸಲ್ಯದ ಅಮೃತವನ್ನು ಉಣಿಸಿದ್ದರಿಂದ 'ಮಗು' ತಾಯಿಯ ನೇರ ಪ್ರಭಾವಕ್ಕೆ ಸಿಗುವಂತಾಯಿತು. ಎಳೆಯ ವಯಸ್ಸಿನಲ್ಲಾದ ಈ ಪ್ರಭಾವದಿಂದ ಅಂದಿನ ಬೆಳೆದ ಯುವಕರಲ್ಲಿ ತಾಯಿಯ ಬಗ್ಗೆ ವಿಶೇಷ ಗೌರವಾದರಗಳು ಮೂಡಿ ನಿಂತವು. ತಾನು ತಂದೆಯಂತೆ ಆಹಾರ ಅನ್ವೇಷ್ಣೆಯಾಗಿ ಕುರಿಗಾಹಿಯಾಗಿ, ದನಗಾಹಿಯಾಗಿ ಹೊರಗೆ ಹೋದಾಗ ತನಗೆದುರಾದ ಪ್ರಾಕೃತಿಕ ಶಕ್ತಿಗಳು ತನಗಿಂತ ಬಲಿಷ್ಠವಾದವುಗಳೆಂಬುದನ್ನು ಗುರುತಿಸಿ ಅವುಗಳಿಗೆ ತಾಯಿಯ ಸ್ಥಾನವನ್ನು ನೀಡಿದನು. ಭಯಭಕ್ತಿಗಳಿಂದ ಪೂಜಿಸಿದನು. ಇದು ಆದಿಮಾನವ ದೇವ-ದೇವತೆಗಳ ಅವಿರ್ಭಾವಕ್ಕೆ ಮುಖ್ಯ ಕಾರಣ. ಈ ಕಲ್ಪನೆಯಲ್ಲಿ ಅತಿ ಪ್ರಾಚೀನವಾದ ದೇವತಾ ರೂಪ ಹೆಣ್ಣಿನದು, ಗಂಡು ದೇವತೆಗಳ ಅವಿರ್ಭಾವ ವೇದಕಾಲಗಳಿಂದೀಚಿನದು. ಅಂದರೆ, 'ಮಾತೃದೇವತೆ'ಯ ಕಲ್ಪನೆ ಪ್ರಾಗೈತಿಹಾಸಿಕ ಯುಗದಿಂದ ಲಭಿಸಿರುವಂತಹುದು.

ಗ್ರಾಮ ದೇವತೆಗಳ ಕಲ್ಪನೆ ಮತ್ತು ಬಲಿಯಾಚಾರ ದ್ರಾವಿಡರ ಕಲ್ಪನೆಯಿದೆ. ಒಂದು ಕುಟುಂಬವೇ ಒಂದು ಗ್ರಾಮ ಘಟಕವಾಗಿದೆ. ಸಂಸ್ಕೃತಿಯ ಪ್ರಾಥಮಿಕ ಹಂತದಿಂದ ಬೆಳೆದು ಹಲವು ಹತ್ತು ಕುಟುಂಬಗಳು ಒಂದು ಗ್ರಾಮವಾದ ಬೆಳವಣಿಗೆಯಿಂದ ಒಂದು ದೇವತೆ ಎನ್ನಿಸಿಕೊಂಡವಳು. ಆ ಗ್ರಾಮದ ದೇವತೆಯಾದಳು, ಆ ಕುಲದ ದೇವತೆಯಾದಳ, ಸಾಮಾಜಿಕ ವ್ಯವಸ್ಥೆ, ಹೆಚ್ಚು ಪ್ರಭಾವವನ್ನು ಬೀರಲಾರಂಭಿಸಿದಾಗ ಸಣ್ಣ ಸಣ್ಣ ಪ್ರಾಂತ್ಯಗಳನ್ನು ರೂಢಿಸಿಕೊಂಡು ಆರ್ಯರ ಆಕ್ರಮಣದಿಂದ ಘರ್ಷಣೆಗಳಾಗಿ ಆಯಾ ಗುಂಪುಗಳ ಗ್ರಾಮಗಳ ಭೌಗೋಳಿಕ ಗಡಿಗಳನ್ನು ನಿರ್ಧರಿಸಿಕೊಂಡಾಗ ಆ ಗಡಿಗಳನ್ನು ಕಾಯುವ ಗಡಿ ದೇವತೆಗಳಾದರು. ಹೀಗೆ ಬೆಳೆದಿರುವ ಗ್ರಾಮ ದೇವತೆಗಳಿಗೆ ಮುಂಡ ಸಂಸ್ಕೃತಿಯ ಮಾತೃದೇವತೆಯ ಕಲ್ಪನೆಯೇ ಮೂಲಾಧಾರವಾದುದು.

ಜಾನಪದದ ಮಾತೃದೇವಿಯ ಕಲ್ಪನೆಗೂ, ನಾವು ಆರಾಧಿಸುವ ಪೂಜಾ ವಿಧಾನಗಳಲ್ಲಿಯೂ ಶಿಷ್ಟ ಸ್ತ್ರೀ ದೇವತೆಯಾದ ದೇವಿ ಪೂಜೆಗೂ ಬಹಳಷ್ಟು ಸಮಾನಿಕೆಯುಂಟು ಮಾಂತ್ರಿಕರು ದೇವಿ, ಕಾಳಿಕದೇವಿ, ಚಂಡಿ, ಚಾಮುಂಡಿ ದುರ್ಗೆ, ಮಹಾಕಾಳಿ, ಭದ್ರಕಾಳಿ, ಮೊದಲಾದ ಹೆಸರುಗಳಿಂದ ಪೂಜಿಸುತ್ತಾರೆ. ತಂತ್ರಸಾರದಲ್ಲಿ 'ದೇವಿಪೂಜೆ' ಪರಮೋತ್ಕೃಷ್ಟವಾದುದೆಂದು ಹೇಳಿದೆ. ದೇವಿ ಪೂಜೆಯಲ್ಲಿಯೂ ದುರ್ಗಿ ಪೂಜೆ ವಿಶೇಷವಾದ ಮಾನ್ಯತೆಯನ್ನು ಪಡೆದುಕೊಂಡಿದೆ. ಮಾಂತ್ರಿಕರು ದುರ್ಗಿಪೂಜೆಯಾಗದ ಹೊರತು, ಯಾವ ದೇವತೆಯ ಪೂಜೆಯೂ ಸಂಪೂರ್ಣವಾಗುವುದಿಲ್ಲವೆಂದು ನಂಬುತ್ತಾರೆ. ದುರ್ಗಿಯು ಸರ್ವದೇವತಾ ಸಮನ್ವಯ ಸ್ವರೂಪದವಳು. ಇವಳನ್ನು ಪೂಜಿಸುವವರ ಸಕಲ ಪಾಪಗಳೂ ಪರಿಹಾರವಾಗಿ ಅಖಂಡ ಸುಖಸೌಭಾಗ್ಯಗಳು ಲಭಿಸುವುವು ಎಂಬುದು ಸಾಮಾನ್ಯ ನಂಬಿಕೆ, ಇವಳ ಆರಾಧಕರಿಗೆ ಜಾತಿ ಕುಲಬೇಧಗಳಿಲ್ಲ. ದುರ್ಗಿಯನ್ನು ಧೂಪದೀಪಾದಿಗಳಿಂದ ಪೂಜಿಸಿ ನೈವೇದ್ಯದಿಂದ ತೃಪ್ತಿಪಡಿಸುವ ಭಕ್ತನು ಮೂರುಲೋಕಗಳನ್ನು ತೃಪ್ತಿಪಡಿಸಿದಂತೆ ಎಂದು

ಹೇಳುತ್ತಾರೆ. ದೇವಿಯ ಸ್ವರೂಪವು ಉಗ್ರವಾಗಿ ಮತ್ತು ಸೌಮ್ಯದಿಂದ ಕೂಡಿ ಆಕರ್ಷಕವಾಗಿರುತ್ತದೆ. ಕಾಳೀಯೋತ್ಪತ್ತಿಯನ್ನು ಕುರಿತು ಮಾರ್ಕಂಡೇಯ ಪುರಾಣದಲ್ಲಿ ಸಾಕಷ್ಟು ದೀರ್ಘವಾದ ವಿವರಣೆಯಿದೆ. ಇವಳು ಆದಿಪರಾಶಕ್ತಿಯ ಕೋಪಿಷ್ಟ ಭ್ರೂಮಧ್ಯದಿಂದ ಉದಿಸಿದಳೆಂದು ಹೇಳಿದೆ. ಖಡ್ಗ ಪಾಶಾಂಕುಶಧಾರಣಳೂ ವ್ಯಾಘ್ರ ಚರ್ಮಾಂಬರಧಾರಿಣಿಯೂ ಮಾನವ ಕಪಾಲಹರ ಭೂಷಿತಳೂ ಭಯಂಕರ ವಚನಳೂ ಆದ ಈಕೆಯ ದರ್ಶನವೂ ಜನಸಾಮಾನ್ಯರಿಗೆ ಕಷ್ಟಸಾಧ್ಯ. ಕೋಪಾನಿಷ್ಟಳಾದ ಈಕೆಯ ಕಣ್ಣುಗಳೂ ಸದಾ ಅರುಣಾರುಣವಾಗಿಯೇ ಇರುತ್ತವೆ. ವಿಕಾರವಾದ ಉದ್ದನಾಲಿಗೆಯನ್ನು ಆಕಡೆ ಈಕಡೆ ಆಡಿಸುತ್ತಿರುತ್ತಾಳೆ. ಇವಳ ಗರ್ಜನೆ ದಶದಿಕ್ಕುಗಳಲ್ಲಿ ಪ್ರತಿಧ್ವನಿಸುತ್ತದೆ. ಇವಳನ್ನು ಸುಂದರಿಯನ್ನಾಗಿ ಶಾಂತಳನ್ನಾಗಿ ವಿಷ್ಣುಧರ್ಮೋತ್ತರ ಖಂಡದಲ್ಲಿ ಪ್ರಶಂಸಿಸಿದ್ದಾರೆ.

ಭಾರತದ ಪ್ರತಿ ಗ್ರಾಮದಲ್ಲಿ ನೆಲೆಸಿರುವ ಜಾನಪದದಿಂದ ರೂಢಿಗತವಾಗಿರುವ ಗ್ರಾಮ ದೇವತೆಗಳ ಹಲವಾರು ಮಾನಶಾಸ್ತ್ರಜ್ಞರು ವಿವಿಧ ರೀತಿಯಾಗಿ ಗುರುತಿಸಿದ್ದಾರೆ. ಗ್ರಾಮ ದೇವತೆಗಳ ಲಕ್ಷಣಗಳು ಶಿಷ್ಟ ಆರ್ಯ ದೇವತೆಗಳ ಲಕ್ಷಣಗಳಿಗೆ ವಿರೋಧವಾಗಿಯೂ ತಾಂತ್ರಿಕರ ದೇವಿ ಲಕ್ಷಣಗಳೊಡನೆ ಸಾಮ್ಯವಾಗಿಯೂ ಕಾಣಿಸುತ್ತವೆ. ತಾಂತ್ರಿಕರ ಪ್ರಜಾವಿಧಾನ ಮತ್ತು ಆಚಾರಗಳು ಜಾನಪದ ಮಾತೃದೇವತಾರಾಧನೆಯಿಂದ ರೂಢಿಸಲ್ಪಟ್ಟಿದೆ. ಚಿಂತಕ ಟೈಲರ್ ಅವರು ತಮ್ಮ Primitiue culture ಗ್ರಂಥದಲ್ಲಿ ಗ್ರಾಮದೇವತೆಗಳ ಲಕ್ಷಣಗಳನ್ನು ಗುರುತಿಸಿ ಪೂಜಾವಿಧಾನದ ಪ್ರಧಾನ ವಸ್ತುಗಳು ಮತ್ತು ಪೂಜಾ ವಿಧಾನದ ಆಚಾರ-ವಿಚಾರಗಳ ಬಗ್ಗೆ ತಿಳಿಸಿದ್ದಾರೆ.

ಕ್ಷತ್ರಿಯ ಸಮುದಾಯದ ಸಾಂಸ್ಕೃತಿಕ ಪರಿಚಯದಲ್ಲಿ ಧರ್ಮವು ಅತ್ಯಂತ ಪ್ರಾಚೀನ ಕಾಲದಿಂದಲೇ ಅಸ್ತಿತ್ವದಲ್ಲಿದೆ. ಈ ಧರ್ಮ ಯುಗಧರ್ಮಕ್ಕನುಗುಣವಾಗಿ ಹೊಸ ರೂಪವನ್ನು ಹೊಸ ತತ್ವ ನಿಯಮಗಳನ್ನು ಹೊಂದಿ ತನ್ನ ಇರುವಿಕೆಯನ್ನು ಸ್ಥಿರಪಡಿಸಿಕೊಂಡಿದೆ. ಕ್ಷತ್ರಿಯ ಸಮುದಾಯವು ಬೇರೆ ಬೇರೆ ಜಾತಿಯ ಧರ್ಮವನ್ನು ಅಳವಡಿಸಿಕೊಂಡಿದ್ದಾರೆ. ಆದ್ದರಿಂದ ಇವರು ಬಹುರೂಪಿಯ ದೇವ-ದೇವತೆಗಳನ್ನು ಪೂಜಿಸುತ್ತಾರೆ. ಆರಾಧಿಸುತ್ತಾರೆ ತಿರುಪತಿ, ವೆಂಕಟರಮಣ, ರಂಗನಾಥಸ್ವಾಮಿ, ಆಂಜನೇಯ, (ಎಲ್ಲಮ್ಮ) ರೇಣುಕಾದೇವಿ, ದೂಳೀಲಿಂಗೇಶ್ವರ, ಶನೇಶ್ವರ, ವಿನಾಯಕ, ಅನ್ನಪೂರ್ಣೇಶ್ವರಿ, ಮೂಕಾಂಬಿಕಾ, ಚಾಮುಂಡಿ ಚಾಮುಂಡಿಶ್ವರಿ, ಶ್ರೀಮಂಜುನಾಥ, ಹಾಗೂ ತಮ್ಮ ಗ್ರಾಮದಲ್ಲಿ ಬರುವ ಗ್ರಾಮ ದೇವತೆಗಳನ್ನು ಚೌಡಿ, ಭೂತ, ಇವೇ ಮುಂತಾದ ದೇವ-ದೇವತೆಗಳ ಆರಾಧನೆ ಉಪಾಸನೆಯನ್ನು ಶ್ರದ್ಧಾಭಕ್ತಿಪೂರಕ ನಂಬಿ ಪೂಜಿಸುತ್ತಾರೆ.

ಅನೇಕ ದೇವತೆಗಳಿಗೆ ಸಸ್ಯಹಾರದ ಭಕ್ಷಣ ಮಾಡಿ ಪೂಜಿಸಿ ನೈವೇದ್ಯ ಮಾಡಿದರೆ, ಮತ್ತೆ ಕೆಲವು ದೇವ-ದೇವತೆಗಳಿಗೆ ಕುರಿ ಕೋಳಿಗಳನ್ನು ಬಲಿಕೊಟ್ಟಿ ಅವುಗಳನ್ನು ಶಾಂತಪಡಿಸಿ ಮಾಂಸ ಭಕ್ಷ್ಯ ಮಾಡುತ್ತಾರೆ. ತಮ್ಮ ಪೂರ್ವಿಕರು ನಂಬಿಕೆ ಇಟ್ಟು ದೇವರಗಳನ್ನು ಅಂದರೆ, ಕುಲದೇವರನ್ನು ವಿಶೇಷವಾಗಿ ಪೂಜೆ ಸಲ್ಲಿಸುತ್ತಾರೆ. ಹಾಗೂ ಕೆಲವರು ಮಾಟ ಮಂತ್ರ ಮುಂತಾದ ಮೂಢನಂಬಿಕೆಗಳನ್ನು ನಂಬುತ್ತಾರೆ. ಈ ರೀತಿಯಾಗಿ ಕ್ಷತ್ರಿಯ ಸಮುದಾಯದವರು ಧರ್ಮಾಚರಣೆಯನ್ನು ಆಚರಿಸುತ್ತಾರೆ. ಹಿಂದೂ ಧರ್ಮಕ್ಕೆ ತಮ್ಮದೇ ಆದ ಆಚಾರ-ವಿಚಾರಗಳಿಂದ ಮಹತ್ವ ನೀಡಿದ್ದಾರೆ. ಕೆಲವು ಗ್ರಾಮದಲ್ಲಿ

ವಾಸಿಸುವ ಕ್ಷತ್ರಿಯರು ತಮ್ಮ ಜಾತಿಯ ಜೊತೆಯಲ್ಲಿ ಹಿಂದೂ ಎಂದು ಸೇರಿಸಿಕೊಂಡು ಹಿಂದೂ ಕ್ಷತ್ರಿಯ ಎಂದು ಗುರುತಿಸಿಕೊಂಡಿದ್ದಾರೆ.

ಕ್ಷತ್ರಿಯ ಸಮುದಾಯದವರು ಯಾವುದೇ ಧಾರ್ಮಿಕತೆಯ ಆಚರಣೆಯನ್ನು ಎಲ್ಲ ಸಮುದಾಯವರೊಡನೆ ಕೂಡಿ ಆಚರಿಸುತ್ತಾರೆ. ಗ್ರಾಮಗಳಲ್ಲಿ ನಡೆಯುವ ಹಬ್ಬ-ಹರಿದಿನಗಳನ್ನು ಜಾತ್ರೆ-ಉತ್ಸವಗಳನ್ನು ಎಲ್ಲಾ ಸಮುದಾಯದವರೊಡನೆ ಕೂಡಿ ಆಚರಿಸುತ್ತಾರೆ. ಅಲ್ಲದೆ ಯಾವುದೇ ಕುಟುಂಬದಲ್ಲಿ ಮರಣ, ಜನನ, ಸಂಭವಿಸಿದರೂ ಅಲ್ಲಿ ಮುಖ್ಯವಾಗಿ ಕ್ಷತ್ರಿಯ ಸಮುದಾಯವರು ಮಾತ್ರ ಮಡಿ ಮೈಲಿಗೆ ನಿಯಮಗಳನ್ನು ಆಚಾರ-ವಿಚಾರಗಳನ್ನು ಆಚರಿಸುತ್ತಾರೆ. ಇತರೆ ಹೀನಾ ಕೃತ್ಯಗಳು ಜರುಗಿದರೆ, ತಮ್ಮ ಸಮಾಜದ ಹಿರಿಯರು ಹಾಗೂ ಇತರೆ ಸಮುದಾಯವರು ಸೇರಿಕೊಂಡು ಬಗೆಹರಿಸಿಕೊಳ್ಳುತ್ತಾರೆ. ಹೀಗೆ ಧಾರ್ಮಿಕವಾಗಿ ಯಾವುದೇ ಕಾರ್ಯಗಳನ್ನು ಇಡೀ ಊರಿನ ಸಮುದಾಯವೇ ಒಂದುಗುಂಪಾಗಿ ಅಥವಾ ಒಂದು ಸಮಾಜ ಎನ್ನುವ ಭಾವನೆಯಲ್ಲಿ ಆಚರಿಸುತ್ತಾರೆ. ಇಲ್ಲಿ ಕ್ಷತ್ರಿಯ ಸಮುದಾಯವು ಹಿಂದೂ ಧರ್ಮವನ್ನಲದೆ ಇತರೆ ಭಾರತದಲ್ಲಿರುವ ಯಾವುದೆ ಧರ್ಮವನ್ನು ಅನುಸರಿಸಿರುವುದು, ಕ್ಷೇತ್ರಾಧ್ಯಯನದಿಂದ ಕಂಡುಬರುತ್ತದೆ.

**ಆಧಾರ ಸಾಹಿತ್ಯಗಳು**


ಅಂಬಳಿಕೆ ಹಿರಿಯಣ್ಣ, *ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ಕನ್ನಡ ವಿಶ್ವವಿದ್ಯಾಲಯ, *ವಿಷಯ ವಿಶ್ವಕೋಶ-೩*, ಧರ್ಮ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಗಂಗಾಧರ ದೈವಜ್ಞ, *ಬುಡಕಟ್ಟು ಸಮಾಜ, ಹುಟ್ಟು ಸಾವಿನ ನಡುವೆ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ನಾಗರಾಜು ಎಂ ಹೆಚ್, *ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ*, ಸ ಪ ಮೂ ಕಾಲೇಜ್ ಬಿಳಿಗೆರೆ, ತಿಪಟೂರು, ೨೦೦೩.

ಪುಟ್ಟಪ್ಪ ಕೆ ವಿ (ಪ್ರಸಂ), *ಯುಗಯಾತ್ರೀ ಭಾರತೀಯ ಸಂಸ್ಕೃತಿ, ಸಂಪುಟ-೧*, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦.

ಪುಟ್ಟಪ್ಪ ಕೆ ವಿ (ಪ್ರಸಂ), *ಯುಗಯಾತ್ರೀ ಭಾರತೀಯ ಸಂಸ್ಕೃತಿ, ಸಂಪುಟ-೨*, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦.

ಬೋರಲಿಂಗಯ್ಯ ಹಿ ಚಿ, *ದಾಸಪ್ಪ ಜೋಗಪ್ಪ*, ಕುವೆಂಪು ಶತಮಾನೋತ್ಸವ ಮಾಲಿಕೆ, ೨೦೦೪.

ಮಲ್ಲಿಕಾರ್ಜುನ ಕೆ ಎಂ, *ಕಾಡುಗೊಲ್ಲರ ಜನಪದ ಕಾವ್ಯಗಳಲ್ಲಿ ಸಾಂಸ್ಕೃತಿಕ ಸಂಘರ್ಷ*, ಅಪ್ರ.

ಶಿವರಾಮಯ್ಯ ಬಿ, ಸೋಮನಾಥ ಕೆ, ನಾರಾಯಣ ಪಿ ಕೆ, *ರಾಮ ಕ್ಷತ್ರಿಯ ಕುಲೋತ್ಪತ್ತಿ*, ಪ್ರಕಾಶಕರು, ಕಾಸರಗೋಡು, ೧೯೪೯.

ಶಂಬಾ ಜೋಶಿ, *ಕರ್ನಾಟ-ಸಂಸ್ಕೃತಿ, ಸಂಪುಟ-೩*, ಮಲ್ಲೇಪುರಂ ಜಿ ವೆಂಕಟೇಶ, (ಸಂ), ಕನ್ನಡ ಪುಸ್ತಕ ಪ್ರಾಧಿಕಾರ ಚಾಮರಾಜಪೇಟೆ, ಬೆಂಗಳೂರು, ೧೯೯೯.

ಸಣ್ಣಪಾಪಯ್ಯ, *ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು*, ಬಂಟಾರ ಪ್ರಕಾಶನ ಮಸ್ಕಿ, ೨೦೧೦.

ಸಣ್ಣರಾಮ. *ಲಂಬಾಣಿ ಸಂಸ್ಕೃತಿ.* ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೯.

ಸುರೇಶ ನಾರಾಯಣ ನಾಯ್ಕ, *ರಾಮ ಕ್ಷತ್ರಿಯ ಸಮುದಾಯದ ಸಂಸ್ಕೃತಿ*, ಸುವರ್ಣ ಪ್ರಕಾಶನ, ಹೊನ್ನಾವರ, ೨೦೧೧.

ಸೂರ್ಯನಾಥ ಯು ಕಾಮತ್ (ಮುಸಂ), *ಕರ್ನಾಟಕ ರಾಜ್ಯ ಗ್ಯಾಝೆಟಿಯರ್ ಭಾಗ-೧*, ಬೆಂಗಳೂರು, ಕರ್ನಾಟಕ ರಾಜ್ಯ ಸರ್ಕಾರ, ೧೯೮೪.

# ಅಧ್ಯಾಯ: ಆರು

# ಜಾತಿ ವ್ಯವಸ್ಥೆಯ ಚೌಕಟ್ಟಿನಲ್ಲಿ ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ರ ಸಮುದಾಯ

## ಅಧ್ಯಾಯ: ಆರು

## ಜಾತಿ ವ್ಯವಸ್ಥೆಯ ಚೌಕಟ್ಟಿನಲ್ಲಿ ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ರ ಸಮುದಾಯ

### ಪೀಠಿಕೆ

ಭಾರತೀಯ ಸಮಾಜದ ವಾಸ್ತವಿಕತೆಗಳಲ್ಲಿ ಜಾತಿಯು ಪ್ರಮುಖವಾದ ಅಧ್ಯಯನ ವಿಷಯವಾಗಿದೆ ಎಂಬುದನ್ನು ಸಮಾಜಶಾಸ್ತ್ರೀಯ ಚಿಂತನಾ ಜಗತ್ತು ಪ್ರತಿಪಾದಿಸುತ್ತದೆ. ಜಾತಿ ಎಂಬುದು ಸಮಾಜಶಾಸ್ತ್ರದ ಅಧ್ಯಯನಕ್ಕೆ ಸೀಮಿತವಾಗಿರದೆ ಜನಾಂಗೀಯ ಅಧ್ಯಯನ, ಮಾನವಶಾಸ್ತ್ರ ಬುಡಕಟ್ಟು ಅಧ್ಯಯನ ತಮ್ಮದೇ ಆದ ನೆಲೆಯನ್ನು ಜಾತಿಯನ್ನು ಕುರಿತಂತೆ ಅಧ್ಯಯನ ನಡೆಸಿವೆ. ಈ ಎಲ್ಲಾ ಅಧ್ಯಯನಗಳ ಹಿನ್ನಲೆಯಲ್ಲಿ ಗ್ರಹಿಸುವುದಾದರೆ, ಭಾರತದಲ್ಲಿನ ಜಾತಿಯ ಕುರಿತಾದ ಅಧ್ಯಯನವು ಬ್ರಿಟೀಷರು ಬರುವುದಕ್ಕಿಂತ ಮುಂಚೆಯೇ ತನ್ನ ವಿಸ್ತೃತ ರೂಪವಾದ ಇತಿಹಾಸವನ್ನು ತನ್ನದಾಗಿಸಿಕೊಂಡಿದೆ. ಸಂಪ್ರದಾಯ ಕಾಲದ ಜಾತಿ ವ್ಯವಸ್ಥೆ ಮತ್ತು ವರ್ಣವ್ಯವಸ್ಥೆಯಲ್ಲಿರುವ ಶ್ರೇಣಿಕೃತ ಪದ್ಧತಿ ಪೌರತ್ಯ ವಾದಿಗಳ ಅಂಶವಲ್ಲ, ಇದು ಪಾಶ್ಚಾತ್ಯರು ತಮ್ಮ ಒಂದು ಸಾಮಾಜಿಕ ಚೌಕಟ್ಟಿನಲ್ಲಿ ಪೌರತ್ಯವಾದಿಗಳ ಅದರಲ್ಲಿಯೂ ಭಾರತೀಯ ಸಮಾಜ ಮತ್ತು ಜಾತಿ ವ್ಯವಸ್ಥೆಯನ್ನು ನೋಡಿದ್ದಾರೆ. ಅನೇಕ ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು ತಮ್ಮ ಸಿದ್ಧಾಂತಗಳನ್ನು ಜಾತಿ ವ್ಯವಸ್ಥೆಯ ಬಗ್ಗೆ ಪ್ರತಿಪಾದಿಸಿದ್ದಾರೆ. ಉದಾಹರಣೆಗೆ ದುಮೋ ದೀಪಾಂಕರ್ ಗುಪ್ತಾ ಎಂ.ಎನ್.ಶ್ರೀನಿವಾಸ್ ಸೆಲೆಸ್ಟಿನ್ ಬ್ಯೂಗಲ್, ಸರ್ ಹರ್ಬರ್ಟ್ ರಿಸ್ಲೆ, ಜೆ ಹೆಚ್ ಹಟ್ಟನ್, ನಿಕೋಲಾಸ್ ಬಿಡರ್ಕ್ಸ್, ಆ್ಯಂಡ್ರೆ ಬಿಟೈಲ್ ಮುಂತಾದವರು.

### ೬.೧. ಜಾತಿ ವ್ಯವಸ್ಥೆಯಲ್ಲಿ ಕ್ಷತ್ರಿಯರು

ಇಂದಿನ ಭಾರತೀಯ ಸಂಸ್ಕೃತಿ ಹಲವಾರು ಸಮುದಾಯಗಳ ಮತ್ತು ಯುಗಗಳ ಸಾಮೂಹಿಕ ಕೊಡುಗೆ, ನಾವು ಇಂದು ಯಾವುದನ್ನು ಭಾರತೀಯ ಸಂಸ್ಕೃತಿ ಎಂದು ಹೆಸರಿಸುತ್ತಿದ್ದೇವೆಯೋ ಅದು ವಾಸ್ತವಾಗಿ ವಿವಿಧ ಸಮುದಾಯಗಳ ಕೊಡುಗೆಗಳಿಂದ ರೂಪುಗೊಂಡು ಅರಳಿ ನಿಂತಿರುವಂಥದು. 'ಭಾರತ ವಿವಿಧ ಜನಸಮುದಾಯಗಳ ಹಾಗೂ ಅವರ ಆಚಾರ–ವಿಚಾರಗಳ ಸಂಗ್ರಹಾಲಯವಾಗಿ

ಜಿಟ್ಟಿವೆ, ಹಾಗೂ ಅದರ ಸಂಸ್ಕೃತಿ ಅನೇಕ ಸಂಸ್ಕೃತಿಗಳ ಹಾಗೂ ಅನೇಕ ಸಮುದಾಯಗಳ ಸಾಮಾಜಿಕ ವೈಶಿಷ್ಟ್ಯಗಳನ್ನು ಸಮಿಶ್ರಣವಾಗಿದೆ. ಇಂದು ಆ ಎಲ್ಲ ಪರಸ್ಪರ ವಿರುದ್ಧವಾದ ವೈಶಿಷ್ಟ್ಯಗಳೂ ಭಾರತೀಯ ಸಂಸ್ಕೃತಿಯ ರಸಾಯನಕಲಶದಲ್ಲಿ ಸಮರಸವಾಗಿ ಬೆರೆತು ಒಂದಾಗಿಟ್ಟವೆ. ಹಾಗೂ ಅದರದ್ದೇ ಆಗಿಬಿಟ್ಟವೆ' *(ಭಗವತ್ ಶರಣ ಉಪಾಧ್ಯಾಯ, ಪ್ರಧಾನ್ ಗುರುದತ್ತ, (ಕಅ), ೨೦೧೪, ಪುಟ-೭೩.)*ವಿಶಿಷ್ಟ ಸಮುದಾಯವೊಂದರ ರಕ್ತ ಶುದ್ಧತೆಯ ವಿಚಾರ ಅಸತ್ಯವೂ, ಅರ್ಥರಹಿತವೂ ಆಗಿಬಿಟ್ಟಿರುವಂತೆ ವಿಶಿಷ್ಟ ದೇಶವೊಂದರ ಸಾಂಸ್ಕೃತಿಕ ಪರಿಶುದ್ಧತೆಯ ವಿಚಾರವೂ ಅಸತ್ಯವಾಗಿ, ಅರ್ಥರಹಿತವಾಗಿ ಪರಿಣಮಿಸಿದೆ. ವಿಶಿಷ್ಟ ಪ್ರದೇಶವೊಂದರಲ್ಲಿನ ಸಂಸ್ಕೃತಿ ಖಂಡಿತವಾಗಿಯೂ ಸಾಮೂಹಿಕ ಕೊಡುಗೆಯಾಗಿರುತ್ತದೆ. ಹಾಗೂ ಅದನ್ನು ರೂಪಿಸುವ ಶಕ್ತಿಗಳು ಬಹುಸಂಖ್ಯಾತವಾಗಿಯೂ ಪರಸ್ಪರ ವಿರುದ್ಧ ಸ್ವರೂಪದವೂ ಆಗಿರುತ್ತವೆ. ಶತಶತಮಾನಗಳ ಕೊಳು-ಕೊಡೆಗಳಿಂದ ಹಾಗೂ ಸಮುದಾಯಗಳ ಸಮ್ಮಿಶ್ರಣದಿಂದ ಸಂಸ್ಕೃತಿ ರೂಪುದಳೆಯುತ್ತದೆ.

ಭಾರತ ಈ ಬಗೆಯ ವಿವಿಧ ಜನಸಮುದಾಯಗಳ ಸಂಗಮದ ಹಾಗೂ ಸಮ್ಮಿಶ್ರಣದ ಅಪೂರ್ವ ಕ್ಷೇತ್ರವಾಗಿಬಿಟ್ಟಿದೆ. ಇಲ್ಲಿ ಹಲವಾರು ಶಕ್ತಿಗಳು ಪರಸ್ಪರ ಸೆಣಸಿವೆ. ಒಂದರೊಡನೊಂದು ಹಿತಮಿತವಾಗಿ ಬೆರೆತುಕೊಂಡೂ ಇವೆ. ಇದೊಂದು ಸತತ ಪ್ರಕ್ರಿಯೆಯೇ ಆಗಿಬಿಟ್ಟಿದೆ. ಭಾರತದ ಗಡಿಗಳಲ್ಲಿ ವಿದೇಶೀಯರ ಆಕ್ರಮಣಕಾರಿ ಚಟುವಟಿಕೆಗಳು ಕಂಡುಬಂದಾಗಲೆಲ್ಲ ಅಂದಂದಿನ ಭಾರತೀಯರು ರೋಷಾವೇಶದ ಪ್ರತಿಕ್ರಿಯೆಯನ್ನು ತೋರಿದ್ದಾರೆ, ಆ ಬಳಿಕ ಹೋರಾಟವೂ ನಡೆಯಿತು. ಕೊನೆಗೆ ಒಂದು ಬಗೆಯ ಸಾಮುದಾಯಿಕ ಸಮನ್ವಯವೂ ಏರ್ಪಟ್ಟಿತು. ಹೋರಾಟಕ್ಕೆ ಇಳಿದಿದ್ದ ಎರಡೂ ಪಕ್ಷಗಳ ವೈಶಿಷ್ಟ್ಯಗಳು ಒಂದುಗೂಡಿಬಿಟ್ಟವು. ಹೊಸ ಸಂಸ್ಕೃತಿಯ ರೂಪರೇಷೆಗಳು ಮೂಡಿಬಂದವು. ವಿಕಾಸಕ್ಕೆ ಪ್ರಾಣಸ್ವರೂಪವಾಗಿದ್ದ ಎರಡು ವಿರುದ್ಧ ಶಕ್ತಿಗಳ ಸಂಘರ್ಷಾತ್ಮಕ ಏಕತೆ ಇದಾಗಿತ್ತು. ಇದು ಸಾಂಸ್ಕೃತಿಕ ದ್ವಂದ್ವವನ್ನು ಚರಿತಾರ್ಥಗೊಳಿಸಿತ್ತು, ಹೊಸ ಸಮುದಾಯಗಳು ಆಗಮಿಸಿದುವು, ಅವುಗಳು ಪರಸ್ಪರ ಹೋರಾಡಿದುವು. ಅವುಗಳ ರಕ್ತಮಿಶ್ರಣದಿಂದ ಮೂರನೆಯ ಇನ್ನೊಂದು ಸಮುದಾಯ ತಲೆಯೆತ್ತಿತ್ತು. 'ಒಂದು ಇನ್ನೊಂದರ ಸಂಸ್ಕೃತಿಯ ಮೇಲೆ ತಿಳಿದೋ ತಿಳಿಯದೆಯೋ ಆಳವಾದ ಸಂಸ್ಕೃತಿಯ ಮುದ್ರೆಯನ್ನು ಒತ್ತುತ್ತಾಹೋಯಿತು. ತಿಳಿದೋ-ತಿಳಿಯದೆಯೋ ಒಂದು ಇನ್ನೊಂದರ ಪ್ರಭಾವವನ್ನು ಸ್ವೀಕರಿಸುತ್ತ ನಡೆಯಿತು. ಈ ಕೊಳುಕೊಡೆಯ ಫಲವಾಗಿ ಭಾರತದ ಕರ್ನಾಟಕದಲ್ಲಿ ತನ್ನದೇ ಆದ ಸಂಸ್ಕೃತಿ ರೂಪುದಳೆಯತೊಡಗಿತು. ಆಗಮನ-ಹೋರಾಟ-ನಿರ್ಮಾಣ, ಇವು ನಮ್ಮ ಸಂಸ್ಕೃತಿಯ ಮೂರು ಆಧಾರ ಪ್ರಾಯವಾದ ನೆಲೆಗಳು' *(ಅದೇ, ಪುಟ-೭೪,).*

'ಸಿಂಧೂ ತೀರದ ಸಂಸ್ಕೃತಿಯ ಬಹುಭಾಗವನ್ನು ಈ ಆರ್ಯ ಅಪರಣಕಾರರು ತಮ್ಮ ಸಂಸ್ಕೃತಿಗೆ ಸೇರಿಸಿಕೊಂಡುಬಿಟ್ಟರು. ಋಗ್ವೇದ ಕಾಲದಿಂದ ಅಥರ್ವವೇದ ಕಾಲದ ಹತ್ತಿರ ಹತ್ತಿರಕ್ಕೆ ಬಂದತೆ ಈ ಸಮ್ಮಿಶ್ರಣ ಸ್ಪಷ್ಟವಾಗಿ ಗೋಚರಿಸತೊಡಗಿತು. ಋಗ್ವೇದ ಕಾಲದ ನಾಗರಿಕತೆಗಿಂತ ಅಥರ್ವವೇದ ಕಾಲದ ನಾಗರಿಕತೆ ಹೆಚ್ಚು ಸಮ್ಮಿಶ್ರಿತ ಸ್ವರೂಪದಾಗಿತ್ತು. ಹಾಗೂ ಸಾಕಷ್ಟು ಭಿನ್ನವಾಗಿತ್ತು. ಈ ಎರಡು ಸ್ವತಂತ್ರ ಆರ್ಯ-ಯುಗಗಳ ನಡುವೆ ಸಿಂಧೂ ತೀರದ ನಾಗರಿಕತೆಯ ಸುಸ್ಪಷ್ಟವಾದ ಹಾಗೂ

ಅನಿವಾರ್ಯವಾದ ಕೊಂಡಿ ಇತ್ತು. ಹಿಂದೊಮ್ಮೆ ಆರ್ಯರು ಯಾರನ್ನು 'ಕೃಷ್ಣಾ' (ಕಪ್ಪಗಿರುವವರು), 'ಅನಾಸಾಃ' (ಮೂಗಿಲ್ಲದವರು), 'ಮೃಧ್ರವಾಚಾಃ' (ಒರಟು ಮಾತನ್ನಾಡುವವರು), 'ಅದೇವಯುಃ' (ಅಧಾರ್ಮಿಕರು), 'ಅಯಜ್ವನ್ಃ' (ಯಜ್ಞಯಾಗಾದಿಗಳನ್ನು ಮಾಡದವರು), 'ಶಿಶ್ನದೇವಾಃ' (ಲಿಂಗ ಪೂಜಕರು), 'ದಾಸಾಃ' (ಗುಲಾಮರು), 'ದಸ್ಯುಃ'(ಪಾಪಕರ್ಮಿಗಳು) ಎಂದು ಹೆಸರಿಸಿದ್ದಾರೋ ಅವರನ್ನೇ ಈಗ ತಮ್ಮ ಸಾಮಾಜಿಕ ಅಂತಸ್ತಿಗೆ ಆಧಾರವಾಗಿಸಿಕೊಂಡರು. ಈ ಅನಾರ್ಯರ ಸಮ್ಮಿಶ್ರಣದಿಂದಲೇ ಅವರ ವರ್ಣವ್ಯವಸ್ಥೆಯ ತೀರ ಕೆಳಗಿನ ಹಂತ. ಅಂದರೆ, ಶೂದ್ರರ ಹಂತ–ರೂಪುಗೊಂಡಿತು. ವರ್ಣಗಳ ಉನ್ನತ ಮತ್ತು ನಿಮ್ನ ಸ್ಥಾನಮಾನಗಳು ಸಾಪೇಕ್ಷ ಸೇವೆಗಳನ್ನೇ ಅವಲಂಬಿಸಿಕೊಂಡಿದ್ದುವು. ಇದರ ಪರಿಣಾಮವಾಗಿ ಗೆದ್ದ ಶತ್ರುಗಳಿಗೆ ಸೂಕ್ತವಾದ ಸ್ಥಾನಮಾನಗಳು ದೊರೆತವು' *(ಅದೇ, ಪುಟ–೭೫).*

ಅನಾರ್ಯರ ಸಂಪ್ರದಾಯ ಆಚರಣೆಗಳು ಆರ್ಯರ ನಂಬಿಕೆಗಳ ಕೋಟೆಯ ಮೇಲೆ ದಾಳಿ ಮಾಡಿದವು. ಯಾವ ತಂತ್ರ–ಮಂತ್ರ–ಮಾಟ, ಭೂತೋಚ್ಚಾಟನೆ, ಇಂದ್ರಜಾಲ, ಮಹೇಂದ್ರ ಜಾಲಾದಿಗಳನ್ನು ಅವರು ಈ ಮೊದಲು ನಿಕೃಷ್ಟವಾದುವೆಂದು ಘೋಷಿಸಿದ್ದರೋ, ಅವೇ ಅವರ ಆಚಾರ–ವಿಚಾರ–ವಿಶ್ವಾಸಗಳ ಅಂಗವಾಗಿ ಬಿಟ್ಟವು. ಆರ್ಯರ ಪ್ರಕೃತಿ–ದೇವತೆಗಳ ಸಮುದಾಯವೂ ಈ ಅನಾರ್ಯ ಪ್ರಭಾವಕ್ಕೆ ಹೊರತಾಗಿ ಉಳಿಯಲಾರದೆ ಹೋಯಿತು. ಆ ಸಮುದಾಯಕ್ಕೆ ಅನೇಕ ಹೊಸ ಹೊಸ ದೇವಿ–ದೇವತೆಗಳು ಬಂದು ಸೇರಿಕೊಂಡವು. ಇವು ಭಾರತೀಯವೂ ಅವೈದಿಕವೂ ಆಗಿದ್ದುವೆಂಬುದರಲ್ಲಿ ಅನುಮಾನವೇನೂ ಇಲ್ಲ.

ಇಂಡೋ–ಯೂರೋಪಿಯನ್ ಅಥವಾ ಭಾರತೀಯ ಐರೋಪ್ಯ ನಾಗರಿಕತೆ ಬಹಳ ಕಾಲದವರೆಗೆ ಗ್ರಾಮ ಸ್ವರೂಪದ್ದಾಗಿತ್ತು. ಮತ್ತು ಕೃಷಿ ಪ್ರಧಾನವಾದುದಾಗಿತ್ತು. ಈ ಆರ್ಯರು ಮುಕ್ತ ಆಕಾಶದ ಕೆಳಗೆ ನಡೆಸುತ್ತಿದ್ದ ಜೀವನ ಶಕ್ತಿ ಪೂರ್ಣವೂ ಉದಾತ್ತವೂ ಪೌರಷಯುಕ್ತವೂ ಆಗಿರುತ್ತಿತ್ತು. ಕೃಷಿ ಕಾರ್ಯಗಳು, ಪಶುಪಾಲನೆ, ರಥಸ್ಪರ್ಧೆ, ಇವು ಅವರ ಕೆಲವು ಉದ್ಯೋಗಗಳು ಮತ್ತು ಮನರಂಜನ ವಿಧಾನಗಳು ಆಗಿದ್ದುವು. ಅವರ ಬಾಳಿನ ಎರಡನೆಯ ಯುಗ ಅಂದರೆ, ಉತ್ತರ ವೈದಿಕ ಯುಗ–ವ್ಯಾಪಕವಾದ ಕ್ರಾಂತಿ ಅಂತರ್ದ್ವಂದ್ವಗಳ ಯುಗವಾಗಿತ್ತು. 'ಅವರ ತಂಡಗಳು ಈ ಹೊತ್ತಿಗೆ ತುಂಬ ದೊಡ್ಡವಾಗಿಬಿಟ್ಟಿದ್ದವು. ಅವರ 'ಪಂಚ–ಜನ'ರು ಈ ಹೊತ್ತಿಗೆ ಅನೇಕ ಶಾಖೆಗಳಲ್ಲಿ ಹಂಚಿಹೋಗಿದ್ದರು. ಪ್ರಾಚೀನ ವೈದಿಕ ಯುಗದಲ್ಲಿ ರಾಜನನ್ನು ಆಯಲಾಗುತ್ತಿತ್ತು' *(ಅದೇ, ಪುಟ–೭೬).*

'ಒಂದು ಕಾಲದಲ್ಲಿ ವೃತ್ತಿ–ಆಧಾರಿತವಾಗಿದ್ದ ವರ್ಣವ್ಯವಸ್ಥೆ, ಈಗ ಆರ್ಥಿಕ ಕಾರಣಗಳಿಂದ ವರ್ಗಆಧಾರಿತವಾಗಿ ಬಿಟ್ಟಿತ್ತು. ಅಂದರೆ, ಹುಟ್ಟಿನಿಂದ ವರ್ಣವನ್ನು ನಿರ್ಧರಿಸುವ ಕ್ರಮ ಮೊದಲಾಗಿತ್ತು'. *(ಅದೇ, ಪುಟ–೭೭).* ವರ್ಗಗಳ ನಡುವೆ ಆಂತರಿಕ ಸಂಘರ್ಷವೂ ಆರಂಭಗೊಂಡಿತ್ತು. ಹೀಗಾಗುವುದು ಅನಿವಾರ್ಯವೂ ಆಗಿತ್ತು. ಮುಂದಿನ ಕೆಲವು ಶತಮಾನಗಳ ಕಥೆ ಈ ವರ್ಣ ಅಥವಾ ವರ್ಗಗಳ ನಡುವಣ ಹೋರಾಟದ ಕಥೆಯೇ ಆಗಿತ್ತು. ಈ ಆಂತರಿಕ ಹೋರಾಟ ಕಾಲಾಂತರದಲ್ಲಿ ಬ್ರಾಹ್ಮಣರ ಮತ್ತು ಕ್ಷತ್ರಿಯರ ನಡುವಣ ಚಿರಕಾಲದ ಹೋರಾಟದ ರೂಪವನ್ನೇ ತಳೆಯಿತು. ವರ್ಣ ಅಥವಾ

ವರ್ಗದೊಳಗೆ ದಿನಗಳೆದಂತೆ ಬೌದ್ಧಿಕ ಅವನತಿ ಉಂಟಾಗತೊಡಗಿದ್ದರಿಂದ ಬ್ರಾಹ್ಮಣರು ಮುಂದಿನ ತಮ್ಮ ತಲೆಮಾರುಗಳ ಭವಿಷ್ಯದ ಬಗ್ಗೆ ಆತಂಕಗೊಂಡು, ಆಗಿನಿಂದಲೇ ಎಚ್ಚರವಹಿಸತೊಡಗಿದರು. ತಮಗೆ ಒಳಿತಾಗ ಬೇಕೆಂಬ ಭಾವನೆಯಿಂದ ಹಾಗೂ ಆತ್ಮರಕ್ಷಣೆಯ ಅಗತ್ಯದಿಂದ ಪ್ರೇರಿತರಾಗಿ ಅವರ ಕೆಲವು ಸ್ಥಾಯೀ ಸಾಧನೆಗಳನ್ನು ಅನ್ವೇಷಿದರು.

ಸಾಧನ ವಂಚಿತವೂ ಶಕ್ತಿಹೀನವೂ ಆಗಿದ್ದ ತಮ್ಮ ತಲೆಮಾರುಗಳ ಹಿತಾಸಕ್ತಿಗಳನ್ನೂ ಸ್ವಾರ್ಥವನ್ನೂ ರಕ್ಷಿಸಿಕೊಳ್ಳುವುದು ಇವುಗಳಿಂದ ಸಾಧ್ಯವಾದೀತು ಎಂದು ಅವರು ಭಾವಿಸಿಕೊಂಡಿದ್ದರು. ಇದಕ್ಕಾಗಿ ಅವರು 'ಬ್ರಾಹ್ಮಣ' ಗ್ರಂಥಗಳನ್ನೂ ಸೃಷ್ಟಿಸಿದರು. ಇವು ಯಜ್ಞಾನುಷ್ಠಾನಗಳ ರಹಸ್ಯವನ್ನು ಅಡಗಿಸಿಟ್ಟ ಪೆಟ್ಟಿಗೆಗಳಂತೆ ಇದ್ದವು. ಹಾಗೂ ಇವುಗಳ ಬೀಗದ ಕೈಗಳು ಬ್ರಾಹ್ಮಣ ವರ್ಗದ ಕೈಯಲ್ಲೇ ಉಳಿದುಕೊಂಡಿದ್ದವು. ಅವುಗಳಿಗೆ ಕೊಟ್ಟಿದ್ದ 'ಬ್ರಾಹ್ಮಣ'ಗಳು ಎಂಬ ಹೆಸರೂ ಅರ್ಥಪೂರ್ಣವಾಗಿಯೇ ಇತ್ತು. ಈಗಂತೂ ಸಾಧನೆಯ ಬಲದಿಂದಲೇ ಯಾವೊಬ್ಬ ವಿಶ್ವಾಮಿತ್ರನೂ ಬ್ರಾಹ್ಮಣನಾಗಿಬಿಡುವುದು ಸಾಧ್ಯವೇ ಇರಲಿಲ್ಲ. ಇದಕ್ಕೆ ಉತ್ತರವೆಂಬಂತೆ ಕ್ಷತ್ರಿಯರು ಉಪನಿಷತ್ತುಗಳನ್ನು ರಚಿಸಿದರು. ಇವು ಭಾರತೀಯ ತತ್ವಶಾಸ್ತ್ರಕ್ಕೆ ಬುನಾದಿಯಾಗಿ, ಪರಿಣಮಿಸಿದವು. ಈ ಕಾಲದ ನಾಲ್ವರು ಕ್ಷತ್ರಿಯರ ರಾಜರಾದ ಕೈಕೇಯ (ಪಂಜಾಬಿನ ಗುಡ್ಡಗಾಡು) ಪ್ರಾಂತ್ಯದ ಅಶ್ವಪತಿ, ಪಂಚಾಲ (ಗಂಗಾ-ಯಮುನಾ ನದಿಗಳ ನಡುವಣ) ಪ್ರದೇಶದ (ಇಂದಿನ ಫರೋಖಾಬಾದ್ ಜಿಲ್ಲೆಯ) ಪ್ರವಹಣ ಜೈವಲಿ, ಕಾಶಿಯ ಅಜಾತಶತ್ರು ಮತ್ತು ವಿದೇಹ (ಉತ್ತರ ಬಿಹಾರ) ವಲಯದ ಜನಕರು ಆತ್ಮದ ಬಗೆಗೆ, ಅವರ ಅವಿನಾಶ್ವದ ಬಗೆಗೆ ಅದರ ಬರಹೋಗುವಿಕೆಗಳ ಬಗೆಗೆ ಹಾಗೂ ನಿರ್ಗುಣ-ನಿರೀಹ ಬ್ರಹ್ಮನ ಬಗೆಗೆ ವಿವೇಚನೆ ನಡೆಸಿದರು. ಈ ನಾಲ್ಕು ಜನಪದಗಳು ಆರ್ಯಜಗತ್ತಿನ ಪೂರ್ವಾನುಕ್ರಮದ ನಾಲ್ಕು ಭಾಗಗಳೇ ಆಗಿದ್ದವು. ಈ ನಾಲ್ಕು ಕೇಂದ್ರಗಳಿಂದ ಉಪನಿಷತ್ ಕಾಲದ ಈ ಕ್ಷತ್ರಿಯ ರಾಜರುಗಳು ಬ್ರಹ್ಮರ್ಷಿಗಳೂ, ಶ್ರೇಷ್ಠ ಗುರುಗಳೂ ಆದ ಉದ್ದಾಲಕ ಅರುಣೆ ಯಾಜ್ಞವಲ್ಕ್ಯ ಶ್ವೇತಕೇತು, ಆರುಣೇಯೆ ಹಾಗೂ ದೃಪ್ತ ಬಾಲಾಕಿ ಅವರುಗಳಿಗೆ ಉಪನಿಷತ್ ತತ್ವದ ದೀಕ್ಷೆಯನ್ನು ನೀಡಿದರು. ಉಪನಿಷತ್ತುಗಳ 'ಬುದ್ಧಿವಾದ' ಬ್ರಾಹ್ಮಣಗಳ ಮತ್ತು ವೇದ ವಿಹಿತ ಯಜ್ಞಾನುಷ್ಠಾನಗಳ ಹಿಂಸಾನಿಷ್ಠ ಆಚರಣೆಗಳಿಗೆ ವಿರುದ್ಧವಾಗಿ ಕ್ಷತ್ರಿಯರು ನಡೆಸಿದ ಕ್ರಾಂತಿಯೇ ಆಗಿತ್ತು. ಈ ಕ್ರಾಂತಿ ಆ ಕ್ಷತ್ರಿಯ ರಾಜರುಗಳ ಕೈತಪ್ಪಿ ಯುಗಧರ್ಮದೊಂದಿಗೆ ಮುನ್ನಡೆಯಿತು.

ರಾಷ್ಟ್ರೀಯತೆಯ ಭಾವನೆ, ಗಣತಂತ್ರಾತ್ಮಕ ಸಂಸ್ಥೆಗಳ ಮತ್ತು ಭೌಗೋಳಿಕ ಮೇರೆಗಳ ಆಧಾರದ ಮೇಲೆ ಭಾರತದ ರಾಜಕೀಯ ಭಾವನೆಗಳ ಉದಯ ಇವು ಬ್ರಿಟಿಷ ಭಾರತ ಸಂಪರ್ಕದ ಕೆಲವು ಸ್ಪಷ್ಟ ಮತ್ತು ಶ್ರೇಯಸ್ಕರ ಪರಿಣಾಮಗಳು ಭಾರತೀಯರ ಉಡುಗೆ-ತೊಡುಗೆಗಳು ಹಾಗೂ ಸಾಮಾಜಿಕ ದೃಷ್ಟಿಕೋನದ ಮೇಲೂ ಈ ಸಂಪರ್ಕ ಒಂದಿಲ್ಲೊಂದು ಬಗೆಯಲ್ಲಿ ಪ್ರಭಾವ ಬೀರಿದೆ. ಹಿಂದೂ ವರ್ಣವ್ಯವಸ್ಥೆಯ ಕಬ್ಬಿಣದ ಗೋಡೆಗಳು ಕೂಡ ಈ ಪ್ರಭಾವದ ಫಲವಾಗಿ ಕುಸಿದುಬೀಳುತ್ತಿವೆ. ಅನೇಕ ಸಂಸ್ಕೃತಿಗಳ ಸಂಘರ್ಷದಿಂದ ಉದ್ಭವಿಸಿದರುವ ಇಂದಿನ ಭಾರತೀಯ ಸಂಸ್ಕೃತಿಯ ಸ್ವರೂಪ ಈಗಿನ್ನೂ ಮಸುಕು-ಮಸುಕಾಗಿದೆ, ಹಾಗೂ ಅಸ್ಪಷ್ಟವಾಗಿದೆ. ಯಾವುದೇ ಸಾಂಸ್ಕೃತಿಕ ರೂಪರೇಖೆಯೂ

ಸಂಪೂರ್ಣವಾಗಿ ಸ್ಪಷ್ಟವಾಗಿರುವುದಿಲ್ಲವೆಂಬ ಮಾತೇನೋ ನಿಜ. ಸಂಸ್ಕೃತಿ ಅಜಸ್ರಧಾರೆಯಾಗಿ ಹರಿಯುವಂಥದು ಎಂದೂ ನಿಂತ ನೀರಾಗದಂಥದು. ಆದರೂ ವಿಶಿಷ್ಟ ಕಾಲವಿಭಾಗಗಳಲ್ಲಿ ಅದರ ಆಕಾರ ರೂಪುದಳೆಯುತ್ತ ಇರುತ್ತದೆ. ಬೇರೊಂದು ಹೊಸ ಸಂಸ್ಕೃತಿಯೊಡನೆ ಸಂಘರ್ಷ ಉಂಟಾಗುವವರೆಗೆ ಆ ರೂಪ ಸ್ಥಿರವಾಗಿರುತ್ತದೆ. ಹೊಸ ಸಂಪರ್ಕದ ಪರಿಣಾಮವಾಗಿ ಅದರ ಅನೇಕಾನೇಕ ದ್ವಾರಗಳು ತೆರೆದುಕೊಳ್ಳುತ್ತವೆ. ಅದರ ಅನೇಕಾನೇಕ ದ್ವಾರಗಳ ಮೂಲಕ ಸಾಂಸ್ಕೃತಿಕ ಕೊಳು-ಕೊಡೆಯ ಕಾರ್ಯಗಳೂ ನಡೆಯತೊಡಗುತ್ತವೆ. ಮತ್ತೊಮ್ಮೆ ಅದರ ರೂಪ ಬದಲಾಗುತ್ತದೆ. ಬದಲಾವಣೆಯೇ ಸಂಸ್ಕೃತಿಯ ಜೀವಾಳ. ಹೊಸ ಹೊಸ ಬಣ್ಣಗಳ ಉಡುಗೆ ತೊಡುಗೆಗಳೇ ಅದರ ಅಸ್ತಿತ್ವಕ್ಕೆ ಸಾಕ್ಷಿಯಾಗಿರುತ್ತವೆ. ಕಾಲಾಂತರಗಳಲ್ಲಿ ಅದು ತನ್ನ ಆಯವ್ಯಯಗಳ ಲೆಕ್ಕವನ್ನು ಹಿಡಿಯುತ್ತದೆ. ಸ್ವಲ್ಪ ಅವಧಿಯ ಮಟ್ಟಿಗೆ ಅದು ತನ್ನ ಆಕಾರವನ್ನು ಸ್ಪಷ್ಟಗೊಳಿಸುತ್ತದೆ. ಭಾರತೀಯ ಸಂಸ್ಕೃತಿ ಮೊದಲ ಬಾರಿಗೆ ಆರ್ಯರ ಆಗಮನ ಮತ್ತು ಸಂಘರ್ಷದ ತರುವಾಯ ಈ ಆಯವ್ಯಯದ ಲೆಕ್ಕವನ್ನು ಹಿಡಿದಿತ್ತು. ಗುಪ್ತರ ಮತ್ತು ರಾಜಪೂತರ ಕಾಲಗಳಲ್ಲಿ ಅದು ತನ್ನ ಅಂಕಿ-ಅಂಶಗಳನ್ನು ಸರಿಪಡಿಸಿಕೊಂಡಿತ್ತು. ಈಗ ಸ್ವಾತಂತ್ರ್ಯೋದಯದ ತರುವಾಯದ ಹಾಗೂ ದಾಸ್ಯವನ್ನು ಕಲಾನೆಗಾಣಿಸಿರುವ ಹಂತದಲ್ಲಿ ಅದು ತನ್ನ ಅಸ್ಪಷ್ಟ ರೂಪರೇಷೆಗಳನ್ನು ಸ್ಥಿರಗೊಳಿಸಿಕೊಳ್ಳಬೇಕಾಗಿದೆ, ಹಾಗೂ ಸ್ಪಷ್ಟ ಪಡಿಸಿಕೊಳ್ಳಬೇಕಾಗಿದೆ.

ಈಗಾಗಲೇ ತಿಳಿಸಿರುವಂತೆ ಬ್ರಾಹ್ಮಣ ಮತ್ತು ಕ್ಷತ್ರಿಯ ವರ್ಣಗಳ ವ್ಯವಸ್ಥೆ ಒಂದಲ್ಲ ಒಂದು ರೂಪದಲ್ಲಿ ಆರ್ಯರು ಭಾರತವನ್ನು ಪ್ರವೇಶಿಸುವುದಕ್ಕೆ ಮುನ್ನವೇ ಬಹುಶಃ ನಡೆದು ಹೋಗಿತ್ತು. ಆರ್ಯರು ಭಾರತಕ್ಕೆ ಆಗಮಿಸುವುದಕ್ಕೆ ಮುಂಚೆಯೇ ಇಲ್ಲಿ ಪೌರೋಹಿತ್ಯವಿತ್ತು. ಹಾಗೂ ಅದು ಕ್ಷತ್ರಿಯ ವರ್ಣದ ಸಂಪ್ರದಾಯವೂ ಆಗಿತ್ತು ಎಂದೇನೋ ಹೇಳಬಹುದು. ಆದರೆ ಆಗಿನ್ನೂ ಈ ವರ್ಣಗಳಲ್ಲಿ ವರ್ಣೀಯತೆ ಪೂರ್ಣರೂಪದಲ್ಲಿ ನೆಲೆಗೊಂಡಿರಲಿಲ್ಲ. ಅಂದರೆ, ಅಗಿನ್ನೂ ಬ್ರಾಹ್ಮಣರು ಕ್ಷತ್ರಿಯರಾಗಬಹುದಾಗಿತ್ತು, ಹಾಗೂ ಕ್ಷತ್ರಿಯರು ಬ್ರಾಹ್ಮಣರಾಗಬಹುದಾಗಿತ್ತು. ಈ ಎರಡು ವರ್ಣಗಳು ಯಾವಾಗ ಹೇಗೆ ಸಂಪೂರ್ಣವಾಗಿ ಬೇರೆಯಾಗಿ ಬಿಟ್ಟವು ಎಂಬುದು ಭಾರತೀಯ ಇತಿಹಾಸದ ಮನೋರಂಜಕ ವಿಷಯವಾಗಿದ್ದು, ಅದರ ಬಗ್ಗೆ ಸಂಶೋಧನೆಯನ್ನು ನಡೆಸಬಹುದಾಗಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರವರ್ಣಗಳು ಹಾಗೂ ಅವುಗಳ ಅನೇಕ ಶಾಖೋಪಶಾಖೆಗಳು ಹೇಗೆ ಹುಟ್ಟಿಕೊಂಡವು. ಹಾಗೂ ಜನರಲ್ಲಿ ಪರಸ್ಪರ ವರ್ಣಾಂತರ, ಸಹಭೋಜನ ಮತ್ತು ಅಂತರ್ ವಿವಾಹಾದಿಗಳನ್ನು ಪ್ರತಿಬಂಧಿಸಲಾಯಿತು ಎಂಬುದು ಶುದ್ಧಾಂಗವಾಗಿ ಅಸಾಧಾರಣವಾಗಿರುವ ಒಂದು ಭಾರತೀಯ ರಹಸ್ಯ ಅದರ ಈ ಅಸಾಧರಣೀಯತೆಯೇ ಅದನ್ನು ಇತರ ದೇಶಗಳ ವರ್ಗಗಳಿಂದ ಪ್ರತ್ಯೇಕಿಸುತ್ತದೆ. ಭಾರತೀಯ ಇತಿಹಾಸದಲ್ಲಿ ಇದು ಹೇಗೆ ಬೆಳೆದು ಬಂದಿತು ಎಂಬುದಕ್ಕೆ ಸಂಬಂಧಪಟ್ಟ ವಿಷಯ ಇದಾಗಿದೆ.

ಈ ಯುಗದಲ್ಲಿ ಬ್ರಾಹ್ಮಣ ರಾಜತ್ವಕ್ಕಾಗಿ ಹೋರಾಡಿದಂಥ ಯಾವುದೇ ಉದಾಹರಣೆ ನಮಗೆ ಎಲ್ಲಿಯೂ ದೊರೆಯುವುದಿಲ್ಲ. ಕ್ಷತ್ರಿಯನು ಪುರೋಹಿತ ಪದವಿಗಾಗಿ ಹೋರಾಡಿದಂಥ ಅನೇಕ

ಉದಾಹರಣೆಗಳು ನಮಗೆ ಕಾಣದೊರೆಯುತ್ತವೆ. ವಿಶ್ವಾಮಿತ್ರನ ಪ್ರಸಂಗ ಇದೇ ಬಗೆಯ ಒಂದು ಉದಾಹರಣೆ. ಶಂತನುವಿನ ಅಣ್ಣನಾಗಿದ್ದ ದೇವಾಪಿಯೂ ರಾಜ್ಯವನ್ನು ಕಳೆದುಕೊಂಡಾಗ ಪುರೋಹಿತ ಪದವಿಯನ್ನು ಪಡೆಯಲು ಪ್ರಯತ್ನಿಸಿದ್ದ ಹಾಗೂ ಅದನ್ನು ಸಾಧಿಸಿ ತನ್ನ ಸೋದರ ನಡೆಸಿದ ಯಜ್ಞದಲ್ಲಿ ಪ್ರಮುಖ ಋತ್ವಿಜನಾಗಿ ಕಾರ್ಯವನ್ನು ನಿರ್ವಹಿಸಿದ್ದ. ಇದೇ ರೀತಿ ಆರ್ಯರು ಭಾರತಕ್ಕೆ ಆಗಮಿಸುವುದಕ್ಕೆ ಮೊದಲೇ ಕ್ಷತ್ರಿಯ ವರ್ಣವೂ ರೂಪುಗೊಂಡಿತ್ತು. ಋಗ್ವೇದ ಕಾಲದ ಹತ್ತಿರ ಹತ್ತಿರ ಬರುವ ಹೊತ್ತಿಗಾಗಲೇ ಹಿಂದೆ ಆಯ್ಕೆಯ ವಿಷಯವಾಗಿದ್ದ ರಾಜತ್ವ ವಂಶಪಾರಂಪರ್ಯವಾಗಿ ಸಾಗಿಬರುವ ಹಕ್ಕಾಗಿ ಬಿಟ್ಟಿತ್ತೆಂಬುದೇ ಇದಕ್ಕೆ ಸಾಕ್ಷಿಯಾಗಿದೆ. ಮೇಲಾಗಿ ರಾಜವಂಶಕ್ಕೆ ಸೇರಿದವನೇ ರಾಜನಾಗುತ್ತಿದ್ದ. ರಾಜನನ್ನು ಆಯುವ ಪದಾಧಿಕಾರಿಗಳಲ್ಲಿ (ರಾಜಕೃತರು) ಕೆಲವರನ್ನು ರಾಜನ್ಯರು–ರಾಜವಂಶದವರು ಎಂದು ಕರೆಯುತ್ತಿದ್ದರು. ಅವರು ಕ್ಷತ್ರಿಯ ವರ್ಗಕ್ಕೆ ಸೇರಿದವರಾಗಿಲ್ಲದೆ, ಇದ್ದಲ್ಲಿ ಅವರಿಗೆ ಈ ಹೆಸರು ಬರುತ್ತಲೇ ಇರಲಿಲ್ಲ. ಈ ಹೊತ್ತಿಗೆ ರಾಜವಂಶಕ್ಕೆ ಸೇರಿದಂಥವರ ಒಂದು ಪ್ರತ್ಯೇಕ ವರ್ಣವೇ ರೂಪುಗೊಂಡಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇದೇ ಅಲ್ಲದೆ ಋಗ್ವೇದದಲ್ಲಿ ಕಾಣದೊರೆಯುವ ರಾಜರ ಅನುಕ್ರಮದ ಪಟ್ಟಿಯಲ್ಲಿ ಅನೇಕ ಹೆಸರುಗಳು ತಂದೆ–ಮಕ್ಕಳವೇ ಆಗಿದೆ. ಈ ಪರಂಪರೆಯ ಕೊನೆಯ ಕೊಂಡಿಗಳು 'ಋಗ್ವೇದ'ದ ಕಾಲಕ್ಕಿಂತಲ್ಲೂ ಹಿಂದಿನವು ಎಂಬ ವಿಚಾರದಲ್ಲಿ ಸಂದೇಹವೇನೂ ಉಳಿಯುವುದಿಲ್ಲ. ಹೀಗಾಗಿ ಋಗ್ವೇದದ ಕಾಲಕ್ಕಿಂತಲೂ ಹಿಂದೆಯೇ ಕ್ಷತ್ರಿಯ ವರ್ಣವೂ ತನ್ನ ಸ್ವರೂಪವನ್ನು ಸ್ಪಷ್ಟಪಡಿಸಿಕೊಂಡಿತ್ತು.

ಕ್ಷತ್ರಿಯ ವರ್ಣ ನೆಲೆಗೊಂಡ ಬಳಿಕ ವೈಶ್ಯ ವರ್ಣದ ಸ್ವರೂಪದಲ್ಲಿ ಸ್ಥಿರಗೊಂಡಿತು. ಬ್ರಾಹ್ಮಣರು ಮತ್ತು ಕ್ಷತ್ರಿಯರು ಪ್ರತ್ಯೇಕ ವರ್ಣಗಳಾಗಿ ನೆಲೆಗೊಂಡ ಬಳಿಕ ಉಳಿದ ಜನತೆಯನ್ನು ವೈಶ್ಯರೆಂದು ಕರೆಯಲಾಯಿತು. ರಕ್ತ ಸಂಬಂಧದ ದೃಷ್ಟಿಯಿಂದ ನೋಡಿದರೆ, ಈ ವೈಶ್ಯ, ಕ್ಷತ್ರಿಯ ಮತ್ತು ಬ್ರಾಹ್ಮಣರಲ್ಲಿ ಯಾವುದೇ ವ್ಯತ್ಯಾಸವೂ ಇರಲಿಲ್ಲ. ಕನಿಷ್ಟ ಪಕ್ಷ ವೈಶ್ಯರು ಮತ್ತು ಕ್ಷತ್ರಿಯರ ನಡುವೆ ಒಂದಿಷ್ಟು ವ್ಯತ್ಯಾಸವಿರಲಿಲ್ಲ. ಇಷ್ಟಾಗಿಯೂ ಇವರ ಕುಲ ಗೋತ್ರಾದಿಗಳು ಭಿನ್ನವಾಗಿರುತ್ತಿದ್ದುವು ಎಂಬುದನ್ನು ಮರೆಯುವಂತಿಲ್ಲ. ಕ್ಷತ್ರಿಯರು ಅಥವಾ ರಾಜನ್ಯರು ಬಹುಶಃ ಅಭಿಜಾತ ಕುಲಕ್ಕೆ ಸೇರಿದ 'ವೈಶ್ಯರು' ಅಥವಾ 'ವಿಶ'ರೇ ಆಗಿದ್ದರು ಎಂದಷ್ಟೇ ಹೇಳಬಹುದಾಗಿದೆ. ದೀರ್ಘ ಕಾಲದವರೆಗೆ ಭಾರತ ಭೂಮಿಯಲ್ಲಿ ಅವರು ನೆಲೆಸಿದ್ದುದೇ ಕ್ಷತ್ರಿಯರನ್ನು ವೈಶ್ಯರಿಂದ ಪ್ರತ್ಯೇಕಿಸುವುದಕ್ಕೆ ಅಗತ್ಯವಾದ ಕಾರಣಗಳನ್ನು ಒದಗಿಸಿದ್ದಿರಬೇಕು. ರಾಜಕೀಯದಲ್ಲಿ ಬ್ರಾಹ್ಮಣರು ಮತ್ತು ಕ್ಷತ್ರಿಯರು ವಿಶಿಷ್ಟ ಸ್ಥಾನಮಾನಗಳನ್ನು ಗಳಿಸಿಕೊಂಡಿದ್ದರೆಂಬುದರಲ್ಲಿ ಅನುಮಾನವೇನೂ ಇಲ್ಲ. ಇವರುಗಳಲ್ಲಿ ಕ್ಷತ್ರಿಯರಂತೂ 'ರಾಜಕೃತರಾಗಿದ್ದುದು ಮಾತ್ರವಲ್ಲದೆ ಯೋಧರೂ ಆಗಿರುತ್ತಿದ್ದರು. ಯುದ್ಧಗಳಲ್ಲಿ ಪಾಲ್ಗೊಳ್ಳುವುದೇ ಅವರ ಪ್ರಮುಖ ಕರ್ತವ್ಯವಾಗಿತ್ತು. ಬಹುಶಃ ಇವರ ಪ್ರಾಚೀನ ಪರಂರೆಯನ್ನೇ ಮುಂದೆ ಬಂದ ಗಣ ತಂತ್ರಗಳ 'ಯೌಧೇಯ'ರು ಉಳಿಸಿಕೊಂಡುಬಂದರು. ಮೊದಲಿಗೆ ಇಡೀ ಜನತೆ ಕ್ಷತ್ರಿಯರು ವೈಶ್ಯರು ಮತ್ತು ಕೆಲಮಟ್ಟಿಗೆ ಬ್ರಾಹ್ಮಣರು ಕೂಡ ಶತ್ರುಗಳೊಂದಿಗೆ, ಹೋರಾಡುತ್ತಿದ್ದಿರಬೇಕು. ಆದರೆ ಮುಂದೆ ಶತ್ರುಗಳನ್ನು ನಾಶಗೊಳಿಸಿದ ಬಳಿಕ, ಯುದ್ಧಗಳ ಸಂಖ್ಯೆ ಕಡಿಮೆಯಾಗಿ ಬಿಟ್ಟಾಗ ಜೀವನ

ಬಹುಶಃ ಶಾಂತಿಮಯವಾಗಿ ಪರಿಣಮಿಸಿತು. ಆಗ ರಾಜವಂಶಕ್ಕೆ ಸೇರಿದವರಲ್ಲವಾಗಿದ್ದ ಸಾಮಾನ್ಯ ಜನರು ಅಥವಾ ವೈಶ್ಯರು ಬೇಸಾಯ, ಪಶುಪಾಲನೆ, ವ್ಯಾಪಾರ ಇವೇ ಮೊದಲಾದ ವೃತ್ತಿಗಳನ್ನು ಹಮ್ಮಿಕೊಂಡರು. ಅಂದಿನಿಂದಲೇ ವೈಶ್ಯ ವರ್ಣಕ್ಕೆ ಸೇರಿದವರು ಈ ಕ್ಷೇತ್ರಕ್ಕೆ ಸಂಬಂಧಿಸಿದ ತಮ್ಮ ಕರ್ತವ್ಯಗಳನ್ನು ನಿರ್ವಹಿಸತೊಡಗಿದರು.

ವಿದೇಶಿ ಆಕ್ರಮಣಗಳ ಆಘಾತ, ವಿದೇಶಿ ಸಂಸ್ಕೃತಿಗಳ ಸಂಘರ್ಷ ಹಾಗೂ ಜೈನ, ಬೌದ್ಧ ಮತ್ತು ವೈಷ್ಣವ ಧರ್ಮಗಳ ವರ್ಣವರ್ಜಿತ ಪದ್ಧತಿ ಇವುಗಳ ಪ್ರಭಾವದಿಂದಾಗಿ ಬ್ರಾಹ್ಮಣ ವರ್ಣವ್ಯವಸ್ಥೆ ಸಂಪೂರ್ಣವಾಗಿ ಅಕ್ಷುಣವಾಗಿ ಉಳಿಯಲಾರದೆ ಹೋಯಿತು. ಅದರಲ್ಲಿ ತಿಳಿದೋ ತಿಳಿಯದೆಯೋ ಅನೇಕ ಬದಲಾವಣೆಗಳಾದವು. ಕಾಯಸ್ಥ ಮೊದಲಾದ ಅನೇಕ ವರ್ಣಗಳು ಬಹುಶಃ ಈ ಸಾಮಾಜಿಕ ಪುನರಾವರ್ತನದ ಪರಿಣಾಮವೇ ಆಗಿವೆ, ಇವು ಚತುರ್ವರ್ಣ ವ್ಯವಸ್ಥೆಯಲ್ಲಿ ಇಂದಿನವರೆಗೂ ತಮ್ಮ ಸುನಿಶ್ಚಿತ ಸ್ಥಾನಮಾನಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇವರಲ್ಲಿ ಕೆಲವರಂತೂ ನಿಸ್ಸಂದೇಹವಾಗಿ ಬ್ರಾಹ್ಮಣರು ಮತ್ತು ಕ್ಷತ್ರಿಯರೇ ಆಗಿದ್ದಾರೆ. ಇದೇ ರೀತಿ, ಸಂಕ್ರಮಣ ಕಾಲದಲ್ಲಿ ಈ ನಾಡಿನಲ್ಲಿ ಅಲೆದಾಡುತ್ತಿದ್ದ ಅಥವಾ ತಮ್ಮದೇ ಆದ ಗಣಗಳನ್ನು ರೂಪಿಸಿಕೊಂಡು ತಂತ್ರಗಳನ್ನೂ ಶಾಸನಗಳನ್ನೂ ನಿರ್ಮಿಸಿಕೊಳ್ಳುತ್ತಿದ್ದ ಅನೇಕ ಸಮುದಾಯಗಳು ಯಾವ ವರ್ಣಕ್ಕೆ ಸೇರಿದವು ಎಂಬುದನ್ನು ಖಚಿತವಾಗಿ ಹೇಳುವುದು ಇಂದು ಕಷ್ಟಸಾಧ್ಯವಾಗಿದೆ. ಇವುಗಳಲ್ಲಿ ಮಾಳವ ಮೊದಲಾದ ಸಮುದಾಯಗಳಿಗೆ ಸೇರಿದ್ದವರಲ್ಲಿ ಕೆಲವರು ಜೋಹಿಯಾ ರಾಜಪೂತರಾದರೆ, ಇನ್ನೂ ಕೆಲವರು ಓಸ್ವಾಲ್ ರೋಹತಗೀ ರಸ್ತೋಗೀ ಮೊದಲಾದ ವೈಶ್ಯರಾದರೆ, ಉಳಿದ ಕೆಲವು ಕ್ಷತ್ರಿಯ ಜಾತಿಗಳವರು 'ಕ್ಷತ್ರಿ'ಗಳಾಗಿಬಿಟ್ಟರು.

**೬.೨. ಸಮಾಜಶಾಸ್ತ್ರಜ್ಞರ ಕಲ್ಪನೆಯಲ್ಲಿ ಜಾತಿ**

ಜಾತಿಗೆ ಸಂಬಂಧಿಸಿದ ಅಧ್ಯಾಯನಕ್ಕೆ ಮಾನವಿಕಗಳಲ್ಲಿ ನೂರು ವರ್ಷಕ್ಕೂ ಹೆಚ್ಚಿನ ಇತಿಹಾಸ ಇದೆ. ಜಾತಿಯನ್ನು ಸೈದ್ಧಾಂತಿಕರಿಸುವ ಯತ್ನ ಇಂದಿನವರೆಗೂ ನಡೆದೇ ಬರುತ್ತಿದೆ. ಈ ಹೊತ್ತಿಗೆಯಲ್ಲಿ ಇರುವ ಚಿಂತಕರನ್ನು ಯಾವುದೋ ಒಂದೊಂದು ಪಂಥಗಳ ಪ್ರತಿನಿಧಿಯಾಗಿ ಜೋಡಿಸಿಲ್ಲ ಹಾಗೆಂದು ಇವರೇ ಜಾತಿ ಅಧ್ಯಯನದಲ್ಲಿ ಮುಖ್ಯರು ಎಂದೂ ಅಲ್ಲ. ಇಲ್ಲಿ ಮುಖ್ಯವಾಗಿ ಏಳು ಜನರನ್ನು ಪರಿಚಯಿಸಿ ಅವರ ವಾದದ ಸಂಗ್ರಹಿತ ಸಾರಾಂಶವನ್ನು ನೋಡಬಹುದು. ಅಧ್ಯಯನದ ಹಿಂದೆ ಇರುವ ಒತ್ತಡ, ಇಚ್ಛೆ ಅವರ ಪರಸ್ಪರ ವಾಗ್ವಾದಗಳನ್ನು ಮಂಡಿಸುತ್ತಾ ಹೋಗಲಾಗಿದೆ. ಉದಾಹರಣೆಗೆ, ರಿಸ್ಲೆಯಂತಹವರಿಗೆ ಜಾತಿಯ ಅಧ್ಯಯನದಿಂದ ಜನಾಂಗೀಯ ಪ್ರಶ್ನೆಗಳಿಗೆ ಉತ್ತರ ಹುಡುಕಿಕೊಳ್ಳಬೇಕಿದ್ದರೆ, ಬ್ಯೂಗಲ್‌ಗೆ, ಯೂರೋಪಿನ ಸಮಾನಂತರ ಸಂಸ್ಕೃತಿಗಿಂತ ಭಿನ್ನವಾದ ಸಮಾಜದ ಗ್ರಹಿಕೆಯ ನೆಲೆಯಲ್ಲಿ ಜಾತಿಯ ಅಭಿಪ್ರಾಯ ಮಂಡಿಸುತ್ತಾನೆ. ಹಾಗೇ ಡ್ಯೂಮೋ ಜಾತಿಯ ನೆಪದಲ್ಲಿ ಸಾಂಪ್ರದಾಯಿಕ ಸಮಾಜಗಳ ಲೋಕದೃಷ್ಟಿಯನ್ನು ಹಿಡಿಯಲೆತ್ನಿಸುತ್ತಾನೆ. ಹೀಗೆ ಅನೇಕ ಬೌದ್ಧಿಕ ರಾಜಕೀಯಗಳು ಪಟ್ಟಿ ಬೆಳೆಸುತ್ತಲೆ ಹೋಗಬಹುದು. ಇಂತಹ ಅನೇಕ ಒಳನೋಟಗಳನ್ನು ನೀಡುತ್ತದೆ.

"ಹರ್ಬರ್ಟ್ ರಿಸ್ಲೆ ಭಾರತದಲ್ಲಿ ಎರಡು ಮುಖ್ಯಹುದ್ದೆಗಳಲ್ಲಿ ಕಾರ್ಯನಿರ್ವಹಿಸಿದ್ದರು. ಅದರಲ್ಲಿ ಎಥ್ನೋಗ್ರಾಫಿಕ್ ಸರ್ವೆ ಆಫ್ ಇಂಡಿಯಾದ ಸೂಪರ್‌ಇನ್‌ಟೆಂಡೆಂಟ್ ಮತ್ತು ೧೯೦೧ ರಲ್ಲಿ ಜನಸಂಖ್ಯಾ ಆಯೋಗದ ಅಧ್ಯಕ್ಷರು ಸಹ ಆಗಿದ್ದರು. ಮುಖ್ಯವಾದ ಹುದ್ದೆಯೇ ಅವರ ಭಾರತದಲ್ಲಿ ಜಾತಿವ್ಯವಸ್ಥೆಯ ಅಧ್ಯಯನಕ್ಕೆ ಬುನಾದಿ ಹಾಕಿ ಕೊಟ್ಟದೆ ಎನ್ನಬಹುದು. 'ರಿಸ್ಲೆ ಅತ್ಯಂತ ಪ್ರಸಿದ್ಧನಾದ ಜನಾಂಗೀಯ ಅಧ್ಯಯನಕಾರನಾಗಿದ್ದವ. ಆತನಿಗೆ 'ಸರ್' ಎಂಬ ಪದವಿ ನೀಡಿ ಗೌರವಿಸಲಾಗಿತ್ತು. ಬಂಗಾಳದಲ್ಲಿ ಈತ ೬೦೦೦ ಜನರ ನಮೂನೆ (Sample) ಗಳನ್ನು ಇಟ್ಟುಕೊಂಡು ಅವರ ಜನಾಂಗೀಯ ಲಕ್ಷಣದ ಆಧಾರದ ಮೂಲಕ ಜಾತಿಯ ಉಗಮವನ್ನು ಕಂಡುಹಿಡಿಯಲೆತ್ನಿಸಿದ"*(ಶಿವರಾಮ ಕೃಷ್ಣನ್ ಜಿ. ೨೦೦೭. ಪುಟ-೧.).*

ಈ ಒಂದು ಸಂದರ್ಭದಲ್ಲಿ ಮುಖ್ಯವಾದ ಒಂದು ಅಂಶವನ್ನು ಗಮನಿಸಬೇಕು. ಈ ರಿಸ್ಲೆಯಂತವರಿಗೆ ಜನಾಂಗೀಯ ಲಕ್ಷಣದ ಮೂಲಕ ಜಾತಿಯ ಉಗಮ ಗುರುತಿಸುವುದರ ಹಿಂದಿನ ಉದ್ದೇಶವೇನಿರಬಹುದು ಎಂಬುದು. ಅವರೆಲ್ಲರ ಭಾವನೆ ಏನಾಗಿತ್ತೆಂದರೆ, ಭಾರತ ಸಮಾಜದಲ್ಲಿ ಜಾತಿ ವ್ಯವಸ್ಥೆ ಒಳ ಪಂಗಡ ವಿವಾಹವನ್ನು ಕಟ್ಟುನಿಟ್ಟಾಗಿ ಪಾಲಿಸುವುದರಿಂದ ಭಿನ್ನ ಜಾತಿ ಗುಂಪುಗಳ ರಕ್ತ ಶುದ್ಧವಾಗಿರುವಂತೆ ಕಾಪಾಡಿಕೊಂಡು ಬಂದಿರಬಹುದು. ಹಾಗಾಗಿ ಭಾರತದಲ್ಲಿ ಶುದ್ಧ ಜನಾಂಗೀಯ ರೂಪಗಳನ್ನು ಗುರುತಿಸಬಹುದು. ಜನಾಂಗೀಯ ಲಕ್ಷಣವನ್ನು ಅದರ ಶುದ್ಧ ರೂಪದಲ್ಲೇ ಗುರುತಿಸುವುದಕ್ಕೆ ಭಾರತಕ್ಕಿಂತ ಸೂಕ್ತ ಸ್ಥಳ ಇನ್ನೊಂದು ಇಲ್ಲ ಎಂದುಕೊಂಡಿದ್ದರು. ಅಲ್ಲದೇ ಭಾರತ ಮಾತ್ರವಲ್ಲದೇ ಜಾಗತಿಕ ಜನಾಂಗೀಯ ಹಲವು ಪ್ರಶ್ನೆಗಳಿಗೆ ಸೂಕ್ತ ಉತ್ತರ ಕಂಡುಕೊಳ್ಳಲು ಅಂದರೆ ಭಾರತ ಇಡೀ ಜಾಗತಿಕ ಜನಾಂಗೀಯ ಸಿದ್ಧಾಂತವನ್ನು ಪರೀಕ್ಷೆಗೆ ಒಳಪಡಿಸಬಹುದಾದ ಪ್ರಯೋಗ ಶಾಲೆ ಎಂದು ಅವರು ಭಾವಿಸಿಕೊಂಡಿದ್ದರು.

'ರಿಸ್ಲೆ ೧೯೦೧ ರಲ್ಲಿ ಜನಸಂಖ್ಯಾ ಆಯೋಗದ ಅಧ್ಯಕ್ಷರಾಗಿ ನೇಮಕಗೊಂಡಾಗ ಭಾರತದಾದ್ಯಂತ ಇರುವ ಜಾತಿಗಳ ಹೆಸರನ್ನು ದಾಖಲಿಸಿದ್ದು ಕೇವಲ ಪಂಜಾಬ್ ಪ್ರಾಂತ್ಯ ಒಂದರಿಂದಲೇ ಒಂದು ಲಕ್ಷದಷ್ಟು ಜಾತಿ ಹೆಸರು ಪಡೆದುದ್ದಾಗಿ ನಮೂದಿಸುತ್ತಾನೆ. ರಿಸ್ಲೆ ಜಾತಿ ಹೆಸರುಗಳನ್ನು ಸಂಗ್ರಹಿಸಿದ ಮೇಲೆ ಸಾಮಾಜಿಕ ಅಂತಸ್ತು ಆಧಾರಿಸಿ ಜಾತಿಗಳಿಗೆ ದರ್ಜೆ (ರ್‍ಯಾಂಕ್) ಕೊಡುವುದರೊಂದಿಗೆ ಅದನ್ನು ಸಂಪಾದಿಸಿದ ಯಾವ ಜಾತಿ ಮೊದಲನೇ ಸ್ಥಾನ, ನಂತರದ್ದು ಯಾವುದು? ಕೊನೇ ಜಾತಿ ಯಾವುದು? ಅದಕ್ಕಿಂತ ಮೇಲಿನ ಸ್ಥಾನ ಯಾವ ಜಾತಿಯದ್ದು? ಹೀಗೆ ಜಾತಿಗಳಿಗೆ ರಿಸ್ಲೆ ರ್‍ಯಾಂಕ್ ಕೊಡುತ್ತಾನೆ' *(ಅದೇ, ಪುಟ-೨).*

ಬ್ರಾಹ್ಮಣರಿಂದ ನೀರು ಪಡೆಯುವ ಜಾತಿಗಳು, ಪಡೆಯದ ಜಾತಿಗಳು, ಜಾತಿಯ ನಡುವಿನ ಸಾಮಾಜಿಕ ಅಂತರ ಅಂತರ್ ಕ್ರಿಯೆ ಅಂದರೆ, ಅದು ಸ್ಪರ್ಶವೇ-ಅಸ್ಪೃಶ್ಯವೇ, ವಿವಾಹ ಸ್ವರೂಪದಂತಹ ಇತ್ಯಾದಿ ಅಂಶಗಳನ್ನು ಇಟ್ಟುಕೊಂಡು ಯಾವ ಜಾತಿ ಮೇಲೆ ಕಾಳಗ ಎಂಬಂತೆ ದರ್ಜೆಗಳನ್ನು ಕೊಡುತ್ತಾನೆ. ಇದನ್ನು 'ಅಖಿಲ ಭಾರತದ ಜಾತಿಪಟ್ಟಿ' ಎಂದು ಬಿಡುಗಡೆ ಮಾಡುತ್ತಾನೆ. ಈ ಪಟ್ಟಿಯ ಬಿಡುಗಡೆ ನಂತರ ಭಾರತದಲ್ಲಿ ಹಲವು ಕಡೆ ಉದಾ: ಬಂಗಾಳ, ಪಂಜಾಬ್ ಈಗಿನ

ತಮಿಳುನಾಡುಗಳಲ್ಲಿ ಅನೇಕ ರೀತಿಯ ಗೊಂದಲ, ಸಂಘರ್ಷ, ಹೋರಾಟಗಳು ಆರಂಭವಾದವು. ಹಲವು ಜಾತಿಗಳು ತಮ್ಮನ್ನು ಇನ್ನೊಂದು ಜಾತಿಗಿಂತ ಕೆಳಗಿಟ್ಟಿರುವುದು ಸರಿಯಿಲ್ಲ – ನಾವು ಅವರಿಗಿಂತ ಮೇಲೆ – ಇಂತಹ ಜಾತಿ ನಮಗಿಂತ ಕೆಳಗೆ ಹೀಗೆ ಹಲವು ಗೊಂದಲಗಳು ಉಂಟಾಯಿತು. ಈ ಕಾಲದಲ್ಲಿ ಅನೇಕ ಜಾತಿ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು. ಇವು ತಮ್ಮ ಜಾತಿ ಸದಸ್ಯರಿಗೆ ಇನ್ನೊಮ್ಮೆ ಸಮೀಕ್ಷಕರು ಬಂದಾಗ ಜಾತಿ ಹೆಸರು ಏನು ಹೇಳಬೇಕು. ಹೇಳಬಾರದು ಎಂಬುದರ ಸೂಚನೆ ಕೊಡಲಾರಂಬಿಸಿದವು. ಉದಾ: ತಮಿಳುನಾಡಿನ ಶಾಣರು ಎಂಬ ಜಾತಿ ತಮ್ಮನ್ನು ನಾಡರು ಎಂದುಕೊಂಡರು. ಇನ್ನೂ ಮುಂದೆ ಹೋಗಿ ಅವರು ತಮ್ಮ ಜಾತಿಯ ಹೆಸರಿನ ಮುಂದೆ 'ಕ್ಷತ್ರಿಯ' ಎಂಬ ವಿಶೇಷಣವನ್ನು ಸೇರಿಕೊಂಡು 'ಕ್ಷತ್ರಿಯನಾಡರು' ಎಂದು ಗುರುತಿಸಿಕೊಂಡರು' *(ಅದೇ, ಪುಟ–೩).* ಅನೇಕ ಜಾತಿಗಳು ತಮ್ಮನ್ನು ತಾವು ಇನ್ನೂ ಮೇಲಿನ ದರ್ಜೆಯವರು ಎಂದೂ ಹಲವು ಜಾತಿ ತಮ್ಮ ಜಾತಿ ಹೆಸರಿನ ಮುಂದೆ ವಿಶೇಷಣಗಳನ್ನು ಸೇರಿಸಿಕೊಳ್ಳುವ ಕಾರ್ಯಕ್ಕೆ ಮುಂದಾದವು. ಒಟ್ಟಾರೆ ರಿಸ್ಲೆಯ ಪಟ್ಟಿ ಜಾತಿ ವ್ಯವಸ್ಥೆಯಲ್ಲಿ ಹಲವು ಸಂಚಲನ – ಗೊಂದಲಗಳಿಗೆ ಎಡೆಮಾಡಿಕೊಟ್ಟಿದ್ದು ಇವರ ಮುಖ್ಯ ಕೊಡುಗೆ ಎನ್ನಬಹುದು.

'ಸೆಲೆಸ್ಟಿನ್ ಬ್ಯೂಗಲ್ ಫ್ರೆಂಚ್ ಚಿಂತಕ ಮತ್ತು ಸಮಾಜಶಾಸ್ತ್ರಜ್ಞ ಯೂರೋಪಿನ ಸಮಾನಾಂತರ ಸಂಸ್ಕೃತಿಯ ಬಗ್ಗೆ ಸಿದ್ಧಾಂತವೊಂದನ್ನು ರೂಪಿಸುತ್ತಿದ್ದಂತಹವನು. ಜಾತಿ ಬಗ್ಗೆ ಪ್ರಬಂಧಗಳು ಎನ್ನುವ ಪುಸ್ತಕದಲ್ಲಿ ಬಿಡಿ ಬಿಡಿ ಲೇಖನಗಳನ್ನು ಸಂಕಲಿಸಿ ನೀಡಿದನು. ಬ್ಯೂಗಲ್ ನ ಈ ಪುಸ್ತಕ ೧೯೦೮ ರಲ್ಲಿ ಮೊದಲ ಬಾರಿಗೆ ಫ್ರೆಂಚ್ ಭಾಷೆಯಲ್ಲಿ Essais sun le requiredes castes ಪ್ರಕಟವಾಯಿತಾದರೂ ಇದರ ಇಂಗ್ಲೀಷ್ ಆವೃತ್ತಿ, ೧೯೭೧ ರಲ್ಲಿ *(ಪೋಕಾಕ್ ನಿಂದ ಅನುವಾದಿಸಿ) ಹೊರಬಂದಿತು' (ಅದೇ, ಪುಟ–೫).* ಬ್ಯೂಗಲ್ ತನ್ನ ಪುಸ್ತಕದಲ್ಲಿ ಜಾತಿ, ಜಾತಿ ಮತ್ತು ನ್ಯಾಯ, ಜಾತಿ ಮತ್ತು ಆರ್ಥಿಕತೆ ಮತ್ತು ಬುದ್ಧ ಧರ್ಮದ ಮೇಲೆ ಟಿಪ್ಪಣಿಗಳನ್ನು ಮಾಡುತ್ತಾನೆ. ಬ್ಯೂಗಲ್ ಜಾತಿ ವ್ಯವಸ್ಥೆಗೆ ಸಂಬಂಧಿಸಿದಂತೆ ಮೂಲಭೂತವಾದ ಮೂರು ಲಕ್ಷಣವನ್ನು ಗುರುತಿಸುವುದರೊಂದಿಗೆ ಜಾತಿಯ ಅಂತಃ ಸತ್ವಹಿಡಿಯಲೆತ್ನಿಸಿದ. ಈ ಮೂರು ಲಕ್ಷಣಗಳು ಭಾರತದಲ್ಲಿ ಅನುವಂಶಿಕ ಸಮೂಹಗಳನ್ನು ಒಂದುಗೂಡಿಸುವ ಪ್ರತ್ಯೇಕಿಸುವಂತ ದ್ವಂದ್ವಾತ್ಮಕ ಕಾರ್ಯ ಮಾಡುತ್ತದೆ ಎನ್ನುತ್ತಾನೆ. ಆ ಲಕ್ಷಣಗಳೆಂದರೆ;

೧) ಪ್ರತ್ಯೇಕತೆ – ವಿವಾಹ, ಸಾಮಾಜಿಕ ಅಂತರ್ ಕ್ರಿಯೆ, ಇತ್ಯಾದಿ.

೨) ಶ್ರಮ ವಿಭಜನೆ – ವೃತ್ತಿಯ ಹೆಸರಿನಲ್ಲಿ ಇದುವೇ ಅಂತರ್ ಅವಲಂಬನೆಗೆ ಕಾರಣ.

೩) ಏಣಿಶ್ರೇಣಿ – ಅಂತಸ್ತಿಗನುಗುಣವಾಗಿ ಶ್ರೇಣಿಗಳಿದ್ದರೂ ಪರಸ್ಪರ ಸಂಬಂಧಿತವಾಗಿರುತ್ತದೆ.

ಈ ಲಕ್ಷಣ ಯಾವ ಆಧಾರದಲ್ಲಿ ಜಾತಿಯಲ್ಲಿ ಕಂಡುಬರುತ್ತದೆ ಎಂದರೆ, ಬ್ಯೂಗಲ್ ಸರಳವಾಗಿ ಅದು ಶುದ್ಧ ಮತ್ತು ಅಶುದ್ಧತೆ ಎದುರಾಗುವಿಕೆಯಲ್ಲಿ ಎನ್ನುತ್ತಾನೆ. ಈ ಅಂಶ ಗುರುತಿಸುವುದು ಈತನ ಜಾತಿ ಅಧ್ಯಾಯದಲ್ಲಿ ಉಲ್ಲೇಖಾರ್ಹ ಕೊಡುಗೆ ಎನ್ನಬಹುದು. 'ಇಲ್ಲಿ ಮುಖ್ಯವಾಗಿ ಬ್ಯೂಗಲ್ ಬುದ್ಧ ಧರ್ಮದ ಕುರಿತು ಮಾತನಾಡತೊಡಗುತ್ತಾನೆ. ಬ್ಯೂಗಲ್, ಏಕೆಂದರೆ ಜಾತಿ ವಿರುದ್ಧ ಪ್ರತಿಭಟನೆ

ಎಂದಾಕ್ಷಣ ಬುದ್ಧನ ಕಡೆ ಎಲ್ಲರೂ ಕೈತೋರಿಸುತ್ತಾರೆ. ಬ್ಯೂಗಲ್ ನೆರ್ನಾರ್ಟ್‌ನ ಮಾತಿನ ಜೆಂಬಲದಲ್ಲಿ ಈ ರೀತಿ ಹೇಳುತ್ತಾನೆ. ಬುದ್ಧ ಧರ್ಮ, ನೊಬಲರಿಗೆ ರೂಪಿಸಿದ ವಿಚಾರ, ಕ್ಷತ್ರಿಯ ಪಂಥದ ತಾತ್ವಿಕ ವಿಚಾರ, ಇದರ ತತ್ವಶಾಸ್ತ್ರ ತರ್ಕ ಬ್ರಾಹ್ಮಣರ ವಿರುದ್ಧ ಅವರ ಮೇಲ್ಪೈ ಪ್ರಶ್ನಿಸಿದ ಕ್ಷತ್ರಿಯ ತರ್ಕ ಎನ್ನುವ ಪರಿಭಾವನೆ ಉಂಟಾಗುವುದನ್ನು ಪಡೆಯಲು ಸಾಧ್ಯವಿಲ್ಲ ಎನ್ನುತ್ತಾನೆ' *(ಅದೇ, ಪುಟ-೮).*

ಜೆ ಹೆಚ್ ಹಟ್ಟನ್ ಆಡಳಿತಗಾರನಾಗಿದ್ದೂ ವಿದ್ವಾಂಸನಾಗಿ ಬದಲಾದವನು. ೧೯೩೧ರ ಭಾರತದ ಜನಸಂಖ್ಯಾ ಆಯೋಗದ ಕಮೀಷನರ್ ಆಗಿದ್ದವನು. ಸ್ವಾತಂತ್ರ್ಯ ನಂತರದ ಜನಗಣತಿಗೆ ಇದನ್ನೇ ಮಾನದಂಡವಾಗಿ ಇಟ್ಟುಕೊಳ್ಳಲಾಗಿದೆ. ೧೯೪೪ ರಲ್ಲಿ ಈತನ ಅಮೂಲ್ಯ ಕೃತಿ 'Caste in India' ಪ್ರಕಟವಾಯಿತು. ಜನಾಂಗಶಾಸ್ತ್ರದ ಜೊತೆಗೆ ಈತ ಜಾತಿಯ ಪ್ರದೇಶವಾರು (ದಕ್ಷಿಣ, ಪೂರ್ವ, ಪಶ್ಚಿಮ ಮತ್ತು ಉತ್ತರ ಕೇಂದ್ರ) ವ್ಯತ್ಯಾಯಗಳನ್ನು ಗಮನದಲ್ಲಿಟ್ಟುಕೊಂಡು ಮಾತನಾಡುತ್ತಾನೆ. ಜೊತೆಗೆ ಈತನಂತೆ ನೂರಾರು ಜನ ಜನಾಂಗೀಯ ಕ್ಷೇತ್ರದಲ್ಲಿ ನಡೆಸಿದ ಅಧ್ಯಾಯಗಳ ವಿವರಣೆಗಳನ್ನು ಪುಸ್ತಕದಾದ್ಯಂತ ಕೊಡುತ್ತಲೇ ಹೋಗುತ್ತಾನೆ. "ಹಟ್ಟನ್ ಜಾತಿ ವ್ಯವಸ್ಥೆಯ ರಚನೆಗಳು (Structure) ಅನುಮೋದನೆ (Sanction) ಹಾಗೆ 'ಕಾರ್ಯ' (Function) ಗಳನ್ನು ತನ್ನ ಪುಸ್ತಕದಾದ್ಯಂತ ವಿವರಿಸುತ್ತಾ ಹೋಗುತ್ತಾನೆ. ಜಾತಿಯ ರಚನೆಗಳೆಂದರೆ ಭಿನ್ನ ಜಾತಿಗಳ ಮಧ್ಯೆ ಇರಬಹುದಾದಂತಹ ಅಂತರ್ ಕ್ರಿಯ ರೂಪವನ್ನೂ ಇದು ವಿವರಿಸುತ್ತದೆ. ಜಾತಿ ವ್ಯಕ್ತಿಗಳಿಗೆ ಒಂದು ನಿಗಧಿತವಾದ ಸಾಮಾಜಿಕ ವಾತಾವರಣ ಒದಗಿಸುತ್ತದೆ ಎಂದಿದ್ದಾರೆ" (ಅದೇ, ಪುಟ-೧೦).

ಲೂಯಿ ಡೂಮೋನ್ನ Homo Hierarchie (ಹೋಮೋ ಹೈರಾರ್ಕಿಸ್) ಎರಡನೇ ವಿಶ್ವಯುದ್ಧದ ಕೊನೆವರೆಗೆ ಬಂದ ಜಾತಿ ಅಧ್ಯಯನಗಳಲ್ಲಿ ಅತ್ಯಂತ ಪ್ರಭಾವಶಾಲಿ ಕೊಡುಗೆ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಜಾತಿ ಅಧ್ಯಯನ ಕ್ಷೇತ್ರದಲ್ಲಿ ಡ್ಯೂಮೋನ ಸಿದ್ಧಾಂತ ಅತ್ಯಂತ ಮುಖ್ಯವಾದುದ್ದು ಹಾಗೆ ನೋಡಿದರೆ ಜಾತಿಯ ಬಗ್ಗೆ ಒಂದು ಪೂರ್ಣ ಪ್ರಮಾಣದ ಸಿದ್ಧಾಂತ ಇದೆ ಎಂದರೆ ಅದು ಈತನದೇ. ಡ್ಯೂಮೋನ ಜಾತಿ ಸಿದ್ಧಾಂತದ ಕೇಂದ್ರ ಅಂಶವೇ ಅಧಿಕಾರ ಮತ್ತು ಅಂತಸ್ತಿನ ಶ್ರೇಣೀಕರಣ ವಿವರಿಸುವುದು. (ಆತನ ಸಿದ್ಧಾಂತ ಹಲವು ವಾದಗಳಿಗೆ ಕಾರಣವಾಗಿರುವುದು ಸಹ ಇದೇ ಅಂಶ) ಡ್ಯೂಮೋ ಹೇಳುವುದು ಶುದ್ಧ - ಅಶುದ್ಧದ ವೈರುಧ್ಯ ಉಳಿದುಕೊಂಡು ಬಂದಿರುವುದು. ಧಾರ್ಮಿಕ ಅಂತಸ್ತು ಮತ್ತು ಪ್ರಾಪಂಚಿಕ ಅಧಿಕಾರವನ್ನು ಹಿಂದೂಗಳು ಪ್ರತ್ಯೇಕವಾಗಿ ನೋಡುವುದರಿಂದ ಎನ್ನುತ್ತಾನೆ.

ಆತನ ಮುಖ್ಯ ವಾದವೆಂದರೆ 'ಜಾತಿ' ವ್ಯವಸ್ಥೆಯೊಳಗೆ ಧಾರ್ಮಿಕ ಅಧಿಕಾರದ ಬ್ರಾಹ್ಮಣರು ಮತ್ತು ಲೌಕಿಕ ಅಧಿಕಾರದ ರಾಜ (ಅಧಿಕಾರ ಹೊಂದಿರುವ - ರಾಜಕೀಯವಾಗಿ ಪ್ರಬಲ ಸ್ಥಳೀಯ ಪ್ರಬಲ ಜಾತಿ) ಎಂಬ ಎರಡು ಅಧಿಕಾರದ ಧೃವಗಳಿವೆ. 'ಡ್ಯೂಮೋ ಜಾತಿ ವಾಸ್ತವದಲ್ಲಿ (ಪ್ರಾಪಂಚಿಕವಾಗಿ) ಹೇಗಿದೆ ಎಂದು ವಿವರಿಸದೆ, ಜಾತಿ ಸದಸ್ಯರ ಪ್ರಜ್ಞೆಯಲ್ಲಿ ಹೇಗೇ ಕೆಲಸ ಮಾಡುತ್ತಿದೆ ಎನ್ನುವುದನ್ನು ವಿವರಿಸುತ್ತಿದ್ದಾನೆ' *(ಅದೇ, ಪುಟ-೨೩).* ಡ್ಯೂಮೋ ಜಾತಿಯನ್ನು ಒಂದು ಮಾನಸಿಕ / ಪ್ರಜ್ಞೆಯ ಸ್ಥಿತಿ ಎನ್ನುತ್ತಾನೆ. ಡ್ಯೂಮೋ ಜಾತಿಯನ್ನು ರಚನಾತ್ಮಕ ದೃಷ್ಠಿಯಲ್ಲಿ ನೋಡುತ್ತಾನೆ.

ಅಂದರೆ ಪ್ರತಿ ಜಾತಿಯನ್ನು ಒಂದೊಂದು ಪ್ರತ್ಯೇಕ ಘಟಕವಾಗಿ ನೋಡದೆ, ಅದನ್ನು ಪರಸ್ಪರ ಸಂಬಂಧಗಳ ವ್ಯವಸ್ಥೆಯಾಗಿ ನೋಡಬೇಕು ಎನ್ನುತ್ತಾನೆ. ಒಟ್ಟಾರೆ ಡ್ಯೂಮೋ ಜಾತಿಯನ್ನು ಮೌಲ್ಯಗಳ ವ್ಯವಸ್ಥೆ ಸಂಬಂಧಗಳ ವ್ಯವಸ್ಥೆಯಾಗಿ ನೋಡುತ್ತಾನೆ. ಜಾತಿ ನಿಂತಿರುವುದು ಮೌಲ್ಯಗಳ ಮೇಲೆ ಆದರ್ಶಗಳ ಮೇಲೆ ಎನ್ನುತ್ತಾನೆ.

'ಜಾತಿ ಅಧ್ಯಯನದ 'ಪೂರ್ವ ಇತಿಹಾಸ' ವಿರಹುದು, ಇಲ್ಲವೇ 'ಇತಿಹಾಸ' ಕಾರರು ಪ್ರವೇಶ ಮಾಡಿ ಜಾತಿಯ ಯಾವುದೇ ಚರ್ಚೆಯಲ್ಲಿ ತಕ್ಷಣ ಬಂದೇ ಬರುವ ಹೆಸರು ಎಂ. ಎನ್. ಶ್ರೀನಿವಾಸ್ ಇವರ ಕೊಡುಗೆ ಎಲ್ಲಾ ಸಮಾಜಶಾಸ್ತ್ರೀಯ ಬೋಧಕರೆಲ್ಲರಿಗೂ ಚೆನ್ನಾಗಿ ತಿಳಿದಿದೆ ಹಾಗೆ ನೋಡಿದರೆ 'ಸಂಸ್ಕೃತಾನುಕರಣ' ಪ್ರಬಲ ಜಾತಿಯ ಪರಿಕಲ್ಪನೆ ಕೊಟ್ಟಿರುವವರೇ ಎಂ. ಎನ್. ಶ್ರೀನಿವಾಸ್ ರವರು ಆಗಿದ್ದಾರೆ' *(ಅದೇ, ಪುಟ–೨೮).* ಶ್ರೀನಿವಾಸರ ಬರವಣಿಗೆಯಲ್ಲಿ ಜಾತಿಗೆ ಸಂಬಂಧಿಸಿದಂತೆ ಇರುವ ಮುಖ್ಯ ಕೊಡುಗೆಗಳಲ್ಲಿ 'ಸಂಸ್ಕೃತಾನುಕರಣ' ಪರಿಕಲ್ಪನೆ ಮುಖ್ಯವಾದದು. ಈ ಪರಿಕಲ್ಪನೆ ಜಾತಿಯೊಂದು ತನ್ನ ಪ್ರಸ್ತುತ ಅಂತಸ್ತನ್ನು ಹೆಚ್ಚಿಸಿಕೊಳ್ಳಲು ಮಾಡುವ ಪ್ರಯತ್ನಗಳ ಪ್ರಕ್ರಿಯೆಯನ್ನು ಗುರುತಿಸುವಂತಹದ್ದು. ಆರಂಭದಲ್ಲಿ ಶ್ರೀನಿವಾಸರು ಎಲ್ಲಾ ಜಾತಿಯು ತಮ್ಮ ಅಂತಸ್ತನ್ನು ಹೆಚ್ಚಿಸಿಕೊಳ್ಳಲು ಬ್ರಾಹ್ಮಣರನ್ನು ಅನುಕರಿಸುತ್ತಾರೆ ಎಂದು ಅದನ್ನು 'ಬ್ರಾಹ್ಮಣೀಕರಣ' ಎಂಬ ಪರಿಕಲ್ಪನೆಯಲ್ಲಿ ವಿವರಿಸುತ್ತಿದ್ದರು. ಅನಂತರ ಅಂತಸ್ತಿನ ಹೆಚ್ಚಳಕ್ಕೆ ಬ್ರಾಹ್ಮಣರು ಮಾತ್ರವಲ್ಲದೇ ಬೇರೆ ಜಾತಿಗಳನ್ನು ಸಹ ಅನುಕರಿಸುವುದನ್ನು ಕಾಣಬಹುದಾಗಿದೆ. ಈ ರೀತಿಯ ಅನುಕರಣೆ ಜಾತಿ ವ್ಯವಸ್ಥೆಯಿಂದ ಆಚೆ ಇರುವ ಬುಡಕಟ್ಟಿನಲ್ಲೂ ಕಾಣಬಹುದು ಎಂದು ಹೇಳಿ ಅದನ್ನು 'ಸಂಸ್ಕೃತಾನುಕರಣ' ಎಂದು ತಿದ್ದುಪಡಿ ಮಾಡಿದರು.

'ದೀಪಾಂಕರ್ ಗುಪ್ತ ಭಾರತದ ಮುಖ್ಯ ಸಮಾಜಶಾಸ್ತ್ರಜ್ಞರಲ್ಲೊಬ್ಬರು ಇವರು ಜಾತಿಗೆ ಸಂಬಂಧಿಸಿದಂತೆ ಹಲವು ಲೇಖನಗಳನ್ನು ಬರೆದಿದ್ದಾರೆ. ಅವರ ಕೃತಿಯಾದ Interrogating Caste; under – standing Hierarchy and Difference in Indian society ಗೆ ಸಂಬಂಧಿಸಿದ್ದು', *(ಅದೇ, ಪುಟ–೩೧).* ಗುಪ್ತಾರವರು ಮೂಲಭೂತವಾಗಿ ಡ್ಯೂಮೋನ ಅಭಿಪ್ರಾಯ ಮೊದಲಿಗೆ ಸಂಪಾದಿಸುತ್ತಾ ಹೋಗುತ್ತಾರೆ. ಗುಪ್ತಾ ಹೇಳುವಂತೆ ಜಾತಿಯ ಬಗ್ಗೆ ಬೌದ್ಧಿಕ ಕ್ಷೇತ್ರದಲ್ಲಿ ಆಗುತ್ತಿರುವ ಚರ್ಚೆಗಳಲ್ಲವೂ ಬ್ರಾಹ್ಮಣೀಯ ಸಾಂಸ್ಕೃತಿಕ ಪಠ್ಯಗಳನ್ನಾಧರಿಸಿ ಭಾರತಶಾಸ್ತ್ರೀಯ ಅಧ್ಯಯನದ ನೆಲೆಗಳನ್ನು ಆಧರಿಸಿದೆ. ಆದ್ದರಿಂದ ಇವು ಜಾತಿಯನ್ನು ಒಂದೇ ಆಯಾಮದಲ್ಲಿಟ್ಟು ನೋಡುವಂತೆ ಮಾಡಿದೆ. ಹಲವು ಜಾತಿಗಳು ತಮ್ಮ ಸಮಕಾಲೀನ ಸ್ಥಾನವನ್ನು ನಿರಾಕರಿಸಿ ಮೂಲದಲ್ಲಿ ತಾವು ಉನ್ನತ ಅಂತಸ್ತಿನಲ್ಲಿ ಇದ್ದೆವು ಎಂದು ಪ್ರತಿಪಾದಿಸಿರುವುದನ್ನು ಗುಪ್ತಾ ಸಂಗ್ರಹಿಸಿಕೊಡುತ್ತಾರೆ. ಗುಪ್ತಾರವರು ಹಲವು ಜಾತಿಗಳು ತಮ್ಮ ಹುಟ್ಟಿನ ಕಥನಕ್ಕೆ ಸಂಬಂಧಿಸಿದಂತೆ ಹೇಳಿದ ವಿಚಾರಗಳನ್ನು ಸಂಗ್ರಹಿಸಿ ಹೇಳಿದ್ದಾರೆ. ಡ್ಯೂಮೋನ ಬಗ್ಗೆ ಗುಪ್ತಾರ ಮೂಲಭೂತ ಟೀಕೆ ಎಂದರೆ, ಜಾತಿ ಯಾವುದೇ ಒಂದು ಮೌಲ್ಯದ ಮೇಲೆ ನಿಂತಿದೆ ಎಂದು ಹೇಳುತ್ತಾ ಜಾತಿ ಹೊಂದಿರಬಹುದಾದ ಆರ್ಥಿಕ, ಅಧಿಕಾರದ ಪ್ರಭಾವವನ್ನು ತಳ್ಳಿಹಾಕಿದ್ದಾನೆ ಎಂಬುದಾಗಿದೆ. ಅಲ್ಲದೇ ಇಂತಹ ವ್ಯತ್ಯಯಗಳೇ ನಮಗೆ

ಜಾತಿಯಲ್ಲಿ ಅಡಗಿರಬಹುದಾದ ಅಧಿಕಾರ ಮತ್ತು ಆರ್ಥಿಕ ಅಂಶಗಳ ನಿರ್ಧಾರಗಳನ್ನು ಗ್ರಹಿಸಲು ಸಾಧ್ಯವೆಂದು ದೀಪಾಂಕರ್ ಗುಪರ್ತ ಅಭಿಪ್ರಾಯ.

'ನಿಕೋಲಸ್ ಬಿ. ಡರ್ಕ್ಸ್ Castes of Mind ನಲ್ಲಿ ಮೂಲಭೂತವಾಗಿ ಕೇಳಿಕೊಳ್ಳುತ್ತಿರುವ ಪ್ರಶ್ನೆ ಏನು ಅಂದರೆ, 'ಜಾತಿ ಅನ್ನೋದು ಭಾರತೀಯ ಸಮುದಾಯದ ಕೇಂದ್ರ ಸಂಕೇತ (Core Symbol) ವಾಗಿ ರೂಪುಗೊಳ್ಳಲು ಕಾರಣವೇನು?' ಅಂದರೆ ರಿಸ್ಲೆಯಿಂದ ಆರಂಭಿಸಿ, ಗಾಂಧೀಜಿ ಮತ್ತು ಅಂಬೇಡ್ಕರ್, ರಾಮಮನೋಹರ ಲೋಹಿಯಾ, ಪೆರಿಯಾರ್ ರಾಮಸ್ವಾಮಿ, ಶ್ರೀ ನಾರಾಯಣಗುರು, ಇವರ ಚರ್ಚೆಯವರೆಗೂ ಜಾತಿ ವ್ಯವಸ್ಥೆಯನ್ನು ಹೊಗಳಿಯೋ, ತೆಗಳಿಯೋ ಅಂತಿಮವಾಗಿ ಇವರೆಲ್ಲಾ ಮುಖ್ಯವಾಗಿ ಪರಿಭಾವಿಸಿ ಕೊಂಡಿದ್ದಂತು ಜಾತಿ ಎನ್ನುವುದು ಭಾರತೀಯ ಸಮಾಜದ ಕೇಂದ್ರ ಅಂಶ ಜಾತಿ ಹೀಗಾಗಲು ಕಾರಣವೇನು ಎಂಬುದೇ ಡರ್ಕ್ಸ್‌ನ ಪ್ರಶ್ನೆ' *(ಅದೇ, ಪುಟ-೩೬).* ಜಾತಿಯಂತಹ ಒಂದು ವ್ಯವಸ್ಥೆ ಇಡೀ ಭಾರತೀಯ ನಾಗರೀಕತೆ ಸಂಸ್ಕೃತಿಯ ಕೇಂದ್ರ ಸಂಕೇತವೆಂದು ಸಹ ಹೇಳಲು ಬರುವುದಿಲ್ಲ. ಇವತ್ತು ನಾವು ಜಾತಿ ವ್ಯವಸ್ಥೆ ಎಂದು ಏನನ್ನು ಮಾತನಾಡುತ್ತಿದೇವೋ ಅದು ತೀರ ಆಧುನಿಕ ವಿದ್ಯಮಾನ. ಈ ಜಾತಿ ವ್ಯವಸ್ಥೆ ಭಾರತ ಮತ್ತು ಪಶ್ಚಿಮದ ಘರ್ಷಣೆಯಿಂದ ನಿರ್ಮಿತವಾಗಿರುವಂತಹ ಉತ್ಪನ್ನ. ಹಾಗೆಂದ ಮಾತ್ರಕ್ಕೆ ಬ್ರಿಟೀಷರ ಬುದ್ಧಿವಂತಿಕೆಯಿಂದ, ಎಚ್ಚರಿಕೆಯಿಂದ ಜಾತಿ ಅನ್ನೋದನ್ನು ಸೃಷ್ಠಿಸಿ ಭಾರತೀಯರ ಮೇಲೆ ಹೇರಿಬಿಟ್ಟರು ಎಂದಲ್ಲಾ ಬ್ರಿಟಿಷರ ಕಾಲಾವಧಿಯಲ್ಲಿ ಜಾತಿ ಹೇಗೆ ರೂಪುಗೊಂಡಿತು ಎಂದರೆ ಆತನ ಪ್ರಕಾರ ಜಾತಿಯು ಭಾರತದ ವೈವಿಧ್ಯಮಯ ಸಾಮಾಜಿಕ ಆಸ್ಮಿತೇ (Identity) ಸಾಮಾಜಿಕ ಸಂಘಟನೆ, ಸಮುದಾಯಗಳ ಸ್ವರೂಪವನ್ನು ವಿವರಿಸುವ ಅಭಿವ್ಯಕ್ತಿಸುವ ಸಂಘಟಿಸುವ ಹಾಗೆ ವ್ಯವಸ್ಥೆಗೊಳಿಸಲು ಸೂಕ್ತವಾದ ಏಕೈಕ ಪರಿಕಲ್ಪನೆಯಾಗಿ ರೂಪುಗೊಂಡಿತು ಎನ್ನುತ್ತಾನೆ. ಭಾರತೀಯರಲ್ಲಿ ಕೇವಲ ಜಾತಿ ಮಾತ್ರವಲ್ಲದೇ ಪ್ರಾದೇಶಿಕ, ಗ್ರಾಮ, ವಸತಿ, ಪ್ರದೇಶ, ಕುಲ ಸಂಬಂಧಗಳ ಆಸ್ಮಿತತೆಯ ಸಹ ಪ್ರಮುಖವಾದವುಗಳೇ, ಜೊತೆಗೆ ವಸಾಹತುಶಾಹಿತ್ವ, ಜಾತಿಯನ್ನು ಒಂದೇ ಘಟಕ ಅಥವಾ ಒಂದೇ ಲೌಕಿಕ ಪ್ರವರ್ಗವಾಗಿ ನೋಡುತ್ತದೆ. ಜಾತಿಗಳಲ್ಲಿಯೂ ಸಹ ಪ್ರದೇಶವಾರು, ಭಾಷಾವಾರು, ಗ್ರಾಮವಾರು ಹಲವು ವ್ಯತ್ಯಯಗಳು ಇವೆ ಎನ್ನುತ್ತಾನೆ ಡರ್ಕ್ಸ್.

ನಮ್ಮ ಸಮಾಜದಲ್ಲಿ ಕಾಲಕ್ಕೆ ತಕ್ಕ ಮಹತ್ವದ ಕೆಲವು ಮಾರ್ಪಾಟುಗಳಾಗಬೇಕೆಂದು ಪ್ರಯತ್ನಿಸದ ಆಧುನಿಕರಲ್ಲಿ ಶ್ರೀರಾಜಾರಾಮ ಮೋಹನರಾಯರು ಮೊದಲಿಗರು (ಕ್ರಿ.ಶ. ೧೮೨೮) ಇವರು ಹಿಂದೂ ಸಮಾಜದೊಳಗಿನ ಜಾತಿಭೇದ ಮೊದಲಾದವುಗಳನ್ನು ತೊಡೆದು ಹಾಕಬೇಕೆಂದು ಪ್ರಯತ್ನಿಸಿದರೂ ಆಗ ಸಮಾಜವು ಈ ವಿಷಯದಲ್ಲಿ ತೀರ ವಿರೋಧವುಳ್ಳದಾಗಿತ್ತು. ಕಾಲಚಕ್ರದಲ್ಲಿ ಸಿಲುಕಿ ಕಂಗೆಟ್ಟು ಜಾತಿಧರ್ಮಗಳ ಮೂಲೋದ್ದೇಶವನ್ನೆ ಮರೆತರೂ ನಮ್ಮ ಸಮಾಜವು ಎಂತಹ ಕಗ್ಗತ್ತಲೆಯೊಳಗಿಂದ ಪಾರಾಗಿ ಬಂದಿದೆಯೆಂಬುದನ್ನು ನೆನೆದರೆ ಯಾರಿಗಾಗಲಿ ಸೋಜಿಗವನೆಸಿದೆ ಇರದು. ಗೋವೆಯೊಳಗಿನ ಪರಂಗಿಗಳು ಕ್ರಿಸ್ತಧರ್ಮ ಪ್ರಸಾರಕ್ಕಾಗಿ ನಡೆಸಿದ ಅತ್ಯಾಚಾರಗಳನ್ನು ಎದುರಿಸಲು ಹಿಂದೂಸಮಾಜವು ನಡೆದುಕೊಂಡ ಬಗೆಯು ಅಂದಿನ ಮುಂದಾಳುಗಳ ತಿಳಿಗೇಡಿತನವನ್ನೆ ಬಯಲಿಗೆ ತರುತ್ತದೆ. ಧರ್ಮ

ಪ್ರಸಾರಕ ಪಾದ್ರಿಗಳು, ಇರುಳು ಯಾವುದಾದರೂ ಒಂದು ಮನೆಯ ಮೇಲೆ ಮಾಂಸದ ಒಂದು ತುಂಡು ಚೆಲ್ಲಿದ್ದರೆ, ಮರುದಿನ ಹಿಂದೂ ಸಮಾಜವು ಆ ಮನೆಯವರನ್ನೆ ಜಾತಿಬಾಹಿರರೆಂದು ಅವರೊಡನೆ ಎಲ್ಲ ವ್ಯವಹಾರಗಳನ್ನು ನಿಲ್ಲಿಸುತ್ತಿತ್ತು! ತಮ್ಮ ಉಪದೇಶಕ್ಕೆ ಮನಮೆಚ್ಚಿ ಯಾರೂ ಕ್ರಿಸ್ತಿಗಳಾಗದೆ ಇರುವುದನ್ನು ಕಂಡು ಅಂದಿನ ಪಾದ್ರಿಗಳು ಈ ಹಂಚಿಕೆಯನ್ನು ಕಂಡುಹಿಡಿದು ತಮ್ಮ ಕೆಲಸವನ್ನು ಸಾಧಿಸಿದರು. ಹಲವರನ್ನು ಕ್ರಿಸ್ತಿಗಳನ್ನಾಗಿ ಪಡೆದುಕೊಂಡರು. ಆ ಮನೆಯವರು ಹಿಂದೂಧರ್ಮದಲ್ಲಿ ಉಳಿಯಲು ಹಂಬಲಿಸುತ್ತಿದ್ದರೂ ಅವರೊಡನೆ ಉಳಿದವರು ಅಸಹಕಾರವನ್ನೆ ಆರಂಭಿಸಿದ್ದರಿಂದ ಆ ಜನರಿಗೆ ಕ್ರಿಸ್ತಿಗಳಾಗದೆ ಬೇರೆ ದಾರಿಯೆ ಇರಲಿಲ್ಲ.

'ಗೋವೆಯ ಪಾದ್ರಿಗಳು ಜುಟ್ಟು ಬಿಟ್ಟವರಿಗೆ ಧಾರ್ಮಿಕ ಕರವನ್ನು ಹಾಕಿದರು. ಚೆಂಡಿಕೆಯ ಆಕಾರದಂತೆ ಹೆಚ್ಚು ಅಥವಾ ಕಡಿಮೆ ಕರವನ್ನು ಕೊಡಬೇಕಾಗುತ್ತಿದ್ದಿತು. ಅನೇಕರು ಹೆಚ್ಚು ಚಂಡಿಕೆ ಇಟ್ಟು ಹೆಚ್ಚು ಕರವನ್ನು ಕೊಡುವುದರಲ್ಲಿ ಹೆಮ್ಮೆ ಪಡುತ್ತಿದ್ದರು. ಜುಟ್ಟದ ಕರವನ್ನು ಉಳಿದವರಿಗಿಂತ ಹೆಚ್ಚು ಕೊಡುವುದು ಅವರ ವಿಶೇಷ ಧರ್ಮಾಭಿಮಾನದ ದ್ಯೋತಕವೆಂದು ಅಂದಿನ ಜನದ ತಿಳಿವಳಿಕೆಯಾಗಿತ್ತು! ಕಂನಾಡ ಕರಾವಳಿಯಲ್ಲಿ ಅಲ್ಬುಕರ್ಕನು ಹಾಗೂ ಪೋರ್ತುಗೀಸ ಪಾದ್ರಿಗಳು ಬಂದು ಧರ್ಮಪ್ರಸಾರಕ್ಕಾಗಿ ನಡೆಸಿದ ಕೋಲಾಹಲ ಕಾಲದ ಇತಿಹಾಸದಲ್ಲಿ ಅಂದಿನ ನಮ್ಮ ಧಾರ್ಮಿಕ ಕಲ್ಪನೆಗಳ ಚಿತ್ರವೂ ಚೆನ್ನಾಗಿ ಒಡಮೂಡಿ ನಿಂತಿದೆ. ೧೭, ೧೮, ೧೯ನೆಯ ಶತಮಾನಗಳಲ್ಲೂ ನಮ್ಮ ಜಾತಿ, ಧರ್ಮಗಳ ತಿಳುವಳಿಕೆಗಳು ದಿನದಿನಕ್ಕೆ ಹೀಗೆಯೆ ವಿರೂಪಗೊಳ್ಳುತ್ತಲೆ ನಡೆದುದು, ನಮ್ಮ ರಾಷ್ಟ್ರದಲ್ಲಾದ ಹಲವು ಘಟನೆಗಳಿಂದ ಸ್ಪಷ್ಟವಾಗುತ್ತದೆ' *(ಶಂಬಾ, ಮಲ್ಲೇಪುರಂ ಜಿ ವೆಂಕಟೇಶ (ಸಂ), ೧೯೯೯, ಪುಟ-೧೫೬).* ಅಂದಿನ ಜನತೆಯಲ್ಲಿ ಧಾರ್ಮಿಕ ಭಾವನೆಯು ಆಳವಾದ ಬೇರುಬಿಟ್ಟಿತು. ತಾವು ಧಾರ್ಮಿಕರು, ತಾವು ಪವಿತ್ರರು ಎಂಬ ಈರ್ಷೆಯಲ್ಲಿ ಪ್ರತಿಯೊಂದು ಜಾತಿಮತದವರೂ ಒಬ್ಬರಿಂದೊಬ್ಬರು ದೂರವಾಗುತ್ತ ನಡೆದರು. ಒಬ್ಬರನ್ನೊಬ್ಬರು ಕೀಳ್ಗಗೆಯಲಾರಂಭಿಸಿದರ, ಮುಸಲ್ಮಾನರು ಮೈಮೇಲೆ ಬಂದರು, ಅವರು ಏರಿಬಂದಂತೆ ನಮ್ಮ ಮಡಿಯನ್ನು ಕಾಯ್ದುಕೊಳ್ಳಲು ನಾವು ಹಿಂದೆ ಹಿಂದೆ ಸರಿಯುತ್ತ ನಡೆದವು. ಭಾರತವು ಸ್ವಾತಂತ್ರ್ಯವನ್ನು ಕಳೆದುಕೊಂಡಿತು. 'ದೇಶವು ಹೋಗಲಿ ನಮ್ಮ ಧರ್ಮವೊಂದು ಉಳಿದರೆ ಸಾಕು' ಎಂಬ ಪ್ರವೃತಿಯು ತೋರಿಬಂತು. ಪರಕೀಯರ ಸೇವಕರಾಗಿ-ತಮ್ಮ ದೇಶವನ್ನು ದಾಸ್ಯದಲ್ಲಿಡಲು ಕಾರಣರಾಗಿ ಬದುಕುತ್ತಿದ್ದರೂ ಭವ್ಯವಾಗಿ ಜುಟ್ಟು, ಜನಿವಾರ, ಲಿಂಗ, ಮುದ್ರೆಗಳನ್ನು ಧರಿಸಿ ತಾವು ಪರಮಧಾರ್ಮಿಕರೆಂಬ ಮದದ ಭ್ರಾಂತಿಯಲ್ಲಿ ನಮ್ಮ ಜನ ಹೊರಳಾಡುತ್ತಲಿದ್ದಿತು.

'ಬ್ರಿಟೀಷರು ನಮ್ಮ ದೇಶಕ್ಕೆ ಬಂದ ಮೇಲೆ, ಇವರು ಮುಸಲ್ಮಾನರಂತೆ ಹುಂಬತನದಿಂದ ಸುಲಿಯಲಿಲ್ಲ. ಮುಸಲ್ಮಾನರು ದಾಳಿಮಾಡಿ ದೇವಸ್ಥಾನಗಳನ್ನೂ ನಾಡಿನ ಸಿರಿವಂತರನ್ನೂ ಲೂಟಿ

ಮಾಡುತ್ತಿದ್ದರು. ಒತ್ತಾಯದಿಂದ ಧರ್ಮಾಂತರಗಳನ್ನು ನಡೆಸುತ್ತಿದ್ದರು. ಹಿಂದೂ ಹೆಣ್ಣುಮಕ್ಕಳನ್ನು ಅಸಹ್ಯವಾಗಿ ನಡೆಸಿಕೊಳ್ಳುತ್ತಿದ್ದರು. ಈ ಕಾರಣದಿಂದ ತೀರ ಅಸಹ್ಯತನಕ್ಕೆ ಆಗ–ಈಗ ಹಿಂದೂ ಜನ ಮಂಡು ಏಳುತ್ತಲಿತ್ತು. ತಮ್ಮ ಧರ್ಮರಕ್ಷಣೆಗಾಗಿ 'ಹಿಂದೂರಾಯ ಸುರತ್ರಾಣರು' ಮುಂದೆ ಬಂದರು. 'ಹಿಂದೂ ಪದಪಾದಶಾಹಿ' ತಲೆಯತ್ತಲು ಹವಣಿಸಿತು. ೧೬ನೆಯ ಶತಕದ ಸಂಕುಚಿತ ಧಾರ್ಮಿಕ ಭಾವನೆಯ ಮಾದರಿಯನ್ನು ತೋರಿಸುವ ಎರಡು ಉದಾಹರಣೆಗಳನ್ನು ಇಲ್ಲಿ ಎತ್ತಿ ಹೇಳಬಹುದು. ರಕ್ಕಸತಂಗಡಿಯ ಕಾಳಗದಲ್ಲಿ 'ಹಿಂದೂರಾಯ ಸುರತ್ರಾಣ' ರೆನಿಸಿದ ವಿಜಯನಗರದ ರಾಜರ ಎದುರಾಳಿಗಳೆಲ್ಲ ಮುಖ್ಯವಾಗಿ ಮುಸಲ್ಮಾನರೆ ಇದ್ದರಷ್ಟೇ. ಅವರು ಈ ಹಿಂದೂ ರಾಜ್ಯವನ್ನು ಸರ್ವ ಮೂಲ ನಾಶಮಾಡಲು ಹೊಂಚು ಹಾಕಿದ್ದುದೂ ಸುಪ್ರಸಿದ್ಧವಿದೆ. ಆದರೆ, ಹೀಗೆ ಹಿಂದೂ ರಾಜ್ಯವನ್ನು ಸಂಪೂರ್ಣ ನಾಶಮಾಡಲು ಅಣಿಯಾದ ಹಗೆಗಳ ಸೈನಿಕರಲ್ಲಿ ಹಿಂದೂ ವೀರರೂ ಸೇರಿಕೊಳ್ಳಬೇಕೆ, ಇವರೆಂತಹ ಹಿಂದುಗಳು ಎಂಬ ಪ್ರಶ್ನೆಗಳು ಉದ್ಭವಿಸಿದವು' *(ಅದೇ, ಪುಟ–೧೫೭).*

ವಿಜಯನಗರದ ಕೊನೆಯ ರಾಜರು ಹಿಂದೂ ಧರ್ಮದ ಒಂದು ವಿಶಿಷ್ಟ ಮತಕ್ಕೆ ಒಲಿದುದರಿಂದ, (ಹಿಂದೂ ಧರ್ಮದ) ತಮ್ಮ ವಿಶಿಷ್ಟ ಮತದ ಆವೇಶದಿಂದ ಒಂದುಗೂಡಿ ವಿದ್ಯೆಕಲೆಗಳ ಆಗರವಾದ ವಿಜಯನಗರದಲ್ಲಿ 'ನಮ್ಮ ಮತ ಮಿಗಿಲು;' 'ನಮ್ಮ ಪಂಥ ಹಿರಿದು;' 'ನಮ್ಮ ಮಠ ಶ್ರೇಷ್ಠ' ಎಂಬೀ ಬಗೆಯ ಹೆಮ್ಮೆ ಹೆಗ್ಗಳಿಕೆಯಲ್ಲಿ ಮೈಮರೆತಿರುವಾಗ ಬ್ರಿಟೀಷರ ಕೈಗೆ ಇಲ್ಲಿಯ ರಾಜ್ಯದಾಡಳಿತ ಬಂದುದು ನಮ್ಮ ದೇಶದ ಬಹುಜನ ಸಮಾಜಕ್ಕೆ ಬಹಳ ಸುಖಾವಹವೆನಿಸಿತು. ಏಕೆಂದರೆ ಪ್ರತಿಯೊಂದು ಮತ ಪಂಥದವರಿಗೂ ಮುಸಲ್ಮಾನರ ಕಾಲದ ಯಾವ ಅಡ್ಡಿ ಆಂತಕಗಳಿಲ್ಲದೆ ತಮ್ಮ ಧರ್ಮ–ಕರ್ಮಗಳಲ್ಲಿ ನಿರತರಾಗಲು ಅನುಕೂಲ ವಾತಾವರಣವು ದೊರೆತಂತೆ ಎನಿಸಿತು. ಬ್ರಿಟೀಷರು ರಾಜಕೀಯ ಸ್ವಾತಂತ್ರ್ಯವನ್ನು ಕಸಿದುಕೊಂಡು ಅದರ ಬೆಲೆಯೆಂಬಂತೆ ಇಲ್ಲಿಯ ಜನರಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ದಯಪಾಲಿಸಿದರು. ಮುಸಲ್ಮಾನರ ಕಾಲದಲ್ಲಿ ಎರಡೂ ಇದ್ದಿಲ್ಲ. ಈಗ ಅರ್ಧವಾದರೂ ದೊರೆತ ಧಾರ್ಮಿಕ ಸ್ವಾತಂತ್ರ್ಯಕ್ಕಾಗಿ ಹಿಗ್ಗಿನಲ್ಲಿದ್ದ ಹಿಂದೂಗಳು ನಾಡಿನಲ್ಲಿ ಮುಸಲ್ಮಾನ, ಬೌದ್ಧ, ಜೈನ್, ಸಿಖ್, ಆರ್ಯ, ದ್ರಾವಿಡ, ಮೊದಲಾದ ಪಂಥದ ಅಭಿಮಾನಿಗಳು ಹೊಚ್ಚಹೊಸ ಬಗೆಯ ಆವೇಶದಿಂದ ತಮ್ಮ ತಮ್ಮ ಪಂಗಡಗಳಿಗೆ ಅನುಯಾಯಿಗಳನ್ನು ಕಲೆ ಹಾಕಲಾರಂಭಿಸಿದರು. ಅದರಿಂದ ತಮ್ಮ ದೇಶ, ಧರ್ಮ, ಸಂಸ್ಕೃತಿಗಳ ವಿಷಯಕ್ಕೆ ಸಹಜವಾಗಿ ಹುಟ್ಟಿನಿಂದ ಬರುವಂತಹ ಮೊದಲಿನ ದುರ್ದಮ್ಯವಾದ ಅಭಿಮಾನವು 'ಕ್ಷತ್ರಿಯ' ಎಂಬ ಜಾತಿಯ ಜೊತೆಯಲ್ಲಿ 'ಹಿಂದೂ ಧಾರ್ಮಿಕ' ಪದವನ್ನು ಬಳಸಿಕೊಂಡು ನಾಡಿನಲ್ಲಿ ತನ್ನಜಾತಿಯ ಜೊತೆಯಲ್ಲಿ ಸೇರಿರುವಂತೆ ಕ್ಷತ್ರಿಯ, ಅಥವಾ ಕ್ಷತ್ರಿಯ:ಕ್ಷತ್ರಿ, ಜಾತಿಯನ್ನು ಹಿಂದೂ ಕ್ಷತ್ರಿಯ ಎಂದು ಬಳಕೆಯನ್ನು ಮಾಡಿಕೊಂಡಿರುವುದು ಈ ಮೇಲಿನ ಅಂಶಗಳಿಂದ ತಿಳಿಯಬಹುದು.

ಕ್ಷತ್ರಿಯರ ಕುರಿತದಾಂತಹ ಅಧ್ಯಯನವನ್ನು ವಸಾಹತು ಕಾಲದಲ್ಲಿ ಸೃಷ್ಟಿಯಾದ ಜಾತಿ ವ್ಯವಸ್ಥೆಯ ಚೌಕಟ್ಟಿಗೆ ಪೂರಕವಾಗಿ ಅಧ್ಯಯನ ಮಾಡುವುದಾದರೆ, ಜಾತಿಯ ಬಗ್ಗೆ ಅಧ್ಯಯನ ಕೈಗೊಂಡಿರುವ ಬಹುತೇಕ ಚಿಂತಕರ ಮತ್ತು ಪಾಶ್ಚಾಮಾತ್ಯ ಚಿಂತಕರ ಅಧ್ಯಯನಗಳನ್ನು ಮಾದರಿಯಾಗಿಟ್ಟುಕೊಂಡು

ಕ್ಷತ್ರಿಯರ ಸ್ಥಾನಮಾನವನ್ನು ತಿಳಿಯಬಹುದು. ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರ ಸಮುದಾಯಗಳ ಬಗ್ಗೆ ಕೆಲವೇ ಚಿಂತನ ಶೀಲರಾದ ಚಿಂತಕರು ಓರೆಹಚ್ಚಿ ನೋಡಿದ್ದಾರೆ. ವರ್ಣ ವ್ಯವಸ್ಥೆಯಲ್ಲಿ ಕ್ಷತ್ರಿಯರು ಎರಡನೇಯ ಸ್ತರದಲ್ಲಿ ಕಂಡುಬರುವುದನ್ನು ನೋಡುವುದಾದರೆ, ಇವರ ಪ್ರಖ್ಯಾತತೆಯು ನಮಗೆ ಅಧ್ಯಯನದ ರೂಪದಲ್ಲಿ ನಮಗೆ ತುಂಬ ಮಹತ್ತರವಾದ ಜಾತಿ ಎನ್ನಿಸುವುದರಲ್ಲಿ ಸಂದೇಹವೇನಿಲ್ಲ ಎಂಬುದು ಅರಿವುವಾಗುತ್ತದೆ. ಆ ಉದ್ದೇಶ ಸಾಧನೆಗಾಗಿ ಹಲವು, ವೇದ, ಪುರಾಣ, ಉಪನಿಷತ್ತು, ಮನುಸ್ಮೃತಿಯಲ್ಲಿ ಮತ್ತು ಬರಹಗಳೆ ಇಲ್ಲದಿರುವ ಪುರಾಣ ಸ್ಥಳಗಳಲ್ಲಿ ಹಾಗೂ ಜನಪದ ಸಾಹಿತ್ಯದಲ್ಲಿ, ಈ ಕ್ಷತ್ರಿಯರನ್ನು ವಿವರಿಸಿರುವುದು ಇಡೀ ಸಾಹಿತ್ಯದಾದ್ಯಂತ ಸ್ಪಷ್ಟವಾಗಿ ತಿಳಿಯುತ್ತದೆ. ಕ್ಷತ್ರಿಯರು ಭಾರತದಲ್ಲಿಯೇ ಅಲ್ಲದೆ ಪ್ರಾಂತ್ಯ ರಾಜ್ಯಗಳಲ್ಲಿ ತಮ್ಮದೇ ಆದ ಸಾಮ್ರಾಜ್ಯವನ್ನು ಕಟ್ಟಿ ಬೆಳೆಸಿ ಆಳಿದ ವೀರ ಕ್ಷತ್ರಿಯರಾಗಿದ್ದಾರೆ. ಹಾಗೆಯೇ ಕಾಲಾನಂತರದಲ್ಲಿ ಕ್ಷತ್ರಿಯರು ತಮ್ಮ ಉಚ್ಚ ಸ್ಥಾನವನ್ನು ಕಳೆದುಕೊಳ್ಳುತ್ತ ನೀಚ ಸ್ಥಾನ ಬರಲು ಇಲ್ಲಿಯ ರಾಜಕೀಯ, ಸಾಮಾಜಿಕ, ಆರ್ಥಿಕ, ಪ್ರೇರಿತ ಶಕ್ತಿಗಳು ಮೂಲ ಕಾರಣವೆನ್ನಿಸುತ್ತವೆ. ಮುಖ್ಯವಾಗಿ ಕ್ಷತ್ರಿಯ, ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಅಥವಾ ಕೋಟೆ ಕ್ಷತ್ರಿಯ ಕುರಿತು ಅಧ್ಯಯನ ನಡೆಸುವುದಾದರೆ, ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರು ಯಾವುದೇ ರೀತಿಯಾದಂತಹ ಉಪನಾಮಗಳನ್ನು ಇಟ್ಟುಕೊಂಡಿರುವುದಿಲ್ಲ. ಕೇವಲ ಹಿಂದೂ ಎಂಬ ರಿಲಿಜಿಯನ್ ಪದವನ್ನು ಇಟ್ಟುಕೊಂಡು ತಮ್ಮ ಜಾತಿಯನ್ನು ವರ್ಣಗಳಲ್ಲಿರುವಂತೆ ಕ್ಷತ್ರಿಯ ಎಂಬ ಪದವನ್ನು ಹಿಂದೂ ಕ್ಷತ್ರಿಯ ಎಂದು ಗುರುತಿಸಿಕೊಂಡಿದ್ದಾರೆ ಹಾಗೂ ಸಂವಿಧಾನದ ದಾಖಲೆಯ ಪ್ರಕಾರ ಇವರನ್ನು ಕ್ಷತ್ರಿಯ:ಕ್ಷತ್ರಿ, ಜಾತಿಯನ್ನಾಗಿ ಗುರುತಿಸಲಾಗಿದೆ.

**೬.೩. ವರ್ತಮಾನದಲ್ಲಿ ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಸಮುದಾಯ**

ಹಿಂದೂ ಕ್ಷತ್ರಿಯ ಸಮುದಾಯವು ಪ್ರಾದೇಶಿಕವಾಗಿ ಹಲವಾರು ಪರ್ಯಾಯ ಹೆಸರುಗಳಿಂದ ಕರ್ನಾಟಕಾದ್ಯಂತ ಚದುರಿ ಹೋಗಿದೆ. ಕ್ಷತ್ರಿಯ ಸಮುದಾಯದ ಹೆಸರಗಳನ್ನು ಕೇಂದ್ರಿಕರಿಸಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಸದಸ್ಯ ಕಾರ್ಯದರ್ಶಿ ಇವರ ಪತ್ರ ಸಂಖ್ಯೆ:ಕೆಎಸ್‌ಸಿಬಿಸಿ:ಎಂಎಸ್: ರಿಪೋರ್ಟ್ ೨೦೦೦-೦೧, ದಿನಾಂಕ ೧೪/೧೨/೨೦೦೦ರ ಪ್ರಕಾರ ಪ್ರವರ್ಗವಾರು ಹಿಂದುಳಿದ ವರ್ಗಗಳ ಪಟ್ಟಿ ಕರ್ನಾಟಕದ ರಾಜ್ಯ ಸರ್ಕಾರದಲ್ಲಿ ಹೊಸ ಕೆನೆ ಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ ೧೫(೪) ರಂತೆ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ ೧೬(೪) ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಯ ಅನುಸಾರವಾಗಿ ಪ್ರವರ್ಗ-೨(ಎ) ಕ್ರಮಸಂಖ್ಯೆ ೯೪ರ ಪ್ರಕಾರ ಕ್ಷತ್ರಿಯ/ಕ್ಷತ್ರಿ' ನೋಡಬಹುದು(ಭಾಗ-೧ ಕರ್ನಾಟಕ ರಾಜ್ಯಪತ್ರ, ಗುರುವಾರ ಏಪ್ರಿಲ್ ೧೧, ೨೦೦೨). ಕ್ಷತ್ರಿಯರ ಅಥವಾ (ಹಿಂದೂ ಕ್ಷತ್ರಿಯ)ರು ಅನ್ಯ ಸಮುದಾಯಗಳಂತೆ ಈ ಸಮುದಾಯವರು ತಮ್ಮದೇ ಐಡೆಡೆಂಟಿಟಿ ಅಥವಾ ಗುರುತಿಸಿಕೊಳ್ಳುವಿಕೆಯು ಕಷ್ಟ ಸಾಧ್ಯವಾಗಿದೆ. ಕಾರಣ ಬೇರೆ ಸಮುದಾಯದ ಜನರು ನೀವು ಯಾವ ಜಾತಿಯವರು ಎಂದು ಕೇಳಿದಾಗ ಇವರು ಕ್ಷತ್ರಿಯರು ಅಥವಾ ಹಿಂದೂ ಕ್ಷತ್ರಿಯರು ಎಂದು

ಸರಳವಾಗಿ ಉತ್ತರ ನೀಡುತ್ತಾರೆ. ಆದರೆ ಆಗಾ ಅವರು ಇಂಥದೊಂದು ಜಾತಿ ಇದೆಯಾ ಎಂಬುದನ್ನು ಪುನರ್ ಉತ್ತರಿಸುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸುವಂತಹ ವಿಚಾರವೆಂದರೆ, ಈ ಕ್ಷತ್ರಿಯರು ವರ್ಣಗಳಲ್ಲಿರುವ ಕ್ಷತ್ರಿಯರನ್ನು ತಮ್ಮ ಜಾತಿಯಾಗಿ ಸರ್ಕಾರದ ಜಾತಿಗಣತಿಯಲ್ಲಿ ಹೇಳಿ ಸೇರಿಕೊಂಡಿದ್ದಾರೆ. ಹಾಗಾಗಿ ಇವರು ಇಂದು ಯಾವುದೇ ಉಪನಾಮವಿಲ್ಲದೆಯೇ ಕೇವಲ ಕ್ಷತ್ರಿಯ ಎಂಬುದಾಗಿ ಹೇಳಿಕೊಂಡು ಬದುಕು ಸಾಗಿಸುತ್ತಿದ್ದಾರೆ. ಸಮುದಾಯದ ಚಾರಿತ್ರಿಕ ಹಿನ್ನಲೆಯನ್ನು ಸರಿಯಾಗಿ ಗ್ರಹಿಸಿ ರಾಜ್ಯದಲ್ಲಿರುವ ಕ್ಷತ್ರಿಯ ಸಮುದಾಯದ ಕುಟುಂಬಗಳನ್ನು ಕ್ಷೇತ್ರಾಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ಪ್ರಸ್ತುತ ಅವರ ಬದುಕಿನ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಅವರ ಸ್ಥಾನಮಾನವನ್ನು ಪ್ರಶ್ನಾವಳಿಯ ಮೂಲಕ ಸಂಗ್ರಹಿಸಿ ಕೋಷ್ಟಕಗಳ ಮೂಲಕ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಸಂಶೋಧನೆಯು ಕ್ಷತ್ರಿಯ ಅಥವಾ ಹಿಂದೂ ಕ್ಷತ್ರಿಯರ ಕುರಿತಾಗಿ ಭಿನ್ನ ನೆಲೆಯಲ್ಲಿ ಅಧ್ಯಯನ ನಡೆಸುವ ಉದ್ದೇಶ ಹೊಂದಿದ್ದು, ಜಾತಿ ವ್ಯವಸ್ಥೆಯ ಚೌಕಟ್ಟಿನಲ್ಲಿ ಕ್ಷತ್ರಿಯರ ಸ್ಥಾನಮಾನ, ಸಮಾಜದಲ್ಲಿ ಅವರು ತಮ್ಮನ್ನು ಗುರುತಿಸಿಕೊಳ್ಳುವುದರ ಸ್ವಗ್ರಹಿಕೆಯ ಸ್ವರೂಪವನ್ನು ಗುರುತಿಸುವ ಉದ್ದೇಶದಿಂದ ಕರ್ನಾಟಕದ ಒಂಭತ್ತು ಜಿಲ್ಲೆಗಳಲ್ಲಿ ೧೩ ತಾಲೂಕಗಳನ್ನು ಹಾಗೂ ಈ ಸಮುದಾಯದವರು ವಾಸಿಸುತ್ತಿರುವ ಗ್ರಾಮಗಳಲ್ಲಿ ಕ್ಷೇತ್ರಾಧ್ಯಯನ ಕೈಗೊಂಡು ಮಾಹಿತಿ ಸಂಗ್ರಹಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಕ್ಷೇತ್ರಾಧ್ಯಯನ ನಡೆಸಿದ ಕುಟುಂಬಗಳನ್ನು ಅಥವಾ ಕುಟಂಬಸಂದರ್ಶಿತರ ಸದಸ್ಯರ ವೈಯಕ್ತಿಕ  ಮಾಹಿತಿಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ.

ಸಂಶೋಧನೆಯ ಉದ್ದೇಶಕ್ಕನುಗುಣವಾಗಿ ಕರ್ನಾಟಕದಲ್ಲಿನ (ಕ್ಷತ್ರಿಯ, ಹಿಂದೂ ಕ್ಷತ್ರಿಯ, ಕ್ಷತ್ರಿಯ:ಕ್ಷತ್ರಿ, ಕೋಟೆಕ್ಷತ್ರಿಯ,) ಈ ಎಲ್ಲ ಸಮುದಾಯಗಳು ಒಂದೆಯಾಗಿದ್ದು ಇವರಿಂದ ಮಾಹಿತಿ ಸಂಗ್ರಹಿಸುವ ಸಲುವಾಗಿ ಒಟ್ಟು ೯ ಜಿಲ್ಲೆಗಳನ್ನು ಕ್ಷೇತ್ರಾಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿದ್ದು, ಜಿಲ್ಲಾವಾರು ಮತ್ತು ತಾಲೂಕುವಾರು ಮತ್ತು ಗ್ರಾಮಭಾಗದಲ್ಲಿ ಒಟ್ಟು ೩೯೦ ಕುಟುಂಬಗಳನ್ನು ಸಂದರ್ಶಿಸಲು ಸೂಚಿಸಲಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ೩೦ವಕ್ತೃಗಳನ್ನು ಸಂದರ್ಶಿಸಿದ್ದು, ಬಾಗಲಕೋಟೆ ಜಿಲ್ಲೆಯಲ್ಲಿ ೬೫ರಷ್ಟು ವಕ್ತೃಗಳನ್ನು ಹಾಗೂ ಬೆಳಗಾವಿ ಜಿಲ್ಲೆಯಲ್ಲಿ ೬೫ರಷ್ಟು ವಕ್ತೃಗಳನ್ನು ಸಂದರ್ಶನದಲ್ಲಿ ಸಂದರ್ಶಿಸಿಲಾಗಿದೆ. ದಾವಣಗೆರೆ ಜಿಲ್ಲೆಯಲ್ಲಿ ೬೦ರಷ್ಟು ವಕ್ತೃಗಳನ್ನು ಹಾಗೂ ಧಾರವಾಡದಲ್ಲಿ ೩೦ರಷ್ಟು ವಕ್ತೃಗಳನ್ನು ಸಂದರ್ಶನದಲ್ಲಿ ಸಂದರ್ಶಿಸಿಲಾಯಿತು. ಗದಗ ಜಿಲ್ಲೆಯಲ್ಲಿ ೨೫ ವಕ್ತೃಗಳನ್ನು ಮತ್ತು ಹಾವೇರಿ ಜಿಲ್ಲೆಯಿಂದ ೩೫ರಷ್ಟು ವಕ್ತೃಗಳನ್ನು ಸಂದರ್ಶಿಸಿದ್ದು, ಹಾಗೂ ಶಿವಮೊಗ್ಗ ಜಿಲ್ಲೆಯಲ್ಲಿ ೫೦ ರಷ್ಟು ವಕ್ತೃಗಳನ್ನು ಸಂದರ್ಶಿಸಿಲಾಗಿದೆ, ಕೊನೆಯದಾಗಿ ವಿಜಯಪುರದಲ್ಲಿ ೩೦ ವಕ್ತೃಗಳನ್ನು ಸಂದರ್ಶಿಸಿಲಾಗಿದೆ. ಅಧ್ಯಾಯ ಒಂದರಲ್ಲಿ ತಿಳಿಸಿರುವಂತೆ ಕರ್ನಾಟಕದಲ್ಲಿ ಬರುವ ಒಟ್ಟು ೩೦ ಜಿಲ್ಲೆಗಳಲ್ಲಿ ೯ ಜಿಲ್ಲೆಗಳನ್ನು ಅಧ್ಯಯನ ವ್ಯಾಪ್ತಿಯನ್ನಾಗಿ ಇಟ್ಟುಕೊಂಡು ಒಟ್ಟು ೩೯೦ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ.

**ಕೋಷ್ಟಕ: ೬.೧. ಸಂದರ್ಶಿತ ಕುಟುಂಬವಾರು ವಕ್ತೃಗಳ ಜಿಲ್ಲೆಗಳ ಮತ್ತು ತಾಲ್ಲೂಕುಗಳ ವಿವರ**

| ಜಿಲ್ಲೆಗಳ ವಿವರ | ತಾಲ್ಲೂಕುಗಳ ವಿವರ | ಪ್ರತಿಕುಟುಂಬ ವಕ್ತೃಗಳು ವಿವರ | |
|---|---|---|---|
| | | ಕುಟುಂಬವಾರು ಸಂಖ್ಯೆ | ಶೇಕಡವಾರು ಪ್ರಮಾಣ |
| ಬಳ್ಳಾರಿ | ಹಡಗಲಿ | ೩೦ | ೭.೬೯ |
| ಬಾಗಲಕೋಟೆ | ಬಾಗಲಕೋಟೆ | ೩೫ | ೮.೯೭ |
| | ಮುದೋಳ | ೩೦ | ೭.೭೦ |
| ಬೆಳಗಾವಿ | ಬೈಲಹೊಂಗಲ | ೩೨ | ೮.೨೦ |
| | ಗೋಕಾಕ್ | ೩೩ | ೮.೪೬ |
| ದಾವಣಗೆರೆ | ಹರಪನಹಳ್ಳಿ | ೨೦ | ೫.೧೩ |
| | ಹೊನ್ನಾಳಿ | ೪೦ | ೧೦.೨೫ |
| ಧಾರವಾಡ | ಕುಂದಗೋಳ | ೩೦ | ೭.೭೦ |
| ಗದಗ | ಶಿರಹಟ್ಟಿ | ೨೫ | ೬.೪೧ |
| ಹಾವೇರಿ | ಹಾನಗಲ್ | ೩೫ | ೮.೯೭ |
| ಶಿವಮೊಗ್ಗ | ಶಿವಮೊಗ್ಗ | ೩೦ | ೭.೭೦ |
| | ಶಿಕಾರಿಪುರ | ೨೦ | ೫.೧೨ |
| ವಿಜಯಪುರ | ಮುದ್ದೇಬಿಹಾಳ | ೩೦ | ೭.೭೦ |
| ಒಟ್ಟು | | ೩೯೦ | ೧೦೦% |

ಕರ್ನಾಟಕದಲ್ಲಿ ಬರುವ ೩೦ ಜಿಲ್ಲೆಗಳಲ್ಲಿ ೯ ಜಿಲ್ಲೆಗಳಿಂದ ಒಟ್ಟು ೧೩ ತಾಲೂಕುಗಳಲ್ಲಿ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿರು ಕ್ಷತ್ರಿಯ ಸಮುದಾಯವರ ಊರುಗಳನ್ನು ಸರಳ ಯಾದೃಚ್ಛಿ ನಮೂನೆಯ ಮಾದರಿಯಿಂದ ಕ್ಷೇತ್ರಾಧ್ಯಯನಕ್ಕಾಗಿ ಆಯ್ಕೆಯನ್ನು ಮಾಡಲಾಗಿದೆ. ಈ ಒಂದು ಕ್ಷೇತ್ರಾಧ್ಯಯನದಲ್ಲಿ ೩೯೦ ವ್ಯಕ್ತಿಗಳ ಕುಟುಂಬಗಳನ್ನು ಸಂದರ್ಶಿಸಲಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿನ ಹಡಗಲಿ ತಾಲೂಕ ಮತ್ತು ಹೂವಿನಹಡಗಲಿ, ಹಿರೇಹಡಗಲಿ, ಮೈಲಾರವನ್ನು ಆಯ್ಕೆಮಾಡಲಾಗಿದೆ. ಬಾಗಲಕೋಟೆ ಜಿಲ್ಲೆಯ ಮುದೋಳ ತಾಲೂಕಿನ ಮುದ್ದಾಪುರ ಮತ್ತು ತಿಮ್ಮಾಪುರವನ್ನು ಆಯ್ಕೆಮಾಡಲಾಗಿದೆ ಹಾಗೂ ಬಾಗಲಕೋಟೆಯನ್ನು ಆಯ್ಕೆಮಾಡಲಾಗಿದೆ. ಬೆಳಗಾವಿಯ ಜಿಲ್ಲೆಯಲ್ಲಿ ಬೈಲಹೊಂಗಲ ತಾಲೂಕನಲ್ಲಿ ನೇಗಿನಹಾಳ ಗ್ರಾಮವನ್ನು ಮತ್ತು ಬೈಲಹೊಂಗಲವನ್ನು ಆಯ್ಕೆಮಾಡಲಾಗಿದೆ ಮತ್ತು ಗೋಕಾಕ್ ತಾಲೂಕನಲ್ಲಿ ಬೆಟಗೇರಿ ಮತ್ತು ಗೋಕಾಕ್‌ನ್ನು ಆಯ್ಕೆಮಾಡಲಾಗಿದೆ. ದಾವಣಗೆರೆ ಜಿಲ್ಲೆಯಲ್ಲಿ ಹೊನ್ನಾಳಿ ತಾಲೂಕನಲ್ಲಿ ಸೊರಟೂರು ಮತ್ತು ಮಲ್ಲಿಗೇನಹಳ್ಳಿ ಬೆಳಗುತ್ತಿ ಗ್ರಾಮಗಳನ್ನು ಹಾಗೂ ಗೋಪಗೊಂಡನಹಳ್ಳಿ ಗ್ರಾಮವನ್ನು

ಆಯ್ಕೆಮಾಡಲಾಗಿದೆ. ಹರಪನಹಳ್ಳಿ ತಾಲೂಕಿನಲ್ಲಿ ಕಂಚಿಕೆರೆ ಹಾಗೂ ಗೌರಿಪುರವನ್ನು ಮತ್ತು ದಾವಣಗೆರೆ ಜಿಲ್ಲೆಯನ್ನು ಆಯ್ಕೆಮಾಡಲಾಗಿದೆ. ಧಾರವಾಡ ಜಿಲ್ಲೆಯಲ್ಲಿ ಕುಂದಗೋಳ ತಾಲೂಕನ ಹೀರೆಗುಂಜಾಳ ಮತ್ತು ಶಿರೂರ ಗ್ರಾಮವನ್ನು ಮತ್ತು ಧಾರವಾಡವನ್ನು ಆಯ್ಕೆಮಾಡಲಾಗಿದೆ. ಗದಗ ಜಿಲ್ಲೆಯಲ್ಲಿ ಶಿರಹಟ್ಟಿ ತಾಲೂಕಿನ ಬೆಳ್ಳಟ್ಟಿಗ್ರಾಮವನ್ನು ಮತ್ತು ಶಿರಹಟ್ಟಿಯನ್ನು ಆಯ್ಕೆಮಾಡಲಾಗಿದೆ. ಹಾವೇರಿ ಜಿಲ್ಲೆಯ ವ್ಯಾಪ್ತಿಗೆ ಬರುವ ಹಿರೇಕೆರೂರು ತಾಲೂಕಿನಲ್ಲಿ ಮಾಸೂರು ಆಯ್ಕೆಮಾಡಲಾಗಿದೆ, ಹಾಗೂ ಹಾನಗಲ್ ತಾಲೂಕಿನಲ್ಲಿ ಆಡೂರು ಕಂಚಿನೆಗಳೂರನ್ನು ಆಯ್ಕೆಮಾಡಲಾಗಿದೆ. ಶಿವಮೊಗ್ಗದ ಜಿಲ್ಲೆಯಲ್ಲಿ ಶಿವಮೊಗ್ಗವನ್ನು ಮತ್ತು ಶಿವಮೊಗ್ಗ ತಾಲೂಕಿನಲ್ಲಿರುವ ಆಯನೂರು, ದ್ಯಾವನಕೆರೆಯನ್ನು ಆಯ್ಕೆಮಾಡಲಾಗಿದೆ, ಹಾಗೂ ಶಿಕಾರಿಪುರ ತಾಲೂಕನಲ್ಲಿ ಕೊಟ್ಟ ಮತ್ತು ಹಾಗೂ ಹೋತನಕಟ್ಟೆಯ ಗ್ರಾಮಗಳನ್ನು ಆಯ್ಕೆಮಾಡಲಾಗಿದೆ. ಕೊನೆಯದಾಗಿ ವಿಜಯಪುರದ ಜಿಲ್ಲೆಯಲ್ಲಿ ಮುದ್ದೇಬಿಹಾಳ ತಾಲೂಕನ ಆಲೂರು ಮತ್ತು ಯಲಗೂರು ಗ್ರಾಮವನ್ನು ಆಯ್ಕೆಮಾಡಲಾಗಿದೆ. ಈ ರೀತಿ ಆಯ್ಕೆಯ ಹಿಂದಿನ ಉದ್ದೇಶ ಜಿಲ್ಲಾ, ತಾಲೂಕ, ಗ್ರಾಮಗಳಲ್ಲಿ, ಕ್ಷತ್ರಿಯ:ಕ್ಷತ್ರಿ ವಾಸಿಸುವ ಜನಸಮುದಾಯಗಳ ಆಚರಣೆಗಳನ್ನು ಮತ್ತು ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ, ಭೂಹಿಡುವಳಿ, ವೃತ್ತಿ/ಕಸುಬುಗಳು, ಮತ್ತು ಸಾಕ್ಷರತೆ ಮಟ್ಟವನ್ನು ಗುರುತಿಸುವುದಾಗಿದೆ. ಈ ಮೇಲಿನ ಕೋಷ್ಟಕದಲ್ಲಿ ಸಂದರ್ಶಿಸಿದ ವಕ್ತೃಗಳ ಪ್ರಮಾಣವನ್ನು ಗ್ರಾಮೀಣ ಮತ್ತು ತಾಲೂಕು ಮಟ್ಟದಿಂದ, ಜಿಲ್ಲಾ ಮಟ್ಟದವರೆಗೆ ಈ ಒಂದು ಸಮುದಾಯದವರ ಅಂಕಿ-ಅಂಶಗಳನ್ನು ಸರಳಯಾದೃಚ್ಚಿಕ ನಮೂನೆಯಲ್ಲಿ ಗುರುತಿಸಲಾಗಿದೆ.

**ಕೋಷ್ಟಕ: ೬.೨. ಕ್ಷತ್ರಿಯ:ಕ್ಷತ್ರಿಯ (ಹಿಂದೂ ಕ್ಷತ್ರಿಯ) ಸಮುದಾಯದ ಕುಟುಂಬವಾರು ಜನಸಂಖ್ಯೆ ಮತ್ತು ಸಾಕ್ಷರತೆಯ ಮಟ್ಟ**

| | ಗಂಡು | ಹೆಣ್ಣು | ಒಟ್ಟು | ಶೇಕಡ |
|---|---|---|---|---|
| **ಒಟ್ಟು ಜನಸಂಖ್ಯೆ** | **೭೬೮** | **೭೧೭** | **೧೪೮೫** | **೧೦೦** |
| ೦-೫ವಯೋಮಾನದವರು | ೫೮ | ೪೭ | ೧೦೫ | ೭.೦೭ |
| **ಸಾಕ್ಷರ ಅರ್ಹರು** | **೭೧೦** | **೬೭೦** | **೧೩೮೦** | **೯೨.೯೨** |
| ಸಾಕ್ಷರರು | ೫೩೦ | ೫೧೫ | ೧೦೪೫ | ೭೦.೩೭ |
| **ಮೆಟ್ರಿಕ್ ಪೂರ್ವ ಸಾಕ್ಷರತೆ** | **೪೫೭** | **೪೫೪** | **೯೧೧** | **೬೧.೩೪** |
| ಪ್ರಾಥಮಿಕ ಶಿಕ್ಷಣ | ೨೦೨ | ೧೫೯ | ೩೬೧ | ೨೪.೩೦ |
| ಮಾಧ್ಯಮಿಕ ಶಿಕ್ಷಣ | ೧೬೦ | ೧೯೧ | ೩೫೧ | ೨೩.೬೩ |
| ಪ್ರೌಢ ಶಿಕ್ಷಣ | ೯೫ | ೧೦೪ | ೧೯೯ | ೧೩.೪೦ |
| **ಮೆಟ್ರಿಕ್ ನಂತರದ ಸಾಕ್ಷರತೆ** | **೭೩** | **೬೧** | **೧೩೪** | **೯.೦೨** |
| ಪದವಿ ಪೂರ್ವ | ೨೨ | ೧೯ | ೪೧ | ೨.೭೬ |

| | | | | |
|---|---|---|---|---|
| ಡಿಪ್ಲೋಮ್ | ೧೨ | ೨೩ | ೩೫ | ೨.೩೫ |
| ಪದವಿ | ೧೩ | ೧೦ | ೨೩ | ೧.೫೪ |
| ಸ್ನಾತಕೋತ್ತರ | ೦೭ | ೦೩ | ೧೦ | ೦.೬೭ |
| ಇತರೆ | ೧೯ | ೦೬ | ೨೫ | ೧.೬೮ |
| **ಅನಕ್ಷರರು** | **೧೮೦** | **೧೫೫** | **೩೩೫** | **೨೨.೫೫** |

ಸಂಶೋಧನೆಯ ದೃಷ್ಟಿಯಿಂದ ಪ್ರತಿ ಕುಟುಂಬವಕ್ತೃಗಳ ಶೈಕ್ಷಣಿಕ ವಿವರವು ಅಗತ್ಯವಾಗಿದ್ದು, ಈ ಮೇಲಿನ ಕೋಷ್ಟಕದಲ್ಲಿ ಸಂದರ್ಶಿತರ ಕುಟುಂಬಗಳ ಜನಸಂಖ್ಯೆ ಮತ್ತು ಸಾಕ್ಷರತೆಯ ಮಟ್ಟವನ್ನು ನೀಡಲಾಗಿದೆ. ಕ್ಷತ್ರಿಯರಲ್ಲಿ ಒಟ್ಟು ೩೬೦ ಕುಟುಂಬಗಳ ಕ್ಷೇತ್ರಾಧ್ಯಯನ ಮಾಡಿದ ಸಂದರ್ಭದಲ್ಲಿ ೯ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡು ಅದರಲ್ಲಿ ೧೩ ತಾಲೂಕುಗಳು ಮತ್ತು ಆ ತಾಲೂಕುಗಳನ್ನು ಒಳಗೊಂಡ ಗ್ರಾಮಗಳನ್ನು ಆಯ್ಕೆ ಮಾಡಿ ಅಲ್ಲಿ ವಾಸುಸಿತ್ತಿರುವ ಕ್ಷತ್ರಿಯ ಸಮುದಾಯದವರ ಒಟ್ಟಾರೆ ೧೪೮೫ ಜನಸಂಖ್ಯೆಯಲ್ಲಿನ ಸಾಕ್ಷರತೆಯ ಪ್ರಮಾಣವನ್ನು ಈ ಮೇಲ್ಕಂಡಂತೆ ಗಮನಿಸಬಹುದು. ಈ ಕೋಷ್ಟಕದಲ್ಲಿನ ಅಂಕಿ–ಅಂಶಗಳನ್ನು ಗಮನಿಸಿದಾಗ ಕ್ಷತ್ರಿಯ:ಕ್ಷತ್ರಿಯರು ಪ್ರಾಥಮಿಕ ಹಂತದಲ್ಲಿ ಮಾತ್ರ ಶಾಲೆಗೆ ಸೇರುವುದು ಕಂಡುಬರುತ್ತದೆ. ಮಾಧ್ಯಮಿಕ ಹಂತದಲ್ಲಿ ಸ್ವಲ್ಪ ಹಂತಕ್ಕೆ ಬರುವುದರೊಳಗೆ ಶಾಲೆಯಿಂದ ಹೊರಗುಳಿಯುವ ಸಂಖ್ಯೆ ಕಡಿಮೆಯಾಗಿರುತ್ತದೆ. ಕಾರಣ ಇಲ್ಲಿ ಕೆಲವರು ಶಾಲೆಯನ್ನು ಬಿಟ್ಟು ಮನೆಯ ಕೆಲಸದಲ್ಲಿ ತೊಡಗಿರುವುದನ್ನು ಕಾಣಬಹುದು. ಕರ್ನಾಟಕ ರಾಜ್ಯಸರ್ಕಾರವು ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸಿರುವುದರಿಂದ ಹೆಣ್ಣಾಗಲಿ ಅಥವಾ ಗಂಡಾಗಲಿ ಕನಿಷ್ಠ ವಿದ್ಯೆಯನ್ನು ಪಡೆದು ಅಕ್ಷರವಂತರಾಗಲು ಯಶಸ್ವಿಯಾದ ಕಾರ್ಯಯೋಜನೆಯನ್ನು ಜಾರಿಗೆ ತಂದಿದೆ. ಆದರೆ ಪ್ರೌಢ ಶಿಕ್ಷಣದ ನಂತರ ಉನ್ನತ ಶಿಕ್ಷಣವನ್ನು ಪಡೆಯುವವರ ಸಂಖ್ಯೆಯು ತುಂಬ ಕಡಿಮೆ ಇದೆ. ಮೆಟ್ರಿಕ್ ಪೂರ್ವದಲ್ಲಿ ಅನೇಕರು ಶಿಕ್ಷಣ ಪಡೆದುಕೊಂಡಿರುವುದು ಕ್ಷೇತ್ರಾಧ್ಯಯನದಿಂದ ತಿಳಿಯಬಹುದು. ಆದರೆ ಮೆಟ್ರಿಕ್ ನಂತರದ ಶಿಕ್ಷಣದಿಂದ ವಂಚಿಂತರಾಗಿರವರು ಇದ್ದಾರೆ, ಕಾರಣವೇನೆಂದರೆ ಈ ಒಂದು ಸಮುದಾಯದಲ್ಲಿ ಶಿಕ್ಷಣ ಪಡೆದವರ ಸಂಖ್ಯೆಯು ಕಡಿಮೆ ಇದೆ ಅಂದರೆ ಅನಕ್ಷರರು ಸಹ ಹೆಚ್ಚಾಗಿದ್ದಾರೆ. ಶಿಕ್ಷಣದ ಸಂಕೋಚಿತ ಭಾವನೆಯಿಂದಾಗಿ ಶಿಕ್ಷಣ ಮಟ್ಟದಲ್ಲಿ ಗಣನಿಯವಾದ ಶಿಕ್ಷಣವನ್ನು ಪಡೆಯುವವರ ಸಂಖ್ಯೆಯು ಕಡಿಮೆಯಾಗಿದೆ. ಕೆಲವೊಂದು ಹಳ್ಳಿಗಳಲ್ಲಿ ಶಿಕ್ಷಣ ಸಂಸ್ಥೆಗಳು ತಮ್ಮ ಮನೆಯಿಂದ ದೂರ ಇರುವುದು ಮತ್ತು ಸರಿಯಾದ ಸಾರಿಗೆ ವ್ಯವಸ್ಥೆ ಇಲ್ಲದಿರುವುದು, ಮೂಲ ಸಂಪನ್ಮೂಲಗಳು ಇಲ್ಲದಿರುವುದರಿಂದ ಇಂತಹ ಕಾರಣಗಳಿಂದಾಗಿ ಶಿಕ್ಷಣದಿಂದ ದೂರ ಸರಿದಿದ್ದಾರೆ. ಉನ್ನತ ಶಿಕ್ಷಣಕ್ಕೆ ಮಹತ್ವವಿದೆ ಆದರೂ ಸಹ ಈ ಶಿಕ್ಷಣವನ್ನು ಪಡೆಯಲು ಇವರು ಶಕ್ತರಾಗಿಲ್ಲ, ಆರ್ಥಿಕವಾಗಿ ಹಿಂದೂಳಿದಿರುವುದೆ ಇದಕ್ಕೆ ಕಾರಣವಾಗಿದೆ. ಕೆಲವೊಂದು ಆರ್ಥಿಕ ಸದೃಢವಾದ ಕುಟುಂಬದಲ್ಲಿ ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣವನ್ನು ಕೊಡಿಸುವುದರಲ್ಲಿ ಯಶಸ್ವಿಯಾಗಿದ್ದಾರೆ. ಈ ಒಂದು ಕೋಷ್ಟಕವು ಕ್ಷತ್ರಿಯರ ಹೆಣ್ಣುಮಕ್ಕಳ ಮತ್ತು ಗಂಡುಮಕ್ಕಳ ಶಿಕ್ಷಣ ಪ್ರಮಾಣವನ್ನು ಮತ್ತು

ಸಂಶೋಧನೆಗೆ ತೆಗೆದುಕೊಂಡ ವಕ್ತೃಗಳ ಕುಟುಂಬದಲ್ಲಿರುವ ಒಟ್ಟಾರೆ ಜನಸಂಖ್ಯೆಯನ್ನು ತಿಳಿಸುವುದಾಗಿದೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಶಿಕ್ಷಣದ ವ್ಯವಸ್ಥೆಯಲ್ಲಿ ಸ್ವಲ್ಪಮಟ್ಟಿನ ಪ್ರಮಾಣದಲ್ಲಿ ಬದಲಾವಣೆಯನ್ನು ತಂದರೆ ಇಂತಹ ಸಮುದಾಯಗಳು ಶಿಕ್ಷಣದಿಂದ ವಂಚಿತರಾಗುವುದನ್ನು, ಹಾಗೂ ಸಮುದಾಯದಲ್ಲಿರುವ ಹಿರಿಯರು ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸುವುದರಲ್ಲಿ ಶ್ರಮ ವಹಿಸಿದರೆ ಈ ಒಂದು ಸಮುದಾಯವು ಶಿಕ್ಷಣದಿಂದ ವಂಚಿತರಾಗುವುದನ್ನು ತಪ್ಪಿಸಬಹುದು.

**ಕೋಷ್ಟಕ: ೬.೩. ವಕ್ತೃಗಳ ವಯೋಮಾನದ ವಿವರ**

| ವಯಸ್ಸು | ಪ್ರತಿಕುಟುಂಬದ ವಕ್ತೃಗಳು ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ೨೦-೨೯ | ೦೩೫ | ೦೯.೦೦ |
| ೩೦-೩೯ | ೦೯೭ | ೨೪.೮೮ |
| ೪೦-೪೯ | ೧೨೦ | ೩೦.೭೬ |
| ೫೦-೫೯ | ೦೯೦ | ೨೩.೦೭ |
| ೬೦-೬೯ | ೦೨೮ | ೦೭.೧೭ |
| ೭೦+ | ೦೨೦ | ೦೫.೧೨ |
| ಒಟ್ಟು | ೩೯೦ | ೧೦೦.೦೦ |

ಈ ಕೋಷ್ಟಕದಲ್ಲಿ ಸಂದರ್ಶಿತ ವಕ್ತೃಗಳ ವಯಸ್ಸಿನ ವಿವರಗಳನ್ನು ಸಂದರ್ಶಿತ ೩೯೦ ವಕ್ತೃಗಳಲ್ಲಿ ೨೦-೨೯ರಷ್ಟು ವಯಸ್ಸಿನ ಸಂದರ್ಶಿತರ ಸಂಖ್ಯೆ ೩೫ ಆಗಿದ್ದು, ಶೇಕಡವಾರು ೯.೦೦ರಷ್ಟು ಇದ್ದಾರೆ. ೩೦-೩೯ವರ್ಷದ ವಯೋಮಾನದ ಸಂದರ್ಶಿತರ ಸಂಖ್ಯೆ ೯೭ ಆಗಿದ್ದು, ಅವರ ಒಟ್ಟು ಸಂದರ್ಶಿತ ವಕ್ತೃಗಳ ಶೇಕಡವಾರು ೨೪.೮೭ ರಷ್ಟಿದೆ. ಹಾಗೆಯೇ ೪೦-೪೯ ವರ್ಷದ ವಯೋಮಾನದ ಸಂದರ್ಶಿತರು ೧೨೦ರಷ್ಟಿದ್ದಾರೆ, ಇವರ ಶೇಕಡವಾರು ೩೦.೭೬ರಷ್ಟಾಗಿದೆ. ಅಲ್ಲದೆ ೫೦-೫೯ವರ್ಷದ ವಯೋಮಾನದವರ ಸರಾಸರಿ ೯೦ರಷ್ಟು ಇದ್ದು, ಇವರ ಶೇಕಡವಾರು ಪ್ರಮಾಣ ೨೩.೦೭ರಷ್ಟು ಇದೆ. ಹಾಗೂ ೬೦-೬೯ವರ್ಷ ವಯೋಮಾನದವರ ಸಂಖ್ಯೆಯು ೨೮ರಷ್ಟು ಇದ್ದು, ಇವರ ಶೇಕಡವಾರು ೦೭.೧೭ರಷ್ಟಿದೆ. ಕೊನೆಯದಾಗಿ ೭೦ ನಂತರ ವರ್ಷ ವಯೋಮಾನದವರ ಪ್ರಮಾಣ ೨೦ರಷ್ಟು ಇದ್ದು, ಇವರ ಸರಾಸರಿ ಶೇಕಡವಾರು ೦೫.೧೨ರಷ್ಟಿದೆ. ಈ ಪ್ರಮಾಣ ವಯೋಮಾನದವರನ್ನು ಕ್ಷೇತ್ರಾಧ್ಯಯನದಲ್ಲಿ ಸಂದರ್ಶಿಸಿಕೊಂಡಿರುವುದು ಕೋಷ್ಟಕದಿಂದ ತಿಳಿದುಬರುತ್ತದೆ.

**ಕೋಷ್ಟಕ: ೬.೪. ಕ್ಷತ್ರಿಯ:ಕ್ಷತ್ರಿ ಸಮುದಾಯದವರ ವಾಸದ ನೆಲೆಯ ಸ್ವರೂಪ**

| **ಮನೆಯ ಸ್ವರೂಪ** | **ಪ್ರತಿವಕ್ತೃಗಳು ವಿವರ** | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಗುಡಾರ | ೦೧೨ | ೦೩.೦೭ |
| ಗುಡಿಸಲು | ೦೨೦ | ೦೫.೧೨ |
| ತಗಡು | ೦೧೫ | ೦೩.೮೪ |
| ಮಾಳಿಗೆ | ೦೯೦ | ೨೩.೦೭ |
| ಆರ್.ಸಿ.ಸಿ | ೦೧೮ | ೦೪.೬೧ |
| ಹೆಂಚಿನ ಮನೆ | ೨೨೫ | ೫೭.೬೯ |
| ಇತರೆ | ೦೧೦ | ೦೨.೫೬ |
| **ಒಟ್ಟು** | **೩೯೦** | **೧೦೦.೦೦** |

ಸಾಮಾಜಿಕ ರಚನೆಯಲ್ಲಿ ಕುಟುಂಬ ಒಂದು ಪ್ರಮುಖ ಘಟಕ. ಕುಟುಂಬದ ರಚನೆ ಅಪಾರ ವೈವಿಧ್ಯವನ್ನು ಹೊಂದಿದ್ದು, ಯಾವುದೇ ಸರಳೀಕೃತ ವ್ಯಾಖ್ಯಾನದಿಂದ ಅರ್ಥೈಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಕುಟುಂಬ ವ್ಯಾಪ್ತಿಯೊಳಗೆ ಬರುವ ಪ್ರಮುಖ ವಿಚಾರಗಳೆಂದರೆ, ಕುಟುಂಬದ ಗಾತ್ರ ಕುಟುಂಬದ ಯಜಮಾನಿಕೆ, ಆರ್ಥಿಕ ಮತ್ತು ಸಾಮಾಜಿಕ ವ್ಯವಹಾರಗಳು ಮಹಿಳೆಯ ಸ್ಥಾನ, ವಿವಾಹ ಪದ್ಧತಿ ಮುಂತಾದವು. ಮುಖ್ಯವಾಗಿ ಕ್ಷತ್ರಿಯ ಸಮುದಾಯದವರ ವಾಸದ ನೆಲೆ ಕೋಷ್ಟಕವನ್ನು ಗಮನಿಸುವುದಾದರೆ, ಇವರ ಪ್ರಸ್ತುತ ಸ್ಥಿತಿಯೇ ಬದಲಾವಣೆಯನ್ನು ಆಗುತ್ತಿರುವ ಸಮುದಾಯ ಎಂಬುದಾಗಿ ಗುರುತಿಸುವುದು ಕಷ್ಟ ಸಾಧ್ಯವಾಗುತ್ತದೆ. ಎಲ್ಲರ ಆರ್ಥಿಕ ಪರಿಸ್ಥಿತಿಯು ಏರುಪೇರು ಆಗುತ್ತಿರುವ ಸಾಮಾನ್ಯ ಸಂಗತಿಯಾಗಿದೆ. ಆರ್ಥಿಕ ಸ್ಥಿತಿವಂತರು ಸ್ವಲ್ಪ ಪಕ್ಕಾ ಮನೆಯಲ್ಲಿದ್ದಾರೆ. ಆರ್ಥಿಕ ಕೊರತೆಯೂ ಕಡಿಮೆ ಇರುವವರು ಕಚ್ಚಾ ಮನೆಯಲ್ಲಿ ಅಂದರೆ, ಗುಡಿಸಲು ತಗಡು ಇತ್ಯಾದಿ ಮನೆಯನ್ನು ಆಶ್ರಯಿಸಿಕೊಂಡಿತ್ತಾರೆ. ಈ ಕೋಷ್ಟಕದಲ್ಲಿ ಒಟ್ಟಾರೆ ೩೯೦ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕೇವಲ ಗುಡಾರದ ಮನೆ ಸ್ವರೂಪ ಹೊಂದಿರುವ ವಕ್ತೃ ೩.೦೭ ರಷ್ಟು ಇದ್ದು, ಗುಡಿಸಲು ಹೊಂದಿದವರು ೦೫.೧೨ರಷ್ಟು ವಕ್ತೃಗಳನ್ನು ನೋಡುತ್ತೇವೆ. ಹಾಗೂ ತಗಡು ಮನೆಯ ಸ್ವರೂಪವನ್ನು ಹೊಂದಿದವರು ಶೇಕಡ ಪ್ರಮಾಣ ೦೩.೮೪ರಷ್ಟು ಇದೆ. ಅಲ್ಲದೆ ೨೩.೦೭ರಷ್ಟು ಮಾಳಗಿ ಮನೆಗಳನ್ನು ಕಾಣಬಹುದು. ಕಾರಣವಿಷ್ಟೆ ನಾವು ಹೈದ್ರಾಬಾದ್ ಕರ್ನಾಟಕ ಮತ್ತು ಉತ್ತರ ಕರ್ನಾಟಕದ ಮನೆಗಳಲ್ಲಿ ಹೆಚ್ಚಾಗಿ ಮಾಳಗಿ ಮನೆಗಳು ಸರ್ವಸಾಮಾನ್ಯ ಸಂಗತಿ. ಇತ್ತೀಚಿನ ದಿನಮಾನದಲ್ಲಿ ಆರ್.ಸಿ.ಸಿಯ ಮನೆಯ ಸ್ವರೂಪವನ್ನು ಶೇಕಡವಾರು ೦೪.೬೧ರಷ್ಟು ನೋಡಬಹುದು. ಆದರೆ ಶತಮಾನಗಳವರೆಗೆ ಯಾವುದೇ ಆಳಕು ಉಳಕುವಿಲ್ಲದೆ ಇರುವಂತಹ ನೈಸರ್ಗಿಕವಾದ ಹೆಂಚಿನ ಮನೆಯನ್ನು ಶೇಕಡವಾರು ೫೭.೬೯ರಷ್ಟು ವಕ್ತೃಗಳಲ್ಲಿ ಕಾಣಬಹುದಾಗಿದೆ. ಹಾಗೆಯೇ

ಇತರೆ ಅಂದರೆ ಕೆಲವರು ತಾತ್ಕಲಿಕ ಅನುಸಾರವಾಗಿ ಶೇಕಡವಾರು ೦೨.೫೬ರಷ್ಟು ವಕ್ತೃಗಳ ಮನೆಯನ್ನು ನಾವು ನೋಡಬಹುದಾಗಿದೆ.

**ಕೋಷ್ಟಕ: ೬.೫. ವಾಸಿಸುತ್ತಿರುವ ಮನೆಯ ಮಾಲೀಕತ್ವ ಪ್ರಕಾರ**

| ಮಾಲೀಕತ್ವ ಪ್ರಕಾರ | ಪ್ರತಿವಕ್ತೃಗಳು ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಸ್ವಂತದ್ದು | ೩೧೦ | ೭೯.೪೮ |
| ಬಾಡಿಗೆ | ೦೩೫ | ೦೯.೦೦ |
| ಭೋಗ್ಯಕ್ಕೆ | ೦೦೯ | ೦೨.೩೦ |
| ಸಂಬಂಧಿಕರದ್ದು | ೦೦೪ | ೦೧.೦೨ |
| ಆಶ್ರಯ ಯೋಜನೆ | ೦೩೨ | ೦೮.೨೦ |
| **ಒಟ್ಟು** | **೩೯೦** | ೧೦೦.೦೦ |

ಈ ಮೇಲಿನ ಕೋಷ್ಟಕದಿಂದ ತಿಳಿದುಬರುವುದನೇಂದರೆ, ಕ್ಷತ್ರಿಯರ ಮೂಲತಃ ವೃತ್ತಿಯೇ ಬೇರೆಯಾದಾದರು ಅವರ ಮೂಲವೃತ್ತಿಯನ್ನು ಕಳಚಿಕೊಂಡು ಆಧುನಿಕ ಸಮಾಜದಲ್ಲಿ ತಮ್ಮದೇ ಅನುಕೂಲಕ್ಕೆ ತಕ್ಕಂತಹ ವೃತ್ತಿಯನ್ನು ಮಾಡತೊಡಗಿದ್ದಾರೆ. ಇಲ್ಲಿ ಮುಖ್ಯವಾಗಿ ಪ್ರತಿಯೊಬ್ಬ ಮನುಷ್ಯ ತನ್ನ ಜೀವಿತಾವಧಿಯಲ್ಲಿ ಒಂದು ಸ್ವಂತ ಸೂರಿನ ಕನಸು ಕಾಣವುದು ಸಹಜ ಸ್ಥಿತಿಯಾಗಿದೆ. ಹಾಗೆಯೇ ಇಲ್ಲಿ ಶೇಕಡವಾರು ೭೯.೪೮ರಷ್ಟು ವಕ್ತೃ ಸ್ವಂತ ಮನೆಯನ್ನು ಹೊಂದಿದ್ದಾರೆ. ಅದು ಕಚ್ಚಾನು ಆಗಿರಬಹುದು ಅಥವಾ ಪಕ್ಕ ಮನೆಯು ಆಗಿರಬಹುದು. ಅಂದರೆ ಒಟ್ಟಾರೆಯಾಗಿ ಸಮಾಜದಲ್ಲಿ ಒಂದು ಸ್ವಂತ ಮನೆಯನ್ನು ಹೊಂದುವ ಹಂಬಲ ಮಾತ್ರ ಅವರದಾಗಿರುತ್ತದೆ. ಹಾಗೆಯೇ ಕೆಲವಾರು ವಕ್ತೃಗಳು ಆರ್ಥಿಕ ಪರಿಸ್ಥಿತಿಯೂ ತಕ್ಕಂತೆ ಅಲ್ಲದೆ ವಲಸೆ ಬಂದು ನೆಲೆನಿಂತಿರುವ ಸಮಯದಲ್ಲಿ ಅವರ ಬಾಡಿಗೆ ಮನೆಯನ್ನು ಆಶ್ರಯಿಸುವ ಸಾಮಾನ್ಯ ಸಂಗಾತಿಯ ವಿಚಾರವಾಗಿದೆ. ಇವರ ಶೇಕಡವಾರು ೦೯ರಷ್ಟು ಇದೆ. ಮತ್ತು ಭೋಗ್ಯಕ್ಕೆ ಅಂದರೆ ಎರಡು ವರ್ಷ ಅಥವಾ ಗರಿಷ್ಟ ಮೂರು ವರ್ಷಕ್ಕೆ ಒಂದಿಷ್ಟು ಹಣವನ್ನು ಕೊಟ್ಟು ಆ ಮನೆಯಲ್ಲಿ ವಾಸ ಮಾಡುವುದಾಗಿದೆ. ಅಂದರೆ, ಕೆಲವರು ಸ್ವಂತ ನಿವೇಶನವಿಲ್ಲದೆ ಮತ್ತು ಸ್ವಂತ ಮನೆಯು ಇಲ್ಲದೆ ಇರುವ ಸಂದರ್ಭ ಸ್ವಲ್ಪ ಮೊತ್ತದ ಹಣವನ್ನು ಮಾಲಿಕರಿಗೆ ಕೊಟ್ಟು ಆ ಮನೆಯನ್ನು ಭೋಗ್ಯಕ್ಕೆ ಹಾಕಿಸಿಕೊಳ್ಳುವ ಪದ್ಧತಿ ಇವರ ಶೇಕಡವಾರು ಪ್ರಮಾಣ ೨.೩೦ರಷ್ಟು ಇದೆ. ನಂತರದಲ್ಲಿ ನಾವು ಸಂಬಂಧಿಕರ ಮನೆಯಲ್ಲಿ ವಾಸಿಸುವರನ್ನು ಅಷ್ಟೇನು ಹೆಚ್ಚಾಗಿ ನೋಡಲು ಸಾಧ್ಯವಿಲ್ಲ. ಅದು ಕೇವಲ ಶೇಕಡವಾರು ೧.೨ರಷ್ಟು ಇದೆ. ಕಾರಣವಿಷ್ಟೆ ಕೆಲವರ ಮನೋಭಾವನೆಗಳು ತುಂಬ ಜಟಿಲತೆಯಿಂದ ಕೂಡಿರುತ್ತವೆ. ಸಂಬಂಧಿ–ಸಂಬಂಧಿಕರ ನಡುವೆ ಹೊಂದಾಣಿಕೆಯು ಕಷ್ಟ ಸಾಧ್ಯವಾಗಿರುತ್ತದೆ. ಆದ್ದರಿಂದ ಇಂತಹ ಕಡೆ ವಾಸುತ್ತಿರುವ ಪ್ರಮಾಣ ಕಡಿಮೆಯಾಗಿದೆ. ಕೊನೆಯದಾಗಿ ನಾವು ಈ ಕೋಷ್ಟಕದಲ್ಲಿ ಗಮನಿಸುವ ಪ್ರಕಾರ ಆಶ್ರಯ

ಯೋಜನೆ ಇಲ್ಲಿ ಈ ಪ್ರಕಾರದ ಮನೆಯನ್ನು ಸರ್ಕಾರವು ಜನರಿಗೆ ದಯಪಾಲಿಸುತ್ತದೆ. ಇಂತಹ ಪ್ರಕಾರದ ಮನೆ ಸಿಗಲು ತುಂಬ ಕಷ್ಟಕರವಾದ ಕೆಲಸ ನಿರ್ವಹಿಸಬೇಕು. ಸರ್ಕಾರದ ಸೌಲಭ್ಯಗಳು ಜನ ಸಾಮಾನ್ಯರಿಗೆ ಸಿಗುವುದು ತುಂಬ ತ್ರಾಸದಾಯಕವಾದ ವಿಚಾರವೆನ್ನಿಸಿದೆ. ಇಲ್ಲಿ ಸರ್ಕಾರಗಳು ಅವರದೇ ಆದ ನಿಯಮಗಳನ್ನು ಹಾಕಿಕೊಂಡು ಈ ಮನೆಗಳನ್ನು ಹಂಚಿಕೆ ಮಾಡುತ್ತವೆ. ಇಲ್ಲಿ ಇವರ ಪ್ರಮಾಣವನ್ನು ನೋಡುವುದಾದರೆ, ಶೇಕಡವಾರು ೮.೨೦ರಷ್ಟು ಇದೆ. ಒಟ್ಟಾರೆಯಾಗಿ ಈ ಕೋಷ್ಟಕದಲ್ಲಿ ಕ್ಷತ್ರಿಯ ಸಮುದಾಯವರ ಮನೆಯ ಮಾಲೀಕತ್ವದ ಸ್ವರೂಪವನ್ನು ಮೇಲ್ಕಂಡಂತೆ ನೋಡಬಹುದು.

**ಕೋಷ್ಟಕ: ೬.೬. ಮನೆಯಲ್ಲಿನ ಮೂಲಭೂತ ಸೌಲಭ್ಯಗಳ ವಿವರ**

| ಮೂಲಭೂತ ಸೌಲಭ್ಯಗಳು | ಕುಟುಂಬಗಳ ಸಂಖ್ಯೆ | ಶೇಕಡವಾರು |
|---|---|---|
| ವಿದ್ಯುತ್ ಸೌಲಭ್ಯ | ೩೭೦ | ೯೪.೮೭ |
| ನಲ್ಲಿ | ೨೧೦ | ೫೩.೮೪ |
| ಗ್ಯಾಸ್ | ೧೯೬ | ೫೦.೨೫ |
| ಶೌಚಾಲಯ | ೨೩೦ | ೫೮.೯೭ |
| ಸ್ನಾನಗೃಹ | ೩೦೦ | ೭೬.೯೨ |
| ಸೈಕಲ್/ಮೋಟರ್ ಬೈಕು | ೧೮೦ | ೪೬.೧೫ |
| ರೇಡಿಯೋ/ಟೇಪ್‌ರೆಕಾರ್ಡರ್ | ೧೧೦ | ೨೮.೨೦ |
| ವಾಸಿಂಗ್ ಮೆಸಿನ್ | ೦೪೫ | ೧೧.೫೩ |
| ವಾಟರ್ ಫಿಲ್ಟರ್ | ೦೮೦ | ೨೦.೫೧ |
| ಫೋನ್/ಮೋಬೈಲ್ | ೩೬೦ | ೯೨.೩೦ |
| ಬಯೋಗ್ಯಾಸ್ | ೦೪೦ | ೧೦.೨೫ |
| ಹೋಲಿಗೆಯಂತ್ರ | ೦೮೫ | ೨೧.೭೯ |
| ಮಿಕ್ಷಿ | ೩೪೦ | ೮೭.೧೭ |
| ಫ್ಯಾನ್ | ೨೧೦ | ೫೩.೮೪ |
| ಗ್ರೈಂಡರ್ | ೦೬೦ | ೧೫.೩೮ |
| ರೆಫ್ರಿಜರೇಟರ್ | ೦೨೦ | ೫.೧೨ |
| ಟಿ.ವಿ | ೩೮೨ | ೯೭.೯೪ |
| ಕಂಪ್ಯೂಟರ್ | ೧೮ | ೦೪.೬೧ |

ಮೇಲಿನ ಕೋಷ್ಟಕವು ಕ್ಷತ್ರಿಯ:ಕ್ಷತ್ರಿ ಸಮುದಾಯದಲ್ಲಿ ಸಂದರ್ಶಿತ ಕುಟುಂಬಗಳ ಮನೆಯಲ್ಲಿ ಕಂಡುಬರುವ ಮೂಲಭೂತ ಸೌಲಭ್ಯಗಳ ವಿವರವನ್ನು ಶೇಕಡವಾರು ತಿಳಿಸಲಾಗಿದೆ. ಮಾನವನು ತನ್ನ ನೆಲೆಯನ್ನು ಒಂದು ಕಡೆ ಕಂಡುಕೊಂಡ ಮೇಲೆ ಅವನಿಗೆ ಅವಶ್ಯಕವಾದ ವಸ್ತುಗಳನ್ನು ಸಂಗ್ರಹಿಸಿಕೊಂಡು ಅವುಗಳಿಂದ ಆಗುವ ಪ್ರಯೋಜನವನ್ನು ಪಡೆಯುತ್ತಾ ಬರುವುದು ಸಹಜ ಸ್ಥಿತಿಯಾಗಿದೆ. ಇಲ್ಲಿ ಮುಖ್ಯವಾಗಿ ಪ್ರತಿಯೊಂದು ಕುಟುಂಬ ಒಂದಲ್ಲಾ ಒಂದು ರೀತಿಯಾದ ಸೌಲಭ್ಯದಿಂದ ವಂಚಿತವಾಗಿರುವುದನ್ನು ನಾವು ಕೋಷ್ಟಕದಿಂದ ತಿಳಿಯಬಹುದು. ವಿದ್ಯುತ್ ಸೌಲಭ್ಯವನ್ನು ೩೭೦ರಷ್ಟು ವಕ್ತೃಗಳು ಹೊಂದಿದ್ದಾರೆ. ನಲ್ಲಿ ಅಂದರೆ ಕುಡಿಯುವ ನೀರಿನ ಸೌಲಭ್ಯ ಅತಿ ಅವಶ್ಯಕವಾಗಿದ್ದು, ಅದನ್ನು ಕೆಲವರು ಸ್ವಂತದಾಗಿ ಮತ್ತೆ ಕೆಲವರು ಬೀದಿ ನಲ್ಲಿಯನ್ನು ಹಾಕಿಸುತ್ತಾರೆ. ನಲ್ಲಿಯ ಸೌಲಭ್ಯದ ಪ್ರಮಾಣವು ೨೧೦ರಷ್ಟು ವಕ್ತೃಗಳು ಹೊಂದಿದ್ದಾರೆ. ಹಾಗೂ ಗ್ಯಾಸ್, ಅಂದರೆ ಅನಿಲದ ಒಲೆಯನ್ನು ಹೊಂದಿರುವ ಸಂಖ್ಯೆಯು ೧೯೬ರಷ್ಟು ಇದೆ. ಇಲ್ಲಿ ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ಆಹಾರ ಬೇಯಿಸಿಕೊಳ್ಳಲು ಈಗಲೂ ಸಹ ಊರುವಲು ಸೌದೆಯನ್ನು ಬಳಸುವುದು ಕಂಡುಬರುತ್ತದೆ. ಶುಚಿತ್ವದ ವಿಚಾರದಲ್ಲಿ ಶೌಚಾಲಯವು ಪ್ರಮುಖ ಪಾತ್ರವಹಿಸುತ್ತದೆ. ಭಾರತವು ಈ ಒಂದು ವಿಷಯಕ್ಕೆ ಕೈಜೋಡಿಸಿನಿಂತಿದೆ. ಅಂದರೆ ಬರ್ಹಿದಶೆ ಮುಕ್ತ ಗ್ರಾಮ ಮಾಡಲು ತುಂಬ ದೊಡ್ಡ ಮಟ್ಟದ ಯೋಜನೆಯನ್ನು ಗ್ರಾಮೀಣಮಟ್ಟದಿಂದ ಹಮ್ಮಿಕೊಂಡಿದೆ. ಇಲ್ಲಿ ಇವರ ಪ್ರಮಾಣ ೨೩೦ರಷ್ಟು ಇದೆ. ಹಾಗೂ ಸ್ನಾನಗೃಹವನ್ನು ಹೊಂದಿರುವ ಸಂಖ್ಯೆಯು ೩೦೦ರಷ್ಟು ಇದೆ. ಸೈಕಲ್/ ಮೋಟಾರ್ ಬೈಕು ಈ ವಾಹನಗಳ ಬಳಕೆಯು ಇತ್ತೀಚಿನ ದಿನಗಳಲ್ಲಿ ಸರಳವೆನ್ನಿಸಿದೆ, ಇದನ್ನು ಹೊಂದಿರುವ ಕುಟುಂಬಗಳ ಸಂಖ್ಯೆಯು ೧೮೦ರಷ್ಟು ಇದೆ. ರೇಡಿಯೋ ಟೇಪ್‌ಕಾರ್ಡ ಈ ವಿದ್ಯಮಾನವ ಯಂತ್ರಗಳನ್ನು ಹೊಂದಿರುವುದು ಸಾಮಾನ್ಯವಾಗಿ ಗೋಚರಿಸುತ್ತದೆ. ಇವುಗಳ ಪ್ರಮಾಣವನ್ನು ಹೊಂದಿರುವ ಕುಟುಂಬದ ಸಂಖ್ಯೆ ೧೧೦ರಷ್ಟು ಇದೆ. ಮಾನವನು ತನ್ನ ಜೀವನಕ್ಕೆ ಏನುಬೇಕು ಅವುಗಳನ್ನು ಪಡೆದುಕೊಂಡು ಉಪಯೋಗಿಸಿಕೊಳ್ಳುವುದರಲ್ಲಿ ನಿಸ್ಸಿಮನ್ನೆಸಿದ್ದಾನೆ. ಹಾಗೇ ವಾಷಿಂಗ್ ಮೆಷಿನ್, ವಾಟರ್ ಫಿಲ್ಟರ್, ಪೋನ್/ಮೊಬೈಲ್, ಕಂಪ್ಯೂಟರ್, ಮಿಕ್ಸಿ. ಬಯೋಗ್ಯಾಸ್, ಪ್ಯಾನ್, ಗ್ರೈಂಡರ್, ರೆಪ್ರಿಜಿರೇಟರ್, ಟಿ.ವಿ, ಈ ಎಲ್ಲಾ ಮೂಲಸೌಲಭ್ಯವನ್ನು ಹೊಂದಲೇ ಬೇಕು ಎಂಬ ಹಂಬಲದಿಂದ ಕೂಡಿರುವುದು ಈ ಕೋಷ್ಟಕದಲ್ಲಿ ನಮಗೆ ತಿಳಿಯುತ್ತದೆ. ನಾವು ಈ ಮೂಲಸೌಲಭ್ಯಗಳನ್ನು ಒಂದೊಂದಾಗಿ ಗುರುತಿಸಿಕೊಂಡಂತೆ ಅವನ್ನು ನಮಗೆ ತಿಳಿದಿರುವ ಪ್ರಕಾರಗಳಿಂದ ತಿಳಿಯದಿರುವ ಗೃಹೋಪಯೋಗಿ ವಸ್ತುಗಳನ್ನು ನಮಗೆ ಪರಿಚಯಿಸಿಕೊಡುವ ಸಂದರ್ಭವು ಈ ಕ್ಷೇತ್ರಾಧ್ಯಯನದ ಬಂದರೆಗಿತ್ತು. ಆದ್ದರಿಂದ ಮನುಷ್ಯನ ವಿಲಾಸಿಯ ಜೀವನಕ್ಕೆ ಕೊನೆಯೇ ಇಲ್ಲದಂತಾಗಿದೆ. ಜಗತ್ತಿನಲ್ಲೂ ಯಾವುದೇ ಹೊಸ ಹೊಸ ಆವಿಷ್ಕಾರವಾದರೆ, ಅದು ಕೊಂಡುಕೊಳ್ಳುವ ಮನೋಭಾವನೆಯನ್ನು ಹೊಂದಿದ್ದಾನೆ. ಕೋಷ್ಟಕವು ವಕ್ತೃಗಳು ಉಪಯೋಗಿಸುವ ಮೂಲಭೂತ ಸೌಲಭ್ಯಗಳನ್ನು ತಿಳಿಸಿಕೊಡುವಲ್ಲಿ ಮಹತ್ವದಾಗಿದೆ.

**ಕೋಷ್ಟಕ: ೬.೭. ನಿಮ್ಮ ಕುಟುಂಬವು ಕೃಷಿಯನ್ನು ಅವಲಂಬಿಸಿದೆಯೇ?**

| ನಿಮ್ಮ ಕುಟುಂಬ ಕೃಷಿಯನ್ನು ಅವಲಂಬಿಸಿದೆಯೇ? | ಪ್ರತಿ ಕುಟುಂಬದ ವಕ್ತೃಗಳು ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಹೌದು | ೨೨೬ | ೫೭.೯೮ |
| ಇಲ್ಲ | ೧೬೪ | ೪೨.೦೫ |
| **ಒಟ್ಟು** | **೩೯೦** | **೧೦೦.೦೦** |

ಈ ಮೇಲಿನ ಕೋಷ್ಟಕವು ಕ್ಷತ್ರಿಯ:ಕ್ಷತ್ರಿ ಸಮುದಾಯವು ಕೃಷಿಯನ್ನು ಅವಲಂಬಿಸಿದೆಯೇ ಅಥವಾ ಇಲ್ಲವೆಂಬುದನ್ನು ಗುರುತಿಸುವುದಾಗಿದೆ. ಚರಿತ್ರೆಯ ಬೆಳವಣಿಗೆ ನಿಶ್ಚಿತ ರೂಪದಲ್ಲಿ ಆರಂಭಗೊಂಡಿರುವುದೇ ಮಾನವ ಉತ್ಪಾದನೆಯನ್ನು ಆರಂಭಿಸಿದಾಗ ಬುಡಕಟ್ಟು ವ್ಯವಸ್ಥೆ ಕೃಷಿ ವ್ಯವಸ್ಥೆಯಾಗಿ ಪರಿವರ್ತನೆಗೊಂಡಿರುವುದು ಚರಿತ್ರೆಯ ಬೆಳವಣಿಗೆಯ ಮೊದಲನೆಯ ಘಟ್ಟ. ಈ ಪರಿವರ್ತನೆ ಅನೇಕ ಬದಲಾವಣೆಗಳಿಗೆ ದಾರಿ ಮಾಡಿಕೊಟ್ಟಿತ್ತು. ರಾಜ್ಯದ ಒಟ್ಟು ಆರ್ಥಿಕತೆ ಕೃಷಿ ಮತ್ತು ಅದರ ಉತ್ಪಾದನೆಯನ್ನು ಅವಲಂಬಿಸಿರುತ್ತಿತ್ತು. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರು ಕೃಷಿಯನ್ನು ಅವಲಂಬಿಸಿದ ಪ್ರಮಾಣ ೨೨೬ರಷ್ಟು ಇದ್ದು, ಇದರ ಶೇಕಡವಾರು ೫೭.೯೮ರಷ್ಟು ಇದೆ. ಹಾಗೆಯೇ ೧೬೪ ರಷ್ಟು ವಕ್ತೃಗಳು ಇಲ್ಲ ಎಂದು ತಿಳಿಸಿದ್ದಾರೆ, ಇವರ ಪ್ರಮಾಣವು ಶೇಕಡವಾರು ೪೨.೦೫ರಷ್ಟಿದೆ. ಒಟ್ಟಾರೆಯಾಗಿ ಇಲ್ಲಿ ಕ್ಷತ್ರಿಯ:ಕ್ಷತ್ರಿ ಸಮುದಾಯವು ಕೃಷಿಯನ್ನು ಅವಲಂಬಿಸಿದ್ದರು. ಕೆಲವೊಂದು ಕುಟುಂಬಗಳಿಗೆ ಕೃಷಿಯನ್ನು ಮಾಡಲು ಜಮೀನ ಇಲ್ಲದೆ ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಕೆಲವರು ಬೇರೊಂದು ವೃತ್ತಿಗಳಿಗೆ ಸೀಮಿತರಾಗಿರುವುದು ಕ್ಷೇತ್ರಾಧ್ಯಯನದ ಮೂಲಕ ನಾವು ತಿಳಿದುಬಂದಿದೆ.

**ಕೋಷ್ಟಕ: ೬.೮. ಜಾನುವಾರುಗಳ ವಿವರ**

| ಜಾನುವಾರುಗಳ ವಿವರ | ಸಂಖ್ಯೆ |
|---|---|
| ಎತ್ತು | ೨೦೦ |
| ಆಕಳು | ೧೦೮ |
| ಎಮ್ಮೆ | ೦೩೨ |
| ಕುರಿಗಳು | ೨೫೦ |
| ಮೇಕೆ | ೦೪೫ |
| ಕೋಳಿ | ೦೮೦ |
| ಮೊಲ | ೦೨೦ |
| ಪಾರಿವಾಳ | ೦೨೨ |
| ಇತರ ಪ್ರಾಣಿಗಳು | ೦೪೫ |
| **ಒಟ್ಟು** | **೮೦೨** |

ಈ ಮೇಲಂಡ ಕೋಷ್ಟಕವು ಕ್ಷತ್ರಿಯ:ಕ್ಷತ್ರಿ(ಹಿಂದೂ ಕ್ಷತ್ರಿಯ)ಸಮುದಾಯವರು ಕೃಷಿಯ ಜೊತೆಯಲ್ಲಿ ಪಶುಪಾಲನೆಯನ್ನು ಮಾಡುತ್ತಿದ್ದರು ಎಂಬುದಕ್ಕೆ ನಿರ್ದೇಶನವಾದ ಪ್ರಶ್ನೆಯಾಗಿದೆ. ಭಾರತೀಯ ಸಮಾಜವು ತನ್ನದೇ ಆದ ನೆಲೆಗಟ್ಟಿಯಲ್ಲಿ ಪ್ರತಿಯೊಬ್ಬ ವ್ಯಕ್ತಿಯು ಒಂದಲ್ಲಾ ಒಂದು ವೃತ್ತಿಯನ್ನು ಅವಲಂಬಿಸಿರುತ್ತಾನೆ. ಕೆಲವು ಸಮುದಾಯಗಳು ತಮಗೆ ಅವಶ್ಯಕವಾದ ಪೂರಕವಾದ ವಸ್ತುಗಳನ್ನು ತಾವೇ ತಯಾರಿಸಿಕೊಳ್ಳುವುದು ಸಹಜ. ಇಲ್ಲಿ ಜಾನುವಾರುಗಳು ಭಾರತೀಯ ಕೃಷಿ ಕುಟುಂಬಗಳಿಗೆ ತುಂಬ ಲಾಭದಾಯಕ ಮತ್ತು ಆಶ್ರಯದಾಯಕವಾಗಿವೆ. ಇಲ್ಲಿ ಪ್ರತಿಯೊಬ್ಬರು ಪಶುಪಾಲನೆಯನ್ನು ಮಾಡಲು ಸಾಧ್ಯವಿಲ್ಲ. ಇವುಗಳನ್ನು ಲಾಲನೆ–ಪಾಲನೆಯ ಜೊತೆಯಲ್ಲಿಯೇ ಅವುಗಳಿಂದ ಪ್ರಯೋಜನ ಪಡೆದುಕೊಳ್ಳುತ್ತಿರುವುದು ಸಾಮಾನ್ಯ. ನಾವು ಈ ಕೋಷ್ಟಕದಿಂದ ತಿಳಿದುಕೊಳ್ಳುವ ವಿಷಯವೆಂದರೆ, ಪಶುಪಾಲನೆಯಿಂದಲೇ ಜೀವನ ನಿರ್ವಹಿಸುವ ಸತ್ಯಸಂಗತಿಯ ವಿಚಾರ. ರಾಜರುಗಳ ಆಳ್ವಿಕೆಯ ಸಂದರ್ಭದಲ್ಲಿ ಸೈನಿಕವೃತ್ತಿ, ಕೃಷಿ ಪ್ರಧಾನ ವರ್ಗಗಳನ್ನು ಅವಲಂಬಿಸಿ ಬದುಕಿದ್ದನ್ನು ಕಾಣುತ್ತೇವೆ. ಪಾರಂಪರಿಕ ವೃತ್ತಿಗೆ ಬದಲು ಹವ್ಯಾಸಿ ಮತ್ತು ಧಾರ್ಮಿಕ ಕಾರಣಗಳಿಂದ ರೂಢಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಪಶುಸಂಪತ್ತು ಜೊತೆ–ಜೊತೆಯಾಗಿ ಬರುತ್ತಿದ್ದುದ್ದನ್ನು ಗುರುತಿಸಬಹುದಾಗಿದೆ. ಕೆಲವೊಂದು ಸಮುದಾಯಗಳಿಗೆ ಎತ್ತುಗಳು ಜೀವನಾಧಾರವಾಗಿ ಕಂಡುಬರುತ್ತವೆ, ಮತ್ತೆ ಕೆಲವು ಆಹಾರ ಕ್ರಮದಿಂದ ಜೊತೆಯಾಗಿರುತ್ತವೆ. ಕುರಿ, ಕೋಳಿ, ಮೇಕೆ, ಆಕಳು ಉದಾಹರಣೆಯಾಗಿ ಕಂಡುಬರುತ್ತವೆ. ಪಶುಸಂಪತ್ತು ಆಹಾರ ಕಾರಣದಿಂದ ಜೊತೆಯಗಿರುವುದನ್ನು ಕಾಣಬಹುದಾಗಿದೆ. ಕೃಷಿಯ ಜ್ಞಾನಕ್ಕೆ ಹೆಚ್ಚಾಗಿ ಹೊಂದಿಕೊಂಡಿರುವ ಕಾರಣ ಅದನ್ನು ಅವಲಂಬಿಸಿ ಬದುಕುವ ಪಾರಂಪರಿಕವಾಗಿ ರೊಢಿಸಿಕೊಂಡಿರುವದರಿಂದ ಎತ್ತುಗಳ ಸಂಖ್ಯೆಯು ೨೦೦ ಕಂಡುಬಂದಿದೆ. ಹೈನುಗಾರಿಕೆಯನ್ನು ಅವಲಂಬಿಸಿರುವ್ಯದರಿಂದ ಆಕಳುಗಳ ಸಂಖ್ಯೆ ೧೦೮ ಮತ್ತು ಎಮ್ಮೆಗಳ ಸಂಖ್ಯೆಯು ೩೨ ಕಂಡುಬರುತ್ತದೆ. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರಲ್ಲಿ ಮಾಂಸದ ಆಹಾರವು ಇರುವುದರಿಂದ ಮತ್ತು ಇವರಲ್ಲಿ ಸ್ತ್ರೀದೇವತೆಗಳ ಆರಾಧಕತೆ ಇರುವುದರಿಂದ ಅವುಗಳನ್ನು ತೃಪ್ತಿಪಡಿಸಲು ಸಲುವಾಗಿ ಮತ್ತು ತಮ್ಮ ಮಾಂಸದ ಆಹಾರಕ್ಕಾಗಿ ಕುರಿ, ಕೋಳಿ, ಓತಗಳನ್ನು ಬಲಿಕೊಡುವುದನ್ನು ಕಾಣಬಹುದಾಗಿದೆ. ಕ್ಷತ್ರಿಯ:ಕ್ಷತ್ರಿ ಸಮುದಾಯವು ಈ ಪ್ರಾಣಿಗಳನ್ನು ಸಾಕುವ ಮೂಲಕ ಬಲಿ ನೀಡುವುದನ್ನು (ಅನುಬಂಧ: ೪. ಛಾಯಾಚಿತ್ರ ೧೫)ರಲ್ಲಿ ನೋಡಬಹುದು. ಇಲ್ಲಿ ಕುರಿಗಳನ್ನು ಹೆಚ್ಚು ಸಂಖ್ಯೆಯಲ್ಲಿ (ಹಿಂದುಗಳು) ಸಾಕಣೆ ಮಾಡುವ ಕುಟಂಬಗಳಿವೆ ಮತ್ತು ಕೆಲವೊಂದು ಮನೆಯಲ್ಲಿ ಒಂದು ಎರಡು ಕುರಿ ಓತ ಕೋಳಿಗಳನ್ನು ಸಾಕಣೆ ಮಾಡಿ ಮಾರಾಟ ಮಾಡಿ ಹಣ ಗಳಿಕೆ ಮಾಡುವರು ಇದ್ದಾರೆ. ಕೋಷ್ಟಕದಂತೆ ೨೫೦ ಕುರಿ, ೪೫ ಮೇಕೆ, ೮೦ ಕೋಳಿ, ಪ್ರಾಣಿಗಳಲ್ಲಿ ಕುದರೆ, ಕತ್ತೆಗಳನ್ನು ಕಾಣಬಹುದು. ಇವರಲ್ಲಿ ಹಂದಿಯು ಧಾರ್ಮಿಕ ಆಚರಣೆಯ ಭಾಗದಿಂದ ದೈವರೂಪವನ್ನು ಪಡೆದುಕೊಂಡಿದೆ. ಒಟ್ಟಾರೆಯಾಗಿ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಸಮುದಾಯವು ಪಶುಪಾಲನೆಗೆ ಆದ್ಯತೆ ನೀಡಿದೆ ಎಂದು ತಿಳಿಯಲು ಖುಷಿಕೊಡುವ ವಿಷಯವೆನ್ನಿಸಿದೆ.

ಕೋಷ್ಟಕ: ೬.೯. ತಾಲ್ಲೂಕುವಾರು, ಕುಟುಂಬವಾರು, ಒಣಭೂಮಿ, ನೀರಾವರಿ, ಭೂರಹಿತ ಪ್ರಮಾಣ ಮತ್ತು ಭೂಹಿಡುವಳಿ ಶ್ರೇಣಿ ಪ್ರಮಾಣ

| ತಾಲ್ಲೂಕುಗಳು | ಕುಟುಂಬಗಳು | ಭೂ ಹಿಡುವಳಿ ಎಕರೆಗಳಲ್ಲಿ | | | | | | | ಭೂ ಹಿಡುವಳಿ ಶ್ರೇಣಿಗಳು (ಎಕರೆಗಳಲ್ಲಿ) | | | |
|---|---|---|---|---|---|---|---|---|---|---|---|---|
| | | | | | | | | | ೧೦.೧-೨೫ ರಮೇಲ್ಪಟ್ಟು | ೫.೧-೧೦ | ೨.೧-೫ | ೦೫-೨ |
| | | ಒಣಭೂಮಿ | ಶೇಕಡವಾರು | ನೀರಾವರಿ | ಶೇಕಡವಾರು | ಭೂರಹಿತ | ಶೇಕಡವಾರ | ಒಟ್ಟು | ಎ | ಬಿ | ಸಿ | ಡಿ |
| ಹಡಗಲಿ | ೩೦ | ೧೦ | ೨.೫೬ | ೦೭ | ೧.೭೯ | ೧೩ | ೩.೩೩ | ೭.೬೮ | ೧ | ೨ | ೩ | ೧೧ |
| ಬಾಗಲಕೋಟೆ | ೩೫ | ೧೬ | ೪.೧೦ | ೦೪ | ೧.೦೨ | ೧೫ | ೩.೮೪ | ೮.೯೬ | ೩ | ೬ | ೪ | ೦೭ |
| ಮುದೋಳ | ೩೦ | ೧೮ | ೪.೬೧ | ೦೪ | ೧.೦೨ | ೦೮ | ೨.೦೫ | ೭.೬೮ | ೧ | ೨ | ೮ | ೧೧ |
| ಬೈಲಹೊಂಗಲ | ೩೨ | ೧೬ | ೦೪.೧ | ೦೬ | ೧.೫೩ | ೧೦ | ೨.೫೬ | ೮.೧೯ | ೪ | ೮ | ೨ | ೦೮ |
| ಗೋಕಾಕ್ | ೩೩ | ೧೧ | ೨.೮೨ | ೧೦ | ೨.೫೬ | ೧೨ | ೨.೮೨ | ೮.೨ | ೫ | ೪ | ೫ | ೦೭ |
| ಹೊನ್ನಾಳಿ | ೪೦ | ೨೬ | ೬.೬೬ | ೦೪ | ೧.೦೨ | ೧೦ | ೨.೫೬ | ೧೦.೨೪ | ೩ | ೬ | ೫ | ೧೬ |
| ಹರಪನಹಳ್ಳಿ | ೨೦ | ೧೦ | ೨.೫೬ | ೦೨ | ೦.೫೧ | ೦೮ | ೨.೦೫ | ೫.೧೨ | ೧ | ೨ | ೪ | ೦೫ |

| | | | | | | | | | | | | |
|---|---|---|---|---|---|---|---|---|---|---|---|---|
| ಕುಂದಗೋಳ | ೩೦ | ೧೪ | ೩.೫೮ | ೦೪ | ೧.೦೨ | ೧೨ | ೩.೦೭ | ೭.೬೭ | ೦ | ೦ | ೮ | ೧೦ |
| ಶಿರಹಟ್ಟಿ | ೨೫ | ೧೪ | ೩.೫೮ | ೦೨ | ೦.೫೧ | ೦೯ | ೦೨.೩ | ೬.೩೯ | ೧ | ೩ | ೫ | ೦೭ |
| ಹಾನಗಲ್ | ೩೫ | ೨೦ | ೫.೧೨ | ೦೮ | ೨.೦೫ | ೦೭ | ೧.೭೯ | ೮.೯೬ | ೫ | ೯ | ೫ | ೦೯ |
| ಶಿವಮೊಗ್ಗ | ೩೦ | ೧೨ | ೩.೦೭ | ೧೦ | ೨.೫೬ | ೦೮ | ೨.೦೫ | ೭.೬೮ | ೨ | ೪ | ೬ | ೧೦ |
| ಶಿಕಾರಿಪುರ | ೨೦ | ೦೬ | ೧.೫೩ | ೦೮ | ೨.೦೫ | ೦೬ | ೧.೫೩ | ೫.೧೧ | ೧ | ೫ | ೩ | ೦೫ |
| ಮುದ್ದೇಬಿಹಾಳ | ೩೦ | ೨೦ | ೫.೧೨ | ೦೨ | ೦.೫೧ | ೦೮ | ೨.೦೫ | ೭.೬೮ | ೨ | ೩ | ೭ | ೧೦ |
| ಒಟ್ಟು | ೩೯೦ | ೧೯೩ | ೫೦ | ೭೧ | ೧೮ | ೧೨೬ | ೩೨ | ೧೦೦ | ೨೯ | ೫೪ | ೬೫ | ೧೧೬ |

ಈ ಮೇಲಿನ ಕೋಷ್ಟಕವು ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರ ಸಮುದಾಯದಲ್ಲಿ ತಾಲೂಕುವಾರು, ಕುಟುಂಬವಾರು, ನೀರಾವರಿ, ಒಣಭೂಮಿ, ಭೂಹಿಡುವಳಿಗಳ ಪ್ರಮಾಣ ಮತ್ತು ಭೂಹಿಡುವಳಿ ಶ್ರೇಣಿ ಪ್ರಮಾಣ ಎಂಬ ಅಂಶದ ಬಗ್ಗೆ ಸಂದರ್ಶಿತರಲ್ಲಿ ಕೇಳಲಾಗಿದ್ದು ಇಲ್ಲಿ ನಾವು ಒಟ್ಟಾರೆಯಾಗಿ ೩೯೦ ಪ್ರತಿ ವಕ್ತೃಗಳನ್ನು ಈ ಒಂದು ಪ್ರಶ್ನೆಯನ್ನು ಕೇಳಲಾಗಿದ್ದು, ಅದರಲ್ಲಿ ಕೆಲವೊಂದು ನಿರ್ಧಾರಕ ಅಂಶಗಳನ್ನು ಅವರೊಂದಿಗೆ ತಿಳಿಸಿ ಕೇಳಿದಾಗ ಅವರು ಕೋಷ್ಟಕದಲ್ಲಿರುವಂತೆ ಭೂ ಹಿಡುವಳಿ ಎಕರೆಗಳಲ್ಲಿ, ಒಣಭೂಮಿಯು ಶೇಕಡವಾರು ೫೦ರಷ್ಟು ಇದ್ದು, ನೀರಾವರಿಯ ಶೇಕಡವಾರು ಪ್ರಮಾಣವು ೧೮ರಷ್ಟು ವಕ್ತೃಗಳಿದ್ದಾರೆ, ಹಾಗೂ ಭೂರಹಿತರು ಸಹ ಶೇಕಡವಾರು ೩೨ರಷ್ಟು ಕಂಡುಬರುತ್ತಾರೆ. ಭೂ ಹಿಡುವಳಿ ಶ್ರೇಣಿಗಳು(ಎಕರೆಗಳಲ್ಲಿ)ನ್ನು ಸಹ ಮೇಲಿನ ಕೋಷ್ಟಕದಿಂದ ತಿಳಿಯಬಹುದಾಗಿದೆ. ಮೇಲಿನ ಕುಟುಂಬವಾರು, ನೀರಾವರಿ, ಒಣಭೂಮಿ, ಭೂ ಹಿಡುವಳಿಗಳ ಪ್ರಮಾಣ ಮತ್ತು ಭೂ ಹಿಡುವಳಿ ಶ್ರೇಣಿ ಪ್ರಮಾಣ ಕೋಷ್ಟಕದ ಶೇಕಡವಾರು ಪ್ರಮಾಣವನ್ನು ಗಮನಿಸಿದಾಗ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯವು ಅಂಥಹ ಹೇಳಿ ಕೊಳ್ಳುವಂತಹ ಭೂಮಿಯನ್ನು ಹೊಂದದಿರುವುದು ತಿಳಿಯುತ್ತದೆ. ಭೂರಹಿತ ಕುಟುಂಬಗಳು ಸಹ ಹೆಚ್ಚಿನದಾಗಿ ಕಂಡುಬರುತ್ತಾರೆ, ಮತ್ತು ನೀರಾವರಿಯ ಭೂಮಿಯನ್ನು ಹೊಂದಿರುವರ ಸಂಖ್ಯೆಯು ಕಡಿಮೆ ಪ್ರಮಾಣದಲ್ಲಿದೆ.

ಇವರು ನೆಲೆಸಿರುವ ಪ್ರದೇಶಗಳು ಕೃಷಿ ಚಟುವಟಿಕೆಗಳಿಗೆ ಸೂಕ್ತ ಸ್ಥಳವಾಗಿರುವುದರಿಂದ ಸಹಜವಾಗಿ ಭೂ ಹಿಡುವಳಿದಾರರಾದರು. ಸ್ವಂತ ಜಮೀನನ್ನು ಹೊಂದಿದ್ದ ಇವರು ಮುಖ್ಯವಾಗಿ ಕೃಷಿಯನ್ನು ಅವಲಂಬಿಸಿದರು. ಶ್ರಮ ಸಂಸ್ಕೃತಿಯ ಹಿನ್ನಲೆಯಿಂದ ಬಂದ ಕ್ಷತ್ರಿಯ ಶ್ರಮಜೀವಿಗಳ ಅಂದರೆ ಸಿರಿತನ-ಬಡತನ, ಭೂಮಾಲಿಕ-ಗೇಣಿದಾರ, ಗ್ರಾಮ ಮತ್ತು ನಗರಗಳ ನಡುವಿನ ಅಂತರವನ್ನು ಕಡಿಮೆ ಮಾಡಲು ಪ್ರಯತ್ನಿಸುವುದರ ಮೂಲಕ ಶೋಷಣಾರಹಿತ ಸಮಾಜವನ್ನು ಕಟ್ಟಲು ಪ್ರಯತ್ನಿಸಿದ್ದು, ಗಮನಾರ್ಹ ಅಂಶ, ಅರಸು ಜಾರಿಗೆ ತಂದ ಪ್ರಗತಿಪರ ಶಾಸನಗಳಲ್ಲಿ ಪ್ರಮುಖವಾದದ್ದು 'ಉಳುವವನೇ ಹೊಲದೊಡೆಯ' ಎಂಬುದು. ಅರಸು ಸ್ವತಃ ಗೇಣಿದಾರರ ದುಃಖದುಮ್ಮಾನಗಳನ್ನು ಅರಿತವರು. ಯಾರು ಗೇಣಿ ಮಾಡುತ್ತಿದ್ದರೋ ಅಂಥವರು ಭೂಮಿಯನ್ನು ಒಡೆಯರಿಗೆ ಕೊಡುವಂತಿಲ್ಲ. ಆ ಭೂಮಿಗೆ ಗೇಣಿದಾರರೇ ಒಡೆಯರು ಎಂಬ ಕಾನೂನು ಜಾರಿಗೆ ಬಂದ ತಕ್ಷಣವೇ ಗ್ರಾಮಾಂತರ ಪ್ರದೇಶಗಳಲ್ಲಿ ರೈತಾಪಿ ಜನರಲ್ಲಿ, ಗೇಣಿದಾರರಲ್ಲಿ ಹೊಸ ಆಸೆ ಉದಯವಾಯಿತು; ಆದರಿಂದಾಗಿ ಕೆಲವರಿಗೆ ಕೃಷಿ ಜಮೀನು ಲಭಿಸಿತು. ಆದರೂ ಇವರು ಒಟ್ಟಾರೆಯ ಜಮೀನ ಪ್ರಮಾಣವು ಕಡಿಮೆ ಇರುವುದು ತಿಳಿಯುತ್ತದೆ.

**ಕೋಷ್ಟಕ: ೬.೧೦. ನಿಮ್ಮ ಜಾತಿಗೆ ಸಂಬಂಧಿಸಿದಂತೆ ಕುಲಕಸುಬುಗಳಿವೆಯೇ?**

| ಜಾತಿಗೆ ಸಂಬಂಧಿಸಿದ ಕುಲ ಕಸುಬುಗಳಿವೆಯೇ | ಪ್ರತಿಕುಟುಂಬಗಳ ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಹೌದು | ೨೬೫ | ೬೭.೯೪ |
| ಇಲ್ಲ | ೧೫೨ | ೩೨.೦೫ |
| **ಒಟ್ಟು** | ೩೯೦ | ೧೦೦.೦೦ |

ಕೃಷಿ ಪ್ರಧಾನವಾದ ದೇಶ ನಮ್ಮದು. ಈ ಒಕ್ಕಲು ಓಿನ್ನಲೆಯಲ್ಲಿ ಹುಟ್ಟಿದ ಕಲೆಗಳು ಅಪಾರ ಅವು ವಿಭಿನ್ನ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದವುಗಳು. ಇಂದು ರೈತನ ಮಡಿಲಲ್ಲಿ ಕಲೆ ಉಳಿಯುವುದು ಕಷ್ಟ ಸಾಧ್ಯನ್ನೆಸಿದೆ. ಕೆಲವರು ಕಲೆಯನ್ನು ವ್ಯಕ್ತಿಯಾಗಿ ಅಥವಾ ಕಸುಬುಗಳಾಗಿ ಸ್ವೀಕರಿಸಿದರೆ, ರೈತಾಪಿ ವರ್ಗದ ದುಡಿಮೆಯನ್ನೇ ಆಧಾರ ಮಾಡಿಕೊಂಡಿರುವ ಪ್ರತಿಯೊಂದು ಜನಸಮುದಾಯವು ತನ್ನನ್ನಾವರಿಸಿರುವ ನಿಸರ್ಗದೊಂದಿಗೆ ವಿಶಿಷ್ಟ ಸಂಬಂಧವನ್ನು ಕಲ್ಪಿಸಿಕೊಳ್ಳುವುದರ ಮೂಲಕ ಧರ್ಮ ದೇವರುಗಳನ್ನು ಸೃಷ್ಟಿಸಿಕೊಂಡಿದೆ. ಹಾಗೆ ಸೃಷ್ಟಿಸಿಕೊಳ್ಳುವುದರಲ್ಲ, ತಮ್ಮ ವೃತ್ತಿ ಮೂಲವನ್ನು ಕಂಡುಕೊಳ್ಳುತ್ತಿದ್ದರು. ನಾವು ಜಾತಿಗೆ ಸಂಬಂಧಿಸಿದಂತೆ ಕುಲಕಸುಬುಗಳ ಕೋಷ್ಟಕವನ್ನು ರಚಿಸಿದಾಗ ಇಲ್ಲಿ ಮುಖ್ಯವಾಗಿ ಈ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಸಮುದಾಯವು ತನ್ನ ಮೂಲ ವೃತ್ತಿಯಾದ ಹೋರಾಟವನ್ನು ಬಿಟ್ಟೂ ತನ್ನ ವೃತ್ತಿ ಸ್ಥಿತ್ಯಂಥರಗೊಳಿಸಿಕೊಂಡಿದೆ. ಅಂದರೆ, ಬೇಸಾಯ ಕೃಷಿಯನ್ನು ಅವಲಂಬಿಸಿಕೊಂಡಿರುವುದು ಗೋಚರಿಸುತ್ತದೆ. ಕುಲಕಸುಬುಗಳ ವಿಚಾರದಲ್ಲಿ ಇವೆ ಎಂದು ಸಂದರ್ಶಿತರಲ್ಲಿ ೨೬೫ ಕುಟುಂಬದವಕ್ತೃಗಳು ಒಪ್ಪಿಗೆ ನೀಡಿದ್ದಾರೆ ಮತ್ತು ಇಲ್ಲವೆಂದು ೧೨೫ ಕುಟುಂಬದವಕ್ತೃಗಳು ತಿಳಿಸಿದ್ದಾರೆ. ಒಟ್ಟಾರೆಯಾಗಿ ಪ್ರಸ್ತುತ ಕಾಲಮಾನದಲ್ಲಿ ಕುಲಕಸುಬುಗಳು ಅವನತಿ ಹೊಂದಿರುತ್ತಿವುದನ್ನು ನಾವು ಗಮನಿಸುವಂತಹ ವಿಚಾರವಾಗಿದೆ.

**ಕೋಷ್ಟಕ: ೬.೧೧. ಸಂದರ್ಶಿತ ಕುಟುಂಬದವಕ್ತೃಗಳ ಉದ್ಯೋಗದ ವಿವರ**

| ಉದ್ಯೋಗದ ವಿವರ | ಪ್ರತಿಕುಟುಂಬದ ವಕ್ತೃಗಳು ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಕೃಷಿ | ೦೯೦ | ೧೯.೧೮ |
| ಕೂಲಿ | ೧೦೮ | ೨೩.೦೨ |
| ವ್ಯಾಪಾರ | ೦೭೦ | ೧೪.೯೨ |
| ಸರ್ಕಾರಿ ನೌಕರಿ | ೦೬೨ | ೧೩.೨೧ |
| ಖಾಸಗಿ ನೌಕರಿ | ೦೯೯ | ೨೧.೧೦ |
| ಗೃಹಿಣಿ | ೦೩೦ | ೦೬.೩೯ |
| ಮನೆ ಕಟ್ಟುವ ಕೆಲಸ | ೦೧೦ | ೦೨.೧೩ |
| ಒಟ್ಟು | ೪೬೯ | ೧೦೦.೦೦ |

ಈ ಮೇಲಿನ ಕೋಷ್ಟಕದಲ್ಲಿ ಸಂದರ್ಶಿತ ಕುಟುಂಬದವಕ್ತೃಗಳಲ್ಲಿ ಉದ್ಯೋಗದ ಕುರಿತಾದ ವಿವರಣೆಗಳನ್ನು ನೀಡಿದ್ದು, ಒಟ್ಟು ಸಂದರ್ಶಿತ ಎಲ್ಲಾ ಪ್ರತಿವಕ್ತೃಗಳು ಬೇರೆ ಬೇರೆ ಉದ್ಯೋಗಗಳಲ್ಲಿ

ತೊಡಗಿರುವುದನ್ನು ಗಮನಿಸಲಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ, ಸಂದರ್ಶಿತರಲ್ಲಿ ೯೦ ಪ್ರತಿವಕ್ತೃಗಳು ಕೃಷಿ ಅಥವಾ ಬೇಸಾಯ ಆರಂಭ ಅಥವಾ ಕಮ್ಮತ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಇವರ ಶೇಕಡವಾರು ಪ್ರಮಾಣ ೧೯.೧೮ರಷ್ಟು ಇದೆ. ಮತ್ತು ಕೂಲಿಯಲ್ಲಿ ತೊಡಗಿರುವ ಪ್ರಮಾಣ ಸಂಖ್ಯೆ ೧೦೮ರಷ್ಟು ಇದ್ದು, ಇವರ ಸರಾಸರಿಯ ಶೇಕಡವಾರು ೨೩.೦೨ ರಷ್ಟಾಗಿದೆ. ಅಲ್ಲದೆ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಸಮುದಾಯದವರು ವ್ಯಾಪಾರವನ್ನು ತಮ್ಮ ದುಡಿಯೆಯ ಕ್ಷೇತ್ರಾಗಿಸಿಕೊಂಡಿದ್ದಾರೆ. ಇಲ್ಲಿ ಇವರ ಪ್ರಮಾಣ ೭೦ರಷ್ಟು ಇದ್ದು, ಶೇಕಡವಾರು ೧೪.೯ರಷ್ಟು ಇದೆ. ಹಾಗೆಯೇ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಸಮುದಾಯದವರಲ್ಲಿ ಸರ್ಕಾರಿ, ನೌಕರಿಯ ಪ್ರಮಾಣವು ನೋಡುವುದಾದರೆ ೬೯ರಷ್ಟಿದೆ, ಇದು ಶೇಕಡವಾರು ೧೩.೨೧ರಷ್ಟು ಕಂಡುಬರುತ್ತದೆ. ಮತ್ತು ಖಾಸಗಿ ನೌಕರಿಯಲಿರುವರ ಪ್ರಮಾಣ ೯೯ರಷ್ಟು ಇದ್ದು, ಅದು ಶೇಕಡವಾರು ೨೧.೧೦ರಷ್ಟು ಕಂಡುಬರುತ್ತದೆ. ಹಾಗೂ ಗೃಹಿಣಿಯರ ಪ್ರಮಾಣ ೩೦ರಷ್ಟು ಇದೆ, ಇದು ಶೇಕಡವಾರು ೦೬.೩೯ರಷ್ಟು ಸರಾಸರಿ ಕಂಡುಬರುತ್ತದೆ. ಕೊನೆಯಾದಾಗಿ ಮನೆಕಟ್ಟುವ ಕೆಲಸದಲ್ಲಿ ತೊಡಗಿದವರ ಪ್ರಮಾಣವು ೧೦ರಷ್ಟು ಇದ್ದು ಇವರ ಸರಾಸರಿಯು ೨.೧೩ರಷ್ಟು ಕೊಡುಬಂದಿದೆ. ಇಲ್ಲಿ ಮುಖ್ಯವಾಗಿ ಗಮನಿಸುವಂತಹ ವಿಚಾರದ ಸಂಗತಿವೆಂದರೆ, ತಮ್ಮ ಕುಲ ವೃತ್ತಿಯನ್ನು ಬಿಟ್ಟು ಇವರು ಸ್ಥಿಂಥ್ಯತರಗೊಂಡಿರುವುದು ಅಂದರೆ ಚಲನೆಯಾಗಿರುವುದು ನೋಡುತ್ತವೆ. ಈಗಲೂ ಸಹ ಪುರಾಣ ಮಹಾಕಾವ್ಯಗಳಲ್ಲಿ ಮತ್ತು ಇತಿಹಾಸದಲ್ಲಿ ಕ್ಷತ್ರಿಯರ ವೃತ್ತಿ ಕೇವಲ ಹೋರಾಟ ದೇಶದ ಅಥವಾ ನಾಡಿನ ರಕ್ಷಣೆಯಾಗಿದ್ದು, ಕಾಲಾಂತರದಲ್ಲಿ ಇವರು ತಮ್ಮನ್ನು ವರ್ಣ ಆಶ್ರಮದಲ್ಲಿ ಬರುವ ಬ್ರಾಹ್ಮಣ, ವೈಶ್ಯ, ಶೂದ್ರ, ವೃತ್ತಿಗಳಲ್ಲಿ ಸಹ ತಮ್ಮನ್ನು ತೊಡಗಿಸಿಕೊಂಡಿರುವುದು ಈ ಒಂದು ಉದ್ಯೋಗ ಕೋಷ್ಟಕದಿಂದ ನಮಗೆ ತಿಳಿಯುತ್ತದೆ.

**ಕೋಷ್ಟಕ: ೬.೧೨. ಸಾಮಾನ್ಯವಾಗಿ ಮಡಿ, ಮೈಲಿಗೆ, ಸೂತಕವೆಂದು ಯಾವುದಕ್ಕೆ ಹೇಳುತ್ತೀರಾ?**

| ಮಡಿ–ಮೈಲಿಗೆಯ | ಕುಟುಂಬದ ವಕ್ತೃಗಳ ವಿವರ | |
|---|---|---|
| ನಿರ್ಧಾರಿಕ ಅಂಶಗಳು | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಹುಟ್ಟು ಸಾವು | ೩೮೦ | ೯೭.೪೩ |
| ಮಹಿಳೆಯರ ವಿಷಯ | ೨೫೦ | ೬೪.೧೦ |
| ಕೆಳಜಾತಿಯವರನ್ನು ಮುಟ್ಟಿದರೆ | ೫೦ | ೧೨.೮೨ |
| ಈ ಮೇಲಿನ ಮೂರು | ೫೦ | ೧೨.೮೨ |

ಈ ಮೇಲಿನ ಕೋಷ್ಟಕವು ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯದಲ್ಲಿ ಮಡಿ ಮೈಲಿಗೆ ಸೂತಕವೆಂದು ಯಾವುದಕ್ಕೆ ಹೇಳುತ್ತೀರಾ ಎಂಬ ಅಂಶದ ಬಗ್ಗೆ ಸಂದರ್ಶಿತರಲ್ಲಿ ಕೆಳಲಾಗಿದ್ದು ಅದರಲ್ಲಿ ಕೆಲವೊಂದು ನಿರ್ಧಾರಕ ಅಂಶಗಳನ್ನು ಅವರೊಂದಿಗೆ ತಿಳಿಸಿ ಕೇಳಿದಾಗ ಅವರು

ಕೋಷ್ಟಕದಲ್ಲಿರುವಂತೆ ಹುಟ್ಟು ಸಾವು ಈ ಒಂದು ಸೂತಕದ ವಿಚಾರದಲ್ಲಿ ೩೮೦ ಕುಟುಂಬದವಕ್ತ್ಯಗಳು ಸಹ ಸಮ್ಮತಿ ಸೂಚಿಸಿದ್ದಾರೆ. ಹಾಗೆಯೇ ಮಹಿಳೆಯರ ವಿಷಯ ಅಂದರೆ, ಅವರ ಋತುಚಕ್ರ ಮತ್ತು ಋತುಮತಿಯಾಗುವ ವಿಷಯಕ್ಕೆ ಸಂಬಂಧಿಸಿದಂತೆ ಸೂತಕದ ವಿಷಯ ಪ್ರಸ್ತಾಪಿಸಿದಾಗ ಇವರ ಪ್ರಮಾಣವು ೨೫೦ ರಷ್ಟು ವಕ್ತ್ಯಗಳು ಸಮ್ಮತಿ ಸೂಚಿಸಿದ್ದಾರೆ. ಹಾಗೆಯೇ ಕೆಳಜಾತಿಯವರನ್ನು ಮುಟ್ಟದರೆ, ಅಂದರೆ ಈ ಒಂದು ನಿರ್ಧಾರಕ ಅಂಶವು ಕೆಲವೊಂದು ಗ್ರಾಮದಲ್ಲಿ ಇಂದಿಗೂ ಸಹ ಚಾಲ್ತಿರುವುದು ಇವರನ್ನು ಮುಟ್ಟದರೆ ಮೈಲಿಗೆ ಆಗುತ್ತವೆ ಎಂಬ ಭ್ರಮೆಯನ್ನು ಇಟ್ಟುಕೊಂಡಿರುವರ ಪ್ರಮಾಣವು ೫೦ರಷ್ಟು ವಕ್ತ್ಯಗಳು ಸಮ್ಮತಿ ಸೂಚಿಸಿದ್ದಾರೆ. ನಂತರ ಈ ಮೇಲಿನ ಮೂರು ನಿರ್ಧಾರಕ ಅಂಶಗಳ ವಿಷಯವನ್ನು ನಾವು ನೋಡುವುದಾದರೆ, ಬೇರೆ ಯಾವುದೊಂದು ಸಮಯ ಸಂದರ್ಭದಲ್ಲಿ ಆಸ್ಪತ್ರೆ, ಶ್ಮಸಾನ ಇವೆ ಮುಂತಾದ ಜಾಗವನ್ನು ಸಹ ಮೈಲಿಗೆ ವಿಚಾರದಲ್ಲಿ ನೋಡಿದಾಗ ೫೦ರಷ್ಟು ವಕ್ತ್ಯಗಳು ಅದರಲ್ಲಿ ಸಮ್ಮತಿ ನೀಡಿರುವುದು ಕಂಡುಬರುತ್ತದೆ. ಕೆಲವೊಂದು ವಕ್ತ್ಯಗಳ ಸಂದರ್ಶನದಲ್ಲಿ ತಮ್ಮದೇ ಆದ ಸೂಚನೆಯ ತಿಳಿಸುವಾಗ ಒಲ್ಲದ ಮನಸ್ಸು ಅಂದರೆ, ಇಂಥಹ ವಿಷಯ ಅಥವಾ ಪ್ರಶ್ನಗಳಿಗೆ ಮುಜುಗರದಿಂದ ಉತ್ತರಿಸುತ್ತಾರೆ. ಒಟ್ಟಾರೆಯಾಗಿ ಸೂತಕ, ಮಡಿ, ಮೈಲಿಗೆಯು ಇಂದು ಸಹ ಪ್ರತಿಯೊಂದು ಕುಟುಂಬದಲ್ಲಿ ನಡೆದುಕೊಂಡು ಅಥವಾ ಆಚರಿಸಿಕೊಂಡು ಬರುವ ಸಂಪ್ರದಾಯಸ್ಥರ ಕುಟುಂಬಗಳನ್ನು ನಾವು ಕ್ಷೇತ್ರಾಧ್ಯಯನದಿಂದ ತಿಳಿಯಬಹುದು.

**ಕೋಷ್ಟಕ: ೬.೧೩. ನಿಮ್ಮ ಜಾತಿಯಲ್ಲಿ ಗೋತ್ರ ನೋಡುತ್ತಿರ ಅಥವಾ ಬೆಡಗು ನೋಡುತ್ತೀರಾ?**

| **ಕ್ಷತ್ರಿಯರಲ್ಲಿ ಗೋತ್ರ ಮತ್ತು ಬೆಡಗು ನೋಡುವರ ವಿವರ** | **ಪ್ರತಿಕುಟುಂಬದ ವಕ್ತ್ಯಗಳ ವಿವರ** | |
|---|---|---|
| | **ಸಂದರ್ಶಿತರ ಸಂಖ್ಯೆ** | **ಶೇಕಡವಾರು** |
| ವಿವಾಹ ಮಾಡಲು ಗೋತ್ರ ನೋಡುತ್ತೀರಾ | ೦೬೪ | ೧೬.೪೧ |
| ವಿವಾಹ ಮಾಡಲು ಬೆಡಗು ನೋಡುತ್ತೀರಾ | ೩೦೦ | ೭೬.೯೧ |
| ಈ ಮೇಲಿನ ಎರಡು ಪ್ರಕಾರಗಳನ್ನು ನೋಡುವುದಿಲ್ಲ | ೦೨೬ | ೦೬.೬೭ |
| ಒಟ್ಟು | ೩೯೦ | ೧೦೦.೦೦ |

ಈ ಮೇಲ್ಕಂಡ ಕೋಷ್ಟಕವು ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರ ಜಾತಿಯಲ್ಲಿ ವಿವಾಹ ಮಾಡಲು ಗೋತ್ರ ನೋಡುತ್ತೀರಾ ಅಥವಾ ಬೆಡಗು ನೋಡುತ್ತೀರಾ ಎಂಬ ಪ್ರಶ್ನೆಯನ್ನು ಹಾಕುವುದರ ಮೂಲಕ ಈ ಕೋಷ್ಟಕದ ಶೇಕಡವಾರು ಪ್ರಮಾಣ ನೋಡಲು ನಾವು ಒಟ್ಟಾರೆಯಾಗಿ ೩೦೦ ವಕ್ತ್ಯಗಳು ವಿವಾಹ ಮಾಡಲು ಕೇವಲ ಬೆಡಗುಗಳನ್ನು ಮಾತ್ರ ನಾವು ನೋಡುತ್ತೇವೆ ಎಂಬುವರ ಪ್ರಮಾಣವು ಶೆಕಡವಾರು ೭೬.೯೨ರಷ್ಟದೆ. ಹಾಗೆಯೇ ವಿವಾಹ ಮಾಡಲು ಗೋತ್ರವನ್ನು ನೋಡುತ್ತೇವೆಂಬವರ ಸರಾಸರಿ ಪ್ರಮಾಣವು ೬೪ರಷ್ಟು ಇದ್ದು, ಅದರ ಶೇಕಡವಾರು ೧೬.೪೧ರಷ್ಟು ಇದೆ. ಕೊನೆಯದಾಗಿ ಎರಡನ್ನು ಸಹ ನಾವು ನೋಡುವುದಿಲ್ಲ ಎನ್ನುವರ ಪ್ರಮಾಣವು ೨೬ರಷ್ಟು ಇದ್ದು, ಅದರ ಸರಾಸರಿಯು

೬.೬೭ರಷ್ಟು ಇದೆ. ಒಟ್ಟಾರೆಯಾಗಿ ವಿವಾಹ ಮಾಡಲು ಪ್ರತಿಯೊಂದು ಸಮುದಾಯವು ಕಾಲ, ಗೋತ್ರ, ಬೆಡಗು ನೋಡುವುದು ಸಹಜ. ಹಾಗೆಯೇ ಇಲ್ಲಿ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯವರು ತಮ್ಮದೇ ಬಳ್ಳಿಗಳಿಂದ ಕೂಡಿದ ಬೆಡಗುಗಳನ್ನು ನೋಡಿ ವಿವಾಹವಾಗುವುದು ವಾಡಿಕೆ ಇದೆ ಎಂಬುದು ಇಲ್ಲಿ ಮುಖ್ಯವಾಗಿ ಈ ಕೋಷ್ಟಕದಿಂದ ತಿಳಿದುಬರುತ್ತದೆ.

**ಕೋಷ್ಟಕ: ೬.೧೪. ನಿಮ್ಮೊಳಗೆ ಅಂತರ್ಜಾತಿಯ ವಿವಾಹಕ್ಕೆ ಮನ್ನಣೆ ಇದೆಯೇ?**

| ಅಂತರ್ಜಾತಿಯ ವಿವಾಹ | ಪ್ರತಿಕುಟುಂಬದವಕ್ತೃಗಳ ವಿವರ | |
|---|---|---|
| | **ಸಂದರ್ಶಿತರ ಸಂಖ್ಯೆ** | **ಶೇಕಡವಾರು** |
| ಹೌದು | ೭೧ | ೧೮.೨೦ |
| ಇಲ್ಲ | ೩೧೯ | ೮೧.೮೦ |
| **ಒಟ್ಟು** | **೩೯೦** | **೧೦೦.೦೦** |

ಈ ಮೇಲಿನ ಕೋಷ್ಟಕವು ಅಂತರ್ಜಾತಿಯ ವಿವಾಹಕ್ಕೆ ಸಮಾಜದಲ್ಲಿರುವ ನೆಲೆಯ ಸ್ವರೂಪವನ್ನು ತಿಳಿಸುವಲ್ಲಿ ಮುಖ್ಯಪಾತ್ರವಹಿಸಿರುವುದು ಕಂಡುಬರುತ್ತಿದೆ. ಈ ಸಮುದಾಯದವರಲ್ಲಿ ಅಂತರ್ಜಾತಿಯ ವಿವಾಹಕ್ಕೆ ಯಾವ ರೀತಿಯಾದ ಮನ್ನಣೆಯನ್ನು ಕೊಡುತ್ತಾರೆ ಎಂಬುದನ್ನು ನಾವು ಈ ಕೋಷ್ಟಕದಲ್ಲಿ ಶೇಕಡವಾರು ಪ್ರಮಾಣದವನ್ನು ತಿಳಿದುಕೊಳ್ಳಬಹುದಾಗಿದೆ. ಪುರಾಣಗಳ ಕಾಲದಲ್ಲಿ ಸ್ಮೃತಿಕಾರರು ವೈವಾಹಿಕ ಏರ್ಪಾಟಿಗೆ ಸಂಬಂಧಿಸಿದಂತೆ ಒಳಬಾಂಧವ್ಯ ಏರ್ಪಾಟನ್ನು ಅನುಸರಿಸಬೇಕಾಗಿ ಸೂಚಿಸಿದ್ದರು. ಅದು ಆದರ್ಶ ಪ್ರಾಯವಾದುದು ಹಾಗೂ ಕ್ರಮಬದ್ಧವಾದುದು ಎಂಬುದಾಗಿ ತಿಳಿಸಿದ್ದರು. ಆದಾಗ್ಯೂ ಈ ಬಗ್ಗೆ ಕೆಲವಾರು ರಿಯಾಯಿತಿಗಳೂ ಸೂಚಿತವಾಗಿದ್ದವು. ಅವುಗಳ ಪ್ರಕಾರ ಬ್ರಾಹ್ಮಣರು ಮೊದಲು ಮೂರು ವರ್ಣದವರನ್ನು ಅಥವಾ ಜಾತಿಯ ಹೆಣ್ಣುಗಳನ್ನು ವರಿಸಬಹುದಾಗಿತ್ತು. ಕ್ಷತ್ರಿಯರು ತಮ್ಮ ಜಾತಿ ಹಾಗೂ ವೈಶ್ಯ ಜಾತಿಯ ಹೆಣ್ಣುಗಳನ್ನು ವಿವಾಹವಾಗಬಹುದಿತ್ತು. ಆದಾಗ್ಯೂ ಕೆಳಜಾತಿಗೆ ಸೇರಿದ ಪತ್ನಿಯು ತನ್ನ ಪತಿಯನ್ನು ಸೇರಿಕೊಂಡು ಧಾರ್ಮಿಕ ಕ್ರಿಯಾವಿಧಿಗಳನ್ನು ಆಚರಿಸುವ ಹಕ್ಕನ್ನು ಪಡೆದಿರಲಿಲ್ಲ. ಡಾ.ಜಿ.ಎಸ್.ಘುರ್ಯೆಯವರು ಅಭಿಪ್ರಾಯ ಪಟ್ಟಿರುವಂತೆ ತಾತ್ವಿಕವಾಗಿ ಯಾವುದೇ ಜಾತಿಯವರು ಶೂದ್ರಜಾತಿಯ ಕನ್ಯರೆಯನ್ನು ವಿವಾಹವಾಗಬಹುದು ಎಂದಿದ್ದರೂ ಅಂತಹ ವಿವಾಹಕ್ಕೆ ಸಾಮಾನ್ಯವಾಗಿ ಸಾಮಾಜಿಕ ಅಸಮ್ಮತಿ ಇತ್ತು. ಇಲ್ಲಿ ಮುಖ್ಯವಾಗಿ ಕೋಷ್ಟಕದಲ್ಲಿ ಅಂತರ್ಜಾತಿಯ ವಿವಾಹವನ್ನು ಸಮ್ಮತಿಸುತ್ತೇವೆ ಎಂಬುವರ ವಕ್ತೃಗಳ ಸಂಖ್ಯೆಯು ೭೧ರಷ್ಟು ಅಂದರೆ ಶೇಕಡವಾರು ೧೮.೨೦ರಷ್ಟು ಇದೆ. ಹಾಗೆಯೇ ನಮ್ಮ ಜಾತಿಯಲ್ಲಿ ಅಂತರ್ಜಾತಿಯ ವಿವಾಹಕ್ಕೆ ಸಮ್ಮತಿವಿಲ್ಲವೆಂದು ಹೇಳಿದವರ ವಕ್ತೃಗಳ ಸಂಖ್ಯೆಯು ಪ್ರಮಾಣ ೩೧೯ರಷ್ಟು ಇದೆ. ಶೇಕಡವಾರು ೮೧.೮೦ರಷ್ಟಿದೆ. ಒಟ್ಟಾರೆಯಾಗಿ ಸಮಾಜದಲ್ಲಿ ಇಂತಹ ಅಂತರ್ಜಾತಿಯ ವಿವಾಹಗಳು ಸಾಮಾನ್ಯವಾಗಿ ಕುಟುಂಬದ

ವಿರುದ್ಧವಾಗಿಯೇ ನಡೆಯುತ್ತಿರುವುದು ಹೆಚ್ಚಿನದಾಗಿದೆ. ಜಾತಿಯು ಸಮಾಜದಲ್ಲಿ ಮುಚ್ಚಿದ ವ್ಯವಸ್ಥೆಯಾಗಿದೆ. ಆದರೆ ವರ್ಗವು ತೆರೆದ ವ್ಯವಸ್ಥೆಯಾಗಿದೆ ಎಂದು ಹೇಳಬಹುದು.

**ಕೋಷ್ಟಕ: ೬.೧೫. ವರ್ಣ ವ್ಯವಸ್ಥೆಯ ಬಗ್ಗೆ ಕೇಳಿದ್ದೀರಾ?**

| ವರ್ಣ ವ್ಯವಸ್ಥೆಯ ಬಗ್ಗೆ ಕೇಳಿದ್ದೀರಾ? | ಪ್ರತಿಕುಟುಂಬದ ವಕ್ತೃಗಳು ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಹೌದು | ೨೬೩ | ೬೭.೪೩ |
| ಇಲ್ಲ | ೧೨೭ | ೩೨.೫೭ |
| ಒಟ್ಟು | ೩೯೦ | ೧೦೦.೦೦ |

ಈ ಮೇಲಿನ ಕೋಷ್ಟಕವು ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯವರಲ್ಲಿ ವರ್ಣ ವ್ಯವಸ್ಥೆಯ ಬಗ್ಗೆ ಕೇಳಲಾದ ಪ್ರಶ್ನೆಯಾಗಿದೆ. ಭಾರತದಲ್ಲಿ ವರ್ಣ ವ್ಯವಸ್ಥೆಯು ಎಂದು ಮತ್ತು ಯಾವ ಕಾರಣಗಳಿಂದ ಆರಂಭಗೊಂಡಿತು ಹೇಳುವುದು ಕಷ್ಟ. ಋಗ್ವೇದದ ಪ್ರಕಾರ ಪುರುಷನ ಬಾಯಿಯಿಂದ ಬ್ರಾಹ್ಮಣರು, ಭುಜಗಳಿಂದ ಕ್ಷತ್ರಿಯರು, ತೊಡೆಯಿಂದ ವೈಶ್ಯರು, ಪಾದಗಳಿಂದ ಶೂದ್ರರು ಹುಟ್ಟಿದರೆಂದು ಋಗ್ವೇದವು ಹೇಳುತ್ತದೆ. ಗುಣ ಕರ್ಮಗಳನ್ನು ಅನುಸರಿಸಿ ನಾಲ್ಕು ವರ್ಣಗಳು ಸೃಷ್ಟಿಯಾದಾಗಿ ಕೃಷ್ಣನು ಭಗವದ್ಗೀತೆಯಲ್ಲಿ ಹೇಳುವುದು ಇದೆ. ಪ್ರತಿಯೊಬ್ಬ ವ್ಯಕ್ತಿಯು ತನ್ನ ದಿನಚರಿಯ ಅಡಿಯಲ್ಲಿ ವರ್ಣ ವ್ಯವಸ್ಥೆಯ ಅನುಭವ ಪಡುವುದು ಸಹಜವಾಗಿದೆ. ಅಂದರೆ ಓದು ಮತ್ತು ಪೂಜೆ ಪುನಸ್ಕಾರಗಳನ್ನು ಮಾಡುವಾಗ ಬ್ರಾಹ್ಮಣನಾಗುತ್ತಾನೆ. ಹಾಗೆಯೇ ತನ್ನ ಭದ್ರತೆಗೆ ಹೋರಾಡುವ ವಿಚಾರದಲ್ಲಿ ಕ್ಷತ್ರಿಯನಾಗುತ್ತಾನೆ. ಮತ್ತು ತನ್ನ ಆರ್ಥಿಕ ವ್ಯವಹಾರವನ್ನು ನೋಡಿಕೊಳ್ಳುವ ಸಲುವಾಗಿ ವೈಶ್ಯನಾಗುತ್ತಾನೆ. ಕೊನೆಯದಾಗಿ ತನ್ನ ನಿತ್ಯ ಕರ್ಮಗಳನ್ನು ಮಾಡಿಕೊಳ್ಳುವ ಸಲುವಾಗಿ ಶೂದ್ರನಾಗುತ್ತಾನೆ. ಈ ರೀತಿಯಾಗಿ ಅವನು ವರ್ಣ ವ್ಯವಸ್ಥೆಯ ಅಡಿಯಲ್ಲಿ ಬರುವುದು ಸಹಜ ಕ್ರೀಯೆಯಾಗಿದೆ. ಈ ಕೋಷ್ಟಕವು ವರ್ಣ ವ್ಯವಸ್ಥೆಯ ಬಗ್ಗೆ ಕೇಳಿದ್ದೀರಾ ಎಂಬ ಪ್ರಕಾರಕ್ಕೆ ೨೬೩ರಷ್ಟು ಶೇಕಡವಾರು ೬೭.೪೩ರಷ್ಟು ಪ್ರಮಾಣ ತಿಳಿದಿದರುವೆವು ಎಂದು ಮತ್ತು ಇಲ್ಲವೆಂಬುದಕ್ಕೆ ಒಟ್ಟು ೧೨೭ ವಕ್ತೃಗಳು ಸರಾಸರಿ ೩೨.೫೭ರಷ್ಟು ವರ್ಣ ವ್ಯವಸ್ಥೆಯ ಬಗ್ಗೆ ಇಲ್ಲವೆಂದು ಹೇಳಿದ್ದಾರೆ. ಇಲ್ಲಿ ಮುಖ್ಯ ವಿಷಯವೆಂದರೆ, ವರ್ಣವು ಎಂಬುದು ಇವರ ತಿಳುವಳಿಕೆಯ ಜಾತಿಯಾಗಿ ಬಿಟ್ಟಿದೆ. ಅದೇ ಅವರಿಗೆ ದ್ವಂದ್ವ ಅರ್ಥ ನೀಡುತ್ತದೆ. ವರ್ಣ ಜಾತಿಯೇ ಅಥವಾ ಜಾತಿಯೇ ವರ್ಣವೇ ಎಂಬ ಅನುಮಾನ ಅವರಲ್ಲಿದೆ.

**ಕೋಷ್ಟಕ: ೬.೧೬. ನಿಮ್ಮ ಜಾತಿಯ ಉಗಮದ ಕುರಿತು ಯಾವುದಾದರೂ ಗ್ರಂಥ ಪುರಾಣಗಳಿವೆಯೇ?**

| ಜಾತಿಯ ಉಗಮದ ಬಗ್ಗೆ ಗ್ರಂಥ ಪುರಾಣಗಳಿವೆಯೇ ಎಂಬುದರ ವಿವರ | ಪ್ರತಿಕುಟುಂಬದ ವಕ್ತೃಗಳು ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಹೌದು | ೩೦೬ | ೭೮.೪೬ |
| ಇಲ್ಲ | ೮೪ | ೨೧.೫೪ |
| **ಒಟ್ಟು** | **೩೯೦** | ೧೦೦.೦೦ |

ಈ ಮೇಲಿನ ಕೋಷ್ಟಕದಲ್ಲಿ ನಿಮ್ಮ ಜಾತಿಯ ಉಗಮದ ಕುರಿತು ಯಾವುದಾದರೂ ಗ್ರಂಥ ಪುರಾಣಗಳಿವೆಯೇ ಎಂಬ ವಿಷಯದ ಬಗ್ಗೆ ಚರ್ಚಿಸಲಾಗಿದ್ದು, ಮುಖ್ಯವಾಗಿ ವೇದಗಳು, ರಾಮಾಯಾಣ, ಮಹಾಭಾರತ, ಭಗವದ್ಗೀತಾ, ಉಪನಿಷತ್, ಮನುಸ್ಮೃತಿಗಳ ಬಗ್ಗೆ ಸಂದರ್ಶಿತ ವಕ್ತೃಗಳಲ್ಲಿ ಕೇಳಿದಾಗ ಗ್ರಂಥ ಪುರಾಣಗಳಿವೆಯೆ ಎಂದು ೩೦೬ರಷ್ಟು ಪ್ರಮಾಣದಲ್ಲಿ ತಿಳಿಸಿದ್ದಾರೆ. ಅದರ ಶೇಕಡವಾರು ಪ್ರಮಾಣ ೭೮.೪೬ರಷ್ಟು ಇದೆ ಹಾಗೆಯೇ ಇಲ್ಲ ಎಂದು ಹೇಳಿದವರ ಸಂಖ್ಯೆಯೇ ೮೪ರಷ್ಟು ಇದೆ. ಇವರ ಶೇಕಡ ಪ್ರಮಾಣ ೨೧.೫೪ರಷ್ಟಾಗಿದೆ. ಪ್ರತಿಯೊಂದು ಜಾತಿಯು ತನ್ನದೇ ಆದ ಆಧಾರದ ಮೇಲೆ ಹುಟ್ಟಿರುವುದು ಕಂಡುಬರುತ್ತವೆ. ಕೆಲವೊಂದು ಜಾತಿಗಳು ತಮ್ಮದೇ ಮೂಲ ಪುರುಷ, ಮೂಲ ಸಾಹಿತ್ಯ ಆಧಾರದ ಮೇಲೆ ಬೆಳಕಿಗೆ ಬಂದಿರುವ ಉದಾಹರಣೆಗಳು ಹೆಚ್ಚಿನದಾಗಿವೆ. ಹಾಗೆಯೇ ಈ ಕ್ಷತ್ರಿಯರು ವರ್ಣ ವ್ಯವಸ್ಥೆಯಿಂದ ಇಂದು ಜಾತಿಯಾಗಿ ಮಾರ್ಪಟ್ಟಿರುವುದನ್ನು ನೋಡಲು ಸಾಧ್ಯವಾಗುತ್ತಿದೆ.

**ಕೋಷ್ಟಕ: ೬.೧೭. ನಿಮ್ಮ ಜಾತಿಗಳಲ್ಲಿ ಪುರೋಹಿತರು ಅಥವಾ ಪೂಜಾರಿಗಳು ಇದ್ದಾರೆ?**

| ಕ್ಷತ್ರಿಯ:ಕ್ಷತ್ರಿ ಪುರೋಹಿತರು ಅಥವಾ ಪೂಜಾರಿಗಳು ಇದ್ದಾರೆ | ಪ್ರತಿಕುಟುಂಬದವಕ್ತೃಗಳು ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಹೌದು | ೩೨೦ | ೮೨.೦೫ |
| ಇಲ್ಲ | ೦೭೦ | ೧೭.೯೪ |
| **ಒಟ್ಟು** | **೩೯೦** | ೧೦೦.೦೦ |

ಮೇಲಿನ ಕೋಷ್ಟಕವು ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯವರು ಅವರ ಗ್ರಾಮಗಳಲ್ಲಿರುವ ಮಾರುತಿ ದೇವಸ್ಥಾನದ ಮತ್ತು ಇತರೆ ದೇವಾಲಯಗಳ ಪೂಜಾರಿಕೆಯನ್ನು ಮಾಡಿಕೊಂಡು ಬರುತ್ತಿರುವುದು ನನ್ನ ಈ ಒಂದು ಕ್ಷೇತ್ರಾಧ್ಯಯದಿಂದ ತಿಳಿದುಬಂದಿದೆ. ಇಲ್ಲಿ ಮುಖ್ಯವಾಗಿ ಈ ಒಂದು ಸಮುದಾಯವು ಹೆಚ್ಚಾಗಿ ಶ್ರೀಮಾರುತಿ ದೇವಾಲಯಗಳಲ್ಲಿ ಪೂಜಾರಿ

ಅಥವಾ ಅರ್ಚಕರು ಆಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಅವರ ಮನೆತನಕ್ಕೆ ದೇವರ ಉಂಬಳಿ ಎಂದು ಸ್ವಲ್ಪ ಭೂಮಿಯನ್ನು ಕೊಟ್ಟಿರುವ ದಾಖಲೆಯನ್ನು ಸಹ ನಾವು ನೋಡಬಹುದು. ಇಲ್ಲಿ ಮುಖ್ಯವಾಗಿ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯದವರು ಪೂಜಾರಿ ಅಥವಾ ಅರ್ಚಕರು ಇದ್ದಾರೆಂಬುದನ್ನು ೩೨೦ರಷ್ಟು ವಕ್ತೃಗಳು ಒಪ್ಪಿಕೊಂಡಿದ್ದಾರೆ. ಇದರ ಸರಾಸರಿ ಶೇಕಡವಾರು ೮೨.೦೫ರಷ್ಟು ಇದೆ. ಹಾಗೆಯೇ ಇಲ್ಲವೆಂಬುದರ ಪ್ರಮಾಣವು ೭೦ರಷ್ಟಿದೆ, ಇದರ ಶೇಕಡವಾರು ೧೭.೯೪ರಷ್ಟು ವಕ್ತೃಗಳು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಒಟ್ಟಾರೆಯಾಗಿ ಹೇಳುವುದಾದರೆ, ಈ ಒಂದು ಸಮುದಾಯವು ಜಾತಿಯಲ್ಲಿ ಹಿಂದೂ ಧರ್ಮವನ್ನು ಇಟ್ಟಿಕೊಂಡು ಬಂದಿರುವ ಜಾತಿಯಾಗಿದೆ.

**ಕೋಷ್ಟಕ: ೬.೧೮. ನಿಮ್ಮ ಪ್ರಕಾರ ಕೋಷ್ಟಕದಲ್ಲಿರುವ ಶುದ್ಧ ಅಥವಾ ಶ್ರೇಷ್ಠವಾದ ಸಮುದಾಯ ಯಾವುದು?**

| ಕ್ಷತ್ರಿಯ ಸಮುದಾಯಗಳು | ಪ್ರತಿಕುಟುಂಬದವಕ್ತೃಗಳ ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಸೂರ್ಯವಂಶ ಕ್ಷತ್ರಿಯ | ೨೦ | ೫.೧೨ |
| ಲಾಡ್/ಕ್ಷತ್ರಿಯಲಾಡ್/ಸುಗಂಧಿಲಾಡ್ | ೧೮ | ೪.೬೨ |
| ಸೋಮವಂಶ ಆರ್ಯ ಕ್ಷತ್ರಿಯ | ೨೮ | ೭.೧೭ |
| ನಯನಜ ಕ್ಷತ್ರಿಯ | ೧೦ | ೨.೫೬ |
| ವನ್ನಿಕುಲಕ್ಷತ್ರಿಯ | ೧೮ | ೪.೬೨ |
| ಭಾವಸಾರ ಕ್ಷತ್ರಿಯ | ೨೩ | ೫.೯೦ |
| ತೊಗಟ/ತೊಗಟರು/ತೊಗಟವೀರ/ ತೊಗಟಗೇರ/ತೊಗಟವೀರಕ್ಷತ್ರಿಯ/ ತೊಗಜಪುಷ್ಪಾಂಜಲಿ | ೨೦ | ೫.೧೨ |
| ರಾಮರಾಜ ಕ್ಷತ್ರಿಯರು | ೫೦ | ೧೩.೦೦ |
| ಕ್ಷತ್ರಿಯ:ಕ್ಷತ್ರಿ (ಹಿಂದೂಕ್ಷತ್ರಿಯ) | ೧೧೫ | ೨೯.೪೮ |
| ರಾಜು ಕ್ಷತ್ರಿಯ | ೨೮ | ೭.೧೭ |
| ಕ್ಷತ್ರಿಯ ಮರಾಠ | ೨೪ | ೬.೧೫ |
| ಎಲ್ಲಾ ಜಾತಿಗಳು | ೩೪ | ೮.೭೧ |
| ಒಟ್ಟು | ೩೯೦ | ೧೦೦.೦೦ |

ಪ್ರಸ್ತುತ ಈ ಕೋಷ್ಟಕವು ಜಾತಿ ವ್ಯವಸ್ಥೆಯಲ್ಲಿ ಶುದ್ಧ ಅಥವಾ ಶ್ರೇಷ್ಠವಾದ ಸಮುದಾಯ ಯಾವುದು ಎಂಬುದನ್ನು ಸಂದರ್ಶಿತರಲ್ಲಿ ಕೇಳಲಾದ ಪ್ರಶ್ನೆಗೆ ಅವರ ಸೂಚಿಸಿದ ಒಪ್ಪಿಗೆ ಪ್ರಮಾಣವನ್ನು ಎತ್ತಿ ಹಿಡಿದಿರುವುದು ಕಾಣುತ್ತದೆ. ಪ್ರತಿಯೊಬ್ಬರಲ್ಲಿಯೂ ಜಾತಿಯಲ್ಲಿ ಕನಿಷ್ಟ ಶ್ರೇಷ್ಟ ಪರಿಕಲ್ಪನೆಯೇ ತುಂಬ ಸರಳವಾಗಿ ಗೋಚರಿಸಿವುದು ಈ ಕೋಷ್ಟಕದಿಂದ ತಿಳಿಯಬಹುದು. ಸಮಾಜಶಾಸ್ತ್ರಜ್ಞರಾದ ಲೂಯಿ ಡ್ಯೊಮೋ ರವರ ಬರೆದ ಪುಸ್ತಕವಾದ Homo Hieranchicus (ಹೋಮೋ ಹೈರಾರ್ಕಿಸ್) ರಲ್ಲಿ ಜಾತಿಯ ಶುದ್ಧ ಮತ್ತು ಅಶುದ್ಧತೆಯ ಜಾತಿಯ ನಿರ್ಧಾರಕದ ಬಗ್ಗೆ ತಿಳಿಸಿದ್ದಾರೆ. ಹಿಂದೂಗಳ ಪ್ರಕಾರ ತಮ್ಮ ಸಮಾಜವನ್ನು ಶುದ್ಧ ಮತ್ತು ಅಶುದ್ಧತೆಯ ಆಧಾರದ ಮೇಲೆ ಅರ್ಥಮಾಡಿಕೊಳ್ಳುತ್ತಾರೆ ಎನ್ನುತ್ತಿದ್ದಾನೆ. ಡ್ಯೂಮೋರವರು (ಪ್ರತಿಜಾತಿ ಹೊಂದಿರುವ ಶುದ್ಧತೆಯ ಅಂಶಗಳಿಗೆ ಅನುಗುಣವಾಗಿ ಒಂದು ಇನ್ನೊಂದು ಜಾತಿಗಿಂತ ಶುದ್ಧು ಎನ್ನುವುದು ನಿರ್ಧಾರಕ ಅಂಶವಾಗಿರುತ್ತದೆ. ಈ ಶುದ್ಧತೆಯ ನಿರ್ಧಾರಕಗಳೇನು? ಎಂದರೆ, ಅವು ಇದೇ ಎಂದು ನಿಶ್ಚಿತವಾಗಿ ಹೇಳುವುದು ಸಾಧ್ಯವಿಲ್ಲದಿದ್ದರೂ ಸಸ್ಯಹಾರ, ಗೋಪೂಜೆ, ವಿಧಾವಾ ವಿವಾಹದ ನಿಷೇಧ ಇತ್ಯಾದಿ ಇದರಲ್ಲಿದೆ ಎನ್ನುತ್ತಾನೆ. ಜಾತಿ ವ್ಯವಸ್ಥೆಯಲ್ಲಿ ಶ್ರೇಣಿಗಳು ಏಕೆ ಇವೇ ಕೆಲವೊಂದು ಜಾತಿಗಳು ಕನಿಷ್ಟ ಸ್ಥಾನ, ಕೆಲವು ಜಾತಿಗಳು ಉತ್ತಮ ಸ್ಥಾನ ಏಕೆ ಹೊಂದಿವೆ? ಎನ್ನುವ ಗ್ರಹಿಕೆ ಜಾತಿ ಸದಸ್ಯರಿಗೆ ಈ ಶುದ್ಧ ಮತ್ತು ಅಶುದ್ಧತೆ ಎಂಬುದು ನೀಡುತ್ತದೆ. ಹಾಗೇನಾದರೂ ಈ ಶುದ್ಧ-ಅಶುದ್ಧತೆ ಜಾರಿಗೆ ಆಧಾರವಾಗಿ ಉಳಿಸಿ ಬೆಳೆಸಿಕೊಂಡು ಬರುವುದು, ಜಾತಿಯ ಸದಸ್ಯರ ಪ್ರಜ್ಞೆಯಲ್ಲಿರುವ ಅಂತಸ್ತು ಮತ್ತು ಅಧಿಕಾರವನ್ನು ಪ್ರತ್ಯೇಕಿಸಿ ಅಂತಸ್ತಿಗೆ ಅಧಿಕಾರಕ್ಕಿಂತಲೂ ಹೆಚ್ಚಿನ ಮಹತ್ವ ನೀಡುವ ಅಂಶ. ಜಾತಿಯಲ್ಲಿನ ಶ್ರೇಣಿ ಉಳಿಯಲು ಮುಖ್ಯ ಕಾರಣವೇ 'ಅಂತಸ್ತು' ಎಂಬುದು ಅಧಿಕಾರಕ್ಕಿಂತ ಅದು ಅತ್ಯುನ್ನತ ಸ್ಥಾನದಲ್ಲಿದೆ ಎಂಬ ಕಾರಣದಿಂದ ಎಂದು ತಿಳಿಸುತ್ತಾರೆ. ಈ ಮೇಲಿನ ಕೋಷ್ಟಕವು ಕ್ಷತ್ರಿಯಸಮುದಾಯಗಳಲ್ಲಿ ಶ್ರೇಷ್ಠ ಜಾತಿ ಯಾವುದು ಎಂಬ ವಿಷಯವನ್ನು ಚರ್ಚಿಸಲಾಗಿದ್ದು, ಒಟ್ಟು ಸಂದರ್ಶಿತ ೩೯೦ ಪ್ರತಿವಕ್ತೃಗಳಲ್ಲಿ ೨೦ ಪ್ರತಿವಕ್ತೃಗಳು ಸೂರ್ಯವಂಶ ಕ್ಷತ್ರಿಯ ಶ್ರೇಷ್ಟ ಜಾತಿ ಎಂದು ಹೇಳಿದರೆ, ಲಾಡ್/ಕ್ಷತ್ರಿಯಲಾಡ್/ಸುಗಂಧಿಲಾಡ್ ಜಾತಿಯವರು ಶ್ರೇಷ್ಠ ಎಂದು ೧೮ ಪ್ರತಿವಕ್ತೃಗಳು ತಿಳಿಸಿದ್ದಾರೆ, ಹಾಗೆಯೇ ಸೋಮವಂಶ ಆರ್ಯ ಕ್ಷತ್ರಿಯ ಜಾತಿಯು ಶ್ರೇಷ್ಟವೆಂದು ೨೮ ವಕ್ತೃಗಳು ಅಭಿಪ್ರಾಯ ಪಟ್ಟಿದ್ದಾರೆ. ನಯನಜ ಕ್ಷತ್ರಿಯ ಜಾತಿ ಶ್ರೇಷ್ಠವೆಂದು ೧೦ ಪ್ರತಿವಕ್ತೃಗಳು ತಿಳಿಸಿದ್ದಾರೆ, ಅಲ್ಲದೆವನ್ನಿಕುಲಕ್ಷತ್ರಿಯಜಾತಿ ಶುದ್ಧವಾದದ್ದು ಎಂದು ೧೮ ಪ್ರತಿವಕ್ತೃ ತಿಳಿಸಿದ್ದಾರೆ, ಭಾವಸಾರ ಕ್ಷತ್ರಿಯಜಾತಿ ಶ್ರೇಷ್ಠವೆಂದು ೨೩ ಪ್ರತಿವಕ್ತೃಗಳು ತಿಳಿಸಿದ್ದಾರೆ, ತೊಗಟ/ತೊಗಟರು/ತೊಗಟವೀರ/ ತೊಗಟಗೇರ/ತೊಗಟವೀರಕ್ಷತ್ರಿಯ/ತೊಗಜಪುಷ್ಪಾಂಜಲಿಜಾತಿ ಶ್ರೇಷ್ಠವೆಂದು ೨೦ ಪ್ರತಿವಕ್ತೃಗಳು ತಿಳಿಸಿದ್ದಾರೆ.ರಾಮರಾಜ ಕ್ಷತ್ರಿಯರು ಶ್ರೇಷ್ಟ ಜಾತಿಯೆಂದು ೫೦ ವಕ್ತೃಗಳು ಅಭಿಪ್ರಾಯ ಪಟ್ಟಿದ್ದಾರೆ. ಕ್ಷತ್ರಿಯರು ಅಥವಾ ಕ್ಷತ್ರಿಯ:ಕ್ಷತ್ರಿ(ಹಿಂದೂಕ್ಷತ್ರಿಯ)ಯರು ಶ್ರೇಷ್ಠವೆಂದು ೧೧೫ ಪ್ರತಿವಕ್ತೃಗಳು ತಿಳಿಸಿದ್ದಾರೆ.ರಾಜು ಕ್ಷತ್ರಿಯ ಶ್ರೇಷ್ಠವೆಂದು ೨೮ ಪ್ರತಿವಕ್ತೃಗಳು ತಿಳಿಸಿದ್ದಾರೆ,ಕ್ಷತ್ರಿಯ ಮರಾಠ ಸಮುದಾಯವು ಶ್ರೇಷ್ಠವೆಂದು ೨೪ಪ್ರತಿವಕ್ತೃಗಳು ತಿಳಿಸಿದ್ದಾರೆ, ಎಲ್ಲಾ ಜಾತಿಗಳು ಶುದ್ಧವೆಂದು ೩೪ ಪ್ರತಿವಕ್ತೃಗಳು ಅಭಿಪ್ರಾಯ ಪಟ್ಟಿದ್ದಾರೆ, ಇಲ್ಲಿ ನಾವು ಶೇಕಡವಾರು ಅಂಕಿ-ಅಂಶಗಳನ್ನು ಈ ಕೋಷ್ಟಕದಲ್ಲಿ

ಗುರುತಿಸಿದ್ದೇವೆ. ಅದು ಮೇಲ್ಕಂಡಂತೆ ಇದೆ. ಮುಖ್ಯವಾಗಿ ಈ ಕೋಷ್ಟಕದಿಂದ ತಿಳಿದು ಬರುವುದೇನೆಂದರೆ, ಸಮಾಜವು ಎಷ್ಟೇ ಮುಂದುವರೆದು ಹೋದರು ಅದು ತನ್ನ ಸಮುದಾಯದ ಪಾವಿತ್ರ್ಯತೆಯನ್ನು ಎಂದು ಬಿಟ್ಟುಕೊಡುವುದಿಲ್ಲ ಎಂಬುದಕ್ಕೆ ಈ ಕೋಷ್ಟಕವೇ ಸಾಕ್ಷಿಯಾಗಿದೆ.

**ಕೋಷ್ಟಕ: ೬.೧೯. ನಿಮ್ಮ ಜಾತಿಯವರಲ್ಲಿ ಕರ್ನಾಟಕ ಸರಕಾರ ನಡೆಸುತ್ತಿರುವ ಚುನಾವಣೆಗೆ ಸ್ಪರ್ಧಿಗಳಾಗಿ ಸ್ಪರ್ಧಿಸುತ್ತಾರೆಯೇ?**

| ಕರ್ನಾಟ ಸರಕಾರ ನಡೆಸುವ ಚುನಾವಣೆ | ಪ್ರತಿಕುಟುಂಬದವಕ್ತೃಗಳ ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಹೌದು | ೩೨೦ | ೮೨.೫೧ |
| ಇಲ್ಲ | ೦೭೦ | ೧೭.೯೫ |
| ಒಟ್ಟು | ೩೯೦ | ೧೦೦.೦೦ |

ಈ ಕೋಷ್ಟಕವು ಕರ್ನಾಟಕ ಸರಕಾರವು ನಡೆಸುತ್ತಿರುವ ಚುನಾವಣೆಗೆ ಜಾತಿಗಳು ಯಾವ ರೀತಿಯಾಗಿ ಸ್ಪಂದಿಸುತ್ತೇವೆಂಬುದನ್ನು ತಿಳಿಯಲು ಸಹಾಯಕವಾಗಿದೆ. ಇಲ್ಲಿ ಸ್ಪರ್ಧಿಗಳು ಮುಖ್ಯವಾಗಿರುತ್ತಾರೆ. ಯಾವ ಜಾತಿ ಎಂಬುದರ ಮೇಲೆ ಚುನಾವಣಾ ಅಭ್ಯರ್ಥಿಯ ಜಯವು ನೆಲೆನಿಂತಿರುತ್ತದೆ. ನಾವು ಇಲ್ಲಿ ಸ್ಪರ್ಧಸುತ್ತಾರೆಂಬುದನ್ನು ಕೇಳಿದಾಗ ಹೌದು ಎಂದು ಒಟ್ಟು ಜಾತಿ ೩೨೦ ವಕ್ತೃಗಳು ಸಮ್ಮತಿ ನೀಡಿದ್ದಾರೆ. ಅದರ ಶೇಕಡವಾರು ಪ್ರಮಾಣ ೮೨.೫೧ರಷ್ಟು ಇದೆ. ಹಾಗೆಯೇ ಇಲ್ಲವೆಂಬುದು ೭೦ರಷ್ಟು ವಕ್ತೃಗಳು ತಿಳಿಸಿದ್ದಾರೆ. ಅದರ ಸರಾಸರಿ ಪ್ರಮಾಣ ೧೭.೯೫ರಷ್ಟು ಇದೆ. ಒಟ್ಟಾರೆಯಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನಡೆಸುವ ಚುನಾವಣೆಗಳು ಜಾತಿಯ ಆಧಾರದ ಮೇಲೆ ನಿಂತಿವೆ ಹೇಳಲು ವಿಷಾದನೀಯ ಎನ್ನಿಸುತ್ತದೆ. ಆದರೆ ನಾವು ಯಾವುದೇ ಜಾತಿಯಾದರು ಸರ್ಕಾರವು ನಡೆಸುವ ಚುನಾವಣೆಯಲ್ಲಿ ಭಾಗವಹಿಸುವುದು ಮುಖ್ಯ ಪಾತ್ರವಹಿಸುತ್ತದೆ ಎಂದು ಹೇಳಬಹುದು.

**ಕೋಷ್ಟಕ: ೬.೨೦. ನಿಮ್ಮೂರಿನ ಸಾಂಸ್ಕೃತಿಕ ಹಬ್ಬ ಅಥವಾ ಜಾತ್ರೆಗಳಲ್ಲಿ ನಿಮ್ಮ ಜಾತಿಯವರ ಪಾತ್ರವೇನು?**

| ಸಾಂಸ್ಕೃತಿಕ ಹಬ್ಬ ಅಥವಾ ಜಾತ್ರೆಗಳಲ್ಲಿ ಜಾತಿಯವರ ಪಾತ್ರ | ಪ್ರತಿಕುಟುಂಬದವಕ್ತೃಗಳ ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಜಾತ್ರೆಯ ಮುಖಂಡತ್ವ | ೧೧೮ | ೩೦.೨೫ |
| ಜಾತ್ರೆಯ ಸಂಘಟನಾಕಾರ್ಯ | ೧೨೦ | ೩೦.೭೬ |
| ಜಾತ್ರೆಯಸಾಮಾನ್ಯ ಕೆಲಸಗಳು | ೧೧೦ | ೨೮.೨೦ |
| ಯಾವುದು ಇಲ್ಲ | ೦೪೨ | ೧೦.೭೭ |
| ಒಟ್ಟು | ೩೯೦ | ೧೦೦.೦೦ |

ಸಾಮಾನ್ಯವಾಗಿ ಗ್ರಾಮದಲ್ಲಿ ಹಲವಾರು ಜಾತ್ರೆ ಉತ್ಸವಗಳು, ಸಾಂಸ್ಕೃತಿ ಹಬ್ಬಗಳು ನಡೆಯುವುದು ಸಾಮಾನ್ಯ ಹಾಗೆಯೇ ಇಂತಹ ಹಬ್ಬಗಳಿಗೆ ಆ ಗ್ರಾಮದಲ್ಲಿ ಅದರದ್ದೇ ಆದ ಪಾವಿತ್ರ್ಯತೆ ಸಂಸ್ಕೃತಿ ಆಚಾರ-ವಿಚಾರಗಳು ಇರುತ್ತವೆ. ಇದು ತಲೆ-ತಲೆಮಾರಿನಿಂದ ನಡೆದುಬರುವ ಒಂದು ಸಂಸ್ಕೃತಿಯ ಸಂಕೇತವು ಹೌದು. ಹಾಗಾಗಿ ಸಾಂಸ್ಕೃತಿ ಹಬ್ಬ ಮತ್ತು ಜಾತ್ರೆಗಳಲ್ಲಿ ಎಲ್ಲಾ ಸಮುದಾಯವರ ಪಾತ್ರವು ಹೆಚ್ಚಿನದಾಗಿರುತ್ತದೆ. ಇಲ್ಲಿ ನಾವು ಮುಖ್ಯವಾಗಿ ಕ್ಷತ್ರಿಯ ಸಮುದಾಯದವರ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೇಳಿದಾಗ ಕೆಲವರು ಮುಖ್ಯ ಮಹತ್ವದ ಜವಾಬ್ದಾರಿಯ ಕೆಲಸ ನಿಮಿತ ಕೇಳಿದಾಗ ಈ ಕೋಷ್ಟಕದಲ್ಲಿ ಜಾತ್ರೆಯ ಮುಖಂಡತ್ವ ಅಥವಾ ಮುಖ್ಯ ಯಜಮಾನ ಪಾತ್ರದಲ್ಲಿ ಶೇಕಡ ಪ್ರಮಾಣ ೩೦.೨೫ರಷ್ಟು ವಕ್ತೃಗಳು ಪಾತ್ರನಿರ್ವಹಿಸಿರುವುದು ಕಂಡುಬರುತ್ತದೆ. ಹಾಗೆಯೇ ಜಾತ್ರೆಯ ಅಥವಾ ಸಾಂಸ್ಕೃತಿಕ ಹಬ್ಬದ ಸಂಘಟನಾಕಾರ್ಯದ ವಿಚಾರದಲ್ಲಿ ಶೇಕಡವಾರ ಪ್ರಮಾಣದಲ್ಲಿ ೩೦.೭೬ರಷ್ಟು ವಕ್ತೃಗಳು ಭಾಗವಹಿಸುವಿಕೆ ಕಂಡುಬರುತ್ತದೆ. ಮತ್ತು ಜಾತ್ರೆಯ ಸಾಂಸ್ಕೃತಿಕ ಹಬ್ಬದ, ಕೆಲಸಗಳಿಗೆ ಸಂಬಂಧಿಸಿದಂತೆ ೨೮.೨೦ರಷ್ಟು ವಕ್ತೃಗಳು ಭಾಗವಹಿಸುವಿಕೆ ಕಂಡುಬಂದಿದೆ. ಅಲ್ಲದೆ ಯಾವುದೇ ರೀತಿಯಾಗಿ ಭಾಗವಹಿಸುವಿಕೆ ಇಲ್ಲದೆ ಕೇವಲ ಪ್ರೇಕ್ಷಕನಾಗಿ ೧೦.೭೭ರಷ್ಟಿದೆ. ಈ ರೀತಿಯಾಗಿ ಅವರವರ ಜವಾಬ್ದಾರಿಯುತ ಪಾತ್ರದಲ್ಲಿ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯದ ವಕ್ತೃಗಳು ಅಥವಾ ಜನರ ಭಾಗವಹಿಸುವಿಕೆಯನ್ನು ನೋಡಬಹುದು.

**ಕೋಷ್ಟಕ: ೬.೨೧. ನಿಮ್ಮ ಊರಿನಲ್ಲಿ ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಂಘವಿದೆಯೇ?**

| ಕ್ಷತ್ರಿಯ ಸಂಘವಿದೆಯೇ | ಪ್ರತಿಕುಟುಂಬದ ವಕ್ತೃಗಳ ವಿವರ | |
|---|---|---|
| | ಸಂದರ್ಶಿತರ ಸಂಖ್ಯೆ | ಶೇಕಡವಾರು |
| ಹೌದು | ೩೧೦ | ೭೯.೪೮ |
| ಇಲ್ಲ | ೮೦ | ೨೦.೫೧ |
| **ಒಟ್ಟು** | ೩೯೦ | ೧೦೦.೦೦ |

ಈ ಮೇಲಿನ ಕೋಷ್ಟಕವು ಗ್ರಾಮದಲ್ಲಿರುವ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಂಘದ ಅಥವಾ ಕ್ಷತ್ರಿಯ ಸಮಾಜದ ಸಂಘಟನೆಯು ಇದೆ ಎಂಬುದನ್ನು ತಿಳಿಸಿಕೊಡುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಸಂದರ್ಶಿತರಲ್ಲಿ ೩೧೦ರಷ್ಟು ವಕ್ತೃಗಳು ಇದೆ ಎಂದಿದ್ದಾರೆ, ಅದರ ಸರಾಸರಿಯು ೭೯.೪೮ ರಷ್ಟು ಇದೆ. ಹಾಗೆಯೇ ಗ್ರಾಮೀಣ ಮಟ್ಟದಲ್ಲಿ ಕ್ಷತ್ರಿಯ ಸಂಘವು ಇಲ್ಲ ವೆಂದು ಹೇಳುವರ ಪ್ರಮಾಣವು ೮೦ರಷ್ಟು ಇದ್ದು, ಸರಾಸರಿ ಶೇಕಡವಾರು ಪ್ರಮಾಣವು ೨೦.೫೧ರಷ್ಟು ಇದ್ದಾರೆ. ಈ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಂಘಟನೆಯ ಬಗ್ಗೆ ಕ್ಷೇತ್ರಾಧ್ಯಯನಕ್ಕೆ ಹೋದಾಗ ವಕ್ತೃಗಳ ಹೇಳುವ ಪ್ರಕಾರ ಇತ್ತೀಚಿನ ವರ್ಷಗಳಲ್ಲಿ ಇದೆ ತ್ರೀವ್ರತೆಯು ಹೆಚ್ಚು ಆಗಿದೆ ಎಂದು ತಿಳಿಸುತ್ತಾರೆ. ಏಕೆಂದರೆ, ಜಾತಿಯ ಸಮೀಕ್ಷೆಯಲ್ಲಿ ತಮ್ಮದೇ ಆದ ಪ್ರಬಲತೆಯನ್ನು ತೋರಿಸಲು ಈ ಸಂಘಟನೆಗಳು ಹೆಚ್ಚಾಗಿ ಹುಟ್ಟಿಕೊಂಡಿವೆ ಎಂದು ಹೇಳುತ್ತಾರೆ.

ಈ ಅಧ್ಯಯವು ಮುಖ್ಯವಾಗಿ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯ ಸಮುದಾಯದ ಕ್ಷೇತ್ರಾಧ್ಯಯನದಿಂದ ಬಂದ ಫಲಿತವನ್ನು ಹೊರಹಾಕಲು ಸಹಾಯಕವಾಗಿದೆ. ಸಮಾಜದ ಎಲ್ಲಾ ಜನರು ಸಮಾನವಾಗಿ ಸಾಮಾಜಿಕ, ಆರ್ಥಿಕ, ಮತ್ತು ರಾಜಕೀಯ ನ್ಯಾಯವನ್ನು ವಿಚಾರ, ಅಭಿವ್ಯಕ್ತಿ ನಂಬಿಕೆ, ಧರ್ಮ, ಮತ್ತು ಪೂಜಿಸುವ ಸ್ವಾತಂತ್ರ್ಯವನ್ನು ಸ್ಥಾನಮಾನ ಮತ್ತು ಅವಕಾಶಗಳಲ್ಲಿ ಸಮಾನತೆಯನ್ನು ನಿರ್ಧಾರ ಪ್ರಕ್ರಿಯೆಯಲ್ಲಿ ಮತ್ತು ಸಹಭಾಗಿತ್ವದಲ್ಲಿ ಆತ್ಮಗೌರವ ಮತ್ತು ಸ್ವತಂತ್ರ್ಯವಾಗಿ ಭಾಗವಹಿಸುವ ಸಾಮಾಜಿಕ ಪರಿಸ್ಥಿತಿಯನ್ನು ಸಾಮಾಜಿಕ ಸಬಲೀಕರಣ ಎಂದು ಹೇಳಬಹುದು. ಒಂದು ಸಮಾಜದಲ್ಲಿ ಜೀವಿಸುವ ಅನೇಕ ವರ್ಗಗಳಿಗೆ ಮತ್ತು ಜಾತಿಗಳಿಗೆ ಸೇರಿದ ಜನರು ಸಮಾನ ಹಂತದಲ್ಲಿ ಸಬಲೀಕರಣವನ್ನು ಹೊಂದಿದ್ದಾರೆಯೇ ಎಂಬ ವಿಷಯವನ್ನು ವಿಶಾಲ ಪರಿಧಿಯಲ್ಲಿ ಪರಿಶೀಲಿಸುವುದಕ್ಕೆ ಅನೇಕ ಅಂಶಗಳನ್ನು ಆಧಾರವಾಗಿ ತೆಗೆದುಕೊಳ್ಳಬೇಕಾಗಿರುತ್ತದೆ. ಜಗತ್ತಿನ ಬಹುಪಾಲು ದೇಶಗಳಲ್ಲಿ ಅನೇಕ ಸಮುದಾಯಗಳಲ್ಲಿ ವಿವಿಧ ಧರ್ಮಗಳು, ಅದಕ್ಕೆ ಸಂಬಂಧಿಸಿದ ಸಂಸ್ಕೃತಿಗಳು ಮತ್ತು ನಂಬಿಕೆಗಳು ಆಚರಣೆಯಲ್ಲಿವೆ. ಆದರೆ ಕೆಲವೇ ಕೆಲವು ದೇಶಗಳಲ್ಲಿ ಮಾತ್ರ ಜಾತಿ ವ್ಯವಸ್ಥೆ ಜಾರಿಯಲ್ಲಿರುವುದು ತಿಳಿದುಬರುತ್ತದೆ. ಸಾಮಾಜಿಕ ಸಬಲೀಕರಣ ಸಾಧಿಸಬೇಕೆಂದರೆ ಸಮಾಜವನ್ನು ಸಾಮಾಜಿಕ ಜೀವನವನ್ನು ಪ್ರಭಾವಿತಗೊಳಿಸುವ ಈ ರಚನೆಗಳಲ್ಲಿರುವ ಎಲ್ಲ ಸ್ಥಾನಗಳಲ್ಲಿ ಎಲ್ಲ ಜಾತಿಯವರಿಗೆ ಅವರ ಜನಸಂಖ್ಯೆಗನುಗುಣವಾಗಿ ಸಮಾನ ಪ್ರಾತಿನಿಧ್ಯವನ್ನು ಕಲ್ಪಿಸಿದಾಗ ಈ ಮೇಲ್ಜಾತಿಗಳ ಪ್ರಾಬಲ್ಯವನ್ನು ನಿಯಂತ್ರಿಸುವುದು ಸಾಧ್ಯವಾಗುತ್ತದೆ.

ಭಾರತದಲ್ಲಿ ಹಲವು ತಲೆಮಾರುಗಳಿಂದ ಶಿಕ್ಷಣ ಮತ್ತು ಶಿಕ್ಷಣ ಸಂಸ್ಥೆಗಳ ಆಧಾರಿತ ವಿಜ್ಞಾನ ಎಲ್ಲರಿಗೂ ಸಿಗುವಂತಿರಲಿಲ್ಲ. ಪ್ರಾಚೀನ ಕಾಲದಲ್ಲಿ ಶಿಕ್ಷಣ ಪ್ರಬಲ ಜಾತಿಗಳಿಗೆ ಮಾತ್ರ ಸೀಮಿತವಾಗಿತ್ತು. ಪುರಾಣಗಳು, ಧರ್ಮಶಾಸ್ತ್ರಗಳು ಸ್ಮೃತಿಗಳು ಮತ್ತು ಪ್ರಬಲ ಹಿಂದೂ ಸೈದ್ಧಾಂತಿಕ ಜಾತಿ ನೀತಿಗಳು ಶಿಕ್ಷಣವನ್ನು ಕೆಲ ಮೇಲ್ಜಾತಿಗಳಿಗೆ ಮಾತ್ರ ಸೀಮಿತಗೊಳಿಸಿ ಬಹುಸಂಖ್ಯಾತ ಕೆಳಜಾತಿಗಳನ್ನು ದೂರ ಮಾಡಿದವು. ಪ್ರತಿಯೊಬ್ಬ ವ್ಯಕ್ತಿಯ ಸಾಮರ್ಥ್ಯಕ್ಕೆ ಮತ್ತು ಅಗತ್ಯಕ್ಕೆ ತಕ್ಕಂತೆ ಶಿಕ್ಷಣವನ್ನು ಪಡೆಯುವ ಅವಕಾಶಗಳನ್ನು ಕಲ್ಪಿಸಬೇಕು. ದೇಶದ ಉದ್ದೇಶ ಮತ್ತು ಗುರಿಗಳಿಗೆ ಅನುಗುಣವಾಗಿ ಸರಿಯಾದ ಶಿಕ್ಷಣ ಯೋಜನೆಯನ್ನು ರೂಪಿಸಿದರೆ, ಸಾಮಾಜಿಕ ಸಬಲೀಕರಣವನ್ನು ಸಾಧಿಸುವಲ್ಲಿ ಶಿಕ್ಷಣ ವಿಧಾನವು ತನ್ನ ಪಾಲಿನ ಪಾತ್ರವನ್ನು ನಿರ್ವಹಿಸಿದಂತಾಗುತ್ತದೆ. ಒಂದು ದೇಶದ ಆರ್ಥಿಕ ಅಭಿವೃದ್ಧಿ ಕುರಿತು ವಿಶ್ಲೇಷಣೆ ಮಾಡುವಾಗ ಕೆಲವು ಚಾರಿತ್ರಿಕ ಅಂಶಗಳನ್ನು ಪರಿಗಣಿಸುವ ಅಗತ್ಯವಿದೆ. ಅಂದರೆ, ಆರ್ಥಿಕ ಅಭಿವೃದ್ಧಿಯ ಜಿಎಸ್‌ಪಿ ಜೆ.ಡಿ.ಪಿ ಮತ್ತು ಎಚ್.ಆರ್.ಡಿ ಸೂಚ್ಯಂಕಗಳು ಬಡತನದ ಮಟ್ಟ, ಕಲ್ಯಾಣ ಉತ್ಪಾದನೆ ಮಾರುಕಟ್ಟೆ ಅಭಿವೃದ್ಧಿ ಇನ್ನೂ ಅನೇಕ ಆರ್ಥಿಕ ಅಂಶಗಳು ಪ್ರಮಾಣಗಳನ್ನು ಗಮನಿಸಬೇಕು. ಭಾರತದ ಪ್ರಸ್ತುತ ಸಮಾಜದ ಸ್ಥಿತಿಗೂ ಮುನ್ನ ಇದ್ದ ಸಾಮ್ರಾಜ್ಯಶಾಹಿ, ಜಮೀನ್ದಾರಿಶಾಹಿ ಮತ್ತು ಪುರೋಹಿತಶಾಹಿ ರಚನೆಗಳು ಸಾಮಾಜಿಕ ಅಂಶಗಳ ಮೇಲೆ ಅತ್ಯಂತ ಪ್ರಭಾವವನ್ನು ಬೀರಿದವು ಮತ್ತು ಅಭಿವೃದ್ಧಿ ಚಲನೆಯ ಮೇಲೆ ನಿಯಂತ್ರಣವನ್ನು ಸಾಧಿಸಿದ್ದವು. ಸ್ವಾತಂತ್ರ್ಯದ ನಂತರ ಪರಿಶೀಲಿಸಿದರೆ, ಈ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದ ಎಲ್ಲಾ ಸರ್ಕಾರಗಳು ಮೇಲ್ಜಾತಿ ಸರ್ಕಾರಗಳೇ

ಆಗಿವೆ. ಆದ್ದರಿಂದ ಈ ಸರ್ಕಾರಗಳು ರೂಪಿಸಿದ ನೀತಿ ಮತ್ತು ಧೋರಣೆಗಳೆಲ್ಲವೂ ಆ ಜಾತಿಗಳ ವೃತ್ತಿಗಳ ಮತ್ತು ಪ್ರವೃತ್ತಿಗಳ ಪ್ರಾಧಾನ್ಯತೆಗೆ ಅನುಗುಣವಾಗಿ ರೂಪಿಸಿದವುಗಳಾಗಿವೆ.

ಭಾರತ ಸ್ವತಂತ್ರವಾಗಿ ಪ್ರಜಾಸತ್ತಾತ್ಮಕ ಮತ್ತು ಸಂವಿಧಾನಾತ್ಮಕ ವ್ಯವಸ್ಥೆಗನುಗುಣವಾಗಿ ಒಕ್ಕೂಟ ವ್ಯವಸ್ಥೆ ಜಾರಿಯಾದ ನಂತರ ಜರುಗಿದ ಸಾರ್ವತ್ರಿಕ ಚುನಾವಣೆಗಳಲ್ಲಿ ರಾಜ್ಯ ವಿಧಾನ ಮಂಡಲದ ಶಾಸಕರು, ಮುಖ್ಯ ಮಂತ್ರಿಗಳು, ಮಂತ್ರಿಗಳು, ಮತ್ತು ರಾಜ್ಯದಿಂದ ಸಂಸತ್ತಿಗೆ ಆಯ್ಕೆಯಾದ ಸಂಸದರು, ಕೇಂದ್ರ ಸಚಿವರು, ಪ್ರತಿಪಕ್ಷ ನಾಯಕರು, ರಾಜಕೀಯ ಪಕ್ಷಗಳ ಅಧ್ಯಕ್ಷರು, ಮುಂತಾದವರ ಜಾತಿ ಹಿನ್ನಲೆಯನ್ನು ನೋಡಿದರೆ, ತಿಳಿಯುತ್ತದೆ. ಎಲ್ಲಾ ಅತ್ಯುನ್ನತ ರಾಜಕೀಯ ಪದವಿಗಳನ್ನು ಮೇಲ್ಜಾತಿಗಳೇ ಸ್ವಂತ ಮಾಡಿಕೊಂಡು 'ರಾಜ್ಯಾಧಿಕಾರ'ವನ್ನು ತಮ್ಮ ಕಪಿಮುಷ್ಠಿಯಲ್ಲಿ ಇಟ್ಟುಕೊಂಡಿರುವುದನ್ನು ಮತ್ತು ರಾಜಕೀಯ ನಡೆಯನ್ನು ಅರ್ಥಮಾಡಿಕೊಳ್ಳಬಹುದು.

ಒಟ್ಟಾರೆಯಾಗಿ ಭಾರತದ ಸಾಮಾಜಿಕ ಲಕ್ಷಣಗಳಲ್ಲಿ ಅತ್ಯಂತ ವ್ಯಾಪಕವಾದ ವ್ಯಾಪ್ತಿಯನ್ನು ಹೊಂದಿರುವುದು. 'ವೈವಿಧ್ಯತೆ' ಇದು ಭಾರತೀಯ ಸಮಾಜದ ಒಂದು ಅತಿಮುಖ್ಯವಾದ ಲಕ್ಷಣ. ಈ ಸಮಾಜದಲ್ಲಿ ಭಿನ್ನವಾದ ವ್ಯವಸ್ಥೆಗಳು, ಆಚರಣೆಗಳು, ಪದ್ಧತಿಗಳು, ಮೌಲ್ಯಗಳು, ಅಭಿಪ್ರಾಯಗಳು ಭಾವನೆಗಳು ಒಂದರ ಪಕ್ಕ ಒಂದು ಏಕಕಾಲದಲ್ಲಿ ಇರುತ್ತವೆ. ಈ ಭಿನ್ನತೆಗಳನ್ನು ಸಂವಿಧಾನ, ರಾಜಕೀಯ, ಆಡಳಿತ, ಧಾರ್ಮಿಕ, ಜಾತಿ ಇತರೆ ಸಾಮಾಜಿಕ ಸಂಬಂಧವಾದ ವಿವಿಧ ವ್ಯವಸ್ಥೆಗಳಲ್ಲಿ ಕಾಣಿಸುತ್ತದೆ. ವಿವಿಧ ಜಾತಿಗಳು ಧರ್ಮಗಳು ಪಂಗಡಗಳು ಪ್ರದೇಶಗಳ ನಡುವೆ ಜೀವನದ ನಡುವೆ ವ್ಯತ್ಯಾಸ ವೈದಿಧ್ಯತೆಗಳು ಸಮಾಂತರವಾಗಿ ಏಕಕಾಲದಲ್ಲಿ ಕಾಣಿಸುತ್ತವೆ. ಉಳ್ಳವರು ಮುಖ್ಯವಾಗಿ ಮೇಲ್ಜಾತಿಗಳು ಆಯಾ ಸಂಸ್ಥೆಗಳನ್ನು ಆಯ್ದುಕೊಳ್ಳುವುದಕ್ಕೆ ತಮ್ಮ ಹಕ್ಕುಗಳನ್ನು ಮತ್ತಷ್ಟು ದಕ್ಷತೆಯಿಂದ ಬೆಳೆಸಿಕೊಳ್ಳುವುದಕ್ಕೆ ತಮ್ಮ ಪ್ರಯೋಜನಗಳನ್ನು ರಕ್ಷಿಸಿಕೊಳ್ಳುವುದಕ್ಕೆ ಅವಗಳನ್ನು ಮತ್ತಷ್ಟು ಅನುಕೂಲಕರವಾಗಿ ತೀಡಿ ತಿದ್ದಿಕೊಂಡು ಅನುಭವಿಸುವುದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ. ಇಲ್ಲದವರು ಮುಖ್ಯವಾಗಿ ದುರ್ಬಲ ವರ್ಗಗಳು ಮತ್ತು ಜಾತಿಗಳವರು ತಮಗಿರುವ ಹಕ್ಕುಗಳನ್ನು ಅನುಭವಿಸಲಾರದ ಸ್ಥಿತಿಯಲ್ಲಿರುತ್ತಾ ತಮ್ಮ ಅಸ್ತಿತ್ವಕ್ಕಾಗಿ ಕನಿಷ್ಟ ಅಗತ್ಯಗಳನ್ನು ತೀರಿಸಿಕೊಳ್ಳುವುದಕ್ಕೂ ಕಷ್ಟಪಡಬೇಕಾದ ಸ್ಥಿತಿ ಏರ್ಪಟ್ಟಿದೆ.

ಸಾಮಾಜಿಕ ವ್ಯವಸ್ಥೆಯನ್ನು ಚದರಿಸುತ್ತಿರುವ ವರ್ಗಗಳು ಪ್ರಬಲ ಜಾತಿಗಳು ವ್ಯವಸ್ಥೆಯ ಮೇಲೆ ಪೂರ್ತಿ ನಿಯಂತ್ರಣವನ್ನು ಮತ್ತು ಅಧಿಕಾರವನ್ನು ಹೊಂದಿರುವುದು ಕಂಡುಬರುತ್ತದೆ. ಬಹುಸಂಖ್ಯಾತರು ಜಾತಿಗಳನ್ನು ಸಾಮಾಜಿಕ ಆರ್ಥಿಕ, ರಾಜಕೀಯ ಶೋಷಣೆಗೆ ಗುರಿ ಮಾಡಿದ್ದಾರೆ, ಆದರೆ ಈ ಸ್ಥಿತಿಯಲ್ಲಿ ಸಾಮಾಜಿಕ ಬದಲಾವಣೆ ಯಾವ ರೀತಿ ಸಾಧ್ಯವಾಗುತ್ತದೆ. ಈ ಶೋಷಣೆ ಯಾವಾಗ ನಿಲ್ಲುತ್ತದೆ ಎಂಬ ಅಂಶಗಳು ಮುಖ್ಯವಾದವು.

## ಆಧಾರ ಸಾಹಿತ್ಯಗಳು

*ಕರ್ನಾಟಕ ರಾಜ್ಯಪತ್ರ, ಭಾಗ-೧*, ಗುರುವಾರ ಏಪ್ರಿಲ್ ೧೧, ೨೦೦೨.

ಭಗವತ್ ಶರಣ ಉಪಾಧ್ಯಾಯ, ಪ್ರಧಾನ್ ಗುರುದತ್ತ (ಕಅ), *ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ*, ಪ್ರಕಾಶಕರು ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೪.

ಶಂಬಾ ಜೋಶಿ, *ಸಂಸ್ಕೃತಿ-ಸಾಹಿತ್ಯ, ಸಂಪುಟ-೬*, ಮಲ್ಲೇಪುರಂ ಜಿ ವೆಂಕಟೇಶ (ಸಂ), ಕನ್ನಡ ಪುಸ್ತಕ ಪ್ರಾಧಿಕಾರ ಚಾಮರಾಜಪೇಟೆ, ಬೆಂಗಳೂರು, ೧೯೯೯.

ಸಿವರಾಮ ಕೃಷ್ಣನ್ ಜಿ, *ಜಾತಿ ಕೆಲವು ಟಿಪ್ಪಣಿಗಳು*, ಪರಸ್ಪರ ಪ್ರಕಾಶನ, ಬೆಂಗಳೂರು, ೨೦೦೭.

# ಅಧ್ಯಾಯ: ಏಳು

# ಪರಿಸಮಾಪ್ತಿ

ನಾಗರಿಕತೆ ಎಂಬುದು ಸಾಮಾಜಿಕ ವಿಕಾಸದ ಒಂದು ಹಂತ. ಮನುಷ್ಯ ತನ್ನ ಬರ್ಬರತೆಯನ್ನು ಬದಿಗಿರಿಸಿ, ಒಂಟಿತನ ಪಾಶವಿಕ ಕಾಡುತನವನ್ನು ಬಿಟ್ಟುಕೊಟ್ಟು, ಪ್ರಜ್ಞಾಪೂರ್ವಕ ಗ್ರಾಮ ಜೀವವನ್ನು ನಡೆಸತೊಡಗಿದ ಹಂತ ಇದು. ಅವನು ಗುಂಪು ಅಥವಾ ಸಭೆಯಲ್ಲಿ ಶಿಷ್ಟ ರೀತಿಯಲ್ಲಿ ನಡೆದುಕೊಳ್ಳುವುದನ್ನು ಕಲಿತುಕೊಂಡಾಗ ಮಾತ್ರವೇ 'ಸಭ್ಯ ಅಥವಾ ನಾಗರಿಕ' ಎನಿಸಿಕೊಂಡು. ಸಂಸ್ಕೃತಿ ಒಂದು ಬಗೆಯ ಮಾನಸಿಕ ವಿಕಾಸ. ಒಂದು ವಿಶಿಷ್ಟ ದೃಷ್ಟಿಕೋನ, ಇದು ಸಭ್ಯ ಮಾನವರಲ್ಲಿ ಇರಲೂ ಬಹುದು. ಇಲ್ಲದೆಯೂ ಇರಬಹುದು. ಇದು ಒಂದು ಬಗೆಯ ಸಂಸ್ಕಾರ, ಮಾನಸಿಕ ಉನ್ನಯನ, ಈ ಸಂಸ್ಕಾರ ವೈಯಕ್ತಿಕವೂ ಆಗಬಹುದು, ಸಾಮೂಹಿಕವೂ ಆಗಬಹುದು. ಇಲ್ಲಿ ಸಾಮೂಹಿಕ ಸಂಸ್ಕೃತಿಯ ಬಗ್ಗೆ ಆಲೋಚಿಸುವುದು ನನ್ನ ಗುರಿಯಾಗಿದೆ. ಮಾನವರ ಜಾಗೃತ ಸಮುದಾಯ ಸಮಾಜವನ್ನು ಕಟ್ಟುತ್ತದೆ. ಸಮುದಾಯವೇ ಸಮಾಜದ ಪಂಜರವಾಗುತ್ತದೆ. ಸಾಮೂಹಿಕ ಚೇತನವೇ ಅದಕ್ಕೆ ಪ್ರಾಣ ಸ್ವರೂಪವಾಗಿರುತ್ತದೆ. ಸಾಮಾಜಿಕ ಧೋರಣೆಗಳು ವಿಶಿಷ್ಟ ಸಮುದಾಯದ ಸ್ವಂತ ಅನಿಸಿಕೆಗಳಾಗಿದ್ದಾಗ ಹಾಗೂ ಇತರ ಸಮುದಾಯಗಳ ಧೋರಣೆಗಳಿಗಿಂತಲೂ ಭಿನ್ನವಾಗಿದ್ದಾಗ ಉಚಿತವೋ ಅನುಚಿತವೋ ಆದ ಧೋರಣೆಗಳಿಗಾಗಿ, ಆ ಸಮುದಾಯದ ತ್ಯಾಗ ಬಲಿದಾನಗಳನ್ನು ಮಾಡಲು ತುದಿಗಾಲಿನಲ್ಲಿ ನಿಂತಿರುವಾಗ, ತನ್ನ ಗತಕಾಲವನ್ನು ಮತ್ತು ಇತಿಹಾಸವನ್ನು ಇತರರದ್ದಕ್ಕಿಂತ ಭಿನ್ನವಾದುದೆಂದು ಭಾವಿಸಿ, ಆ ಅವಧಿಯಲ್ಲಿನ ತನ್ನ ಪೂರ್ವಜರ ಸಾಧನೆಯ ಬಗ್ಗೆ ಅಭಿಮಾನಪಟ್ಟುಕೊಂಡಾಗ ಹಾಗೂ ತನ್ನ ಭಾವಿ ಮಹತ್ವಾಕಾಂಕ್ಷೆಗಳು ಹೆಜ್ಜೆಗಳನ್ನು ಮುಂದಿಟ್ಟು ನಡೆದಾದ ಅಂಥ ಸಮುದಾಯವೇ ಈ ಕ್ಷತ್ರಿಯ ಸಮುದಾಯವಾಗಿದೆ.

ಕ್ಷತ್ರಿಯರ ಸಮುದಾಯದ ಹಿಂದಿನ ಕಾಲದ ಯಾವ ಪ್ರಯತ್ನಗಳಿಗೆ ಕ್ರಿಯೆಗಳಿಗೆ ಸಾಧನೆಗಳಿಗೆ, ಭಾವನೆಗಳಿಗೆ, ಹರ್ಷ–ವಿಷಾದಗಳಿಗೆ ಸೋಲು–ಗೆಲುವುಗಳಿಗೆ ಆಚಾರ–ವಿಚಾರಗಳಿಗೆ, ವೇಷ–ಭೂಷಣಗಳಿಗೆ, ಸಾಹಿತ್ಯ–ಕಲೆಗಳಿಗೆ, ವೈಚಿತ್ರ್ಯ–ವೈಶಿಷ್ಟ್ಯಗಳಿಗೆ ತನ್ನದೇ ಆದ ಮುದ್ರೆಯನ್ನೊತ್ತಿರುತ್ತದೆಯೋ ತನ್ನದೆಂದು ಘೋಷಿಸಬಲ್ಲದಾಗಿರುತ್ತದೆಯೋ ಅವೇ ಅದಕ್ಕೆ ಅಂದರೆ, ಆ ಸಮುದಾಯಕ್ಕೆ ಆಕಾರವನ್ನು

ನೀಡುತ್ತವೆ. ಅದರ ಒಡಲನ್ನು ಮೂಡಿಸುತ್ತವೆ. ಹಾಗೂ ರೂಪರೇಷೆಯನ್ನು ಒದಗಿಸುತ್ತವೆ. ಈ ವಿಶಿಷ್ಟ್ಯಗಳಿಂದಲೇ ಸಮುದಾಯವನ್ನು ಗುರುತಿಸುತ್ತವೆ. ಹಾಗೂ ಇತರ ಮಾನವ ಸಮುದಾಯಗಳಿಂದ ಅದನ್ನು ಬೇರ್ಪಡಿಸುತ್ತೇವೆ. ಈ ಸಂಗತಿಗಳಿಂದಲೇ ಅದರ ವ್ಯಕ್ತಿತ್ವ ರೂಪುಕೊಂಡಿರುತ್ತದೆ. ವಾಸ್ತವವಾಗಿ ಯಾವುದೇ ಸಮುದಾಯ ತನ್ನದೇ ಆದುದೆಂಬ ಯಾವ ವಸ್ತು ವಿಶೇಷವೂ ಇರುವುದಿಲ್ಲ. ಇರಲು ಸಾಧ್ಯವೂ ಇಲ್ಲ. ಆಗಿಂದಾಗ್ಗೆ ಅವಸ್ಥಾ ವಿಶೇಷಗಳಲ್ಲಿ ಅಂದರೆ, ವಿಶಿಷ್ಟ ಸಂದರ್ಭಗಳಲ್ಲಿ ಜಾಗೃತ ಮಾನವ ಸಮುದಾಯಗಳು ಪ್ರಯತ್ನ  ಪೂರ್ವಕವಾಗಿ ಅಥವಾ ತಮಗೇ ಅರಿವಿಲ್ಲದಂತೆ ತಮ್ಮ ಕಾರ್ಯಗಳಲ್ಲಿ ಧೋರಣೆಗಳಲ್ಲಿ ವಿಶಿಷ್ಟಾಂಶಗಳನ್ನು ಮೂಡಿಸಿಕೊಂಡಿವೆ ಎಂಬುದರಲ್ಲಿ ಅನುಮಾನವೇನೂ ಇಲ್ಲ. ಆದರೆ, ಸಮಾಜ-ಚೇತನ ಅಥವಾ ಸಾಮಾಜಿಕ ವ್ಯವಹಾರ ಸ್ವತಃ ಅವನ್ನು ಚಿರಕಾಲದವರೆಗೆ ವಿಶಿಷ್ಟ ಸಮುದಾಯದ ಸ್ವಂತ ಆಸ್ತಿಯಾಗಿರಲು ಅವಕಾಶ ಕೊಟ್ಟಿಲ್ಲ. ಬಹುಬೇಗ ಇತರೆ ಸಮುದಾಯಗಳು ಅಂಥ ವೈಶಿಷ್ಟ್ಯಗಳನ್ನು ತಮ್ಮದನ್ನಾಗಿಸಿಕೊಂಡುಬಿಟ್ಟವೆ. ಯಾವ ಸಾಮಾಜಿಕ ಚೇತನದ ಫಲವಾಗಿ, ವ್ಯಕ್ತಿ-ವ್ಯಕ್ತಿಗಳ ನಡುವಣ ಪಾರಸ್ಪರಿಕ ವ್ಯವಹಾರ ಸಮುದಾಯವನ್ನು ಅಥವಾ ಸಮಾಜವನ್ನು ಸೃಷ್ಟಿಸುತ್ತದೆಯೋ ಆ ವ್ಯವಹಾರವೇ ಸಮುದಾಯ. ಸಮುದಾಯಗಳ ಹಾಗೂ ಸಮಾಜ-ಸಮಾಜಗಳ ನಡುವೆಯೂ ಅಸ್ಪಷ್ಟವಾದ ಸಂಬಂಧವನ್ನು ಸ್ಥಾಪಿಸಿಬಿಡುತ್ತವೆ. ಸಾಮಾಜಿಕ ವ್ಯವಹಾರ ಸಂಬಂಧವನ್ನು ಅವಲಂಬಿಸಿರುತ್ತದೆ. ಈ ವ್ಯವಹಾರದ ಬಾಹ್ಯ ರೂಪವೇ ಕೂಳು-ಕೊಡೆ, ವ್ಯಕ್ತಿ-ವ್ಯಕ್ತಿಗಳ ನಡುವೆ, ಸಮುದಾಯ-ಸಮುದಾಯಗಳ ನಡುವೆ ಹಾಗೂ ಸಮಾಜ-ಸಮಾಜಗಳ ನಡುವೆ, ಜಾತಿಗಳ ಸಂಕ್ರಮಣ, ಪರಸ್ಪರ ಸಂಬಂಧ, ನೆರೆಹೊರೆಯ ವಾಸ, ಅಂತಃಸಂಘರ್ಷ, ವ್ಯಾಪಾರಿಕ-ವಿನಿಮಯ ಇವು ಈ ಕೂಳುಕೊಡೆಯ ಆಧಾರಗಳು.

ಶಾಸನಗಳು, ಲಿಖಿತ, ಕಾವ್ಯಗಳು ಮತ್ತು ಸ್ಮಾರಕಗಳು ಅರಸ ಕೇಂದ್ರೀತ ವಿವರಗಳನ್ನಷ್ಟೇ ಹೊಂದಿರುತ್ತವೆ ಎನ್ನುವುದು ತಪ್ಪು ಅಭಿಪ್ರಾಯ. ಅರಸನ ಅಥವಾ ರಾಜಕೀಯ ಚರಿತ್ರೆಯನ್ನು ರಚಿಸುವವರಿಗೆ ಈ ಆಕರಗಳಲ್ಲಿ ರಾಜಕೀಯ ವಿವರಗಳಷ್ಟೇ ಕಂಡುಬರುತ್ತವೆ. ಇನ್ನುಳಿದ ವಿಚಾರಗಳು ಅಪ್ರಸ್ತುತವೆನಿಸುತ್ತವೆ ಅಥವಾ ಅವುಗಳನ್ನು ರಾಜಕೀಯ ದೃಷ್ಟಿಯಿಂದಲೇ ನೋಡಲಾಗುತ್ತದೆ. ಲಿಖಿತ ಆಕರಗಳನ್ನು ಆಳುವ ವರ್ಗದ ಚರಿತ್ರೆ ರಚನೆಗೆ ಸೀಮಿತಗೊಳಿಸಿಕೊಂಡಂತೆ, ಮೌಖಿಕ ಆಕರಗಳನ್ನು ಜನಪದರ ಚರಿತ್ರೆ ರಚನೆಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಆದರೆ ಲಿಖಿತ ಆಕರಗಳಲ್ಲಿ ಜನಪದರ ಕುರಿತ ವಿವರಣೆಗಳಿರುತ್ತವೆ. ಹಾಗೂ ಮೌಖಿಕ ಆಕರಗಳಲ್ಲಿ ಆಳುವ ವರ್ಗಗಳೇ ಕುರಿತಾದ ಮಾಹಿತಿಯೂ ಇರುತ್ತದೆ. ಈ ಮಾಹಿತಿಗಳು ಆಯಾ ಆಕರಗಳಲ್ಲಿ ಪ್ರಧಾನವಾಗಿರುವುದಿಲ್ಲ ಎನ್ನುವ ಕಾರಣಕ್ಕಾಗಿ ಅವುಗಳನ್ನು ಹೊರಗಿಡುವುದು ತಪ್ಪು ವಿಧಾನ. ಈ ಕಾರಣಗಳಿಂದಾಗಿ ಸಾಹಿತ್ಯಿಕ ಆಕರಗಳನ್ನು ಚರಿತ್ರೆ ರಚನೆಗೆ ಬಳಸಿಕೊಳ್ಳುವಾಗ ಚರಿತ್ರೆಕಾರ ಎಚ್ಚರಿಕೆಯನ್ನು ವಹಿಸಬೇಕಾಗುತ್ತದೆ. ಸಾಹಿತ್ಯವಾಗಲಿ ಅಥವಾ ಚರಿತ್ರೆಯಾಗಲಿ ಯಾವ ರೀತಿಯ ಸತ್ಯವನ್ನು, ಯಾರಿಗೆ ಅನುಕೂಲವಾಗುವ ಸತ್ಯವನ್ನು ಕಟ್ಟುತ್ತಾ ಇರುತ್ತವೆ ಎನ್ನುವ ಮೂಲಭೂತ ಪ್ರಶ್ನೆಯೊಂದಿಗೆ ಅಧ್ಯಯನಕಾರ ಅಧ್ಯಯನ ನಡೆಸಿದಾಗ ಮಾತ್ರ ಸ್ಪಷ್ಟ ತೀರ್ಮಾನಗಳು ಹೊರಬರಲು ಸಾಧ್ಯ. ಯಾವುದೋ ಒಂದು ಮಾದರಿಯನ್ನು ಇಟ್ಟುಕೊಂಡು

ಸಾಹಿತ್ಯವನ್ನಾಗಲಿ ಅಥವಾ ಚರಿತ್ರೆಯನ್ನಾಗಲಿ ಅಧ್ಯಯನ ನಡೆಸಲು ಸಾಧ್ಯವಾಗುವುದಿಲ್ಲ. ಆದರೆ ಮಾನವ ಬದುಕಿನ ಸಮಸ್ಯೆಗಳು ಎಲ್ಲ ಕಾಲಕ್ಕೂ ಮುಖ್ಯವಾದ ಸಮಸ್ಯೆಗಳೇ ಆಗಿರುತ್ತವೆ. ಅಧಿಕಾರ, ಧರ್ಮ, ಸವಲತ್ತು, ಜಾತಿ, ಶೋಷಣೆ, ಯುದ್ಧ, ಸೈನ್ಯ, ಇವೆಲ್ಲವೂ ಯುದ್ಧಕ್ಕೂ ಕಂಡುಬರುವ ಸಂಗತಿಗಳಾಗಿವೆ.

ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಸಮುದಾಯವು ಹಿಂದುಳಿದ ಜಾತಿ ಎನ್ನುವುದರಲ್ಲಿ ಅನುಮಾನವೇ ಇಲ್ಲ ಸರಕಾರ ಇವರನ್ನು ಇತರೆ ಹಿಂದುಳಿದ ಜಾತಿ ಎಂದು ಪರಿಗಣಿಸಿದೆ ಇದಕ್ಕೆ ಸಂಬಂಧಿಸಿದಂತೆ ಗೆಜೆಟಿಯರ್‌ನಲ್ಲಿ ಉಲ್ಲೇಖಗಳಿವೆ. ಮೂಲತಃ ಇವರ ಇತಿಹಾಸವು ತುಂಬ ಶುಭ್ರತೆಯಿಂದ ಕೂಡಿರುವುದನ್ನು ನಾವು ಅವರ ಚಾರಿತ್ರ್ಯಕ ಹಿನ್ನಲೆಯನ್ನು ಅಧ್ಯಯನ ಮಾಡಿದಾಗ ತಿಳಿಯುತ್ತದೆ. ಕಾಲಚಕ್ರದ ಅಡಿಯಲ್ಲಿ ಅವರು ಮೇಲು ಹಂತದಿಂದ ಕೆಳಹಂತಕ್ಕೆ ಪಲಾಯಣ ಮಾಡಿರುವುದು ಇತಿಹಾಸದ ಚರಿತ್ರೆಯಲ್ಲಿ ಲಭಿಸುತ್ತದೆ. ಇವರು ಕರ್ನಾಟಕ ಹಲವಾರು ಜಿಲ್ಲೆಗಳಲ್ಲಿ ನೆಲೆನಿಂತಿರುವುದು ಸಂಶೋಧನಾ ಅಧ್ಯಯನದಿಂದ ತಿಳಿಯುತ್ತದೆ. ಅರಸೊತ್ತಿಗೆ ಕೊನೆಗೊಂಡ ನಂತರ ಬೇಟೆ, ಕೃಷಿ, ಪಶುಪಾಲನೆ, ಕೂಲಿ ಇನ್ನು ಮುಂತಾದ ವೃತ್ತಿಗಳಿಗೆ ಅಂದರೆ, ವರ್ಣಾದಲ್ಲಿ ಎರಡನೇ ಸ್ಥಾನದಲ್ಲಿದ್ದ ಕ್ಷತ್ರಿಯರು ಇಂದು ವರ್ಣಾಶ್ರಮದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಈ ಎಲ್ಲಾ ವರ್ಗಗಳಲ್ಲಿ ತಮ್ಮ ನೆಲೆಕಂಡುಕೊಂಡಿದ್ದಾರೆ. ಸಮುದಾಯದವರು ಸಾಮಾಜಿಕ ಸಂಬಂಧಗಳನ್ನು ನಂಬಿಕೆ ಸಂಪ್ರದಾಯಗಳಿಂದ ಬಲಪಡಿಸಿಕೊಂಡು ತಮ್ಮದೇ ಆದ ಆಡಳಿತ ವ್ಯವಸ್ಥೆಯಿಂದ ಜೀವಿಸುತ್ತಾರೆ. ಇವರು ಆರಾಧಿಸುವ ಸಾಂಸ್ಕೃತಿಕ ಅಂಶಗಳಲ್ಲಿ ಏಕತೆಯನ್ನು ಕಾಣಲು ಸಾಧ್ಯವಿದೆ.

ಸಂಶೋಧನೆಯು ಕರ್ನಾಟಕದಲ್ಲಿ ಕಂಡುಬರುವ ಕ್ಷತ್ರಿಯರ ಬಗ್ಗೆ ಅಧ್ಯಯನಕ್ಕೆ ಒಳಪಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಮುಖ್ಯವಾಗಿ ನಾವು ಅನೇಕ ಕ್ಷತ್ರಿಯ ಸಮುದಾಯಗಳನ್ನು ಗುರುತಿಸಿದ್ದೇವೆ. ಸಂಶೋಧನ ಅಧ್ಯಯನದಲ್ಲಿ ಎಲ್ಲಾ ಕ್ಷತ್ರಿಯ ಸಮುದಾಯಗಳ ವ್ಯಕ್ತಿ ಅಧ್ಯಯನ ಮತ್ತು ಸಮೂಹ ಅಧ್ಯಯನ ಮಾಡಲಾಗಿದೆ. ಮೂಲತಃ ಕೋಟೆಯ ದುರ್ಗಮ, ಪರಿಸರದಲ್ಲಿ ವಾಸಿಸುವ ಒಂದು ಗುಂಪು ಎಂಬುದಕ್ಕೆ ಹಲವಾರು ಚಾರಿತ್ರಿಕ ಹಿನ್ನಲೆಗಳು ಲಭಿಸಿವೆ. ಮತೀಯ ಕ್ರೌರ್ಯ ಹಾಗೂ ಉದ್ಯೋಗ ನಿಮಿತ್ತ ಕ್ಷತ್ರಿಯ ಸಮುದಾಯದವರು ತಮ್ಮ ಕುಟುಂಬದೊಂದಿಗೆ ವಿವಿಧ ಭೌಗೋಳಿಕ ವಲಯಕ್ಕೆ ವಲಸೆ ಹೋಗಿದ್ದಾರೆ.

ಈ ಸಮುದಾಯವು ಕೂಲಂಕಷುವಾದ ಸಂಶೋಧನೆಗೆ ಒಳಗಾಗದೆ, ಇರುವುದರಿಂದ ಸಂಸ್ಕೃತಿಯಲ್ಲಿ ಇವರ ಸ್ಥಾನಮಾನಗಳ ನೆಲೆಕಂಡುಕೊಳ್ಳುವ ಅವಶ್ಯಕತೆ ಮುಖ್ಯವಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಸಮುದಾಯದ ಸಾಂಸ್ಕೃತಿಕ ವೈಶಿಷ್ಟ್ಯಗಳಲ್ಲಿ ಭಿನ್ನತೆಗಳಿದ್ದರೂ ಸಾಮಾಜಿಕ ಆಯಾಮಗಳಲ್ಲಿ ಆರ್ಥಿಕ, ರಾಜಕೀಯ, ಸಾಂಸ್ಕೃತಿಕವಾಗಿ ಸಮುದಾಯಕ್ಕೊಂದು ನೆಲೆ ಮತ್ತು ಸ್ಥಿರತೆಯ ಅವಶ್ಯಕತೆ ಇದೆ. ಈ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರ ಸಾಮಾಜಿಕ ಅಧ್ಯಯನ ಕೈಗೊಂಡಾಗ ಪ್ರಾಕ್‌ಕಲ್ಪನೆಗೆ ಭಿನ್ನವಾದ ಅಂಶಗಳು ಕಂಡುಬಂದಿದ್ದು, ಅವುಗಳನ್ನು ತಿಳಿಯುವುದು ಪ್ರಮುಖವಾಗಿದೆ.

**ಅಧ್ಯಯನದ ಫಲಿತಗಳು**

ಪ್ರಸ್ತುತ ಅಧ್ಯಯನವು ಕರ್ನಾಟಕದಲ್ಲಿ ಬರುವ ಜಿಲ್ಲೆಗಳಲ್ಲಿ ೯ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡಿದ್ದು ಅದರಲ್ಲಿ ಕ್ಷೇತ್ರಾಧ್ಯಯನಕ್ಕೆ ಸಂಬಂಧಿಸಿದಂತೆ ಹದಿಮೂರು ತಾಲೂಕುಗಳಲ್ಲಿ ಕ್ಷತ್ರಿಯರ ವಾಸಿಸುತ್ತಿರುವ ಗ್ರಾಮಗಳಲ್ಲಿ ೩೯೦ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ಈ ಒಂದು ಕ್ಷೇತ್ರಾಧ್ಯಾನದಲ್ಲಿ ಗಮನಿಸಿದಾಗ ಅಧ್ಯಯನದಿಂದ ಬಂದಂತಹ ಫಲಿತಾಂಶಗಳನ್ನು ಮತ್ತು ಸಲಹೆ ಇಲ್ಲಿ ಸೂಚಿಸಲಾಗಿದೆ.

೧. ಕ್ಷತ್ರಿಯರು ಕರ್ನಾಟಕದಲ್ಲಿ ಪರ್ಯಾಯ ಹೆಸರುಗಳಿಂದ ಚದುರಿಹೋಗಿದ್ದು, ವೃತ್ತಿ ಬೆಡಗುಗಳು ಬೇರೆ ಬೇರೆ ಆಗಿವೆ. ಕ್ಷತ್ರಿಯ ಸಮುದಾಯವು ಹಲವಾರು ಕ್ಷತ್ರಿಯ ಒಳ ಪಂಗಡ/ಗುಂಪು ಸಮುದಾಯಗಳಿವೆ.

೨. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ), ಸಮುದಾಯವರನ್ನು ಕೋಟೆ ಕ್ಷತ್ರಿಯ, ಕೋಟೆಗಾರ ಕ್ಷತ್ರಿಯ, ಎಂಬುದಾಗಿ ಕರೆದುಕೊಳ್ಳುತ್ತಾರೆಂಬ ಅಂಶವು ಅಧ್ಯಯನದಿಂದ ತಿಳಿದು ಬಂದಿದೆ. ಹಿಂದೂ ಕ್ಷತ್ರಿಯ ಸಮುದಾಯವರು ವಿಜಯನಗರ ಕೆಳದಿ ಸಂಸ್ಥಾನಗಳಲ್ಲಿ ಜವಾಬ್ದಾರಿಯುತ ಸೇವೆಯಲ್ಲಿದ್ದು, ಸಂಸ್ಥಾನಗಳ ಅವನತಿಯ ನಂತರ ಮುಸಲ್ಮಾನ ಶಾಹಿಗಳ ಮತ್ತು ಬ್ರಿಟೀಷ ಅಧಿಕಾರಿಗಳ ದಬ್ಬಾಳಿಕೆಯಿಂದ ಇತರೆ ಭಾಗಗಳಿಗೆ ಚದುರಿಕೊಂಡಿವೆ.

೩. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ) ಸಮುದಾಯವು ಕೇವಲ ವರ್ಣಾಶ್ರಮದಲ್ಲಿ ಬರುವ ನಾಲ್ಕು ವರ್ಣಗಳಲ್ಲಿ ಎರಡನೇ ವರ್ಣವಾದ ಕ್ಷತ್ರಿಯ ಎನ್ನುವ ಪದದಿಂದಲೇ ತನ್ನದೇ ಆದ ಸಮಾಜದ ಚೌಕಟ್ಟಿನ್ನಲ್ಲಿ ಸ್ಥಾನವನ್ನು ಪಡೆದುಕೊಂಡಿದೆ, ಹಾಗೆಯೇ ಜಾತಿಯು ವ್ಯವಸ್ಥೆಯಲ್ಲಿ ಕ್ಷತ್ರಿಯ ಹಿಂದೂ ಕ್ಷತ್ರಿಯ ಎಂದು, ರಾಜ್ಯ ಸರ್ಕಾರದಲ್ಲಿ ಸಂವಿಧಾನಿಕವಾಗಿ ಕ್ಷತ್ರಿಯ:ಕ್ಷತ್ರಿ, ಕೋಟೆಕ್ಷತ್ರಿಯ ಪ್ರವರ್ಗ ೨ಎ ಎಂಬುದಾಗಿದೆ , ಕೇಂದ್ರ ಸರ್ಕಾರದಲ್ಲಿ ಓಬಿಸಿ ಪಟ್ಟಿಯಲ್ಲಿ ಕೋಟೆಕ್ಷತ್ರಿಯ ಎಂಬುದಾಗಿ ಗುರುತಿಸಿಲಾಗಿದೆ.

೪. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರಲ್ಲಿ ಬೆಡಗುಗಳು ಮತ್ತು ಗೋತ್ರಗಳಿವೆ, ಇವರಲ್ಲಿ ಶೈವಪಂಥದ ಮತ್ತು ವೈಷ್ಣವ ಪಂಥದ ಆಚರಣೆಗಳಿವೆ.ಸಾಂಸ್ಕೃತಿಕ ಧಾರ್ಮಿಕ ರೂಢಿ ಸಂಪ್ರದಾಯಗಳನ್ನು ಆಚರಣೆಯಲಿವೆ.

೫. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರು ತಮ್ಮ ಪೂರ್ವಜರ ಮೂಲ ವೃತ್ತಿಯನ್ನು ಬಿಟ್ಟು ಇಂದು ಅನ್ಯ ವೃತ್ತಿ ಮಾರ್ಗವನ್ನು ಅನುಸರಿಸುತ್ತಿದ್ದಾರೆ. ಕ್ಷತ್ರಿಯರಲ್ಲಿ ಪುರೋಹಿತ ಕೆಲಸವನ್ನು ಸಹ ಮಾಡುವ ಪದ್ಧತಿಯು ಇದೆ.

೬. ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರಲ್ಲಿ ಹೆಚ್ಚಾಗಿ ಆಂಜನೇಯಸ್ವಾಮಿ, ತಿಮ್ಮಪ್ಪಸ್ವಾಮಿ, ಮಲ್ಲಿಕಾರ್ಜುನಸ್ವಾಮಿ, ಧೂಳಿಲಿಂಗೇಶ್ವರಸ್ವಾಮಿ ಶ್ರೀರಂಗನಾಥಸ್ವಾಮಿ, ಪಾಂಡುರಂಗವಿಠ್ಠಲಸ್ವಾಮಿ ಮಂಜುನಾಥಸ್ವಾಮಿ ಇತರೆ ಆರಾಧಕರಾಗಿದ್ದಾರೆ. ದುರುಗಮ್ಮ, ಹುಲಿಗೆಮ್ಮ, ಮಾರಮ್ಮ, ಚೌಡಮ್ಮ,

ಕೊಲ್ಲಾಪುರದ ಮಹಾಲಕ್ಷ್ಮಿ ದೇವತೆಗಳ ಜೊತೆಗೆ ಶಬರಿಗಿರಿಯ ಅಯ್ಯಪ್ಪನ ಮಾಲೆಧರಿಸುವರು ಮತ್ತು ಆಯಾ ಹಳ್ಳಿಗಳ ಸೀಮೆಯಲ್ಲಿ ಬರುವ ಶೈವ ಪಂಥದ ಮತ್ತು ವೈಷ್ಣವ ಪಂಥದಲ್ಲಿ ಬರುವ ದೇವರುಗಳನ್ನು ಪೂಜಿಸುವರು.

೭. ಕ್ಷತ್ರಿಯ ಅಥವಾ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರು ಹಲವು ನಂಬಿಕೆ–ಸಂಪ್ರದಾಯ ವಿಧಿ–ನಿಷೇಧಗಳನ್ನು ತಮ್ಮ ದೈನಂದಿನ ಬದುಕಿನಲ್ಲಿ ಹಾಸುವಕ್ಕಾಗಿಸಿ ಕೊಂಡಿರುವುದು, ಊರಹಬ್ಬಗಳು ಮತ್ತು ಜಾತ್ರೆಗಳಲ್ಲಿಯೂ ಸಹ ಪಾಲ್ಗೊಳುತ್ತಾರೆ. ದೈವಶಕ್ತಿಗಳಿಗೆ ಬಲಿ ಕೊಡುವ ಆಚರಣೆಯು ಇವರಲ್ಲಿದೆ.

೮. ಹುಟ್ಟು, ಋತುಮತಿ, ಶವ ಸಂಸ್ಕಾರ, ಆಚರಣೆಗಳಲ್ಲಿ ಮೈಲಿಗೆ ಅಚಸರಿಸುವ ಪದ್ಧತಿ ಇಂದಿಗೂ ಸಹ ಕಂಡುಬಂದಿದೆ. ಉಪನಯನವಲ್ಲದೆ, ಜನಿವಾರ ಹಾಕಿಕೊಳ್ಳುವ ಮತ್ತು ದೇವರ ಮುದ್ರೆಯನ್ನು ಹಾಕಿಸಿಕೊಳ್ಳವ ಪದ್ಧತಿಗಳಿವೆ. ಸತ್ತ ವ್ಯಕ್ತಿಯನ್ನು ಸುಡುವ ಪದ್ಧತಿ ಇದೆ. ಹಾಗೂ ಮಕ್ಕಳು ಮತ್ತು ಅವಿವಾಹಿತರನ್ನು ಮಣ್ಣಿನಲ್ಲಿ ಸಮಾಧಿ ಮಾಡುವ ಸಂಸ್ಕಾರವು ಇವರಲ್ಲಿ ಇದೆ.

೯. ವಿಜಯದಶಮಿಹಬ್ಬ ಮತ್ತು ದೀಪಾವಳಿ, ಹಾಗೂ ಹಿರಿಯರ ಹಬ್ಬ ಮಾಡುವಾಗ ಪೂರ್ವಿಕರಿಗೆ ಶ್ರಾದ್ಧತರ್ಪಣಾಧಿಗಳನ್ನು ಆಚರಿಸುವರು. ಕ್ಷತ್ರಿಯರಲ್ಲಿ ವರ್ಣಾಶ್ರಮ ಪದ್ದತಿಯ ಆಚರಣೆಯು ಕಡಿಮೆ ಪ್ರಮಾಣದಲ್ಲಿದೆ.ಹೆಚ್ಚಾಗಿ ಒಳಪಂಗಡ ವಿವಾಹಕ್ಕೆ ಮನ್ನಣೆ ಕೊಡುತ್ತಾರೆ. ಕ್ಷತ್ರಿಯರಲ್ಲಿ ಅಂತರ್‌ಜಾತಿಯ ವಿವಾಹವಾಗಿದ್ದಾರೆ, ರಾಜಕೀಯವಾಗಿ ಅಷ್ಟೇನು ಪ್ರಗತಿಯನ್ನು ಕಂಡುಕೊಂಡಿಲ್ಲ ಎಂಬುದನ್ನು ಗಮನಿಸಬಹುದು ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರಲ್ಲಿ ಆರ್ಥಿಕ ರಾಜಕೀಯ ಮತ್ತು ಶೈಕ್ಷಣಿಕ ಸ್ಥಿತಿಯಲ್ಲಿ ತುಂಬ ಕೆಳಮಟ್ಟದಲ್ಲಿರುವುದು.

೧೦. ಗ್ರಾಮೀಣ ಮಟ್ಟದಲ್ಲಿ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ರ ಕ್ಷತ್ರಿಯ ಸಮಾಜ ಎಂಬ ಬಳಗವನ್ನು ಹೊಂದಿದ್ದಾರೆ. ದಾವಣಗೆರೆ, ಶಿವಮೊಗ್ಗ, ಹಾವೇರಿ ಜಿಲ್ಲೆಗಳಲ್ಲಿ ಕ್ಷತ್ರಿಯ:ಕ್ಷತ್ರಿ (ಹಿಂದೂ ಕ್ಷತ್ರಿಯ)ಯರು, ಕೋಟೆಕ್ಷತ್ರಿಯ ಎಂಬುದಾಗಿ ಗುರುತಿಸಿಕೊಳ್ಳಲು ಪ್ರಯತ್ನಸಿದ್ದಾರೆ. ಇವರು ಗದಗದ ಜಿಲ್ಲೆಯಲ್ಲಿ ಸೂರ್ಯವಂಶ ಕ್ಷತ್ರಿಯರು ಎಂದು ಗುರುತಿಸಿಕೊಳ್ಳಲು ಪ್ರಯತ್ನಿಸಿದ್ದಾರೆ.

೧೧. ಪುರುಷ ಪ್ರಧಾನ ಕೌಟುಂಬಿಕ ವ್ಯವಸ್ಥೆಯನ್ನು ಹೊಂದಿದೆ. ಆರ್ಥಿಕತೆಯ ಮತ್ತು ಉಳಿತಾಯದ ಶ್ರಮದಲ್ಲಿ ಸ್ತ್ರೀಯರ ಪಾತ್ರ ಪುರುಷನಿಗಿಂತ ಅಧಿಕವಾಗಿದೆ. ಇತ್ತೀಚಿನ ದಿನಮಾನದಲ್ಲಿ ಹಿಂದೂ ಕ್ಷತ್ರಿಯ ಸಮುದಾಯದವರು ಜೀವನೋಪಾಯಕ್ಕಾಗಿ ಕೃಷಿಯ ಜೊತೆಗೆ ಸರ್ಕಾರಿ ನೌಕರಿ, ಖಾಸಗಿ ನೌಕರಿ, ಇನ್ನು ಸಣ್ಣ ಪುಟ್ಟ ವ್ಯಾಪಾರದಲ್ಲಿ ತೊಡಗಿದ್ದಾರೆ. ಕರ್ನಾಟಕದ ಭಾಗದಲ್ಲಿ ಗೌಡ್ರು, ಪಟೇಲ್, ನಾಯ್ಕ, ದೇಸಾಯಿ ಎಂಬ ಹೆಸರುಗಳಿಂದ ಗುರುತಿಸುವುದು ಕಂಡುಬಂದಿದೆ. ಆನೆಗೊಂದಿ ಸಂಸ್ಥಾನದ ಜೊತೆಯಲ್ಲಿ ಇಂದಿಗೂ ಸಹ ಒಡನಾಟ ಇಟ್ಟುಕೊಂಡಿರುವುದು ಕಂಡುಬರುತ್ತದೆ. ಶಿಕ್ಷಣದಿಂದ ಪ್ರಭಾವಕ್ಕೆ ಒಳಗಾಗಿ ವಲಸೆಯನ್ನು ಮಾಡುತ್ತಾ ಬೇರೊಂದು ಜಾತಿಯವರೊಂದಿಗೆ ಅಂದರೆ, ಕ್ಷತ್ರಿಯರು ಎಂಬ ಹೆಸರು ಇರುವವರೊಂದಿಗೆ ವಿವಾಹ ಸಂಬಂಧಗಳನ್ನು ಏರ್ಪಡಿಸುತ್ತಿರುವುದು ಸಹ ಇದೆ.

